# ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

ರಾಮ್ ಸುಂದರಪ್ಪ ಕಲಾಲ್

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಮುಖ್ಯಸ್ಥರು ಹಾಗೂ ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೦೯

# ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ

**ರಾಮ್ ಸುಂದರಪ್ಪ ಕಲಾಲ್**



ಮಾರ್ಗದರ್ಶಕರು

**ಡಾ. ಶಿವಾನಂದ ಎಸ್. ವಿರಕ್ತಮಠ**

ಮುಖ್ಯಸ್ಥರು ಹಾಗೂ ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ರಾಮ್ ಸುಂದರಪ್ಪ ಕಲಾಲ್ ಅವರು 'ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧಿಗಳು' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಶಿವಾನಂದ ಎಸ್. ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೮.೦೨.೨೦೦೯
ಸ್ಥಳ : ವಿದ್ಯಾರಣ್ಯ

## <u>ಸಂಶೋಧಕರ ದೃಢೀಕರಣ ಪತ್ರ</u>

'ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಶಿವಾನಂದ ಎಸ್.ವಿರಕ್ತಮಠ, ಪ್ರವಾಚಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ರಾಜ್ ಸುಂದರಪ್ಪ ಕಲಾಲ್
ಸಂಶೋಧಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೮.೦೨.೨೦೦೯
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಂತಹ ಬೌದ್ಧಿಕ ವಾತಾವರಣದಲ್ಲಿ ನನಗೆ ಸಂಶೋಧನೆಗೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾಗಿದ್ದ ಡಾ.ಬಿ.ಎ.ವಿವೇಕ ರೈ ಹಾಗೂ ಇಂದಿನ ಕುಲಪತಿಗಳಾಗಿರುವ ಡಾ.ಎ.ಮುರಿಗೆಪ್ಪನವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಕುಲಸಚಿವರಾದ ಶ್ರೀ.ಎಸ್.ಎಸ್.ಪೂಜಾರ, ಡಾ.ಪಾಂಡುರಂಗಬಾಬು, ನಿರ್ದೇಶಕರು ಅಧ್ಯಯನಾಂಗ, ಡಾ.ರಾಧಕೃಷ್ಣ, ಡಾ.ನಾಗವೇಣಿ ಇವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ನನ್ನ ಅಧ್ಯಯನದುದ್ದಕ್ಕೂ ಸಹೃದಯತೆ, ಶಾಂತತೆ, ತನ್ಮಯತೆಯಿಂದ ಒಬ್ಬ ಸ್ನೇಹಿತನಂತೆ ಮಾರ್ಗದರ್ಶನ ಮಾಡಿದ ಡಾ.ಶಿವಾನಂದ ಎಸ್.ವಿರಕ್ತಮಠ ಇವರಿಗೆ ಅನಂತ ವಂದನೆಗಳು. ಹಾಗೆಯೇ ವಿಭಾಗದ ಇತರ ವಿದ್ವಾಂಸರಾದ ಡಾ.ಎಚ್.ಎಸ್.ಶ್ರೀಮತಿ, ಡಾ.ಶೈಲಜ ಹಿರೇಮಠ, ಡಾ.ಜೆ.ಕೃಷ್ಣರವರಿಗೂ ವಂದನೆಗಳನ್ನು ಅರ್ಪಿಸುತ್ತೇನೆ. ಹಾಗೆಯೇ ಪ್ರೊ. ಲಕ್ಷ್ಮಣ್ ತೆಲಗಾವಿ. ಪ್ರೊ.ರಹಮತ್ ತರಿಕೇರೆ, ಪ್ರೊ.ಟಿ.ಆರ್.ಚಂದ್ರಶೇಖರ್, ಪ್ರೊ.ಕೆ.ಎಂ.ಮೇತ್ರಿ, ಪ್ರೊ.ಚಂದ್ರಪೂಜಾರ, ಡಾ.ಮೊಗಳ್ಳಿ ಗಣೇಶ್. ಡಾ.ಎಸ್.ಚಿನ್ನಸ್ವಾಮಿ ಸೋಸಲೆ, ಡಾ.ಚಲುವರಾಜು, ಡಾ.ಮಂಜುನಾಥ ಬೇವಿನಕಟ್ಟಿ, ಡಾ.ಮಹಾದೇವಯ್ಯ, ಡಾ.ಮೋಹನಕೃಷ್ಣ ರೈ, ಡಾ.ಮಲ್ಲಿಕಾರ್ಜುನ ವಣೇನೂರು, ಡಾ.ಎಂ.ಉಷಾ, ಡಾ.ವಿ.ಬಿ.ತಾರಕೇಶ್ವರ. ಡಾ.ಮಾಧವ ಪೆರಾಜೆ, ಡಾ.ಸುಚೇತ ನವರತ್ನ, ರಮೇಶ ನಾಯಕ ಇವರಿಗೂ ಕೂಡ ಸ್ಮರಿಸದೆ ಇರಲಾರೆ.

ಅಧ್ಯಯನದುದ್ದಕ್ಕೂ ನನಗೆ ಸದಾ ಬೆಂಗಾವಲಾಗಿ ನಿಂತಿರುವ ನನ್ನ ತಂದೆ ತಾಯಿಗಳಾದ ರೇಣುಕಾ, ಸುಂದರ್ ಇವರಿಗೂ ಈ ಸಮಯದಲ್ಲಿ ಹೃದಯ ಪೂರ್ವಕ ನಮನಗಳನ್ನು ಅರ್ಪಿಸುತ್ತಿದ್ದೇನೆ. ಸದಾ ಕಾಲವೂ ನನ್ನ ಅಧ್ಯಯನಕ್ಕೆ ಬೆಂಬಲವಾಗಿ ನಿಂತಿರುವ ತಮ್ಮನಾದ ಪರಶುರಾಮ, ಅಕ್ಕನವರಾದ ಮಧು, ತಂಗಿಯಾದ ಶ್ಯಾಮಲಾ ಇವರಿಗೂ ವಂದನೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ನನ್ನ ಕುಟುಂಬ ವರ್ಗವಾದ ಕಿಡದಾಳ ಬಂಧುಗಳಿಗೆ ತುಂಬ ಹೃದಯದ ಕೃತಜ್ಞತೆ ಸಲ್ಲಿಸುತ್ತೇನೆ.

ನನ್ನ ಬಾಲ್ಯದ ಸ್ನೇಹಿತರೂ, ಆಪ್ತಮಿತ್ರರಾಗಿರುವ ಶ್ರೀ ನಿಂಗರಾಜ ದೊಡ್ಡಮನಿ, ಶ್ರೀ ಗವಿ ದೊಡ್ಡಮನಿ, ಶ್ರೀ ಎಂ.ಕಿರಣ್, ಶ್ರೀ ಬಸವರಾಜ ಅಳ್ಳಳ್ಳಿ, ಶ್ರೀ ಜಗದೀಶ ಮಾಲಗತ್ತಿ, ಶ್ರೀ ಮಂಜುನಾಥ.ಎ. ಶ್ರೀ ಗವಿಸಿದ್ದಪ್ಪ, ಶ್ರೀ ಚಂದ್ರಶೇಖರ ಹಿರೇಮನಿ. ಶಿವಲಿಂಗ ಎಂ. ರೇಣುಕರಾಜ. ದೇವರಾಜ. ಬಿ.ಹನುಮಂತು. ಶಿವಮೂರ್ತಿ ಮಂಜುದೊಳ್ಳಿನ. ಸಿದ್ದುಕರವಿ. ಶರಣಪ್ಪ.ಟಿ. ಅಬ್ದುಲ್ ಗಫೂರ್. ಚಿದಾನಂದ ಪಿ. ಇವರಿಗೂ ಕೂಡ ಸ್ನೇಹ ಪೂರ್ವಕ ವಂದನೆಗಳು ಇರಲಿ.

ಅನನ್ಯ ವಸತಿ ನಿಲಯದ ಸದಸ್ಯನಾಗಿದ್ದ ನನಗೆ ಹತ್ತು ಹಲವು ಬಗೆಯಲ್ಲಿ ಸಹಾಯ ಮಾಡಿದ ಸ್ನೇಹಿತರೆಂದರೆ ಬಸವರಾಜ್, ರಜನಿಕಾಂತ, ಫಿರೋಜ್, ಸುಧಾಕರ, ಇಸ್ಮಾಯಿಲ್ ಜಬೀರ್, ನಿರಂಜನ, ಪ್ರದೀಪ್, ಅಹಮದ್‌ಖಾನ್, ಶಿವಪ್ಪ, [illegible], ನಾಗರಾಜ, [illegible], ಪಿ.ವೆಂಕಟೇಶ, ವೇದಾಂತ್, ಪಂಪಾಪತಿ,

ಮಲ್ಲಿಕಾರ್ಜುನ, ಯಲ್ಲಣ್ಣ, ಉದಯಕುಮಾರ, ಕೆ.ಎಸ್.ಸ್ವಾಮಿ, ನಾರಾಯಣಸ್ವಾಮಿ, ದಿನೇಶ, ರೇವಣಪ್ಪ ಚಿಂತಾಮಣಿ, ಮಹೇಶ, ರವಿನಾಯಕ ಮತ್ತು ನಾಯಕರ ಹುಲಗಪ್ಪ ಇವರಿಗೂ ಕೂಡ ಸ್ಮರಿಸುತ್ತೇನೆ.

ಹಾಗೆಯೇ ಶ್ರೀ ಬಸವರಾಜಕೌತಾಳ, ಡಾ.ಎ.ವೆಂಕಟೇಶ, ಶ್ರೀ ಜಿ.ಕೆ. ಶಂಕರ್. ಶ್ರೀ ಗ್ಯಾನಪ್ಪ ಬಡಿಗೇರ, ಶಿವಪ್ಪ ಕೋಳೂರು, ಕಾಶಿವಿಶ್ವನಾಥ, ರಾಜಶೇಖರ ದೊಡ್ಡಮನಿ, ಶಿವಕುಮಾರ ಕಟ್ಟಿಮನಿ, ಗವಿರಾಜ.ಕೆ.ಆರ್, ವಿ ವೀರಣ್ಣ, ವೀರೇಶ ಜೆ.ಎಂ. ಮತ್ತು ರೇಖಾ ಭೋಜಶೆಟ್ಟರ್ ಇವರಿಗೂ ಕೂಡ ತುಂಬ ಹೃದಯದ ವಂದನೆಗಳು.

ನನ್ನ ಅಧ್ಯಯನದ ಸಮಯದಲ್ಲಿ ನನ್ನ ಎಲ್ಲಾ ಕಾರ್ಯಗಳಲ್ಲಿ ಸಹಭಾಗಿಗಳಾಗಿದ್ದವರೆಂದರೆ ಶ್ರೀ ಲಿಂಗಣ್ಣ.ಹೆಚ್, ಎ.ಡಿ.ಬಸವರಾಜ, ಗವಿಸಿದ್ದಪ್ಪ ಹಂದ್ರಾಳ, ಅರುಣ ಕುಮಾರ, ಓಬಯ್ಯ, ಮೇಘನಾಥ, ಡಿ.ಹನುಮಂತಪ್ಪ, ವಿಶ್ವನಾಥ, ಯೋಗೀಶ, ರಂಗಸ್ವಾಮಿ, ಕಾಂತರಾಜು, ಧರ್ಮವೀರ, ಸಂತೋಷ.ಎನ್.ಜಿ, ಗುರುರಾಜ ಹಿರೇಮಠ, ಗುಂಡೂರಾವ್, ರಮೇಶ.ಕೆ, ಹನುಮೇಶ, ಸುಮಲತ ಆಕಳವಾಡಿ, ಮುತ್ತಮ್ಮ, ಸುನೀಲ್‌ಕುಮಾರ್, ವಸಂತನಾಯಕ, ನನ್ನ ಹೃದಯಕ್ಕೆ ತುಂಬ ಹತ್ತಿರವಾಗಿದ್ದ ಸ್ನೇಹಿತರಾದ ಲೋಹಿತ್ ಕುಮಾರ್, ಹಣಮಂತ್ರಾಯ ದೊಡ್ಡಮನಿ, ಬಿ.ಕೃಷ್ಣಹರಿ, ಸುಚಿತ್ರ, ಗೀತಾ ಬೆಲ್ಲದ್ ಮತ್ತು ಲೋಕೇಶ.ಜಿ.ಎಂ ಇವರನ್ನು ಕೂಡ ಸ್ಮರಿಸುತ್ತೇನೆ.

ನನ್ನ ವಿಶ್ವವಿದ್ಯಾಲಯದ ಆರಂಭದ ದಿನಗಳಿಂದಲೂ ಪ್ರತಿಯೊಂದು ವಿಷಯಗಳಲ್ಲಿಯೂ ನನಗೆ ಸಾಥ್ ನೀಡಿದವರೆಂದರೆ ನನ್ನ ಆಪ್ತಮಿತ್ರರು. ನನ್ನ ಎಲ್ಲಾ ನೋವು ನಲಿವುಗಳಲ್ಲಿ ಅವರೂ ಕೂಡ ಸಮಭಾಗಿಗಳಾಗಿ ನನಗೆ ಚೈತನ್ಯ, ಸ್ಫೂರ್ತಿಯನ್ನು ಒದಗಿಸಿದ್ದಾರೆ. ಅವರುಗಳಲ್ಲಿ ಕಿಶೋರ್ ದಾಟನಾಳ, ಉಮರ್ ಫಾರೂಕ್, ಜಾಹೀದ್ ಹುಸೇನ್, ಹೆಚ್ ಮಲ್ಲಿಕಾರ್ಜುನ, ಶಶಿಕಾಂತ ಬಿಲ್ಲವ, ಸುದೀಪ.ಬಿ.ಎಸ್. ಕುಮಾರ್.ಜೆ, ವಿಮಲಾ ಬಿಲ್ಲವ, ಸುಕನ್ಯಾ ಹಾವನೂರ, ವಿಷ್ಣುವಿ ಎಸ್. ಸುಮನಾ ಆರ್, ನೇತ್ರಾವತಿ ಎ, ಶಿಲ್ಪ.ಎಚ್ ಮತ್ತು ಝೂರಾರೆಹಾನ್, ನನ್ನ ವಿದ್ಯಾರ್ಥಿ ಜೀವನದಲ್ಲಿ ನಾನು ಕಂಡಂತಹ ಅತ್ಯಂತ ಶ್ರೇಷ್ಠ ಸ್ನೇಹಿತರಿವರು. ಇವರಿಗೂ ಕೂಡ ನನ್ನ ಕೃತಜ್ಞತೆಗಳು.

ಹಾಗೆಯೇ ನನ್ನ ಬರವಣಿಗೆಯನ್ನು ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿಕೊಟ್ಟ ಶ್ರೀ ಗುರುಮೌನೇಶ್ವರ ಗ್ರಾಫಿಕ್ಸ್‌ನ ಅನ್ನಪೂರ್ಣ ಅವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ರಾಮ್ ಸುಂದರಪ್ಪ ಕಲಾಲ್**

# ಪರಿವಿಡಿ

■■■

## ಅಧ್ಯಾಯ-ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆ

## ಅಧ್ಯಾಯ-ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆ

**ಪೀಠಿಕೆ**

ಮಹಿಳಾ ರಾಜಕಾರಣದ ಕುರಿತು ಚರ್ಚೆಗೆ ತೊಡಗಿದಾಗ ಅದನ್ನು ಯಾವ ದೃಷ್ಟಿಕೋನದಿಂದ ಆರಂಭಿಸಬೇಕೆಂಬುದು ತಿಳಿಯುವುದಿಲ್ಲ. ಏಕೆಂದರೆ ಮಹಿಳಾ ರಾಜಕಾರಣ ಎಂಬುದು ಅಷ್ಟೊಂದು ಸಂಕೀರ್ಣವಾದ ಸಂಸ್ಥೆಯಾಗಿ ರೂಪುತಾಳಿದೆ. ಇದನ್ನು ನಾವು ಭಾರತೀಯ ಚರಿತ್ರೆಯ ಪುಟಗಳನ್ನು ತಿರುವಿಹಾಕಿದಾಗ ಒಂದೊಂದಾಗಿಯೇ ನಮಗೆ ವಿಕಾರವಾಗಿ ಲಿಂಗ ವಿಭಜನೆಯ ಪಕ್ಷಪಾತ ಧೋರಣೆಯನ್ನು ಅಲ್ಲಿ ಕಾಣಬಹುದು. ಇತಿಹಾಸದ ತುಂಬೆಲ್ಲಾ ರಾಜ, ಮಂತ್ರಿ, ಅಧಿಕಾರಿಗಳ ಬಗ್ಗೆ ಅವರ ಯುದ್ಧ, ಧಾನ, ಧರ್ಮಗಳ ಬಗ್ಗೆ ಅತ್ಯಂತ ಮನೋರಂಜನಾತ್ಮಕವಾದ ವಿವರಣೆ ದೊರೆಯುತ್ತದೆ. ಚರಿತ್ರೆಯಲ್ಲಿ ಈ ಬಗೆಯ ಪಕ್ಷಪಾತ ಧೋರಣೆಯನ್ನು ನಾವು ಆರಂಭದಿಂದಲೆ ಗಮನಿಸಬಹುದಾಗಿದೆ. ಅಂದರೆ ಹಿಂದೆ ಸ್ತ್ರೀಯರೇ ಇರಲಿಲ್ಲ ಎಂದು ಅರ್ಥವಲ್ಲ, ಅವಳ ಇರುವಿಕೆ ಕೇವಲ ರಾಜನ ಅಥವಾ ಅವನ ಉತ್ತರಾಧಿಕಾರಿಯ ಅನುಪಸ್ಥಿತಿಯಲ್ಲಿ ಕಾರ್ಯಭಾರ ಮಾಡಿದ ಕೆಲವು ಉದಾಹರಣೆಗಳು ಅಲ್ಲೊಂದು ಇಲ್ಲೊಂದು ಸಿಗುತ್ತವೆ. ಹೀಗೆ ಚರಿತ್ರೆಯೊಳಗೆ ದಾಖಲಾಗದೆ ಹೋದ ಮಹಿಳಾ ಅಸ್ತಿತ್ವದ ಬಗ್ಗೆ ಸಮಾಜವಿಜ್ಞಾನಗಳು, ಇತಿಹಾಸ, ಮಹಿಳಾ ಅಧ್ಯಯನಗಳು ಹೆಚ್ಚಿನ ಗಮನಹರಿಸುವ ಜರೂರು ಇದೆ. ಏಕೆಂದರೆ ಪ್ರತಿಯೊಂದು ಜ್ಞಾನಶಿಸ್ತುಗಳ ಅಧಿಪತಿ ಪುರುಷನೆ ಆಗಿರುವುದರಿಂದ ಅವೆಲ್ಲವನ್ನು ಅವನ ಇಚ್ಛಾನುಸಾರವಾಗಿಯೇ ನಡೆಯುವಂತಹವು ಆಗಿವೆ. ಹಾಗೆಯೇ ಚರಿತ್ರೆಯೂ ಅವನ ಅಡಿಯಾಳಾಗಿ ಸ್ತ್ರೀಯನ್ನು ನಿರ್ಲಕ್ಷಿಸಿರುವುದು.

ವಸ್ತುಸ್ಥಿತಿ ಹೀಗಿರುವುದರಿಂದಲೇ ಭಾರತದ ಚರಿತ್ರೆಯುದ್ದಕ್ಕೂ ಸ್ತ್ರೀಯ ಅಸ್ತಿತ್ವ, ಅನನ್ಯತೆಗಳು ಅಗೋಚರವಾಗಿಯೇ ಉಳಿಯುವಂತಾಯಿತು. ಇದಕ್ಕೆ ಅಪವಾದ ಎಂಬಂತೆ ಕೆಲವು ಕಡೆಗಳಲ್ಲಿ ಅವಳಿಗೆ ಅಲ್ಪಪ್ರಮಾಣದ ಅವಕಾಶಗಳು ಸಿಕ್ಕಿವೆಯಾದರೂ ಅದು ಸಾಂದರ್ಭಿಕವಾಗಿ, ತಾತ್ಕಾಲಿಕವಾಗಿ ಒದಗಿ ಬಂದಂತಹವುಗಳಾಗಿವೆ. ಹೀಗೆ ಭಾರತದ ರಾಜಕೀಯ ಇತಿಹಾಸದ ತುಂಬೆಲ್ಲ ಲಿಂಗ ಸಂಬಂಧಿಯಾದಂತಹ ಪಕ್ಷಪಾತ ಧೋರಣೆಯನ್ನು ನಾವು ಕಾಣಬಹುದು.

ಹಿಂದಿನಿಂದಲೂ ಸಾಮಾಜಿಕ ವ್ಯವಸ್ಥೆಯೊಳಗಿನ ಪಿತೃಪ್ರಧಾನ ಚಿಂತನೆಗಳು ಸ್ತ್ರೀಯನ್ನು ಕೇವಲ ಗೃಹ ಸಂಬಂಧಿಯಾದ ಕೆಲಸಗಳಿಗೆ ಸೀಮಿತಗೊಳಿಸಿ ಅವಳನ್ನು ಸಾಮಾಜಿಕ ರಂಗಗಳಿಂದಲೇ ದೂರ ಸರಿಸಲಾಯಿತು. ಅವಳ ಕಾರ್ಯ ವ್ಯಾಪ್ತಿಯನ್ನು ಕುಟುಂಬಕ್ಕಷ್ಟೇ ಸೀಮಿತಗೊಳಿಸಿದ್ದರಿಂದ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಅವಳ ಅನನ್ಯತೆಯನ್ನು ವ್ಯವಸ್ಥಿತವಾಗಿ ತುಳಿಯಲಾಯಿತು. ಇದನ್ನು ನಾವು ಆರಂಭದಿಂದ ಇಂದಿನವರೆಗೂ ಕಾಣಬಹುದಾಗಿದೆ. ಪ್ರತಿಯೊಂದು ಜ್ಞಾನ ಶಿಸ್ತುಗಳು ಪುರುಷನ ಪರವಾಗಿರುವುದರಿಂದ ಅವುಗಳೆಲ್ಲವೂ ಮಹಿಳಾ ಅಸ್ತಿತ್ವವನ್ನೆ ನಿರಾಕರಿಸಿದವು. ಇದಕ್ಕೆ ಪೂರಕ ಎಂಬಂತೆ ಧರ್ಮಗಳು, ಸ್ಮೃತಿಗಳು, ಉಪನಿಷತ್ತುಗಳು ಸಹ ಅವನ ಬೆಂಗಾವಲಾಗಿ ಮಹಿಳೆಯನ್ನು ಅಂಚಿಗೆ ತಳ್ಳಿದವು. ಮಹಿಳಾ ಅಸ್ತಿತ್ವದ ಕುರಿತಾಗಿರುವ ಇಂತಹ ಅವೈಚಾರಿಕ ಚಿಂತನೆಗಳನ್ನು ನಾವು ಭಾರತೀಯ ಸಾಂಪ್ರದಾಯಿಕ ಪರಂಪರೆಯ ತುಂಬೆಲ್ಲ ಕಾಣಬಹುದಾಗಿದೆ.

ಈ ಹಿನ್ನೆಲೆಯಲ್ಲಿ ಮಹಿಳಾ ರಾಜಕೀಯ ಪರಿಭಾಷೆಯನ್ನು ಅರಿಯುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದಾಗಿದೆ. ರಾಜಕೀಯ ಸಂಸ್ಥೆ ಎಂಬುದು ಪ್ರತಿಯೊಬ್ಬ ವ್ಯಕ್ತಿಯ ನಿರ್ದಿಷ್ಟ ಗುರಿ ಗಮ್ಯತೆಗಳನ್ನು ಸಾಕಾರಗೊಳಿಸಲು ಇರುವ ಸಾಧನ ಅಥವಾ ಮೂಲ ಎಂದು ನಾವು ಪರಿಭಾವಿಸಬಹುದು. ಇಂತಹ ಸಾಧನ ಸಲಕರಣೆಗಳೆಲ್ಲವು ಪುರುಷ ಮಯವಾಗಿರುವುದರಿಂದ ಚರಿತ್ರೆಯುದ್ದಕ್ಕೂ ಅವಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡೇ ಬಂದಿದ್ದಾನೆ. ಲಿಂಗರಾಜಕಾರಣ ಎಂಬುದು ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟನ್ನು ಹೊಂದಿದ್ದಾಗ ಹೊರಡುವಂತ ಧ್ವನಿಗೂ ಮತ್ತು ಆರ್ಥಿಕ ಶಕ್ತಿಯನ್ನು ಒಳಗೊಂಡ ಹಾಗೆ ಹೊರಡುವ ಧ್ವನಿಗೂ ತುಂಬಾ ವ್ಯತ್ಯಾಸವಿರುತ್ತದೆ. ಭಾರತೀಯ ಸಾಂಪ್ರದಾಯಿಕ ಪರಂಪರೆಯುದ್ದಕ್ಕೂ ಸಾಂಸ್ಕೃತಿಕ ಲಿಂಗರಾಜಕಾರಣ ಆರ್ಥಿಕ ಸ್ಥಿರಭಾರದ ಮೇಲೆ ಮೈದಳೆದ ಕಾರಣ ಇಲ್ಲಿ ಬಲಿಷ್ಠರಾದ ಪುರುಷರಿಗೆ ಮಾತ್ರ ತಮ್ಮ ಹಿತಾಸಕ್ತಿಗಳನ್ನು ಹೇಗೆ ಬೇಕೊ ಹಾಗೆ ನಿರ್ವಹಿಸುವ, ಬದಲಿಸುವ, ಜಾರಿಗೊಳಿಸುವ ಹಕ್ಕುಗಳು ಅವರೊಂದಿಗೆ ಇರುತ್ತದೆ. ಆದರೆ ಮಹಿಳೆಯನ್ನು ಸಂಪೂರ್ಣವಾಗಿ ಇದರಿಂದ ದೂರವಿಡಲಾಗಿದೆ. ಲಿಂಗ ರಾಜಕಾರಣದ ಜೊತೆ ಜೊತೆಗೆ ಶಕ್ತಿರಾಜಕಾರಣ ಎಂಬುದು ಸೇರಿಕೊಂಡು ಇಡೀ ರಾಜಕೀಯ ಕ್ಷೇತ್ರವನ್ನು ಪುರುಷಮಯವಾಗಿಸಿದೆ. ವೇದಗಳ ಕಾಲದಲ್ಲಿನ ಕೆಲವು ಮಹಿಳಾ ವಿದ್ವಾಂಸರನ್ನು ಮುಂದಿಟ್ಟುಕೊಂಡು ಹಿಂದೆ ಸ್ತ್ರೀಯರಿಗೆ ಉನ್ನತಸ್ಥಾನಮಾನ ನೀಡಲಾಗಿತ್ತು ಎಂಬ ಹುಸಿ ಸತ್ಯವನ್ನೆ ಪ್ರತಿಬಿಂಬಿಸುತ್ತಿವೆ. ಆದರೆ ಅವರು ಯಾವ ಕುಲ, ವರ್ಗಕ್ಕೆ ಸೇರಿದವರೆಂಬುದನ್ನು ಅವು ಗಮನಿಸುವುದೇ ಇಲ್ಲ. ಹೀಗೆಯೇ ಕಿತ್ತೂರು ರಾಣಿ ಚನ್ನಮ್ಮನಿಂದಹಿಡಿದು ಇಂದಿನ ಶ್ರೀಮತಿ ಇಂದಿರಾಗಾಂಧಿವರೆಗಿನ ವೇದ ಕಾಲಗಳಲ್ಲಿಯ ಮಹಿಳೆಯರ ಸಾಲಿನಲ್ಲಿ ತಂದು ನಿಲ್ಲಿಸುತ್ತಲೇ ಒಂದು ಸತ್ಯವನ್ನು ಪ್ರತಿಬಿಂಬಿಸುತ್ತವೆ. ಅದೇನೆಂದರೆ ಆಧುನಿಕ ಕಾಲದಲ್ಲಿಯೂ ಸ್ತ್ರೀ ಪುರುಷರಿಗೆ ಸರಿಸಮನಾದ ಅವಕಾಶಗಳನ್ನು ನೀಡಿದ್ದೇವೆ ಎಂಬ ಮಿಥ್ಯವನ್ನು ಹೇಳುತ್ತಿವೆ. ಅಲ್ಲದೆ ಇಂತಹ ಸಿದ್ಧ ಮಾದರಿಯ ಪ್ರತಿಮೆಗಳನ್ನು ಇಡೀ ಭಾರತೀಯ ನಾರಿಯರ ಪ್ರತೀಕ ಎಂದು ಪ್ರತಿಬಿಂಬಿಸುತ್ತಿವೆ.

**ಮಹಿಳಾ ರಾಜಕೀಯ ಕುರಿತ ಸಾಮಾಜಿಕ ದೃಷ್ಟಿಕೋನ**

ಮಹಿಳಾ ರಾಜಕಾರಣದ ಕುರಿತು ಮಾತು ಆರಂಭಿಸುವ ಮುಂಚೆ ಮಹಿಳಾ ರಾಜಕಾರಣ ಕುರಿತಂತೆ ಕುಟುಂಬ, ಸಮಾಜ, ಧರ್ಮ, ರಾಜಕೀಯಗಳು ಹೊಂದಿರುವಂತಹ ಮನಸ್ಥಿತಿಯನ್ನು ಅರಿಯುವುದು ಅಗತ್ಯ. ''ಮಹಿಳೆ

ಎಂದಿಗೂ ಪುರುಷನಿಗೆ ಸರಿಸಮನಾದವಳಲ್ಲ. ಮಕ್ಕಳನ್ನು ಹೆತ್ತು ಸಾಕುವುದು ಮತ್ತು ಮನೆಯೊಳಗಿದ್ದು ಗಂಡನ ಎಲ್ಲಾ ಸೌಕರ್ಯ ನೋಡಿಕೊಳ್ಳುವುದು ಆಕೆಯ ಕರ್ತವ್ಯವಾಗಿದೆ''. ಇದು ಯಾವ ವಿದ್ವಾಂಸರ, ತತ್ವಜ್ಞಾನಿಗಳ ಅನಿಸಿಕೆಯಾಗಿರದೇ ಸಾಧ್ವಿ ರಿತುಂಬರ ಎಂಬ ಸನ್ಯಾಸಿಯ ಅನಿಸಿಕೆಯಾಗಿದೆ. ಮುಂಬೈನಲ್ಲಿ ನಡೆದ ಬಹಿರಂಗ ಸಭೆಯಲ್ಲಿ ಅವರು ಮೇಲಿನ ಚಿಂತನೆಯನ್ನು ಹೊರ ಹಾಕಿದ್ದಾರೆ. ಅಂದರೆ ಒಬ್ಬ ಮಹಿಳೆ ಸಮಾಜದಲ್ಲಿ ಹೀಗೆಯೇ ಇರಬೇಕು ಎಂದು ಬಯಸುವ ಸನಾತನ ಪುರುಷನಿಷ್ಠ ಚಿಂತನೆಗಳು ಹೆಣ್ಣಿನ ಕುರಿತಾಗಿ ಹೆಣ್ಣಿನಿಂದಲೇ ಅವಳನ್ನೂ ವಧೆ ಮಾಡುವ, ತುಳಿಯುವ ಕಾರ್ಯ ಮಾಡುತ್ತಿವೆ. ಅಲ್ಲದೆ ರಾಜ್ಯಶಾಸ್ತ್ರದ ಪಿತಾಮಹ, ಖ್ಯಾತ ತತ್ವಜ್ಞಾನಿ ಎಂದು ಪರಿಗಣಿಸಲ್ಪಟ್ಟಿರುವ ಅರಿಸ್ಟಾಟಲನು ಸಹ ಮಹಿಳೆಯ ವಿಷಯದಲ್ಲಿ ಅತ್ಯಂತ ನಕಾರಾತ್ಮಕ ಚಿಂತನೆಯನ್ನೆ ಹೊಂದಿದ್ದನು. ''ಸ್ವಾಭಾವಿಕವಾಗಿಯೇ ಸ್ತ್ರೀಯೂ ದುರ್ಬಲಳಾಗಿ ಇರುವುದರಿಂದ, ಆಕೆ ಪುರುಷನಿಗಿಂತ ಕಡಿಮೆ ಸ್ಥಾನಗಳನ್ನು ಪಡೆದಿರುತ್ತಾಳೆ. ಪುರುಷನ ಆಳ್ವಿಕೆಗೆ ಸ್ತ್ರೀ ಒಳಗಾಗಬೇಕು. ಗೃಹಕೃತ್ಯ ಅವಳ ಆದ್ಯ ಕರ್ತವ್ಯ, ಪುರುಷನಿಗಿಂತ ಕಡಿಮೆ ಮಾನಸಿಕ ಶಕ್ತಿಯನ್ನು ಅವಳು ಹೊಂದಿರುತ್ತಾಳೆ''.[೨] (ಎಂ. ನಂಜುಂಡ ಸ್ವಾಮಿ, ೪೯೩) ಅಲ್ಲದೆ ಭಾರತದ ರಾಷ್ಟ್ರಪಿತನೆಂದು ಕರೆಯಲ್ಪಡುವ ಎಂ.ಕೆ. ಗಾಂಧಿಯವರು ಸಹ ಸ್ತ್ರೀ ಪುರುಷರ ಸಮಾನತೆಯ ವಿಷಯದಲ್ಲಿ ದ್ವಂದ್ವ ನಿಲುವನ್ನೆ ತಳೆದಿದ್ದರು, ಹೆಣ್ಣು ಗಂಡಿನ ಬಗ್ಗೆ ಮಾತನಾಡುವಾಗಲೆಲ್ಲಾ ಗಾಂಧೀಜಿಯ ಗಂಟಲಲ್ಲಿ ಮನು ಕಾಣಿಸಿಕೊಳ್ಳುತ್ತಾನೆ.

''ಸ್ತ್ರೀ ಪುರುಷರ ಸಮಾನತೆ ಎಂದರೆ ಉದ್ಯೋಗಗಳಲ್ಲಿ ಸಮಾನತೆ ಎಂದು ಅರ್ಥವಲ್ಲ, ಒಬ್ಬ ಸ್ತ್ರೀ ಬೇಟೆಯಾಡುವುದಕ್ಕೆ ಭರ್ಜಿಯನ್ನು ಉಪಯೋಗಿಸುವುದಕ್ಕೂ ನ್ಯಾಯಬದ್ಧ ಪ್ರತಿಬಂಧಕವಿರಲಾರದು. ಆದರೆ ಪುರುಷನೆ ಮಾಡಬೇಕಾದ ಕಾರ್ಯದಿಂದ ಸ್ವಾಭಾವಿಕವಾಗಿಯೇ ಅವಳು ಹಿಂಜರಿಯುತ್ತಾಳೆ. ಸ್ತ್ರೀ ಪುರುಷರಿಗೆ ಅವರವರ ದೇಹ ರಚನೆಗೆ ತಕ್ಕಂತೆ ಅವರ ಕಾರ್ಯ ನಿರ್ಧರಿತವಾಗಿದೆ. ಪ್ರಕೃತಿ ಪರಸ್ಪರ ಪೂರಕ ದೃಷ್ಟಿಯಿಂದ ಲಿಂಗಭೇದವನ್ನು ಸೃಷ್ಟಿಸಿದೆ''. ಇನ್ನೂ ಮುಂದುವರೆದು, ''ವಿವಾಹ ದಂಪತಿಗಳಲ್ಲಿ ಬಾಹ್ಯ ಕರ್ಮಗಳಿಗೆ ಸಂಬಂಧಿಸಿದಂತೆ ಪುರುಷನೆ ಶ್ರೇಷ್ಠನಾಗಿರುವುದರಿಂದ ಅದರ ಬಗೆಗೆ ಅವನು ವಿಶೇಷ ಜ್ಞಾನ ಸಂಪಾದಿಸಿಕೊಳ್ಳುವುದು ಯುಕ್ತವಾದುದು. ಇದಕ್ಕೆ ಪ್ರತಿಯಾಗಿ ಗೃಹ ಜೀವನ ಪೂರ್ಣವಾಗಿ ಮಹಿಳಾ ಕ್ಷೇತ್ರವಾಯಿತು. ಆದುದರಿಂದ ಗೃಹಕಾರ್ಯ ಮಕ್ಕಳ ಲಾಲನೆ, ಪಾಲನೆ, ಮತ್ತು ಶಿಕ್ಷಣಗಳಲ್ಲಿ ಆಕೆ ವಿಶೇಷ ಜ್ಞಾನ ಸಂಪಾದಿಸಿಕೊಳ್ಳಬೇಕು. ಸ್ತ್ರೀಯರು ಜೀವನೋಪಯೋಗಕ್ಕಾಗಿ ದುಡಿಯಬೇಕು ಎಂಬುದಾಗಲಿ, ವಾಣಿಜ್ಯ ವ್ಯವಹಾರಗಳಲ್ಲಿ ಭಾಗವಹಿಸಬೇಕೆಂಬುದರಲ್ಲಾಗಲಿ ನನಗೆ ನಂಬಿಕೆ ಇಲ್ಲ'' (ಮಲ್ಲಿಕಾ ಗಂಟಿ, ಉದ್ಧೃತ, ಮುಡುಬಿ ಬಾಬುರಾವ್, ೨೦೦೬). ರಾಷ್ಟ್ರಪಿತನೆಂದೆ ಕರೆಯಿಸಿಕೊಳ್ಳುವ ಗಾಂಧೀಯವರು ಹೆಣ್ಣಿನ ಕುರಿತಾಗಿ ಆಡಿರುವ ಮಾತುಗಳು ಮೇಲಿನ ಹಂತದಲ್ಲಿ ಯಾವ ರೀತಿ ಕಂಡುಬರುತ್ತವೆ ಎಂಬುದನ್ನು ನಾವು ಗಮನಿಸಬಹುದು. ಹಾಗೆ ''ನಾನು ಹೆಣ್ಣಾಗಿ ಹುಟ್ಟಲಿಲ್ಲ ಗಂಡಾಗಿ ಹುಟ್ಟಿದೆನಲ್ಲ ಅದಕ್ಕಾಗಿ ದೇವರಿಗೆ ಧನ್ಯವಾದಗಳು'' ಎಂದು ಪ್ಲೇಟೋ ಸ್ತ್ರೀಯರ ಕುರಿತಾಗಿರುವ ತಿರಸ್ಕೃತ ಮಾತುಗಳನ್ನು ಕಾಣಬಹುದು. ಶಂಕರಾಚಾರ್ಯರು ಹೆಣ್ಣನ್ನು ''ನರಕಕ್ಕೆ ದಾರಿ'' ಎಂದಿದ್ದಾರೆ.

ತತ್ವಜ್ಞಾನಿ, ವಿಚಾರವಾದಿಯಾಗಿರುವ ಸಾಕ್ರೆಟೀಸನು ದೇವರ ದೃಷ್ಟಿಯಲ್ಲಿ ಗಂಡು ಉತ್ಕೃಷ್ಟ, ಹೆಣ್ಣು ನಿಕೃಷ್ಟ, ಎಂದು ಬಗೆದಿದ್ದಾನೆ. ನ್ಯಾಯಾಲಯದ ಮಾಜಿ ನ್ಯಾಯಾಧೀಶರು, ಮಾನವ ಹಕ್ಕುಗಳ ಆಯೋಗದ ಸದಸ್ಯರಾಗಿದ್ದ ಶ್ರೀ ರಂಗನಾಥ ಮಿಶ್ರರು ಸಹ ಹೆಣ್ಣನ್ನು ಕುರಿತು ಹೀಗೆ ಹೇಳಿದ್ದಾರೆ. "ದೇವರು ಸ್ತ್ರೀ ಪುರುಷರನ್ನು ಸಮಾನವಾಗಿ ಸೃಷ್ಟಿಸಿಲ್ಲ. ಗಂಡಸರೊಂದಿಗೆ ಹೆಂಗಸರು ಸ್ಪರ್ಧಿಸಬಾರದು. ಅವಳ ಸ್ಥಾನ ಪಾಕಶಾಲೆಯಲ್ಲಿದೆ. ಹೆಂಗಸು ಹೆಂಗಸಾಗಿದ್ದರೆ ಮಾತ್ರ ಜಗತ್ತಿಗೆ ಶ್ರೇಯಸ್ಸು". ಹೆಣ್ಣಿನ ಬಗೆಗಿನ ಈ ರೀತಿಯ ಅವೈಚಾರಿಕ ಚಿಂತನೆಗಳು ಸಾಮಾಜಿಕ ಜೀವನದಲ್ಲಿ ಅವಳ ಸ್ಥಾನವನ್ನು ಯಾವ ರೀತಿಯಾಗಿ ಪರಿಭಾವಿಸಿವೆ ಎಂಬುದನ್ನು ಕಾಣಬಹುದು. ಸ್ತ್ರೀಯರ ಸಾಮಾಜಿಕ ಭಾಗವಹಿಸುವಿಕೆಯ ಕುರಿತಾದ ಮೇಲಿನ ಅಂಶಗಳಿಂದಲೇ ಅವಳ ಸ್ಥಾನವನ್ನು ನಾವು ಪರಿಭಾವಿಸಿಕೊಳ್ಳಬಹುದು.

ರಾಜಕೀಯ ಸಂಸ್ಥೆಯೂ ಆಧುನಿಕ ಸಮಾಜದಲ್ಲಿ ತನ್ನದೇ ಆದ ವಿಶಿಷ್ಟವಾದ, ಅಧಿಕಾರಯುತವಾದ ಸ್ಥಾನವನ್ನು ಪಡೆದುಕೊಂಡಿದೆ. ಇತರ ಎಲ್ಲಾ ಸಾಮಾಜಿಕ ಸಂಸ್ಥೆಗಳಿಗಿಂತಲೂ ರಾಜಕೀಯ ಸಂಸ್ಥೆ ಅತ್ಯಂತ ಪ್ರಭಾವ ಶಾಲಿಯಾದ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಸಾಮಾಜಿಕ ಜೀವನದಲ್ಲಿನ ಪ್ರತಿಯೊಂದು ಕಾರ್ಯ ಚಟುವಟಿಕೆಗಳೆಲ್ಲವೂ ಸಹ ರಾಜಕೀಯದ ಹೊರತಾಗಿ ನಡೆಯಲಾರವು ಎಂಬಷ್ಟರ ಮಟ್ಟಿಗೆ ಇದರ ಪ್ರಭಾವವಿದೆ. ಧರ್ಮ, ನ್ಯಾಯ, ನೀತಿ, ಕಾನೂನು ಎಲ್ಲವೂ ರಾಜಕೀಯ ಸಂಸ್ಥೆಯ ನಿಯೋಗಿಗಳಾಗಿಯೇ ಕಾರ್ಯ ನಿರ್ವಹಿಸುತ್ತಿರುತ್ತವೆ. ಒಂದು ರೀತಿಯಲ್ಲಿ ಇವೆಲ್ಲವುಗಳನ್ನು ಪ್ರತಿನಿಧಿಸುವುದು ರಾಜಕೀಯವೆ.

**ಮಹಿಳೆಯ ರಾಜಕೀಯ ಭಾಗವಹಿಸುವಿಕೆಗೆ ತಡೆಯಾಗಿರುವ ಧಾರ್ಮಿಕ ಪೂರ್ವಗ್ರಹಗಳು**

ಧರ್ಮ ಮತ್ತು ರಾಜಕಾರಣ ಎರಡೂ ಕಳ್ಳು-ಬಳ್ಳಿಯ ಸಂಬಂಧ ಹೊಂದಿದ್ದು ಅವುಗಳೆಲ್ಲವೂ ಸಮಾಜವನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿವೆ. ಸಮಾಜದ ಸದಸ್ಯರಾಗಿ ಸ್ತ್ರೀ ಪುರುಷರು ನಿರ್ವಹಿಸುವ, ಅನುಭವಿಸುವ ಕಾರ್ಯಗಳೆಲ್ಲವೂ, ಸಾಮಾಜಿಕ ನಿಯಮಗಳೆಲ್ಲವೂ ಧರ್ಮದ ತಳಹದಿಯಲ್ಲಿಯೇ ರೂಪುಗೊಂಡಿರುವಂತಹವು. ಅವು ಅಲಿಖಿತವಾಗಿವೆ. ವ್ಯಕ್ತಿಯಾಗಿ ಎಲ್ಲರೂ ಸ್ವತಂತ್ರರೇ, ಆದರೆ: ಸಮಾಜದ ಸದಸ್ಯರಾಗಿ ಅವರು ಸ್ವತಂತ್ರವಾಗಿರಲಾರರು. ಮನುಷ್ಯ ವ್ಯಕ್ತಿಗತವಾಗಿ ವರ್ತಿಸದಂತೆ ಸಮಾಜ ಅವನನ್ನು ನಿಯಂತ್ರಿಸುತ್ತಿರುತ್ತದೆ. ಹೀಗಾಗಿ ಸಮಾಜದಲ್ಲಿ ವ್ಯಕ್ತಿಗತಕ್ಕಿಂತ ಸದಸ್ಯತ್ವವೆ ಪ್ರಮುಖ ಕ್ರಿಯೆಯಾಗಿ ನಿಲ್ಲುತ್ತದೆ. ಸಾಮಾಜಿಕ ಅಲಿಖಿತ ನಿಯಮಗಳು ಆ ಕಾರಣದಿಂದಲೇ, ಪುರುಷರಿಗಿಂತ ಮಹಿಳಾ ಸಮುದಾಯದ ಮೇಲೆ ಹೆಚ್ಚಿನ ಒತ್ತಡಗಳನ್ನು ಹೇರುತ್ತಿವೆ. ಈ ಒತ್ತಡಗಳ ಹಿನ್ನೆಲೆಯಲ್ಲಿ ರೂಪು ಪಡೆದ ದೃಷ್ಟಿ ವ್ಯಕ್ತಿಗತವಾಗಿರದೆ ಕುಟುಂಬಗತವಾಗಿರುತ್ತದೆ (ಶೈಲಜಾ ಹಿರೇಮಠ, ೧೯೯೯). ಗೃಹ ಸಂಬಂಧಿಯಾದ ಕೃತ್ಯಗಳಿಗೆ ಮಹಿಳೆಯನ್ನು ಸಮೀಕರಿಸಿ ಅವಳನ್ನು ಸಾಮಾಜಿಕ ಪ್ರಪಂಚದಿಂದಲೇ ದೂರ ತಳ್ಳಲಾಯಿತು. ಅವಳ ಶಕ್ತಿ ಹಾಗೂ ಪ್ರತಿಭೆಗಳು ಎಲ್ಲವೂ ಮನೆಯ ನಾಲ್ಕು ಗೋಡೆಗಳ ನಡುವೆಯೇ ನಡೆಯುವಂತೆ ವ್ಯವಸ್ಥಿತವಾಗಿ ಧರ್ಮ ಹಾಗೂ ರಾಜಕಾರಣಗಳು ಮಾಡಿಕೊಂಡೇ ಬಂದವು.

ಹೀಗೆ ಭಾರತೀಯ ಇತಿಹಾಸದುದ್ದಕ್ಕೂ ಧಾರ್ಮಿಕ ಸಂರಚನೆಗಳು ಸ್ತ್ರೀಯನ್ನು ಬೆನ್ನತ್ತಿ ಬಂದಿರುವುದರಿಂದ ಅವಳು ಸಾಮಾಜಿಕ ರಂಗದಲ್ಲಿ ಭಾಗವಹಿಸುವಿಕೆಗೆ ತುಂಬ ತೊಡಕಾಗಿ ಪರಿಣಮಿಸಿರುವುದು. ಪುರೋಹಿತಶಾಹಿ

ಪಿತೃದಲ್ಲಿ ರೂಪಿತವಾದ ಪುರುಷನಿಷ್ಠ ಚಿಂತನೆಗಳು ಸ್ತ್ರೀ ಪುರುಷರಿಗಾಗಿಯೇ ಪ್ರತ್ಯೇಕವಾದ ಜವಾಬ್ದಾರಿಗಳನ್ನು ರೂಪಿಸಿ ಜಾರಿಗೊಳಿಸಿದವು. ಹೀಗೆ ಜಾರಿಗೊಂಡ ಪುರುಷನಿಷ್ಠ ಅಂಶಗಳು ಪುರುಷಸತ್ತೆಗೆ ತಾತ್ವಿಕ ಬೆಂಬಲವನ್ನು ಒದಗಿಸಿತು. ಅಲ್ಲದೆ ಅದನ್ನು ಬಲಯುತಗೊಳಿಸಿತು. ಸ್ತ್ರೀ ಪುರುಷರಿಗೆ ನಿಗದಿಯಾಗಿರುವಂತಹ ಸಿದ್ಧಮಾದರಿಯ ಆಕೃತಿಗಳು ಈ ಇಬ್ಬರ ನಡುವೆ ಸದೂರವನ್ನು ಉಂಟುಮಾಡಿವೆ. ಹೀಗೆ ಸ್ತ್ರೀ ಪುರುಷರ ಕುರಿತಾಗಿರುವ ಇಂತಹ ಸೈದ್ಧಾಂತಿಕ ವಿಭಜನಾ ಕ್ರಮಗಳು ಸ್ತ್ರೀಯನ್ನು ಮೂಲೆಗುಂಪಾಗಿಸಿ ಪುರುಷನನ್ನು ವಿಜೃಂಭಿಸುವಂತೆ ಮಾಡಿದವು. ಭಾರತೀಯ ಮಹಿಳೆಗೆ ಭಾಗವಹಿಸುವಿಕೆ ಎಂಬುದೇನಿಲ್ಲ. ಅದೇನಿದ್ದರೂ ಧಾರ್ಮಿಕ ಪರಧಿಯೊಳಗೆ ಕಾಣಿಸಿಕೊಳ್ಳುತ್ತದೆ. ಧರ್ಮದೊಳಗೆ ಮಹಿಳೆಯರ ಭಾಗವಹಿಸುವಿಕೆ ಯಾವ ಸಂದರ್ಭಗಳಲ್ಲಿ ಮತ್ತು ಎಷ್ಟು ಪ್ರಮಾಣದಲ್ಲಿರುತ್ತದೆ ಎಂಬುದು ಪ್ರಮುಖವಾಗುತ್ತದೆ. ಧಾರ್ಮಿಕ ರಂಗದಲ್ಲಿ ಒಂದು ಸೀಮಿತ ಮಿತಿಯವರೆಗೆ ಮಹಿಳೆಯರ ಪಾತ್ರವಿದ್ದು ಅದು ಪುರುಷರು ಹಾಕಿದ ಲಕ್ಷ್ಮಣ ರೇಖೆಯನ್ನು ದಾಟುವುದಿಲ್ಲ. ವೈದಿಕ ಧರ್ಮದ ಅವಧಿಯಲ್ಲಿ ಆಯಾ ಕಾಲಘಟ್ಟಗಳಲ್ಲಿಯ ರಾಣಿಯರು ಎಷ್ಟೇ ಪ್ರಮಾಣದಲ್ಲಿ ಧಾರ್ಮಿಕ ಪ್ರಗತಿಗಾಗಿ ದುಡಿದಿದ್ದರೂ ಕೂಡ ರೂಢಿಗತವಾದ ಕೆಲವು ನಿಯಮಗಳು, ಕಟ್ಟಳೆಗಳು, ಪದ್ಧತಿಗಳು ಅವಳನ್ನು ಬಂಧನದಲ್ಲಿರಿಸುವುದಷ್ಟೆ ಅಲ್ಲದೆ ಅವಳನ್ನು ಆಳನ್ನಾಗಿ ಕಾಣುವ ಪದ್ಧತಿ ಹೆಚ್ಚಾಗಿ ರೂಢಿಯಲ್ಲಿದುದ್ದು ವೈದಿಕ ಧರ್ಮದಲ್ಲಿ ಮಾತ್ರ, ಮಹಿಳೆಗೆ ಇರುವ ಕೆಲವು ನೈಸರ್ಗಿಕ ದೋಷಗಳನ್ನು ಧರ್ಮ ಮಾರ್ಗಕ್ಕೆ ಕಂಟಕವನ್ನೊಡ್ಡಿ ಅವರನ್ನು ಹಿಂದೆಳೆಯಲು ಪ್ರಯತ್ನಿಸಿದವು. (ಚನ್ನಕ್ಕ ಎಲಿಗಾರ, ೧೪೧,೧೯೯೦) ಇತಿಹಾಸದುದ್ದಕ್ಕೂ ಇಂತಹ ವಿಲಕ್ಷಣ ಪ್ರಕರಣಗಳು ಹಲವಾರು. ಇದು ಚರಿತ್ರೆಯೊಳಗಿನ ವಿಕೃತೀಕರಣ. ಧರ್ಮ ನಿತ್ಯನಿರಂತರವಾಗಿ ತನ್ನ ಪುರೋಭಿವೃದ್ಧಿಗಾಗಿ ಮಹಿಳೆಯನ್ನು ಶೋಷಿಸುತ್ತಲೇ ಪುರುಷನನ್ನು ಸಮಾಜದ ನಾಯಕ ಎಂಬಂತೆ ಪ್ರತಿಬಿಂಬಿಸುತ್ತಲೇ ಬಂದವು. ಇಂತಹ ಅಂಶಗಳ ಬಗ್ಗೆ ನಮಗೆ ಇತಿಹಾಸದುದ್ದಕ್ಕೂ ಹೇರಳವಾಗಿ ದಾಖಲೆಗಳು ಸಿಗುತ್ತವೆ. ರಾಜನ ಪದವಿಯೂ ದೇವನಿಂದಲೇ ಸೃಷ್ಟಿಸಲ್ಪಟ್ಟಿದ್ದು, ರಾಜನು ದೇವರ ಸಮಾನ ಆತನ ಪ್ರತಿರೂಪ ಎಂಬ ವಿಚಾರಗಳು ಅನೇಕ ಪುರಾಣಗಳಲ್ಲಿ ನಾವು ಕಾಣಬಹುದು. ಅಂದಿನ ರಾಜಕೀಯ ಪರಿಸರದಲ್ಲಿ ರಾಜನೊಂದಿಗೆ ರಾಣಿಯು ಸಹ ರಾಜನಂತೆ ಗೌರವಯುತವಾದ ಸ್ಥಾನ ಅಲಂಕರಿಸಿದ್ದರೂ ಅದು ಅವಳು ರಾಜನ ಹೆಂಡತಿ ಎಂಬ ಕಾರಣದಿಂದ ಮಾತ್ರ. ಹೀಗೆ ರಾಜಕೀಯ ಎಂಬುದು ಧರ್ಮದೊಂದಿಗೆ ನಿತ್ಯ ನಿರಂತರವಾಗಿ ತನ್ನ ಇರುವಿಕೆಯನ್ನು ಸಾಬೀತು ಪಡಿಸುತ್ತಲೇ ಬಂದಿದೆ. ಧರ್ಮದ ಹೊರತಾಗಿ ರಾಜಕಾರಣವೆ ಇಲ್ಲ ಎಂಬಂತೆ ಅದರ ಛಾಯೆ ಇದೆ.

### ಚರಿತ್ರೆಯಲ್ಲಿನ ಮಹಿಳಾ ರಾಜಕೀಯದ ಅನುಭವ

ವಸಾಹತುಶಾಹಿತ್ವದ ನಂತರ ಭಾರತೀಯ ರಾಜಕಾರಣದಲ್ಲಿನ ಚರಿತ್ರೆಯನ್ನು ಒಮ್ಮೆ ಅವಲೋಕಿಸಿದಾಗ ಅಲ್ಲಿಯೂ ನಮಗೆ ಲಿಂಗ ಸಂಬಂಧಿ ವಿರೋಧಿಯಾದಂತಹ ಅಂಶಗಳು ಸುಮಾರು ಸಿಗುತ್ತವೆ. ಈ ಅಂಶಗಳ ಮೇಲೆ ಬೆಳಕು ಚೆಲ್ಲುತ್ತಲೇ ನಮಗೆ ಪ್ರಜಾಪ್ರಭುತ್ವವಾದಿ ರಾಷ್ಟ್ರದಲ್ಲಿ ನಾವಿದ್ದೇವಾ ಎಂಬ ಸಂಶಯ ಬರುತ್ತದೆ. ಇಂದಿರಾಗಾಂಧಿಯಂತಹ ಒಂದು ಸಿದ್ಧಮಾದರಿಯ ಪ್ರತಿಮೆಯನ್ನು ಮುಂದಿಟ್ಟುಕೊಂಡು ಇಡೀ ಮಹಿಳಾ ಸಮುದಾಯವನ್ನೆ ರಾಜಕಾರಣಕ್ಕೆ ತಂದಿದ್ದೇವೆ ಎಂಬ ಮಾತಿಗೆ ಕಡಿಮೆ ಏನಿಲ್ಲ. ಕುಟುಂಬ ರಾಜಕಾರಣಕ್ಕೆ ಸಂಬಂಧ

ಪಟ್ಟಂತೆ ಶ್ರೀಮತಿ ಇಂದಿರಾಗಾಂಧಿಯನ್ನು ಒಪ್ಪಿಕೊಂಡ ಸಮಾಜ ಪುರುಷಾಲೋಚನೆಯ ರಾಜಕಾರಣವನ್ನೇ ಅವಳಿಂದ ಮಾಡಿಸಿತು. ಪುರುಷನ ರೂಪದಲ್ಲಿ ಅಧಿಕಾರ ಪಡೆದ ವ್ಯಕ್ತಿ ಅವರಾಗಿದ್ದರು. ಸುಮಾರು ವರ್ಷಗಳವರೆಗೂ ಇಂದಿರಾಗಾಂಧಿಯವರು ಸಕ್ರಿಯ ರಾಜಕಾರಣದ ಎಲ್ಲ ಬಗೆಯ ಆಡಳಿತಗಳನ್ನು ಕೈಯಲ್ಲಿ ಹಿಡಿದಿಟ್ಟುಕೊಂಡಿದ್ದರೂ ಅವರು ಎಂದಿಗೂ ಸ್ತ್ರೀಯಾತ್ಮಕ ರಾಜಕಾರಣದ ಬಗ್ಗೆ ಗಮನ ಹರಿಸಲೇ ಇಲ್ಲ. ಶಕ್ತಿರಾಜಕಾರಣದ ಭಾಗವಾಗಿಯೇ ರಾಜಕೀಯ ರಂಗದಲ್ಲಿ ಅಸ್ತಿತ್ವಕ್ಕಾಗಿ ಹೆಣಗಾಡಿದ್ದರಿಂದಲೇ ಸಂವಿಧಾನಾತ್ಮಕವಾಗಿಯೂ ಮಹಿಳೆಗೆ ಲಭ್ಯವಾಗಬೇಕಾದ ಹಕ್ಕುಗಳನ್ನು ಮುಟ್ಟಿಸಲು ಸಾಧ್ಯವಾಗಲಿಲ್ಲ. ಬಲಿಷ್ಠ ಕುಟುಂಬದ ಬೆಂಬಲದೊಂದಿಗೆ ರಾಜಕಾರಣ ಮಾಡಿದ ಇಂದಿರಾಗಾಂಧಿಯವರ ಹಾದಿಯೂ ಸ್ತ್ರೀ ನಡಿಗೆಯ ಸಾಂಸ್ಕೃತಿಕ ಲೋಕವೊಂದರ ಹುಟ್ಟಿಗೆ ಕಾರಣವಾಗಲಿಲ್ಲ' (ಮಲ್ಲಿಕಾ ಘಂಟಿ, ೨೨, ೨೦೦೬). ಪುರುಷನ ಆಲೋಚನೆಗಳು ನಿರಂತರವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮಹಿಳೆಯ ರೂಪದಲ್ಲಿ ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಮೇಲಿನ ವಿಚಾರಸರಣಿಯಲ್ಲಿ ಕಾಣಬಹುದು.

ಭಾರತ ಒಕ್ಕೂಟ ವ್ಯವಸ್ಥೆಯಲ್ಲಿ ಅತ್ಯಂತ ಪ್ರಮುಖವಾಗಿರುವ ರಾಜ್ಯಸಭೆ, ಲೋಕಸಭೆ, ಹಾಗೆ ಸ್ಥಳೀಯ ಸಂಸ್ಥೆಗಳನ್ನು ಒಳಗೊಂಡಂತೆ ಗ್ರಾಮೀಣ ವಲಯಗಳಲ್ಲಿನ ಶಕ್ತಿ ಕೇಂದ್ರಗಳೆಂದು ಕರೆಯಲ್ಪಡುತ್ತಿರುವ ಪಂಚಾಯಿತಿಗಳು ಸಾಂಸ್ಕೃತಿಕ, ಆರ್ಥಿಕ, ಊಳಿಗಮಾನ್ಯ ಅಂಶಗಳಿಂದ ಸ್ಥಳೀಯ ಹಂತದಿಂದ ಹಿಡಿದು ಮೇಲಿನ ಹಂತದವರೆಗೂ ಲಿಂಗರಾಜಕಾರಣವನ್ನು ಯಾವುದೇ ಅಡೆ ತಡೆ ಇಲ್ಲದೆ ನಿರ್ಭಯವಾಗಿ ಚಲಾಯಿಸುತ್ತಿವೆ. ವ್ಯಕ್ತಿರಾಜಕಾರಣದ ಭಾಗವಾಗಿ ಇಲ್ಲಿ ಸಿದ್ಧಮಾದರಿಗೆ ಪೂರಕ ಎಂಬಂತೆ ಕಾರ್ಯ ಚಟುವಟಿಕೆಗಳು ಯಥೇಚ್ಛವಾಗಿ ದೊರೆಯುತ್ತವೆ. ರಾಜಕೀಯ ರಂಗದಲ್ಲಿ ಬೆಳಕಿಗೆ ಬರದೆ ಇರುವಂತಹ ಸ್ತ್ರೀಯಾತ್ಮಕ ಪರಿಕಲ್ಪನೆಗಳು ಹಿಂದೆ ಬೀಳುತ್ತಲೇ ಇವೆ. ಲಿಂಗರಾಜಕಾರಣ ಎಂಬುದು ಸಾಂಸ್ಕೃತಿಕ ರಾಜಕಾರಣವನ್ನು ಶಕ್ತಿ, ಅಧಿಕಾರ ರಾಜಕಾರಣಕ್ಕೆ ಯಾವ ರೀತಿಯಾಗಿ ಹಿಡಿತದಲ್ಲಿಟ್ಟುಕೊಂಡು ತಮ್ಮ ತಾಳಕ್ಕೆ ತಕ್ಕಂತೆ ಯಾವ ರೀತಿ ಮಹಿಳೆಯನ್ನು ಆಡಿಸುತ್ತದೆ ಎಂಬುದನ್ನು ೧೯೯೯ರ ಬಳ್ಳಾರಿಯ ಲೋಕಸಭಾ ಚುನಾವಣೆಯೊಳಗಿನ ಸೋನಿಯಾಗಾಂಧಿ, ಸುಷ್ಮಾ ಸ್ವರಾಜ್‌ರ ನಡುವಿನ ಕದನವನ್ನು ಗಮನಿಸಿದರೆ ತಿಳಿಯುತ್ತದೆ. ಶ್ರೀಮತಿ ಸೋನಿಯಾ ಗಾಂಧಿಯವರು ನಾಮಿನೇಷನ್ ಮಾಡಿದ ತಕ್ಷಣವೆ ಮನುವಾದಿಗಳು ಇವರ ವಿರುದ್ಧ ಸ್ತ್ರೀಯನ್ನು ಎತ್ತಿ ಕಟ್ಟಿದ್ದವು. ಚುನಾವಣೆಗೆ ನಿಂತಿದ್ದ ಈ ಇಬ್ಬರಿಗೂ ಸಹ ತಾವು ಯಾತಕ್ಕಾಗಿ ಚುನಾವಣೆಗೆ ನಿಂತಿದ್ದೇವೆ ಎಂಬ ಪರಿವೆ ಇರಲಿಲ್ಲ. ಅವರು ಸೂತ್ರದ ಬೊಂಬೆಗಳಾಗಿಯೇ ಇಲ್ಲಿ ಬಿಂಬಿತವಾಗಿದ್ದರು. ಒಬ್ಬ ಮಹಿಳೆಯ ವಿರುದ್ಧ ಮತ್ತೊಬ್ಬ ಮಹಿಳೆಯನ್ನು ನಿಲ್ಲಿಸಿ ಅವಳಿಗೆ ಹಿನ್ನಡೆಯುಂಟು ಮಾಡುವ ಪುರುಷ ರಾಜಕಾರಣ ಇಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಕುಟುಂಬದ ವರ್ಚಸ್ಸಿನಿಂದ ಸೋನಿಯಾ ಗಾಂಧಿಯವರು ಸ್ಪರ್ಧಿಸಿದ್ದಾರೆ. ಸೇಡಿನ ರಾಜಕಾರಣದ ಭಾಗವಾಗಿ ಸುಷ್ಮಾ ಸ್ವರಾಜ್ ಸ್ಪರ್ಧಿಯಾಗಿದ್ದರು. ಗಾಂಧಿ ಕುಟುಂಬಕ್ಕೆ ಕರ್ನಾಟಕದಲ್ಲಿನ ಎಲ್ಲಾ ಮತದಾರರನ್ನು ಸೆಳೆಯಲು ಸೋನಿಯಾರನ್ನು ಕರೆತರಲಾಗಿತ್ತು. ಅಲ್ಲದೆ ಅವರು ಭಾರತದ ಮಾಜಿ ಪ್ರಧಾನಿಯೊಬ್ಬರ ಹೆಂಡತಿ ಸಹ. ಆದರೆ ನಿಜವಾದ ರಾಜಕಾರಣ ಆರಂಭವಾದದ್ದು ಅವರಿಬ್ಬರ ಮೂಲದ ಬಗ್ಗೆ. ಶ್ರೀಮತಿ ಸೋನಿಯಾಗಾಂಧಿಯವರನ್ನು ವಿದೇಶಿ ಮಹಿಳೆ ಎಂಬ ಕುಂಟುನೆಪವೊಡ್ಡಿ ಅವರಿಗೆ ಮಾನಸಿಕವಾಗಿ ಹಿಂಸೆಯಾಗುವಂತೆ ಮಾಡಲಾಯಿತು. ಶ್ರೀಮತಿ ಸುಷ್ಮಾ ಅವರು ಸಾಂಪ್ರದಾಯಿಕ ಭಾರತೀಯ

ಪರಂಪರೆಯ ಆದ್ಯ ಪ್ರವರ್ತಕಿ ಎಂದು ಪ್ರತಿಬಿಂಬಿಸಲಾಯಿತು. ಹೀಗೆ ಸ್ವದೇಶಿ ವಿದೇಶಿ ಎಂಬ ವಿಭಜನೆಯಲ್ಲಿ ಚುನಾವಣೆ ನಡೆಯಿತು ಇವರಿಬ್ಬರಿಗೂ ಭಾರತೀಯ ಅಷ್ಟೇ ಏಕೆ ಒಟ್ಟು ಮಹಿಳೆಯರ ಅಸ್ತಿತ್ವ, ಅನನ್ಯತೆಯ ಅರಿವಿರದ ಪುರುಷ ಪ್ರತಿಬಿಂಬಗಳು ಇವರಾಗಿದ್ದರು. ನಂತರದ ಬೆಳವಣಿಗೆಯಲ್ಲಿ ಸೋನಿಯಾ ಅವರು ಜಯಶಾಲಿಯಾದದ್ದು ಇತಿಹಾಸ.

ಹೀಗೆ ಲಿಂಗ ರಾಜಕಾರಣವನ್ನು ಕೇಂದ್ರೀಕರಿಸಿಕೊಂಡ ಪಿತೃಪ್ರಧಾನ ವ್ಯವಸ್ಥೆಯು ಸ್ತ್ರೀಯರ ನಡುವೆ ಯಾವ ರೀತಿಯಾಗಿ ಬಿರುಕು ತಂದಿದ್ದಿತು ಎಂಬುದನ್ನು ೨೦೦೪ರ ಲೋಕಸಭೆಯ ಮಹಾ ಚುನಾವಣೆಯಲ್ಲಿಯೂ ಗಮನಿಸಬಹುದು. ಚುನಾವಣೆಯ ನಂತರ ಶ್ರೀಮತಿ ಸೋನಿಯಾಜಿಯವರು ಬಹುಮತ ಪಡೆದ ಪಕ್ಷದ ನಾಯಕರಾಗಿ, ಶಾಸಕಾಂಗ ಪಕ್ಷದ ನಾಯಕರಾಗಿಯೂ ಆಯ್ಕೆಯಾದರು. ಇದರಿಂದ ಕುಪಿತಗೊಂಡ ಮನುವಾದಿಗಳು ಮತ್ತೆ ಸುಷ್ಮಾರವರನ್ನು ಬಳಸಿಕೊಂಡರು. ಸೋನಿಯಾಗಾಂಧಿಯವರೇನಾದರೂ ಪ್ರಧಾನಿಯಾದರೆ ನಾನು ಬಿಳಿ ಸೀರೆಯುಟ್ಟು ಸಭೆಗೆ ಬರುತ್ತೇನೆ. ಚಾಪೆಯ ಮೇಲೆ ಮಲಗುತ್ತೇನೆ. ಒಣ ಭತ್ತವನ್ನು ತಿನ್ನುತ್ತೇನೆ ಎಂದು ಬಹಿರಂಗವಾಗಿ ಘೋಷಿಸಿದ್ದು ನಮ್ಮ ಕಣ್ಣಮುಂದೆಯೇ ಇದೆ. ಇದರಿಂದ ವಿಚಲಿತರಾದ ಶ್ರೀಮತಿ ಸೋನಿಯಾ ಅವರು ತಮಗೆ ಸಂವಿಧಾನಾತ್ಮಕವಾಗಿ ಬಂದ ಅಧಿಕಾರವನ್ನು ಮೌನವಾಗಿಯೇ ತಿರಸ್ಕರಿಸಿ ಅಧಿಕಾರ ತ್ಯಾಗ ಮಾಡಿದರು. ಹೀಗೆ ಮಹಿಳಾ ರಾಜಕಾರಣದ ಕುರಿತಾಗಿರುವ ಪಿತೃ ಪ್ರಧಾನತೆಯ ಕುತಂತ್ರಗಳು, ಕುತರ್ಕಗಳು ಹೆಣ್ಣನ್ನು ರಾಜಕೀಯದಲ್ಲಿ ಅಸ್ಪೃಶ್ಯಳನ್ನಾಗಿಸಿವೆ. ಹೆಣ್ಣನ್ನು ಕುರಿತು ಹೆಣ್ಣಿನಿಂದಲೆ ಕೆಟ್ಟ ವಿಚಾರಗಳನ್ನು ಹೇಳಿಸಿದ್ದು ಚಾರಿತ್ರಿಕ ದೌರ್ಬಲ್ಯವೆ ಸರಿ.

೨೦೦೭ರ ರಾಷ್ಟ್ರಪತಿ ಚುನಾವಣೆಯಲ್ಲಿ ಭಾರತದ ಇತಿಹಾಸದಲ್ಲಿಯೇ ಪ್ರಪಥಮ ಭಾರಿಗೆ ಮಹಿಳೆಯೊಬ್ಬರು ದೇಶದ ಉನ್ನತ ಅಧಿಕಾರ ಹಿಡಿಯುವ ಅವಕಾಶ ಒದಗಿ ಬಂದಿತು. ಕಾಂಗ್ರೆಸ್ ಪಕ್ಷದ ವತಿಯಿಂದ ಶ್ರೀಮತಿ ಪ್ರತಿಭಾದೇವಿ ಪಾಟೀಲ್ ಶೇಖಾವತ್ ಅವರು ಸ್ಪರ್ಧೆಗೆ ಇಳಿದಿದ್ದರು. ಬಹುಮತ ಪಕ್ಷದವರಾಗಿದ್ದರಿಂದ ಇವರು ಗೆಲ್ಲುವುದು ಖಚಿತವಾಗಿತ್ತು. ಶ್ರೀಮತಿ ಪಾಟೀಲ್‌ರು ನಾಮಿನೇಷನ್ ಮಾಡಿದ ನಂತರದಲ್ಲಿ ಕೆಲವು ಪತ್ರಿಕೆಗಳಲ್ಲಿ ಅವರನ್ನು 'ರಾಷ್ಟ್ರಪತಿ' ಎಂದು ಕರೆಯಬೇಕೆ ಅಥವಾ 'ರಾಷ್ಟ್ರಪತ್ನಿ' ಎಂದು ಕರೆಯಬೇಕೆ ಎಂಬ ಕುತರ್ಕದ ಬರಹಗಳು ಪತ್ರಿಕೆಗಳ ಮುಖಪುಟದಲ್ಲಿಯೇ ಬರತೊಡಗಿದವು. ಈ ಬಗೆಯ ತಲೆಬರಹಗಳಿಂದ ಅವರಿಗೆ ಮಾನಸಿಕವಾಗಿ ನೋವನ್ನು ಉಂಟುಮಾಡಿದವು. ಇದರಿಂದ ಎದೆಗುಂದದ ಶ್ರೀಮತಿ ಪ್ರತಿಭಾದೇವಿ ಪಾಟೀಲ್‌ರು ಸ್ವತಂತ್ರಭಾರತದ ಮೊಟ್ಟ ಮೊದಲ ಮಹಿಳಾ ರಾಷ್ಟ್ರಾಧ್ಯಕ್ಷರಾಗಿ ಚುನಾಯಿತರಾಗಿ ಹೊಸ ಭಾಷ್ಯ ಬರೆದರು. ಹೀಗೆ ಹೊಸ ಚರಿತ್ರೆಯನ್ನು ಬರೆದ ಪಾಟೀಲ್‌ರು ರಾಷ್ಟ್ರಪತಿ ಎಂಬ ಪುರುಷವಾಚಕದಿಂದ ಹೊರಗೆ ಬರಲು ಆಗಲೇ ಇಲ್ಲ. ಹೀಗೆ ಶೀಲಾ ದೀಕ್ಷಿತ್ (ದೆಹಲಿ), ವಸುಂಧರಾ ರಾಜೆ ಸಿಂಧಿಯಾ (ರಾಜಸ್ಥಾನ), ಜಯಲಲಿತ (ತಮಿಳುನಾಡು), ರಾಬಡಿದೇವಿ (ಬಿಹಾರ), ಮಾಯಾವತಿ (ಉತ್ತರ ಪ್ರದೇಶ) ಇವರೆಲ್ಲರೂ ಆಯಾ ರಾಜ್ಯಗಳ ಮುಖ್ಯ ಅಧಿಕಾರಿಗಳಾಗಿದ್ದರೂ ಇವರು 'ಮುಖ್ಯಮಂತ್ರಿ' ಎಂಬ ಪುರುಷವಾಚನದಿಂದಲೆ ಗುರುತಿಸಿಕೊಳ್ಳುತ್ತಿದ್ದಾರೆ.

ಆಧುನಿಕ ಸಮಾಜದಲ್ಲಿ ರಾಜಕಾರಣದ ಅಂಗಸಂಸ್ಥೆಗಳಾಗಿರುವ ರಾಷ್ಟ್ರಪತಿ, ಪ್ರಧಾನ ಮಂತ್ರಿ, ಮುಖ್ಯಮಂತ್ರಿ, ಸಚಿವ, ಸಭಾಪತಿ, ಅಧ್ಯಕ್ಷ ಎಂಬ ವಾಚಕಗಳು ರಾಷ್ಟ್ರರಾಜಕಾರಣದಲ್ಲಿ ಕಾಣುವಂತಹ ಪ್ರಮುಖ ಹುದ್ದೆಗಳು. ಆದರೆ ಇವುಗಳ ರಚನೆ, ಸಂಬೋಧನಾ ವಿಧಾನಗಳೆಲ್ಲವೂ ಪುರುಷರೂಪಿಯಾಗಿಯೇ ರೂಪಿತವಾದಂತಹವು. ಈ ಹುದ್ದೆಗಳಿಗೆ ಇರುವ ಹೆಸರೆ ಸೂಚಿಸುವಂತೆ ಇವುಗಳೆಲ್ಲವೂ ಪುರುಷನಿಗಾಗಿಯೇ ರೂಪುತಾಳಿದಂತಹವುಗಳಾಗಿವೆ. ಏಕೆಂದರೆ ರಾಜಕೀಯವು ರೂಪಿಸಲ್ಪಡುವುದು ಪಿತೃಪ್ರಧಾನ ವ್ಯವಸ್ಥೆಯ ಒಂದು ಅಂಗವಾಗಿ ಮಾತ್ರ. ಆದರೆ ನಮ್ಮ ಸಮಾಜದೊಳಗಿನ ಸ್ಥಾಪಿತ ಪುರುಷಪ್ರಧಾನ ಮೌಲ್ಯಗಳು ಅವಳಿಗೆ ಇಂತಹ ಅಧಿಕಾರ ಹೊಂದದೆ ಅದರಿಂದ ದೂರವಿದ್ದುದರಿಂದಲೇ ಅವುಗಳ ರೂಪ ಪುರುಷಮಯವಾಗಿದೆ. ಒಂದು ವೇಳೆ ಅವಳು ಯಾವುದೇ ಪ್ರಭಾವ ಬಳಸಿ ಚುನಾವಣೆಯಲ್ಲಿ ಗೆದ್ದು ಮಂತ್ರಿಸ್ಥಾನ ಪಡೆದರೂ ಅಲ್ಲಿ ಅವಳು ಸಚಿವ ಬದಲಿಗೆ ಸಚಿವೆ ಎಂದೆ ಕಾಣಿಸಿಕೊಳ್ಳುತ್ತಾಳೆ.

ಹಾಗಾದರೆ ರಾಜಕೀಯದಲ್ಲಿ ಬಲಿಷ್ಠ ಅಥವಾ ಪ್ರಭಾವಶಾಲಿಯಾದ ಮಹಿಳೆಯರೆ ಇಲ್ಲವೆ ಎಂಬ ಸಂಶಯ ಬರದೆ ಇರದು. ಉಮಾಭಾರತಿ, ಮಾಯಾವತಿ, ಜಯಲಲಿತ, ಶೀಲಾ ದೀಕ್ಷಿತ್, ಸೋನಿಯಾ ಗಾಂಧಿ, ಸುಷ್ಮಾ ಸ್ವರಾಜರಂತಹ ನಾಯಕಿಯರಿದ್ದಾಗ್ಯೂ ಇವರ ಕಾರ್ಯ ವ್ಯಾಪ್ತಿ ಪಕ್ಷರಾಜಕಾರಣಕಷ್ಟೇ ಮೀಸಲು. ಪರಿಸ್ಥಿತಿ ಹೀಗಿರುವುದರಿಂದಲೆ ಮಹಿಳಾ ರಾಜಕೀಯ ಸಬಲೀಕರಣದಲ್ಲಿ ದೊಡ್ಡ ಕಂದಕ ಉಂಟಾಗಿರುವುದು, ಲಿಂಗ ನೆಲೆಯ ಪಾವಿತ್ರ್ಯ ಶೀಲವೆಂಬ ಅಸ್ಪೃಶ್ಯ ಜಾತಿ ವರ್ಗಗಳ ನೆಲೆಯಲ್ಲಿ ಕೆಳಗಿನವರನ್ನು ಸದೆ ಬಡಿಯಲು ಉಪಯೋಗಿಸುವ ಬಹುದೊಡ್ಡ ಅಸ್ತ್ರಗಳಾಗಿ ಇವುಗಳು ಮಾರ್ಪಾಡಾಗಿವೆ. ಇಂತಹ ಹಿರಿಯ ಮಹಿಳಾ ರಾಜಕಾರಣಿಗಳನ್ನು ತುಳಿಯಲೆಂದೆ ಲಿಂಗತ್ವ ರಾಜಕಾರಣ ಸಾರ್ವಜನಿಕವಾಗಿ ಹೊತ್ತು ಕಳೆಯುವ ಬಾಯಿಚಪಲದ ಸಂಗತಿಗಳಾಗಿ ನುರಿಯಲ್ಪಡುತ್ತವೆ.[೮]

ಮಹಿಳಾ ರಾಜಕಾರಣದ ಬಗ್ಗೆ ಅಲ್ಪ ಪ್ರಮಾಣದಲ್ಲಾದರೂ ನ್ಯಾಯ ಒದಗಿಸುವ ದೃಷ್ಟಿಯಿಂದ ಮಹಿಳಾ ಮಿಸಲಾತಿ ವಿಧೇಯಕವನ್ನು ಮಂಡಿಸಿತು. ಶಾಸನ ಸಭೆಗಳಲ್ಲಿ ಶೇ ೩೩%ರಷ್ಟು ಮೀಸಲಾತಿಯನ್ನು ಇದು ಒಳಗೊಂಡಿತ್ತು. ಆದರೆ ೧೯೯೬ರಿಂದ ಇಂದಿನವರೆಗೂ ಇದು ಜಾರಿಯಾಗದೆ ಮಾಯವಾಗುತ್ತಲೆ ನಡೆದಿದೆ. ಮಹಿಳೆ ರಾಜಕೀಯಕ್ಕೆ ಬಂದರೆ ತನ್ನ ಅಸ್ತಿತ್ವಕ್ಕೆಲ್ಲಿ ಕುಂದುಬರುವುದೋ ಎಂಬ ಭಯದಿಂದ ಇದಕ್ಕೆ ತಡೆಯೊಡ್ಡಲಾಗಿದೆ (ಇದರ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ವಿವರಣೆ ಇದೆ).

ಮಹಿಳಾ ರಾಜಕಾರಣದ ಕುರಿತ ಚರ್ಚೆಯಲ್ಲಿ ಕರ್ನಾಟಕವನ್ನು ಸ್ವಲ್ಪ ಅವಲೋಕಿಸುವ ಅಗತ್ಯವಿದೆ. ೨೦೦೪ರ ಚುನಾವಣೆಯಲ್ಲಿ ಅತಂತ್ರ ವಿಧಾನಸಭೆ ಇದ್ದಾಗ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದಿತು. ಸುದೀರ್ಘವಾಗಿ ಎರಡು ವರ್ಷ ಆಡಳಿತ ನಡೆಸಿದ 'ಕರ್ನಾಟಕ ಅಭಿವೃದ್ಧಿ ರಂಗ' ತನ್ನ ಆಡಳಿತಾವಧಿಯವರೆಗೂ ಒಬ್ಬಳೆ ಒಬ್ಬ ಮಹಿಳೆಗೂ ಸಚಿವ ಸ್ಥಾನ ಸಿಗಲೇ ಇಲ್ಲ. ಕಾರಣ ಎಂದರೆ ಒಂದೊಂದು ಪಕ್ಷಗಳ ಧೋರಣೆ ಒಂದೊಂದು ರೀತಿಯಲ್ಲಿ ಸಮರ್ಥಿಸಿಕೊಂಡಿದ್ದವು. ಕಾಟಾಚಾರಕ್ಕೆ ಎಂಬಂತೆ ಒಬ್ಬ ಹಿರಿಯ ಮಹಿಳೆಗೆ ನಿಗಮ ಮಂಡಳಿಯ ಅಧ್ಯಕ್ಷೆ ಸ್ಥಾನ ನೀಡಿ ಎಲ್ಲರ ಬಾಯನ್ನು ಮುಚ್ಚಿಸಲಾಯಿತು.

೨೦೦೮ನೇ ಸಾಲಿನಲ್ಲಿ ನಡೆದ ವಿಧಾನಸಭೆ ಚುನಾವಣೆಯು ಮಹಿಳಾ ಅಸ್ತಿತ್ವದ ಬಗ್ಗೆ ಅತ್ಯಂತ ಪರಿಣಾಮಕಾರಿಯಾದ ಹಂತವಾಯಿತು. ಕರ್ನಾಟಕದಲ್ಲಿ ಮೊಟ್ಟ ಮೊದಲ ಭಾರಿಗೆ ಭಾ.ಜ.ಪ. ಪಕ್ಷ ಅಧಿಕಾರಕ್ಕೆ ಬಂದಿತು. ೨೨೪ ವಿಧಾನಸಭಾ ಕ್ಷೇತ್ರಗಳಿಗೆ ಸ್ಪರ್ಧಿಸಿದ್ದ ಒಟ್ಟು ಪುರುಷರ ಸಂಖ್ಯೆ ೨೧೩೪, ಸ್ತ್ರೀಯರ ಸಂಖ್ಯೆ ೧೦೮, ಭಾಜಪ ೧೫, ಕ್ರಾಂಗ್ರೆಸ್‌ನಿಂದ ೯ ಹಾಗೂ ಜೆಡಿಎಸ್ ನಿಂದ ೭ ಜನ ಅಖಾಡದಲ್ಲಿದ್ದರು. ಉಳಿದ ೬೭ ಜನ ಮಹಿಳೆಯರು ಎಸ್ ಪಿ ಇತರ ಪಕ್ಷಗಳಿಂದ ಸ್ಪರ್ಧಿಸಿದವರಾಗಿದ್ದರು, ರಾಜಕೀಯ ಮುಖ್ಯವಾಹಿನಿಯ ಸಹಭಾಗಿತ್ವದಲ್ಲಿ ಮಹಿಳೆಯರು ಭಾಗಿಯಾಗಲು ಅವಕಾಶಗಳ ಬಾಗಿಲ ತೆರೆದಿರುವುದು ಮೇಲಿನ ಸ್ಥಾನಗಳಿಗೆ ನೀಡಿದ ಪ್ರಾಶಸ್ತ್ಯದಿಂದ ಕಾಣಬಹುದು. ೨೨೪ ಸದಸ್ಯ ಬಲದ ವಿಧಾನಸಭೆಯಲ್ಲಿ ಮಹಿಳಾ ಶಾಸಕಿಯರ ಸಂಖ್ಯೆ ೦೩ (ಶೋಭಾ ಕರಂದ್ಲಾಜೆ, ಮಲ್ಲಿಕಾ ಪ್ರಸಾದ್, ಸೀಮಾ ಮಸೂತಿ). ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮೂರು ಕೋಟಿ ಜನ ಮಹಿಳೆಯರ ಪ್ರತಿನಿಧಿಗಳು ಕೇವಲ ೩ (೧.೩೪%) ಮಾತ್ರ. ಮುಖ್ಯವಾಗಿ ನಮ್ಮಲ್ಲಿ ಮಹಿಳೆಯರ ಕುರಿತು ಉಚಿತ ಕಾರ್ಯನೀತಿ ಇಂದಿಗೂ ನಮಗೆ ಒದಗಿ ಬಂದಿಲ್ಲ ಎಂಬುದು ಸೋಜಿಗದ ಸಂಗತಿ.

ಪ್ರಸ್ತುತ ಗಂಡಿನ ರಾಜಕೀಯ, ರಾಜಕಾರಣದಲ್ಲಿ ಹೆಣ್ಣು ಸಾಧನ ಸಾಮಗ್ರಿಯಾಗಿರುವುದಕ್ಕೆ ಮಾರುಕಟ್ಟೆಯಾಧಾರಿತವಾದ ಹಿತದ ಕೈವಾಡವೂ ಸಹ ಇದೆ ಎಂಬುದನ್ನು ಒಪ್ಪಲೇಬೇಕು. ಪಕ್ಷ ರಾಜಕಾರಣದ ಸಂದರ್ಭದಲ್ಲಿ ಮಹಿಳಾ ಮತಗಳ ಮೇಲೆ ಕಣ್ಣಿಟ್ಟಿರುವ ರಾಜಕೀಯ ಪಕ್ಷಗಳು ಮಹಿಳಾ ಮೀಸಲಾತಿ, ಮಹಿಳಾ ಸಮಾನತೆಯ ಬಗ್ಗೆ ಪ್ರಣಾಳಿಕೆಯಲ್ಲಿ ಘೋಷಿಸುತ್ತವೆ. ಆದರೆ ದಶಕದಿಂದಲೂ ಇದಾವುದು ಜಾರಿಗೆ ಬರದೆ ಇರುವುದನ್ನು ನೋಡಿದರೆ ರಾಜಕೀಯ ಪಕ್ಷಗಳಿಗೆ ಮಹಿಳಾ ರಾಜಕೀಯ ಸಹಭಾಗಿತ್ವದ ಕುರಿತು ಎಷ್ಟರ ಮಟ್ಟಿಗೆ ಕಾಳಜಿ ಇದೆ ಎಂಬುದು ಅರ್ಥವಾಗುತ್ತದೆ.

ವಾಸ್ತವದಲ್ಲಿ ಯಾವುದೇ ಪಕ್ಷ ಚುನಾವಣೆಯ ಟಿಕೆಟ್ ಹಂಚುವಿಕೆಯಲ್ಲಿ ಜಾತಿ, ಹಣ, ವರ್ಗಗಳನ್ನೇ ಮುಖ್ಯವಾಗಿ ಅಳತೆಗೋಲಾಗಿ ಪರಿಗಣಿಸುತ್ತಾರೆ. ಅದೇ ಸಂದರ್ಭದಲ್ಲಿ ಅನುಕಂಪಾಧಾರಿತ ಮತಗಳು ಬರುವಂತಿದ್ದರೆ ಗಂಡಸು ರಾಜಕಾರಣಿಯು ಸತ್ತ ಮನೆಯಿಂದ ಮಹಿಳೆಯನ್ನು ಕರೆತರುವುದು ಸಾಮಾನ್ಯವಾಗಿದೆ. ಪ್ರಜಾಪ್ರಭುತ್ವದ ಬುಡದಲ್ಲಿಯೇ ಲಿಂಗ ಮತ್ತು ಹಣದ ಗೆದ್ದಲು ಹತ್ತಿರುವುದರಿಂದ ಮತದಾನದ ಫಲಾನುಭವಿ ಮಹಿಳೆಯಾಗುವುದಕ್ಕೆ ಸ್ವಘೋಷಿತ ನಿಷೇಧವನ್ನು ಎಲ್ಲಾ ರಾಜಕೀಯ ಪಕ್ಷಗಳು ಒಪ್ಪಿಕೊಂಡಿವೆ. ರಾಜಕಾರಣ ಎಂಬುದು ಇಂದು ಒಂದು ಉದ್ಯಮವಾಗಿರುವುದರಿಂದ ಲಾಭ ನಷ್ಟದ ಪ್ರಶ್ನೆ-ಉತ್ತರಗಳಿಗೆ ಗಂಡಸೆ ಬಾಧ್ಯಸ್ಥನಾಗಿರುವುದರಿಂದ ರಾಜಕೀಯ ವಾತಾವರಣವೆಲ್ಲ ಪುರುಷಮಯವಾಗಿ ಕಂಡುಬರುತ್ತಿದೆ. ದುರಂತ ಎಂದರೆ ಚರಿತ್ರೆಯುದ್ದಕ್ಕೂ ಮಹಿಳೆ ಒಂದು ವರ್ಗ, ಜಾತಿ, ಕುಲ, ಸಂಸ್ಕೃತಿ ಸಮಾಜವಾಗಿ ರೂಪುಗೊಳ್ಳದಿರುವುದು. ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಪುರುಷಾಧಿಕಾರಗಳು ಹುಟ್ಟಿಕೊಂಡ ಹಾಗೆಯೇ ರಾಜಕೀಯವಾಗಿಯೂ ಪುರುಷಾಧಿಕಾರ ಮೈದಳೆದಿದೆ. ಆದರೆ ಯಾವುದೇ ಸ್ತ್ರೀ ಆಸಕ್ತಿಯ ಕ್ಷೇತ್ರಗಳು ಇಲ್ಲಿಯವರೆಗೆ ರೂಪುಗೊಂಡಿಲ್ಲ. ಕುಟುಂಬದೊಳಗಿನ ಹೆರಿಗೆ, ಮನೆ, ಗೃಹಕಾರ್ಯಗಳಲ್ಲಿ ಸಂಪೂರ್ಣ ಹಕ್ಕನ್ನು ಪಡೆದಿರುವ ಹೆಣ್ಣು ಮನೆಯೊಡತಿ ಎಂದು ಕರೆಸಿಕೊಂಡಿದ್ದು

ಸಂತಾನೋತ್ಪತ್ತಿಯ ಯಾಜಮಾನ್ಯ ಸಂಸ್ಕೃತಿಯ ಪಾವಿತ್ರ್ಯದ ಕಾರಣದಿಂದಲೇ. ಇಂತಹ ಸಂಕೀರ್ಣ ಸ್ಥಿತಿಯಲ್ಲಿ ಮಹಿಳಾ ರಾಜಕೀಯ ಪ್ರತಿನಿಧೀಕರಣ, ಅವಳ ಅಸ್ತಿತ್ವ ಅತ್ಯಂತ ನಗಣ್ಯವಾಗಿ ಕಾಣುತ್ತದೆ. ಮಹಿಳಾ ರಾಜಕೀಯ ಸಹಭಾಗಿತ್ವಕ್ಕೆ ಸಾಮಾಜಿಕ ಸಂಸ್ಥೆಯಾಗಿರುವ ಕುಟುಂಬ, ರಾಜಕೀಯ, ಧರ್ಮ, ರಾಜಕೀಯ ಪಕ್ಷಗಳೆಲ್ಲವೂ ಮಹಿಳೆಯ ಇರುವಿಕೆಯ ಬಗೆಗಿನ ತಾತ್ಸಾರ ಮನೋಭಾವನೆಯಿಂದಲೆ ಇವುಗಳಿಗೆ ಪ್ರಮುಖ ಅಡೆತಡೆಯಾಗಿದೆ. `ಬಳೆ ತೊಡುವ ಕೈಗೆ ಏಕೆ ಅಧಿಕಾರ` ಎಂಬ ಚಿಂತನೆಯೂ ಸಾಮಾಜಿಕ ಜೀವನದಲ್ಲಿ ಮುಂದುವರೆದಿರುವುದರಿಂದಲೆ ಅವಳ ರಾಜಕೀಯ ಅಸ್ತಿತ್ವವೂ ಕುಸಿಯುತ್ತಿದೆ. ಮಹಿಳಾ ರಾಜಕಾರಣದ ಕುರಿತು ಸಮಾಜ ಹೊಂದಿರುವ ಚಿಂತನೆಗಳು ಹೀಗಿವೆ.

* ರಾಜಕಾರಣ ಎಂಬುದು ಮೂರೂ ಬಿಟ್ಟ ಪುಡಾರಿಗಳಿಗೆ ಮಾತ್ರ. ಇಲ್ಲಿ ಮಹಿಳೆಯ ಪ್ರವೇಶದಿಂದ ಅವಳ ಸಾಂಸ್ಕೃತಿಕವಾದ ಪಾವಿತ್ರ್ಯ ಹಾಳಾಗುತ್ತದಲ್ಲದೆ ಭಾರತೀಯ ಕೌಟುಂಬಿಕ ಪದ್ಧತಿಗೆ ಬಲವಾದ ಪೆಟ್ಟು ಬೀಳುತ್ತದೆ.
* ಮಹಿಳೆ ರಾಜಕೀಯಕ್ಕೆ ಬರುವುದರಿಂದ ಅವಳಿಗಾಗಿಯೇ ಇರುವ ಕುಟುಂಬ, ವಿವಾಹ, ಗೃಹಕಾರ್ಯಗಳಿಗೆ ಧಕ್ಕೆ ಉಂಟಾಗುತ್ತದೆ. ಆದ್ದರಿಂದಲೇ ಅವಳು ಅವುಗಳನ್ನು ತ್ಯಜಿಸಿ ಹೊರಗೆ ಬರಬಾರದು. ಇದರಿಂದ ಅವಳ ಅವನತಿಯೇ ಆಗಬಹುದು, ಆದ್ದರಿಂದ ಅವಳು ತನ್ನ ಗಮನವನ್ನು ಕೇವಲ ಗೃಹದ ಕಡೆಗೆ ಹರಿಸಬೇಕು.
* ಮುಖ್ಯವಾಗಿ ರಾಜಕಾರಣದಲ್ಲಿ ಬೇಕಾಗಿರುವುದು ಬುದ್ಧಿವಂತಿಕೆ ಚುರುಕುತನ, ತರಬೇತಿ, ಸೂಕ್ಷ್ಮತೆಗಳ ಅವಶ್ಯವಿರುವುದರಿಂದ ಇವುಗಳಾಚೆಗೆ ಅವಳು ಯೋಚಿಸಲೂ ಬಾರದು, ಸಮಾಜದಲ್ಲಿ ಆಳವಾಗಿ ಬೇರೂರಿರುವ ಇಂತಹ ಪುರುಷನಿಷ್ಠ ಚಿಂತನೆಗಳು, ಆಲೋಚನೆಗಳು ರಾಜಕಾರಣಕ್ಕೆ ಪುರುಷನನ್ನೇ ಮುಖ್ಯಸ್ಥನನ್ನಾಗಿ ಮಹಿಳೆಯನ್ನು ಮನೆಗೆ ಸೀಮಿತಗೊಳಿಸಿಬಿಟ್ಟಿವೆ.

### ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ವಿಕೇಂದ್ರೀಕರಣ ತತ್ವಾಧಾರಿತವಾದ ಪಂಚಾಯತ್‌ರಾಜ್ ಸಂಸ್ಥೆಯಲ್ಲಿನ ದಲಿತ ಮಹಿಳಾ ರಾಜಕೀಯದಲ್ಲಿನ ಹತ್ತು ಹಲವು ಇಕ್ಕಟ್ಟು, ಸವಾಲುಗಳನ್ನು ಅರಿಯುವ ಆಶಯವನ್ನು ಹೊಂದಿದೆ. ಸಶಕ್ತೀಕರಣದ ತತ್ವವನ್ನು ಆಧರಿಸಿ ಮಹಿಳೆಗೆ ರೂಪಿಸಲಾದ ಚಿಂತನೆಗಳಲ್ಲಿ ಅವಳ ರಾಜಕೀಯ ಸಬಲೀಕರಣವೂ ಒಂದು. ಅಧಿಕಾರದ ಅತ್ಯಂತ ತಳಮಟ್ಟದಲ್ಲಿನ ಮಹಿಳೆಯರನ್ನು ರಾಜಕೀಯವಾಗಿ ತರಬೇತುಗೊಳಿಸುವ ಘನ ಉದ್ದೇಶದೊಂದಿಗೆ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಶೇ ೩೩ರಷ್ಟು ಮೀಸಲಾತಿಯನ್ನು ನೀಡಲಾಯಿತು. ಇದರಿಂದ ಸಾವಿರಾರು ಮಹಿಳೆಯರಿಗೆ ರಾಜಕೀಯಾಧಿಕಾರದ ಬಾಗಿಲು ತೆರೆಯಿತು. ಮೊದಲ ಹಂತದಲ್ಲಿ ಇಷ್ಟೊಂದು ಬೃಹದಾಕಾರದ ಮಹಿಳೆಯರ ಪ್ರವೇಶವನ್ನು ಸ್ವಾಗತಿಸದೆ ಅವಮಾನಿಸಿದವರಿಗೇನು ಕಡಿಮೆ ಇಲ್ಲ. ಇಡೀ ದೇಶವನ್ನೆ ಬಾಧಿಸುತ್ತಿರುವ ಕಡುಬಡತನ, ಅನಕ್ಷರತೆ ದೇಶಕ್ಕೆ ಕಳಂಕ ತರುವ ಪ್ರಮುಖ ಅಂಶಗಳಾಗಿ ಪರಿಣಮಿಸಿವೆ. ಸಮಾಜದ ಅಂಚಿನಲ್ಲಿರುವ ದಲಿತ ಮಹಿಳಾ ಸಮುದಾಯವಂತೂ ಅಲ್ಪ ಪ್ರಮಾಣದಲ್ಲಾದರೂ ತನ್ನ ಅಸ್ತಿತ್ವವನ್ನು ತೋರಿಸಲು ಹೆಣಗಾಡುತ್ತಿದೆ.

ನಿರಂತರವಾಗಿ ದಲಿತ ಮಹಿಳಾ ಸಮುದಾಯ ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಪುರೋಹಿತಶಾಹಿಗಳ ದಾಳಿಗೆ ನಿರಂತವಾಗಿ ಶೋಷಣೆಗಳಿಗೆ ಬಲಿಯಾಗುತ್ತಲೆ ಬಂದಿದೆ.

ವರ್ತಮಾನ ಸಂದರ್ಭದಲ್ಲಿಯೂ ದಲಿತ ಮಹಿಳೆಯ ರಾಜಕೀಯ ಸಬಲೀಕರಣಕ್ಕಾಗಿ ಸಂವಿಧಾನದತ್ತವಾಗಿ ಅವಳಿಗೆ ನೀಡಲಾಗಿರುವ ರಾಜಕೀಯಾಧಿಕಾರವನ್ನು ಅವಳು ಯಾವ ರೀತಿ ನಿರ್ವಹಿಸುತ್ತಿದ್ದಾಳೆ. ಅವಳ ಅಧಿಕಾರ ಚಲಾವಣೆಯಲ್ಲಿ ಏನಾದರೂ ತೊಡಕುಗಳು, ತೊಂದರೆಗಳಿವೆಯೇ? ತನಗೊಪ್ಪಿದ ಅಧಿಕಾರವನ್ನು ಅವಳು ಎಷ್ಟರ ಮಟ್ಟಿಗೆ ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸುತ್ತಿದ್ದಾಳೆ ಎಂದು ಅರಿಯುವುದು ನನ್ನ ಅಧ್ಯಯನದ ಪ್ರಮುಖ ಆಶಯವಾಗಿದೆ. ಪ್ರಸ್ತುತ ರಾಜಕಾರಣ ಒಂದು ದಂದೆಯಾಗಿರುವುದರಿಂದ ಇಲ್ಲಿ ನೈತಿಕತೆ, ಸಾಮಾಜಿಕ ಮೌಲ್ಯಗಳಿಂದ ಗುಣಾತ್ಮಕ ಕಾರ್ಯಗಳು ಆಗಬೇಕೆಂಬುದು ದಲಿತ ಮಹಿಳೆಯ ವಿಷಯದಲ್ಲಿ ಸುಳ್ಳಾಗುತ್ತವೆ. ಬಲಿಷ್ಠತೆ ಎಂಬ ಆರ್ಥಿಕ ಮತ್ತು ಸಾಂಸ್ಕೃತಿಕ ನೆಲೆಗಟ್ಟಿರುವ ಮಹಿಳೆಯರು ಇಲ್ಲಿ ಶೋಕೇಸಿನ ಗೊಂಬೆಗಳಾಗಿರುವುದಲ್ಲದೆ ಯಾವ ಕಾರಣಕ್ಕಾಗಿ ಅವರಿಗೆ ಮೀಸಲಾತಿ ನೀಡಲಾಯಿತೋ ಅದನ್ನು ಅಣಕಿಸುವಂತೆ ಅವಳ ರಾಜಕೀಯ ಪ್ರತಿನಿಧೀಕರಣವು ಕಂಡುಬರುತ್ತಿದೆ. ಯಾಜಮಾನ್ಯಶಾಹಿಯ ಬಲಿಷ್ಠ ಆರ್ಥಿಕತೆಗೆ, ದಬ್ಬಾಳಿಕೆಗಳಿಗೆ ನಿರಾತಂಕವಾಗಿ ಬಲಿಯಾಗುತ್ತಲೆ ಬಂದಿರುವ ದಲಿತ ಮಹಿಳೆ ತನಗೆ ಸಿಕ್ಕ ರಾಜಕೀಯ ಅವಕಾಶ ಸಾಕಾರಿಯಾಗಿದೆಯೇ ಎಂದು ಅರಿಯಬೇಕಾಗಿದೆ.

ಮೀಸಲಾತಿಯ ಅಡಿಯಲ್ಲಿ ಚುನಾಯಿತರಾದ ದಲಿತ ಮಹಿಳೆಯರು ತಾವು ಯಾವ ಕಾರಣಕ್ಕಾಗಿ ಚುನಾವಣೆಗೆ ನಿಲ್ಲುತ್ತಿದ್ದೇವೆ ಎಂಬ ಪರಿವೆ ಅವರಿಗಿಲ್ಲ, ಊರಿನ ಹಿರಿಯ ಗೌಡ, ಶಾನಭೋಗರಂತಹ ಮೇಲ್ವರ್ಗದವರ ಅಣತಿಯಂತೆ ಚುನಾವಣೆಯಲ್ಲಿ ಭಾಗಿಯಾಗುತ್ತಿದ್ದಾರೆ. ಆದರೆ ಇದು ಅವರ ಸ್ವಯಂ ನಿರ್ಧಾರವಾಗಿರದೆ ಭಯದಿಂದಲೆ ತಗೆದುಕೊಂಡ ತೀರ್ಮಾನವಾಗಿರುತ್ತದೆ. ಏಕೆಂದರೆ ಊರಿನ ಹಿರಿಯರನ್ನು ಎದುರು ಹಾಕಿಕೊಂಡು ಅಲ್ಲಿ ವಾಸಿಸುವುದು ತುಂಬ ದುಸ್ತರ. ಅಧಿಕಾರಸತ್ತೆ ಮತ್ತು ಪುರುಷಸತ್ತೆಯು ಹುರಿಗೊಂಡಿರುವುದರಿಂದ ಇವೆರಡೂ ದಲಿತ ಮಹಿಳೆಯನ್ನು ಸಮಾನ ನೆಲೆಯಲ್ಲಿ ಕಾಣುವ ಮಾನಸಿಕ ಅಥವಾ ಉದಾರವಾದಿ ಚಿಂತನೆಯನ್ನು ಈವರೆಗೂ ಹೊಂದಿಲ್ಲ. ಆರ್ಥಿಕವಾಗಿ ಬಲಿಷ್ಠವಾಗಿರುವ ಇಂತಹ ಶಕ್ತಿಗಳು ದಲಿತ ಮಹಿಳೆಯ ಚಾರಿತ್ರಿಕ, ವೈಯಕ್ತಿಕ ದೌರ್ಬಲ್ಯಗಳನ್ನು ಬಳಸಿಕೊಂಡು ಹೊಸ ಬಗೆಯ ಶೋಷಣೆಯನ್ನು ನಡೆಸುತ್ತಿವೆ. ಮೀಸಲಾತಿಯಂತಹ ಉದಾತ್ತ ಚಿಂತನೆಯ ಫಲವಾಗಿ ದಲಿತ ಮಹಿಳೆಯ ಪಾಲಿಗೆ ಹೊರ ಜಗತ್ತಿನ ಅವಕಾಶಗಳ ಬಾಗಿಲು ತೆರೆದಿದ್ದರೂ ಅವಳು ಮಾತ್ರ ಸನಾತನ ಚಿಂತನೆಯಲ್ಲಿಯೇ ನರಳುತ್ತಿದ್ದಾಳೆ. ದಲಿತ ಮಹಿಳೆಯನ್ನು ಸಮಾಜದ ಮುಖ್ಯವಾಹಿನಿಗೆ ತರುವಲ್ಲಿ ಸ್ವತಃ ಅವಳ ಸಮುದಾಯ, ಕುಟುಂಬ ವರ್ಗವೆ ಆಸಕ್ತಿ ತಳೆದಿಲ್ಲ. ತಮ್ಮ ಸಮಾನ ನೆಲೆಗೆ ಬರುವ ಮಹಿಳೆಯನ್ನು ಸಾಂಸ್ಕೃತಿಕವಾಗಿರುವ ಶ್ರೇಷ್ಠತೆಯ ಲಿಂಗನೆಲೆಯೊಳಗೆ ತುಂಬ ಅವಜ್ಞೆಯಿಂದ ನಡೆಸಿಕೊಳ್ಳಲಾಗುತ್ತಿದೆ. ಆದ್ದರಿಂದಲೆ ಮೀಸಲಾತಿಯ ಸಮಷ್ಟಿ ಪಾಲು ಆಳ್ವರಿಗೆ ವರವಾಗಿ ಪರಿಣಮಿಸಿದೆ. ದಲಿತ ಮಹಿಳೆ ತನ್ನ ಕುಟುಂಬ ಅಥವಾ ಸಮುದಾಯವನ್ನು ತನ್ನ ಬೆನ್ನಿನ ಹಿಂದಿರುವಂತೆ ನಿಲ್ಲಿಸುವ ಸಾಮಾನ್ಯ ಧೈರ್ಯವೂ ಅವಳಿಗಿಲ್ಲ. ತನಗೆ ಸಿಕ್ಕ ಅಧಿಕಾರವನ್ನೆ ಆಳಿಸಿಕೊಳ್ಳುವಲ್ಲಿ ಅವಳು ಸೋಲುತ್ತಿದ್ದಾಳೆ. ಅಲ್ಲದೆ ಕುಟುಂಬದ ನೆಲೆಯಲ್ಲಿ ಲಿಂಗರಾಜಕಾರಣದಿಂದ ಆಳಿಸಿಕೊಳ್ಳುವ ಕುಟುಂಬದ ಅಥವಾ ಮೇಲ್ವರ್ಗದ ಪುರುಷರ ಅಧೀನಳಾಗಿ ತನ್ನ ಅಧಿಕಾರ ಅವರಿಗೊಪ್ಪಿಸಿದ್ದಾಳೆ.

ತನ್ನ ಅಧಿಕಾರ ಅವಧಿಯಲ್ಲಿ ಕ್ಷೇತ್ರದ ಅಭಿವೃದ್ಧಿಯ ಬಗ್ಗೆ ತನ್ನ ವ್ಯಕ್ತಿಗತ ಬಲದ ಮೇಲೆ ಅಥವಾ ಸ್ವಂತ ನಿರ್ಧಾರದ ಮೇಲೆ ಕೆಲಸ ಮಾಡುವಂತ ವಾತಾವರಣ ಕಂಡುಬರುತ್ತಿಲ್ಲ. ಪುರುಷರಾಜಕಾರಣದ ಒಂದು ಅಂಗವಾಗಿ ಅವಳು ನಡೆಯುತ್ತಿದ್ದಾಳೆ.

ಪ್ರಸ್ತುತ ಅಧ್ಯಯನವು ದಲಿತರಲ್ಲಿಯೇ ದಲಿತಳಾಗಿರುವ ದಲಿತ ಮಹಿಳೆಯ ರಾಜಕೀಯ ಪ್ರತಿನಿಧೀಕರಣವನ್ನು ಒರೆಗೆ ಹಚ್ಚುವ, ಅವಳ ಸಮಸ್ಯೆ, ಸವಾಲುಗಳ ಬಗ್ಗೆ ಬೆಳಕು ಚೆಲ್ಲುವಲ್ಲಿದೆ. ಭಾರತೀಯ ಸಂಸ್ಕೃತಿಯು ಹಿಂದಿನಿಂದಲೂ ತನ್ನ ಮತಾಚರಣೆಯ ವಿಷಯದಲ್ಲಾಗಲಿ ಅಥವಾ ತಾನು ಅಳವಡಿಸಿಕೊಂಡಿರುವ ಜಾತಿಯಾಧಾರಿತವಾದ ದಾಸ್ಯದ ಅಂಶಗಳನ್ನು ಭಾರತದ ಸಾಂಸ್ಕೃತಿಕ ಪರಂಪರೆಯುದ್ದಕ್ಕೂ ಕಂಡುಬರುತ್ತವೆ. ಪ್ರಾಚೀನ ಭಾರತದ ಸಂಸ್ಕೃತಿಯತ್ತ ಒಮ್ಮೆ ಕಣ್ಣು ಹಾಯಿಸಿದಾಗ ಸಂಸ್ಕೃತಿಯ ಹೆಸರಲ್ಲಿ ನಡೆದ ದಾಸ್ಯದ ಅಂಶಗಳು ಹೇರಳವಾಗಿ ಕಂಡುಬರುತ್ತವೆ. ಆಧುನಿಕ ಪ್ರಪಂಚದಲ್ಲಿ ದಾಸ್ಯದ ಸ್ವರೂಪವು ಬದಲಾಗಿರಬಹುದಾದರೂ ಪಾರಂಪರಿಕವಾಗಿ ನಡೆದು ಬಂದಿರುವ ಅವರ ಯಾಜಮಾನ್ಯದ ಪಳೆಯುಳಿಕೆಗಳು ಇಂದಿಗೂ ಸಮಾಜದಲ್ಲಿ ಕ್ರಿಯಾಶೀಲವಾಗಿವೆ. ಏಕೆಂದರೆ ದಾಸ್ಯದ ಸಾಂಪ್ರದಾಯಿಕ ಮೂಲ ಸ್ವರೂಪ ನಾಗರಿಕ ಜೀವನದಲ್ಲಿಯೂ ಉಳಿದಿರುವುದಲ್ಲದೆ ಅದು ತನ್ನ ಕರಾಳ ಮುಖಗಳನ್ನು ಸಮಾಜದ ಪ್ರತಿಯೊಂದು ರಂಗಗಳಲ್ಲಿಯೂ ಚಾಚಿದೆ. ಇಂತಹ ಅಸಮಾನತೆ ಪ್ರಪಂಚದ ಯಾವುದೇ ನಾಗರಿಕ ದೇಶದಲ್ಲಿ ನಾವು ಕಾಣಲು ಸಾಧ್ಯವಿಲ್ಲ. ಜೀವಸೃಷ್ಟಿಗಳ ಉಗಮದೊಂದಿಗೆ ಆರಂಭವಾಗಿರುವ ಮೇಲುಕೀಳಿನ ಚಿಂತನೆಗಳು ಇಂದಿಗೂ ವಾಸ್ತವವಾಗಿ ನಮ್ಮನ್ನು ಆಳುತ್ತಿವೆ. ವ್ಯಕ್ತಿಯನ್ನು ಅವರ ಕುಟುಂಬದ ನೆಲೆಯೊಳಗೆ ಸೀಮಿತಗೊಳಿಸಿ ಅವರನ್ನು ಅಸಮಾನ ಸ್ಥಿತಿಯಲ್ಲಿಯೇ ಉಳಿಸಿರುವ ಅಂಶಗಳು ಇಂದು ಹಲವಾರು ಬಗೆಯಲ್ಲಿ ಢಾಳಾಗಿ ಕಂಡುಬರುತ್ತವೆ. ಇಂತಹ ಪರಿಸ್ಥಿತಿಯನ್ನು ಎದುರಿಸಿ ನಡೆಯುವುದು ತಳಸಮುದಾಯಗಳಿಗೆ ಅತ್ಯಂತ ತ್ರಾಸದಾಯಕವೆ.

'ಪಂಚಾಯಿತಿ' ಎಂಬ ನಿರ್ವಚನವೆ ಸೂಚಿಸುವಂತೆ ಇದು ಯಾಜಮಾನ್ಯಶಾಹಿ, ಪುರೋಹಿತಶಾಹಿ ಪ್ರಭುತ್ವಗಳ ಮುಂದುವರೆದ ರೂಪವಾಗಿದೆ. ಇಲ್ಲಿ ಮೇಲ್ಜಾತಿ, ಮೇಲ್ವರ್ಗಗಳು ಇದರಲ್ಲಿ ಪ್ರಮುಖ ಹಕ್ಕುದಾರರಾಗಿರುವುದರಿಂದ ಇಲ್ಲಿ ತಳ ಸಮುದಾಯಗಳ ಹಾಗೂ ಮಹಿಳೆಯರ ಭಾಗವಹಿಸುವಿಕೆ ಎಂಬುದು ಇರುವುದಿಲ್ಲ. ಇಂತಹ ಸಂಕೀರ್ಣ ಪರಿಸ್ಥಿತಿಯಲ್ಲಿ ಸಮಾಜದ ಅಂಚಿನಲ್ಲಿರುವ ಅಲಕ್ಷ್ಯ, ತಿರಸ್ಕಾರ, ತಾತ್ಸಾರಗಳಿಗೆ ಬಲಿಯಾಗಿರುವ ದಲಿತ ಮಹಿಳೆಯ ರಾಜಕೀಯ ಪ್ರತಿನಿಧೀಕರಣವು ಅತ್ಯಂತ ಕ್ಲಿಷ್ಟಕರವಾಗಿ ಕಂಡುಬರುತ್ತದೆ. ಏಕೆಂದರೆ ದಲಿತ ಸಮುದಾಯ ಸಮಾಜದ ಒಂದು ಭಾಗವಾಗಿರುವುದರಿಂದ ಇಲ್ಲಿ ಅವರ ಸಹಭಾಗಿತ್ವ ಅನಿವಾರ್ಯವಾಗಿದೆ. ಅಭಿವೃದ್ಧಿ ಕಾರ್ಯಗಳಲ್ಲಿ ಅವರು ಪಾಲ್ಗೊಳ್ಳದೆ ಯಾವುದೇ ಯೋಜನೆಗಳು ಫಲಕಾರಿಯಾಗಲಾರವು. ಸಂವಿಧಾನದತ್ತವಾಗಿ ಬಂದಂತಹ ರಾಜಕೀಯಾಧಿಕಾರವನ್ನು ದಲಿತ ಮಹಿಳೆ ನಿರ್ವಹಿಸುವಿಕೆಯಲ್ಲಿ ಪುರೋಹಿತಶಾಹಿ, ಯಾಜಮಾನ್ಯಶಾಹಿ, ಬಂಡವಾಳಶಾಹಿಗಳ ನಿರಂತರ ನಿಯಂತ್ರಣ ಅವಳ ಮೇಲಿರುತ್ತದೆ. ಇಂತಹ ಕಷ್ಟಕರ ಪರಿಸ್ಥಿತಿಯಲ್ಲಿ ದಲಿತ ಮಹಿಳೆಯ ರಾಜಕೀಯ ಅಸ್ತಿತ್ವವನ್ನು ಅರಿಯುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದಾಗಿದೆ. ಮುಖ್ಯವಾಗಿ ಈ ಅಧ್ಯಯನದಲ್ಲಿ ಈ ಕೆಳಗಿನ ಅಂಶಗಳ ಬಗ್ಗೆ ಅರಿಯಲು ಪ್ರಯತ್ನಿಸಲಾಗುವುದು.

* ಪಂಚಾಯತ್ ರಾಜ್ ಸಂಸ್ಥೆಯಲ್ಲಿ ದಲಿತ ಮಹಿಳೆಗೆ ಸಿಗುತ್ತಿರುವ ಪ್ರತಿನಿಧೀಕರಣದ ಸ್ವರೂಪ ಯಾವ ಬಗೆಯದು ಎಂದು ತಿಳಿಯುವುದು.
* ಪಂ.ರಾ. ಸಂಸ್ಥೆಯ ಮೂಲಕ ದಲಿತ ಮಹಿಳೆ ಎಷ್ಟರ ಮಟ್ಟಿಗೆ ಸಬಲೀಕರಣವಾಗುತ್ತಿದ್ದಾಳೆ ಎಂದು ಅರಿಯುವುದು.
* ಪ.ರಾ. ಸಂಸ್ಥೆಗಳು ಸೈದ್ಧಾಂತಿಕವಾಗಿ ಸಂವಿಧಾನಾತ್ಮಕವಾಗಿ ಅವು ಪ್ರಾತಿನಿಧಿಕವಾಗಿರಬಹುದು ಆದರೆ ಆಚರಣೆಯ ಮಟ್ಟದಲ್ಲಿ ಅವುಗಳ ಪಾತ್ರವನ್ನು ಪರಾಮರ್ಶಿಸುವುದು.
* ದಲಿತ ಮಹಿಳೆಯ ಆಪಳಿತದ ಮೇಲೆ ಅಥವಾ ಅಧಿಕಾರ ಚಲಾವಣೆಯಲ್ಲಿ ಡಾಮಿನೆಂಟ್ ಜಾತಿಗಳ ನಿಯಂತ್ರಣವಿದೆಯಾ? ಎಂದು ಅವಲೋಕಿಸುವುದು.
* ಸಾಮಾಜಿಕವಾಗಿ. ಆರ್ಥಿಕವಾಗಿ ಏಣಿ ಶ್ರೇಣಿ ವ್ಯವಸ್ಥೆ ಹೊಂದಿರುವಂತಹ ಗ್ರಾಮೀಣ ಸಮುದಾಯಗಳಲ್ಲಿ ದಲಿತ ಮಹಿಳೆಯ ರಾಜಕೀಯ ಸಬಲೀಕರಣ ಸಾಧ್ಯವಾಗಲು, ಅರ್ಥಪೂರ್ಣವಾಗಲು ಸಾಧ್ಯವೆ ಎಂದು ಪ್ರಯತ್ನಿಸುವುದು.
* ವಿಕೇಂದ್ರೀಕರಣದ ತಾತ್ವಿಕ ಚೌಕಟ್ಟಿನಡಿಯಲ್ಲಿ ಮಹಿಳೆಗೆ ಮೂರು ಹಂತಗಳಲ್ಲಿ ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯತಿ ಇರುವ ಪ್ರತಿನಿಧೀಕರಣದ ಸ್ವರೂಪವನ್ನು ಒರೆಗೆ ಹಚ್ಚುವುದು.
* ಪಂ.ರಾ. ಸಂಸ್ಥೆಯಲ್ಲಿ ದಲಿತ ಮಹಿಳೆಯ ಸಂವೇಧನೆಗಳಿಗೆ ಅಸ್ತಿತ್ವ, ಅನನ್ಯತೆಗಳಿಗೆ ಎಷ್ಟರ ಮಟ್ಟಿಗೆ ಅವಕಾಶವಿದೆ ಎಂದು ಅರಿಯುವುದು.
* ಸಂವಿಧಾನಬದ್ಧವಾಗಿ ಸಿಕ್ಕಿರುವಂತಹ ಮೀಸಲಾತಿಯ ಪ್ರಯೋಜನ ಎಷ್ಟರ ಮಟ್ಟಿಗೆ ಫಲಕಾರಿಯಾಗಿದೆ ಎಂದು ಅವಲೋಕಿಸುವುದು.
* ಮಹಿಳೆಯ ಬದಲು ಪುರುಷರು ಬದಲಿ ಅಧಿಕಾರ ಚಲಾಯಿಸುವಿಕೆಯ ಹಿಂದಿನ ರಾಜಕಾರಣ ತಿಳಿಯುವುದು.
* ಅಧಿಕಾರ ಚಲಾಯಿಸುವಿಕೆಯಲ್ಲಿ ಅಸ್ಪೃಶ್ಯತೆ, ಜಾತೀಯತೆಯ ಅಂಶಗಳು ದಲಿತ ಮಹಿಳೆಯನ್ನು ನಿಯಂತ್ರಿಸುತ್ತಿವೆಯೇ? ಎಂದು ಅರಿಯುವುದು.
* ಅಧಿಕಾರ ಪಡೆದ ನಂತರ ಅವಳ ಸಾಮಾಜಿಕ, ಕೌಟುಂಬಿಕ ಜೀವನದಲ್ಲಿನ ಬದಲಾವಣೆಯನ್ನು ಗಮನಿಸುವುದು.

ಈ ಬಗೆಯ ಉದ್ದೇಶಗಳನ್ನು ಆಧಾರವಾಗಿಟ್ಟುಕೊಂಡು ದಲಿತ ಮಹಿಳೆಯ ರಾಜಕೀಯ ಪ್ರತಿನಿಧೀಕರಣದ ಸ್ವರೂಪ ಅರಿಯುವುದು ಪ್ರಮುಖವಾಗಿ ಪ್ರಯತ್ನಿಸಲಾಗಿದೆ. ಇದರ ನಂತರವೆ ದಲಿತ ಮಹಿಳೆಯ ರಾಜಕಾರಣದ ಚಲನೆಯ ಸ್ವರೂಪವನ್ನು ಗ್ರಹಿಸಲು. ನಿರೂಪಿಸಲು ಇಲ್ಲಿ ಗಮನ ಹರಿಸಲಾಗಿದೆ. ದಲಿತ ಮಹಿಳೆಯ ರಾಜಕಾರಣ ಕುರಿತಂತೆ ಅವಶ್ಯಕ ಸೈದ್ಧಾಂತಿಕ ಸಂಗತಿಗಳನ್ನು ಹೆಕ್ಕಿ ತೆಗೆಯುವುದರ ಮೂಲಕ ಅದಕ್ಕೆ ಅಗತ್ಯವಾಗಿ ಬೇಕಾದಂತಹ ಸಾಂವಿಧಾನಿಕ ಚಿಂತನೆಯ ಆಶಯಗಳು ಹಾಗೂ ಊಳಿಗಮಾನ್ಯಶಾಹಿ. ಯಜಮಾನ್ಯಶಾಹಿ. ಪುರೋಹಿತಶಾಹಿ. ಹಾಗೂ ಬಂಡವಾಳಶಾಹಿಯಂತಹ ಪ್ರಭುತ್ವದ ನಿಯಂತ್ರಣಗಳ ಬಗ್ಗೆ ಚರ್ಚಿಸಲಾಗಿದೆ.

### ೧.೨. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನದಲ್ಲಿ 'ವಿವರಣಾತ್ಮಕ ಸಂಶೋಧನಾ ವಿಧಾನ'ವನ್ನು ಅಳವಡಿಸಿಕೊಳ್ಳಲಾಗಿದೆ. ವಿವರಣಾತ್ಮಕ ಸಂಶೋಧನಾ ವಿಧಾನ ಎಂದರೆ ಅದು ನಿರ್ದಿಷ್ಟ, ಒಬ್ಬ ವ್ಯಕ್ತಿ ಅಥವಾ ಸಮೂಹದ ಲಕ್ಷಣವನ್ನು ವಿವರಿಸುವಂತವುಗಳು. ಈ ವಿಧಾನದಲ್ಲಿ ಪ್ರಶ್ನಾವಳಿಯಲ್ಲಿ ರಚಿತ ಪ್ರಶ್ನಾವಳಿ ಮತ್ತು ಅರಚಿತ ಪ್ರಶ್ನಾವಳಿಯನ್ನು ಅಳವಡಿಸಿಕೊಳ್ಳಲಾಗಿದೆ. ರಚಿತ ಪ್ರಶ್ನಾವಳಿ ಅಥವಾ ಸಂರಚಿತ ಪ್ರಶ್ನಾವಳಿಯೂ ಅತ್ಯಂತ ಸ್ಪಷ್ಟವಾದ, ನಿರ್ದಿಷ್ಟವಾದ, ಮೊದಲೇ ಆಯೋಜಿಸಿ ರಚಿಸಿದ ಪ್ರಶ್ನೆಗಳ ವಿಧಾನವಾಗಿರುತ್ತದೆ. ಇಂತಹ ವಿಧಾನದಲ್ಲಿ ಸಂಶೋಧಕರು ಮಾಹಿತಿದಾರರ ಸಮ್ಮುಖದಲ್ಲಿಯೇ ವಿಷಯವನ್ನು ಸಮಗ್ರವಾಗಿ ಅರಿಯಲು ಇಂತಹ ವಿಧಾನ ಅವಶ್ಯಕವಾಗಿದೆ. ಹಾಗೆಯೇ ಅರಚಿತ ಪ್ರಶ್ನಾವಳಿ ಅಥವಾ ಸಂರಚಿತವಲ್ಲದ ಪ್ರಶ್ನಾವಳಿಯಲ್ಲಿ ಒಂದು ನಿರ್ದಿಷ್ಟವಾದ ಕ್ಷೇತ್ರದಲ್ಲಿ ಅಥವಾ ಕೆಲವು ಸೀಮಿತ ಪ್ರಕರಣಗಳಿಗೆ ಸಂಬಂಧಿಸಿದಂತೆ ಬಹಳ ಆಳವಾದ ಹಾಗೂ ಕೇಂದ್ರಿತವಾದಂತಹ ಅಧ್ಯಯನ ಮಾಡಲು ಇಂತಹ ವಿಧಾನವು ತುಂಬ ಸಹಾಯಕವಾಗಿದೆ. ಅಲ್ಲದೆ ಸಂದರ್ಭೋಚಿತವಾಗಿ ಪ್ರಶ್ನೆಗಳನ್ನು ರೂಪಿಸಿಕೊಳ್ಳುವುದಕ್ಕೆ ಅವುಗಳನ್ನು ಕೇಳುವ ರೀತಿ ಮತ್ತು ಅವುಗಳ ಭಾಷೆಯಲ್ಲಿ ಸಾಕಷ್ಟು ಮಾರ್ಪಾಡುಗಳನ್ನು ಮಾಡಿಕೊಳ್ಳಲು ಇದು ಸಂಶೋಧಕರಿಗೆ ಅವಕಾಶ ನೀಡುತ್ತದೆ.

ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯಲ್ಲಿ ಬರುವ ಎಲ್ಲಾ ತಾಲ್ಲೂಕಿನಲ್ಲಿಯ ಚುನಾಯಿತ ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯಿತಿಗಳ ದಲಿತ ಮಹಿಳಾ ಸದಸ್ಯರೇ ಅಧ್ಯಯನದ ಮುಖ್ಯ ವಿಷಯವಾಗಿದ್ದಾರೆ. ಈ ಅಧ್ಯಯನಕ್ಕಾಗಿ ಕೊಪ್ಪಳವನ್ನೆ ಆಯ್ದುಕೊಳ್ಳಲು ಕಾರಣ ಹೈದರಾಬಾದ್ ಕರ್ನಾಟಕ ಎಂಬ ನೆಲೆಗಟ್ಟಿನಡಿಯಲ್ಲಿ ಗುರುತಿಸಲ್ಪಡುತ್ತಿರುವ ಕೊಪ್ಪಳ ಜಿಲ್ಲೆ ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆಯಾಗಿದೆ. ಅನಕ್ಷರತೆ, ಬಡತನ, ನಿರುದ್ಯೋಗ, ಜಾತಿ ಪದ್ಧತಿ (ಅಸ್ಪೃಶ್ಯತೆ), ಜೀತ ಪದ್ಧತಿಗಳು ಅತಿಯಾಗಿವೆ ಅಲ್ಲದೆ ಒಣ ಭೂಮಿಯನ್ನೆ ಹೊಂದಿರುವ, ಮಳೆಯಾಧಾರಿತವಾದ ಕೃಷಿಯೇ ಇಲ್ಲಿನ ಮುಖ್ಯ ಉದ್ಯೋಗ. ಆದರೆ ಪ್ರತಿಸಾರಿಯೂ ಮಳೆಯ ಅಭಾವದಿಂದ ಇಲ್ಲಿನ ರೈತರು ಕಂಗಾಲಾಗಿದ್ದಾರೆ.

ಮಹಿಳಾ ಅಧ್ಯಯನದ ಪ್ರಮುಖ ಹಾಗೂ ವಿಭಿನ್ನ ಶೈಲಿಯ ಸಂಶೋಧನಾ ವಿಧಾನವಾಗಿರುವ 'ಸ್ತ್ರೀವಾದಿ ಸಂಶೋಧನಾ ವಿಧಾನ'ಕ್ಕೆ ಇಲ್ಲಿ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಲಿಂಗ ಸಂಬಂಧಿ ಅಂಶಗಳನ್ನು ಅರಿಯಲು ಇಂತಹ ಸಂಶೋಧನೆಯ ಅವಶ್ಯಕತೆ ಇದೆ. ಸಮಾಜದಲ್ಲಿ ಲಿಂಗ ತಾರತಮ್ಯ ತೋರುತ್ತಿರುವ ವಾಸ್ತವ ಸ್ಥಿತಿಯನ್ನು ತಿಳಿಯಲು ಹಾಗೂ ಚರಿತ್ರೆಯುದ್ದಕ್ಕೂ ಮರೆಯಾಗಿರುವ ಅಥವಾ ಮುಚ್ಚಿಹೋದ ಮಹಿಳೆಯರ ಮೇಲೆ ಬೆಳಕು ಚೆಲ್ಲುವ ನಿಟ್ಟಿನಲ್ಲಿ ಇಂತಹ ವಿಧಾನ ನಿಷ್ಪಕ್ಷಪಾತವಾದ ಪಾತ್ರವನ್ನು ನಿರ್ವಹಿಸುತ್ತವೆ. ಮಹಿಳೆಯರ ನೈಜ, ವಾಸ್ತವ ಪರಿಸ್ಥಿತಿಯನ್ನು ಅರಿತುಕೊಂಡು ಅವರ ಜೀವನ ಕ್ರಮವನ್ನು ಇತ್ಯಾತ್ಮಕವಾಗಿ ಬದಲಾಯಿಸಲು ಇಂತಹ ವಿಧಾನದ ಅವಶ್ಯಕತೆ ಇದೆ.

ಸ್ತ್ರೀವಾದಿ ಸಂಶೋಧನಾ ವಿಧಾನ ಎಂಬುದು ಮಾರಿಯಾ ಮಿಸ್ ಹೇಳುವಂತೆ ಸ್ತ್ರೀವಾದಿ ಸಂಶೋಧನೆಯು ಕೇವಲ ಮಹಿಳೆಯರ ಬಗ್ಗೆ ಸಂಶೋಧನೆ ಅಲ್ಲದೆ ಅವರ ಲಿಂಗಾಧಾರಿತ ಸಮಾಜದ ಬದಲಾವಣೆಯ ಬಗ್ಗೆ ನೆಡೆಸುವ

ಸಂಶೋಧನೆಯಾಗಿದೆ. ಈ ಸಂಶೋಧನೆಯಲ್ಲಿ ಪಾರಂಪರಿಕವಾದ ಲಿಂಗಾಧಾರಿತ ಸಿದ್ಧ ಮಾದರಿಯ ಅಸಮಾನತೆಯ ಪಾತ್ರಗಳನ್ನು ಹೋಗಲಾಡಿಸಲು ಇಂತಹ ವಿಧಾನದ ಅವಶ್ಯಕತೆ ಇದೆ. ಆದ್ದರಿಂದ ಸ್ತ್ರೀವಾದಿ ಸಂಶೋಧನಾ ವಿಧಾನ ಮಹಿಳೆಯ ಸಮಷ್ಠಿ ಪ್ರಜ್ಞೆಯನ್ನು ಅರಿಯವಲ್ಲಿ ಶ್ರಮಿಸುತ್ತದೆ. ಇದು ಲಿಂಗ ಅಸ್ತಿತ್ವವನ್ನು ಗಮನದಲ್ಲಿಟ್ಟುಕೊಂಡು ಯಾವುದೆ ಬಗೆಯ ಪ್ರತಿಬಂಧಗಳಿಲ್ಲದೆ ಸ್ತ್ರೀ ಹಾಗೂ ಪುರುಷರಿಗೆ ಅನ್ವಯಿಸುವ ಜ್ಞಾನ ಸೃಷ್ಟಿಸುತ್ತದೆ. ಮಹಿಳಾ ಅಸ್ತಿತ್ವ, ಅನನ್ಯತೆಗಳನ್ನು, ಲಿಂಗ ಅಸಮಾನತೆಗಳನ್ನು ಅರಿಯಲು ಅರಚಿತ ಪ್ರಶ್ನಾವಳಿಯನ್ನು ಅಳವಡಿಸಿಕೊಂಡು ಮರೆಯಾಗಿರುವ ಅವಳ ಚಹರೆಯನ್ನು ಬೆಳಕಿಗೆ ತರುವ ಪ್ರಯತ್ನ ಈ ವಿಧಾನ ಮಾಡುತ್ತದೆ. ಅಲ್ಲದೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಗುಣಾತ್ಮಕ ವಿಧಾನಕ್ಕೆ ಕೊಡಲಾಗುತ್ತದೆ. ಜಂಡರ್ ಸ್ಟಡೀಸ್, ಕ್ರಿಯಾತ್ಮಕ ವಿಶ್ಲೇಷಣಾ ವಿಧಾನ, ವ್ಯಕ್ತಿನಿಷ್ಠ ಅಧ್ಯಯನ ವಿಧಾನ ಇವು ಚರಿತ್ರೆಯ ಪುನರ್ ರಚನೆ ಮಾಡಿ ಅದರೊಳಗಿನ ಮಹಿಳಾ ಹಕ್ಕುಗಳಿಗೆ ಸಂಬಂಧಿಸಿರುವ ಅಂಶಗಳನ್ನು ಹೆಕ್ಕಿತೆಗೆಯುವುದು ಇದರ ವಿಶೇಷತೆಯಾಗಿದೆ.

**ಮಾಹಿತಿ ಸಂಗ್ರಹಣೆಯ ಮೂಲಗಳು**

**ಪ್ರಾಥಮಿಕ ಮೂಲಗಳು:**

ಸಂಶೋಧನೆಯ ಮುಖ್ಯ ಆಶಯ ಎಂದರೆ ಸತ್ಯದ ಶೋಧನೆ. ಅದಕ್ಕೆ ಪ್ರಶ್ನಾವಳಿಯ ಜೀವಾಳ. ವ್ಯಕ್ತಿಯ ಬದುಕಿನ ಸಮಗ್ರ ಮಾಹಿತಿಯನ್ನು ಅರಿಯಲು ಪ್ರಾಥಮಿಕ ಮೂಲಗಳು ತುಂಬಾ ಉಪಯುಕ್ತವಾಗುತ್ತವೆ. ಪ್ರಸ್ತುತ ಪ್ರಬಂಧದಲ್ಲಿ ಅಳವಡಿಸಿಕೊಂಡಿರುವ ಪ್ರಶ್ನಾವಳಿಯು ಸಿದ್ಧರೂಪದಲ್ಲಿರುವಂತಹದಲ್ಲ, ವಿವರಣಾತ್ಮಕವಾಗಿರುವಂತಹದ್ದು ಕ್ಷೇತ್ರಕಾರ್ಯದಲ್ಲಿ ಪ್ರತಿಯೊಂದು ಅಂಶವನ್ನು ವಿಮರ್ಶಾತ್ಮಕವಾಗಿ ನೋಡಲು ಇಂತಹ ವಿಧಾನ ತುಂಬಾ ಸಹಾಯಕವಾಗಿದೆ. ವಿವರಣಾತ್ಮಕ ವಿಧಾನದಲ್ಲಿ ತುಂಬಾ ಆಳವಾದ ಮಾಹಿತಿಗಳನ್ನು ಕಲೆಹಾಕಲು ಸಾಧ್ಯವಾಗಿದೆ. ಅಧ್ಯಯನದುದ್ದಕ್ಕೂ ಪ್ರಾಥಮಿಕ ಮೂಲಗಳಾದ ಪ್ರಶ್ನಾವಳಿ, ಸಂದರ್ಶನ, ಗುಂಪುಚರ್ಚೆ ಮತ್ತು ಅವಲೋಕನ ಮಾಡಲಾಗಿದೆ.

**ಆನುಷಂಗಿಕ ಮೂಲಗಳು:**

ಇಂದು ಸಮಾಜ ಸಂಶೋಧನೆಯಲ್ಲಿ ಅತಿ ಹೆಚ್ಚು ಬಳಕೆಯಾಗುತ್ತಿರುವುದು ಆನುಷಂಗಿಕ ಮೂಲಗಳಾಗಿವೆ. ಅಧ್ಯಯನಕ್ಕಾಗಿ ಆಯ್ದುಕೊಂಡು ಸಮಸ್ಯೆಯನ್ನು ಸಮಸ್ಯೀಕರಿಸುವುದರಿಂದ ಹಿಡಿದು ಹಿಡಿಯಾಗಿ ಸಂಶೋಧನೆಯ ಆಶಯವನ್ನು ಅನಾವರಣಗೊಳಿಸುವಲ್ಲಿ ಇದರ ಪಾತ್ರ ತುಂಬಾ ದೊಡ್ಡದು. ಸಂಶೋಧನೆಗಾಗಿ ಆಯ್ದುಕೊಂಡಿರುವ ಸಂಗತಿ, ವಿಚಾರಗಳಿಗೆ ಸಂಬಂಧಿಸಿರುವ ಮಾಹಿತಿಗಳನ್ನು ಪ್ರಾಥಮಿಕ ಆಕರವನ್ನು ಬಿಟ್ಟು ಬೇರೆಕಡೆಯಿಂದ ಪಡೆದುಕೊಂಡಿದ್ದರೆ ಅದು ಆನುಷಂಗಿಕ ಮೂಲ ಎಂದು ಪರಿಭಾಷಿಸಲಾಗುತ್ತದೆ. ಇಲ್ಲಿ ಬಳಕೆಯಾಗಿರುವ ಆನುಷಂಗಿಕ ಮೂಲಗಳೆಂದರೆ ಗ್ರಂಥಗಳು, ಪ್ರಕಟಿತ ಮತ್ತು ಅಪ್ರಕಟಿತ ಲೇಖನಗಳು, ಮಹಾಪ್ರಬಂಧಗಳು.

ಪ್ರಸ್ತುತ ಮಹಾಪ್ರಬಂಧವು ಪ್ರಾಥಮಿಕ ಮೂಲಗಳಿಂದಲೇ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿರುವಂತಹದಾಗಿದೆ. ಈ ಮೊದಲು ತಿಳಿಸಿದಂತೆ ಸಾಮಾಜಿಕ ರಚನೆ ಮತ್ತು ಕಾರ್ಯಗಳನ್ನು ಪರಿಕಲ್ಪನೆಗಳ ದೃಷ್ಟಿಕೋನದಿಂದ ವಿವರಣಾತ್ಮಕ ನೆಲೆಯಲ್ಲಿ ನೋಡಲಾಗಿದೆ. ಅಧ್ಯಯನಕ್ಕಿಂತ ಮೊದಲು ರಚಿಸಲಾದ ರಚಿತ, ಅರಚಿತ

ಪ್ರಶ್ನಾವಳಿಯನ್ನು ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಅವಲೋಕನಮಾಡುವ ಮೂಲಕ ಸಂಗ್ರಹಿಸಲಾಗಿದೆ. ಮಾಹಿತಿ ಸಂಗ್ರಹಣೆಯ ಸಮಯದಲ್ಲಿ 'ಅರಚಿತ ಪ್ರಶ್ನಾವಳಿ'ಯಂತಹ ವಿವರಣಾತ್ಮಕ ವಿಧಾನವನ್ನು ಅಳವಡಿಸಿಕೊಂಡು ವಾಸ್ತವಿಕ ನೆಲೆಯಲ್ಲಿ ಅಧ್ಯಯನ ಮಾಡಲು ಸಾಧ್ಯವಾಗಿದೆ. ಸೂಕ್ತವೆನಿಸಿದ ಕಡೆಯಲ್ಲಿ ಕೇಸ್ ಸ್ಟಡೀಸ್ ಮಾಡಲಾಗಿದೆ. ಯಾವುದೇ ಒಂದು ಅಲಕ್ಷಿತ ಸಮುದಾಯವನ್ನು ವಿಷಯ ವಸ್ತುವಾಗಿ ಹೊಂದಿದಾಗ ವಿವರಣಾತ್ಮಕ ವಿಧಾನವನ್ನು ಸಹಜವಾಗಿಯೇ ಆಶ್ರಯಿಸುವ ಅನಿವಾರ್ಯತೆ ಇರುತ್ತದೆ. ಅಲಕ್ಷಿತ ಸಮುದಾಯಗಳ ಅಧ್ಯಯನಗಳಲ್ಲಿ ಪರಿಮಾಣಾತ್ಮಕ ವಿಶ್ಲೇಷಣೆಗಿಂತ ಗುಣಾತ್ಮಕ ವಿಶ್ಲೇಷಣೆಗೆ ಹೆಚ್ಚಿನ ಒತ್ತನ್ನು ನೀಡಲಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಇದೇ ಮಾದರಿಯನ್ನು ಅನುಸರಿಸಲಾಗಿದೆ. ಅಲ್ಲದೆ ಸೂಕ್ತವೆನಿಸಿದ ಕಡೆಯಲ್ಲಿ ಕೋಷ್ಟಕಗಳನ್ನು ಕೊಡಲಾಗಿದೆ.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನವು ಅಲಕ್ಷಿತ ವರ್ಗಗಳ ಬಗ್ಗೆ ಹಾಗೆಯೇ ದಲಿತ ಮಹಿಳಾ ರಾಜಕಾರಣದ ಕುರಿತು ಅವಳ ರಾಜಕೀಯ ಸಹಭಾಗಿತ್ವ, ಸಬಲೀಕರಣಗಳನ್ನು ಪುನರ್ ವ್ಯಾಖ್ಯಾನಿಸಲು ತುಂಬ ಅಗತ್ಯವಾಗಿದೆ. ಅಧ್ಯಯನದ ಉದ್ದಕ್ಕೂ ಮಹಿಳಾ ಅಧ್ಯಯನದ ಮೂಲ ಪರಿಕಲ್ಪನೆಗಳನ್ನೆ ಬಳಸಿಕೊಳ್ಳುತ್ತಲೇ ಲಿಂಗಸಂವೇದಿಯಾದ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನಾ ಅಧ್ಯಯನವನ್ನು ಹೈದರಾಬಾದ್ ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆ ಎಂದು ಪರಿಗಣಿತವಾಗಿರುವ ಕೊಪ್ಪಳ ಜಿಲ್ಲೆಗೆ ನನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ. ಪ್ರತಿಯೊಂದು ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯಿತಿಗಳಲ್ಲಿನ ಚುನಾಯಿತ ದಲಿತ ಮಹಿಳಾ ಸಮುದಾಯವೇ ನನ್ನ ಅಧ್ಯಯನದ ವ್ಯಾಪ್ತಿಯಾಗಿದ್ದಾರೆ. ಒಟ್ಟು ಜಿಲ್ಲೆಯಲ್ಲಿ ಬರುವ ೪೨ ಗ್ರಾಮ ಪಂಚಾಯತಿಯಲ್ಲಿನ ೧೭೦ ಜನ ದಲಿತ ಮಹಿಳಾ ಸದಸ್ಯರನ್ನು, ಹಾಗೆಯೇ ಜಿಲ್ಲಾ ಪಂಚಾಯಿತಿಯಲ್ಲಿನ ೪ ದಲಿತ ಮಹಿಳಾ ಸದಸ್ಯರನ್ನು, ತಾಲ್ಲೂಕು ಪಂಚಾಯಿತಿಯಲ್ಲಿನ ೧೦ ಜನ ದಲಿತ ಮಹಿಳೆಯರನ್ನು ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಪ್ರತಿಯೊಂದು ತಾಲ್ಲೂಕಿನಲ್ಲಿ ರ್‍ಯಾಂಡಮ್ ಪದ್ಧತಿಯನ್ನು ಅನುಸರಿಸಲಾಗಿದೆ. ಪಂಚಾಯಿತಿಗಳಿಗೆ ತೆರಳಿ ಸಂದರ್ಶನ, ಪ್ರಶ್ನಾವಳಿ, ಚರ್ಚೆ, ಸಂವಾದಗಳ ಮೂಲಕ ಅಲ್ಲಿನ ವಸ್ತುಸ್ಥಿತಿಯನ್ನು ಅರಿಯಲು ಪ್ರಯತ್ನಿಸಲಾಗಿದೆ. ಅಧ್ಯಯನಕ್ಕೆ ಅಗತ್ಯವಾಗಿರುವ ಕಡೆಗಳಲ್ಲಿ ಪುರುಷರನ್ನು ಸಹ ಪ್ರಶ್ನಿಸಲಾಗಿದೆ. ಅಲ್ಲದೆ ದಲಿತ ಮಹಿಳಾ ರಾಜಕಾರಣ ಕುರಿತಂತೆ ಸಾರ್ವಜನಿಕರಲ್ಲಿರುವ ಮನೋಭಾವನೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ.

### ೧.೪. ಅಧ್ಯಯನಗಳ ಸಮೀಕ್ಷೆ

ಪ್ರಸ್ತುತ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಹಲವಾರು ಲೇಖನಗಳು, ಗ್ರಂಥಗಳು, ಸಂಶೋಧನಾ ಪ್ರಬಂಧಗಳು ಪ್ರಕಟವಾಗಿವೆ. ಗೋವಿಂದಗೌಡ, ಅವರು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'The Leadership and Panchayath Raj Institution' ಎಂಬ ಪ್ರಬಂಧದಲ್ಲಿ ಮಂಡಲ ಪಂಚಾಯಿತಿಯಲ್ಲಿ ಕಾರ್ಯ ನಿರ್ವಹಿಸುವ ಎಲ್ಲ ವರ್ಗಗಳ ಮಹಿಳೆಯರ ಕುರಿತಾಗಿ

ಸಂಶೋಧನೆಯನ್ನು ಮಾಡಿದ್ದಾರೆ. ಆದರೆ ಪ್ರತ್ಯೇಕವಾಗಿ ದಲಿತ ಮಹಿಳಾ ರಾಜಕಾರಣದ ಕುರಿತಂತೆ ಎಲ್ಲಿಯೂ ಚರ್ಚಿಸಿಲ್ಲ. ಹಾಗೆಯೇ ಬಾಬುರಾಯ ಚಂದ್ರಮ್ಮಪ್ಪನವರು ಗುಲಬರ್ಗ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'The Rule of Panchayath Raj Institutions in Socio-Economic Development of SC, ST's' ಎಂಬ ಮಹಾ ಪ್ರಬಂಧದಲ್ಲಿ ತುಂಬ ಉಪಯುಕ್ತವಾದ ವೈಚಾರಿಕ ಅಂಶಗಳತ್ತ ಬೆಳಕು ಚೆಲ್ಲಿದ್ದಾರೆ. ದಲಿತ ಮಹಿಳಾ ರಾಜಕೀಯ ಅಸ್ತಿತ್ವದ ಕುರಿತಾಗಿ ಅಲ್ಲಲ್ಲಿ ಸ್ವಲ್ಪ ಚರ್ಚಿಸಿದ್ದಾರೆ. 'ದಲಿತ ಮಹಿಳೆ' ಎಂಬ ಪದವೇ ಅಮೂರ್ತವಾದುದು. ಅದು ಒಂದು ಅಲಕ್ಷಿತ ಸಮುದಾಯದೊಳಗಿನ ಮಹಿಳಾ ಅಸ್ತಿತ್ವ, ಅನನ್ಯತೆಗಳನ್ನು ಪ್ರತಿನಿಧಿಸುವ ಪ್ರತಿಬಿಂಬ. ಜಾತಿ, ಲಿಂಗ, ವರ್ಗ, ವರ್ಣದ ಕಾರಣದಿಂದಲೇ ಹಲವಾರು ಅತ್ಯಾಚಾರ, ಹಿಂಸೆ, ದೌರ್ಜನ್ಯಗಳಿಗೆ ಬಲಿಯಾಗುತ್ತಿರುವ ದಲಿತ ಮಹಿಳಾ ಚರಿತ್ರೆಯ ಮೇಲೆ ಬೆಳಕು ಚೆಲ್ಲುವಲ್ಲಿ ಹಲವು ವಿದ್ವಾಂಸರ ಕೊಡುಗೆಯೂ ಇದೆ. ಕೆ.ವಿ. ನೇತ್ರಾವತಿಯವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ದಲಿತ ಮಹಿಳಾ ಸಂಕಥನ, ಎಂಬ ಪ್ರಬಂಧವೂ ದಲಿತ ಮಹಿಳಾ ಅನನ್ಯತೆಗೆ ಸಾಕ್ಷಿಯಾಗಿದೆ. ಡಾ.ಡಿ.ಮೀನಾಕ್ಷಿಯವರು ಸಹ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ 'ಗ್ರಾಮಪಂಚಾಯಿತಿಯಲ್ಲಿ ಮಹಿಳೆ' ಎಂಬ ಪ್ರಬಂಧ ಸಹ ಅಧ್ಯಯನದ ದೃಷ್ಟಿಯಿಂದ ಅನುಕೂಲಕರವಾಗಿದೆ. ಅಲ್ಲದೆ ದಲಿತ ಮಹಿಳಾ ಅಸ್ತಿತ್ವದ ಕುರಿತು ಹಲವಾರು ಲೇಖನಗಳು, ಕೃತಿಗಳು ಬಂದಿವೆ. ಡಾ. ಎಚ್.ಎಸ್. ಶ್ರೀಮತಿ, ಮಲ್ಲಿಕಾ ಘಂಟಿಯವರು ದಲಿತ ಮಹಿಳಾ ಸಂವೇದನೆಯುಳ್ಳ ಹಲವಾರು ಬಗೆಯ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಹೆಸರಾಂತ ಚಿಂತಕರಾದ ಡಾ.ಮೊಗಳ್ಳಿ ಗಣೇಶ ಅವರು 'ಸೊಲ್ಲು', 'ದಲಿತ ಕಥನ', 'ದಲಿತರು ಮತ್ತು ಜಾಗತೀಕರಣ' ಎಂಬ ಕೃತಿಗಳಲ್ಲಿ ದಲಿತ ಮಹಿಳಾ ಸ್ಥಿತಿಯ ಬಗ್ಗೆ ವಿಶ್ಲೇಷಿಸಿದ್ದಾರೆ. ಹಾಗೆಯೇ ದಲಿತ ಮಹಿಳಾ ಸಂವೇದನೆಯುಳ್ಳ ಕೃತಿಗಳಿಗೆ ಹೆಸರಾಗಿರುವ ಡಾ ಶೈಲಜಾ ಹಿರೇಮಠ ಅವರು 'ಪಾತರದವರು', 'ಸ್ತ್ರೀ ಸಂಕಥನ' ಎಂಬ ಕೃತಿಗಳಲ್ಲಿ ತುಂಬ ವಿದ್ವತ್‌ಪೂರ್ಣವಾದ ವಿಚಾರಗಳನ್ನು ಮುಂದಿಟ್ಟಿದ್ದಾರೆ. ಎಂ. ಉಷಾ ಅವರು ದಲಿತ ಮಹಿಳಾ ವಿಷಯಕ್ಕೆ ಸಂಬಂಧಿಸಿದಂತೆ 'ಮಹಿಳೆ ಮತ್ತು ಜಾತಿ: ಒಂದು ಸೈದ್ಧಾಂತಿಕ ಗ್ರಹಿಕೆ' ಎಂಬ ಕೃತಿ ದಲಿತ ಮಹಿಳೆಯ ಕುರಿತಾದ ಅತ್ಯುತ್ತಮ ಕೃತಿಯಾಗಿದೆ. ಪಂಚಾಯತ್‌ರಾಜ್ ಸಂಸ್ಥೆಯ ಆರಂಭದಿಂದಲೂ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಪ್ರತ್ಯೇಕವಾಗಿ ದಲಿತ ಮಹಿಳಾ ರಾಜಕೀಯ ಅಸ್ತಿತ್ವ ಕುರಿತ ಅಧ್ಯಯನಗಳು ಈ ಕ್ಷೇತ್ರದಲ್ಲಿ ತುಂಬ ಕಡಿಮೆ.

**೧.೫. ಅಧ್ಯಯನ ಕ್ಷೇತ್ರದ ಮಾಹಿತಿ**

ದೇಶದ ಎಲ್ಲೆಡೆ ಸ್ವಾತಂತ್ರ್ಯ ಹರಡಿ
ಕತ್ತಲೆಯೂ ಓಡಿರಲು
ಇಲ್ಲಿನ್ನೂ ಬೆಳಕು ಮೂಡಿರಲಿಲ್ಲ.
ಹಕ್ಕಿ ಹಾರಿರಲಿಲ್ಲ
[illegible] ಹಾಡಿರಲಿಲ್ಲ.[?]

ಗವಿಸಿದ್ಧ ಎನ್ ಬಳ್ಳಾರಿ

ಸ್ವಾತಂತ್ರಪೂರ್ವ, ಸ್ವಾತಂತ್ರ್ಯಾನಂತರ ಹೈದರಾಬಾದ್ ನವಾಬನ ದುರಾಡಳಿತ, ಮತಾಂಧತೆಗೆ ಬಲಿಯಾಗಿ ಇಲ್ಲಿನ ಜನರು ಅತ್ಯಂತ ಸಂಕಷ್ಟ ಪರಿಸ್ಥಿತಿಯಲ್ಲಿದ್ದರು. ಅಖಂಡ ಭಾರತದ ನವಾಬನಾಗಬೇಕೆಂದು ಸೋತ ನವಾಬನು ತನ್ನ ಅಧೀನದಲ್ಲಿನ ಎಲ್ಲ ಸಂಸ್ಥಾನಗಳನ್ನು ಭಾರತದೊಂದಿಗೆ ವಿಲೀನಗೊಳಿಸದೆ ಪ್ರತ್ಯೇಕವಾಗಿ ಉಳಿಸಿಕೊಂಡನು. ನಂತರ ಅವನ ಮತಾಂಧತೆಯಿಂದಾಗಿ ಈ ಭಾಗದೆಲ್ಲೆಡೆ ದೊಂಬಿ, ಗಲಾಟೆ, ಲೂಟಿ, ಸುಲಿಗೆಗಳು ನಡೆಯತೊಡಗಿದವು. ಕೊಪ್ಪಳದ ಹಲವಾರು ವೀರ ಯೋಧರು ಸತತವಾಗಿಯೇ ನಿಜಾಮನಿಗೆ ನಿದ್ದೆಗೆಡಿಸಿದರು. ಭಾರತದಾದ್ಯಂತ ಸ್ವಾತಂತ್ರ್ಯ ಆಚರಿಸುತ್ತಿರುವ ಈ ಭಾಗದ ಜನರಿಗೆ ಬೆಳಕೇ ಹರಿದಿರಲಿಲ್ಲ. ನಂತರ ನಡೆದ ಬೆಳವಣಿಗೆಗಳಲ್ಲಿ ನಿಜಾಮನು ಭಾರತದೊಂದಿಗೆ ವಿಲೀನ ಮಾಡಿಕೊಂಡಿದ್ದರಿಂದ ಹೈದರಾಬಾದ್ ಕರ್ನಾಟಕದ ಜನರಿಗೆ ಸ್ವಾತಂತ್ರ್ಯ ದೊರೆಯಿತು.

ಐತಿಹಾಸಿಕವಾಗಿಯೂ ಕೊಪ್ಪಳವು ಪ್ರಾಗೈತಿಹಾಸಿಕ ಕಾಲದಿಂದಹಿಡಿದು ಅಶೋಕನ ಕಾಲಾವಧಿಯವರೆಗೂ ತುಂಬ ಪ್ರಚಲಿತದಲ್ಲಿತ್ತು. ಅಶೋಕನೊಂದಿಗೆ ಕೊಪ್ಪಳಕ್ಕಿದ್ದ ಸಂಬಂಧವನ್ನು ಆತನೇ ರಚಿಸಿದ ಶಾಸನಗಳಿಂದ ತಿಳಿಯುತ್ತದೆ. ಹೈದರಾಬಾದ್ ಕರ್ನಾಟಕದಲ್ಲಿನ ಐದು ಜಿಲ್ಲೆಗಳಲ್ಲಿ ಕೊಪ್ಪಳವೂ ಒಂದು. ಹಿಂದೆ ರಾಯಚೂರಿನ ಭಾಗವಾಗಿದ್ದ ಕೊಪ್ಪಳ ೨೦೦ ಕಿ.ಮೀ ದೂರದಲ್ಲಿತ್ತು. ಪ್ರತಿಯೊಂದು ಕೆಲಸಕ್ಕೂ ಜಿಲ್ಲಾ ಕೇಂದ್ರಕ್ಕೆ ಹೋಗಿ ಬರಲು ತುಂಬ ಸಮಸ್ಯೆಯಾಗುತ್ತಿತ್ತು. ಇದನ್ನೆ ಮುಂದುಮಾಡಿಕೊಂಡು, ಹಿಂದೆ ನವಾಬನ ಕಾಲಾವಧಿಯಲ್ಲಿ ಜಿಲ್ಲಾ ಕೇಂದ್ರದ ಸ್ಥಾನಮಾನ ಹೊಂದಿದ್ದ ಕೊಪ್ಪಳವನ್ನು ಜಿಲ್ಲೆಯನ್ನಾಗಿ ಮಾಡಲು ಹಲವಾರು ಹೋರಾಟಗಳ ನಂತರ ಹಿಂದಿನ ಜನತಾ ಸರಕಾರವು ೧೯೯೭ರಲ್ಲಿ ಕೊಪ್ಪಳವನ್ನು ಜಿಲ್ಲೆಯನ್ನಾಗಿ ಘೋಷಿಸಿತು.

ಆಡಳಿತದ ದೃಷ್ಟಿಯಿಂದ ರಚಿಸಲಾದ ಕೊಪ್ಪಳ ಜಿಲ್ಲೆ ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆಯಾಗಿದೆ. ಡಾ. ಡಿ.ಎನ್. ನಂಜುಂಡಪ್ಪ ವರದಿಯ ಪ್ರಕಾರ ಗಂಗಾವತಿ ತಾಲ್ಲೂಕು 'ಹಿಂದುಳಿದ' ಗುಂಪಿಗೆ ಸೇರಿದೆ. ಕೊಪ್ಪಳ ತಾಲ್ಲೂಕು 'ಅತಿ ಹಿಂದುಳಿದ' ಗುಂಪಿಗೆ ಸೇರಿದೆ. ಅದೇ ರೀತಿ ಕುಷ್ಟಗಿ, ಯಲಬುರ್ಗ ತಾಲ್ಲೂಕುಗಳು 'ಅತ್ಯಂತ ಹಿಂದುಳಿದ' ಗುಂಪಿಗೆ ಸೇರಿದವುಗಳಾಗಿವೆ (ಟಿ.ಆರ್. ಚಂದ್ರಶೇಖರ, ೨೦೦೫, ೫೩). ಒಟ್ಟಾರೆಯಾಗಿ ಕೊಪ್ಪಳ ಜಿಲ್ಲೆ ಹಿಂದುಳಿದ ಜಿಲ್ಲೆ ಎಂಬುದರಲ್ಲಿ ಸಂಶಯವಿಲ್ಲ.

೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯ ಸಾಕ್ಷರತೆ ಪ್ರಮಾಣ ಅತ್ಯಂತ ಕಡಿಮೆಯಾಗಿರುವುದು ತಿಳಿಯುತ್ತದೆ. ಕೊಪ್ಪಳ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧,೯೩, ೪೯೬ ಇದ್ದು ಇಲ್ಲಿಯ ಸಾಕ್ಷರತೆಯ ಪ್ರಮಾಣ ಶೇ.೬೮.೬೭ ಪುರುಷರು, ಶೇ.೪೯.೨೨ ಸ್ತ್ರೀಯರದ್ದಾಗಿದೆ. ಪ್ರತಿಸಾವಿರ ಪುರುಷರಿಗೆ ಮಹಿಳೆಯರ ಪ್ರಮಾಣ ೯೮೨. ಲಿಂಗ ಸಮಾನತೆಯಲ್ಲಿಯೂ ತುಂಬ ಕೆಳಗಿದೆ."[೧೧]

ಕರ್ನಾಟಕದ ಇತರ ಎಲ್ಲ ಭಾಗಗಳಲ್ಲಿರುವಂತೆ ಕೊಪ್ಪಳ ಜಿಲ್ಲೆಯಲ್ಲಿಯೂ ಗ್ರಾಮೀಣ ವಲಯಗಳಲ್ಲಿ ಗೌಡಿಕೆಯ ಪ್ರಭಾವ ಅಧಿಕವಾಗಿದೆ. ಗೌಡಿಕೆ ಎಂಬುದು ಯಾವುದೇ ಒಂದು ಜಾತಿಗೆ ಸಂಬಂಧಪಟ್ಟಿದ್ದಲ್ಲ. ಗ್ರಾಮದ ಜನಸಂಖ್ಯೆ, ಆರ್ಥಿಕ ಶಕ್ತಿ, ಗೌಡನ ಪಟ್ಟ ನಿರ್ಧರಿಸುತ್ತವೆ. ಈ ಜಿಲ್ಲೆಯಲ್ಲಿ ಲಿಂಗಾಯತರಂತೆ, ಕುರುಬರು, ನಾಯಕರು ಅನೇಕ ಕಡೆಯಲ್ಲಿ ಪಾಳೆಯಗಾರರಾಗಿದ್ದರಲ್ಲದೆ. ನಿರ್ಣಾಯಕ ಶಾಸಕರಾಗಿದ್ದಾರೆ. ಪಾಳೆಯಗಾರಿಕೆಯು ಸುತ್ತಲೂ

ರಾಜಕೀಯ ಮತ್ತು ಆರ್ಥಿಕ ಶಕ್ತಿಗಳು ಕೇಂದ್ರೀಕೃತವಾಗಿರುವುದರಿಂದ ಈ ಶಕ್ತಿಗಳೇ ಸಾಮಾಜಿಕ ನ್ಯಾಯವನ್ನು ನಿರ್ಧರಿಸುತ್ತವೆ. ಗ್ರಾಮೀಣ ಭಾಗದಲ್ಲಿನ ಜನರ ಅಜ್ಞಾನ, ಆರ್ಥಿಕ ದೌರ್ಬಲ್ಯಗಳನ್ನು ಪಾಳೆಯಗಾರರು ಚೆನ್ನಾಗಿಯೇ ಬಳಸಿಕೊಂಡಿದ್ದಾರೆ. ಸಾಮಾಜಿಕ ನ್ಯಾಯ ಮತ್ತು ಅಧಿಕಾರ ವಿಕೇಂದ್ರೀಕರಣದ ಮುಖವಾಡ ಹೊತ್ತುಬಂದ ಪಂಚಾಯತ್ ರಾಜ್ ವ್ಯವಸ್ಥೆಯಿಂದಾಗಿ ಭ್ರಷ್ಟಾಚಾರ, ಗುಂಪುಗಾರಿಕೆಗೆ ಹುಟ್ಟಿಕೊಂಡು ದೌರ್ಜನ್ಯ, ಸುಲಿಗೆಗಳು ಹೆಚ್ಚಾಗಿವೆ. ಗ್ರಾಮೀಣ ವಲಯಗಳಲ್ಲಿ ಪುಡಾರಿ ರಾಜಕಾರಣಿಗಳು ಹುಟ್ಟಿಕೊಂಡು ಜನರ ಸುಲಿಗೆಯಲ್ಲಿ ತೊಗಿರುವುದರಿಂದ ಇಲ್ಲಿ ಸಹಕಾರಿ ಸಂಘಗಳು ಸಹ ಬೆಳೆಯಲಿಲ್ಲ.[೨] (ಶರಣಬಸವ ಬೆಟ್ಟದೂರ, ೨೦೦೫). ಹೀಗೆ ಊಳಿಗಮಾನ್ಯಶಾಹಿ ಕಪಿಮುಷ್ಟಿಯಲ್ಲಿ ಇಂದಿಗೂ ಗ್ರಾಮೀಣ ವಲಯದ ಅಂಚಿನ ಸಮುದಾಯಗಳು ನರಳುತ್ತಿದ್ದಾರೆ. ಬಡತನದ ಕೂಪದಿಂದ ಹಾಗೂ ಮೌಢ್ಯ ಸಂಪ್ರದಾಯಗಳಿಗೆ ಬಲಿಯಾಗಿ ಇಲ್ಲಿ ಅಂಚಿನ ಮಹಿಳೆಯರು ದೇವದಾಸಿ ಪದ್ಧತಿಗಳಿಗೆ ಬಲಿಯಾಗುತ್ತಿದ್ದಾರೆ.

ಆರ್ಥಿಕ ದೃಷ್ಟಿಯಿಂದಲೂ ಕೊಪ್ಪಳವು ತುಂಬ ಅವಗಣನೆಗೆ ಒಳಗಾಗಿದೆ ಎಂಬುದರ ಬಗ್ಗೆ ಯಾವುದೆ ಅನುಮಾನವಿಲ್ಲ. ಏಕೆಂದರೆ ಜಿಲ್ಲೆಯ ದುಡಿಮೆಗಾರರಲ್ಲಿ ಕೃಷಿಕರ ಪ್ರಮಾಣ ೫.೫೪ ಲಕ್ಷ. ಇದರಲ್ಲಿ ಕೃಷಿಯನ್ನೇ ಅವಲಂಬಿಸಿರುವವರ ಪ್ರಮಾಣ ೪.೦೩ ಲಕ್ಷ.[೩] (ಟಿ.ಆರ್. ಚಂದ್ರಶೇಖರ, ೨೦೦೫). ಇಲ್ಲಿಯ ರೈತರು ತಮ್ಮ ಮೂಲ ವೃತ್ತಿಯನ್ನಾಗಿ ಆರಿಸಿಕೊಂಡಿರುವ ಕೃಷಿಯೇ ಅವರ ಜೀವನಾಧಾರವಾಗಿದೆ. ಅಲ್ಲದೆ ಇವರು ಮಳೆಯನ್ನೇ ಅವಲಂಬಿಸಿರುವುದರಿಂದ ಸಕಾಲದಲ್ಲಿ ಮಳೆಯಾಗದೆ ಕಂಗಾಲಾಗಿದ್ದಾರೆ. ಆದ್ದರಿಂದಲೇ ಇಲ್ಲಿಯ ಜನತೆ ಸದಾ ಅನಾವೃಷ್ಟಿಗೆ ಬಲಿಯಾಗುತ್ತಲೇ ಬಂದಿದ್ದಾರೆ. ಈ ಕಾರಣಗಳಿಂದಲೇ ಗ್ರಾಮೀಣ ವಲಯದೊಳಗಿನ ಜನರು ಬೇರೆ ಬೇರೆ ರಾಜ್ಯಗಳಿಗೆ ಗುಳೆ ಹೋಗುತ್ತಿದ್ದಾರೆ.

ರಾಜಕೀಯವಾಗಿ ಕೊಪ್ಪಳ ಜಿಲ್ಲೆಯಲ್ಲಿ ೧೩೪ ಗ್ರಾಮ ಪಂಚಾಯಿತಿಗಳಿವೆ. ಅದರಲ್ಲಿ ಒಟ್ಟು ೨೦೦೪ ಸದಸ್ಯರಿದ್ದಾರೆ. ತಾಲ್ಲೂಕು ಪಂಚಾಯಿತಿಗಳು ೦೪ ಇದ್ದು ಇದರಲ್ಲಿ ೧೦೭ ಜನರು ಸದಸ್ಯರಿದ್ದಾರೆ. ಜಿಲ್ಲಾ ಪಂಚಾಯಿತಿಯಲ್ಲಿ ೨೭ ಜನ ಸದಸ್ಯರಿದ್ದಾರೆ. ಅಲ್ಲದೆ ಜಿಲ್ಲೆಯಲ್ಲಿ ೨ ನಗರ ಸಭೆ, ೨ ಪಟ್ಟಣ ಪಂಚಾಯಿತಿಗಳು ಕಾರ್ಯ ನಿರ್ವಹಿಸುತ್ತಿವೆ. ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿ, ಜನಾಂಗಗಳ ಸಂಖ್ಯೆ ಪರಿಶಿಷ್ಟ ಜಾತಿಯಲ್ಲಿ ೯೨.೭೩೬ ಪುರುಷರಿದ್ದಾರೆ. ೯೨.೪೭೩ ಮಹಿಳೆಯರಿದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡದಲ್ಲಿ ೭೦,೦೬೩ ಪುರುಷರಿದ್ದರೆ, ಮಹಿಳೆಯರ ಸಂಖ್ಯೆ ೭೮,೫೨೫ ಇದೆ.

### ಟಿಪ್ಪಣಿಗಳು

೧. ಸಂಜುಂಡಸ್ವಾಮಿ, ಪುಟ:೩೯೩, ೨೦೦೧

೨. ಮಲ್ಲಿಕಾ ಘಂಟಿ, ಉದ್ಧೃತ ಬಾಬುರಾವ್ ಮುಡುಬಿ, ಪುಟ:೦೯, ೨೦೦೭

೩. ಮಲ್ಲಿಕಾ ಘಂಟಿ, ಉದ್ಧೃತ ಬಾಬುರಾವ್ ಮುಡುಬಿ, ಪುಟ:೧೧, ೨೦೦೭

೪. ಶೈಲಜ ಹಿರೇಮಠ, ಪುಟ:೦೨, ೧೯೯೯

೫. ಶೈಲಜ ಹಿರೇಮಠ, ಪುಟ:೩೪, ೧೯೯೯

೬. ಚೆನ್ನಕ ಎಲಿಗಾರ, ೧೪೧, ಪುಟ: , ೧೯೯೦

೭. ಮಲ್ಲಿಕಾ ಘಂಟಿ, ೨೨, ಪುಟ: , ೨೦೦೬

೮. ಮಲ್ಲಿಕಾ ಘಂಟಿ, ೨೪, ಪುಟ: , ೨೦೦೬

೯. ಟಿ.ಆರ್. ಚಂದ್ರಶೇಖರ, ಪುಟ:೩೧, ೧೯೯೯

೧೦. ಗವಿಸಿದ್ದ ಎನ್ ಬಳ್ಳಾರಿ, ಪುಟ:೩೬, ೧೯೯೯

೧೧. ಟಿ.ಆರ್. ಚಂದ್ರಶೇಖರ, ಪುಟ:೩೬, ೧೯೯೯

೧೨. ಶರಣ ಬಸವ ಬೆಟ್ಟದೂರ, ಪುಟ:೪೦, ೨೦೦೫

೧೩. ಟಿ.ಆರ್.ಚಂದ್ರಶೇಖರ, ಪುಟ:೪೯ ೨೦೦೫

■■■

## ಅಧ್ಯಾಯ-ಎರಡು

## ಪ್ರಜಾಪ್ರಭುತ್ವ, ಪಂಚಾಯತ್‌ರಾಜ್ ವ್ಯವಸ್ಥೆ ಮತ್ತು ದಲಿತ ಮಹಿಳೆ: ತಾತ್ವಿಕ ನೆಲೆಗಳು

## ಅಧ್ಯಾಯ-ಎರಡು

# ಪ್ರಜಾಪ್ರಭುತ್ವ, ಪಂಚಾಯತ್‌ರಾಜ್ ವ್ಯವಸ್ಥೆ ಮತ್ತು ದಲಿತ ಮಹಿಳೆ: ತಾತ್ವಿಕ ನೆಲೆಗಳು

### ೨.೨.೧. ಪ್ರಜಾಪ್ರಭುತ್ವ

ಪ್ರಾಚೀನ ಕಾಲದ ಎಲ್ಲ ಸಾಮ್ರಾಜ್ಯಗಳಲ್ಲಿಯೂ ಸಾಮಂತಶಾಹಿ, ಸರ್ವಾಧಿಕಾರಿ ಆಡಳಿತಗಳೇ ತುಂಬಿದ್ದರಿಂದ ಅಲ್ಲಿ ಆಡಳಿತದ ಮುಖ್ಯಸ್ಥನಾದ ರಾಜನೇ ಸರ್ವಾಧಿಕಾರಿಯಾಗಿರುತ್ತಿದ್ದನು. ಅಲ್ಲದೆ ಅವನ ಮಾತೇ ಅಂತಿಮವಾಗಿರುತ್ತಿತ್ತು. ಅದನ್ನು ವಿರೋಧಿಸುವ, ಪ್ರಶ್ನಿಸುವ ಹಕ್ಕು ಪ್ರಜೆಗಳಿಗೆ ಇರುತ್ತಿರಲಿಲ್ಲ. ಹಾಗೆಯೇ ಅವನ ಅಧಿಕಾರವನ್ನು ನಿರಾಕರಿಸುವ ಅವಕಾಶವೂ ಸಹ ಅವರಿಗೆ ಇರುತ್ತಿರಲಿಲ್ಲ. ಆದರೆ ಪ್ರಜಾಪ್ರಭುತ್ವವಾದಿ ಸರಕಾರದಲ್ಲಿ ಇಂತಹ ಆಚರಣೆಗಳಿಗೆ ಅವಕಾಶವೇ ಇಲ್ಲ. ಪ್ರಪಂಚದಲ್ಲಿನ ಸುಮಾರು ದೇಶಗಳು ಇದಕ್ಕೆ ಶರಣಾಗಿದೆ. ಆದರೆ ಪ್ರಜಾಪ್ರಭುತ್ವದ ಸ್ವರೂಪದ ಬಗೆಗೆ ಕೆಲವೊಂದು ಭಿನ್ನಾಭಿಪ್ರಾಯಗಳಿವೆ. ಕಾರಣವೇನೆಂದರೆ ಇದು ಬಹುಮುಖಿಯಾದ ಅರ್ಥಗಳನ್ನು ಬಳಸಿಗೊಂಡಿರುವುದು, ಇಂತಹ ಗೊಂದಲಗಳಿಗೆ ಕಾರಣವಾಗಿವೆ. ಆದ್ದರಿಂದಲೆ ಪ್ರಜಾಪ್ರಭುತ್ವವನ್ನು ಕೇವಲ ಸರಕಾರ ರಚನೆ, ಆಡಳಿತ ನಿರ್ವಹಣೆಗೆ ಮಾತ್ರ ಸೀಮಿತಗೊಳಿಸದೆ ಅದನ್ನು ವಿಶಾಲ ಅರ್ಥದಲ್ಲಿ ಪರಿಭಾವಿಸಬೇಕಾಗಿದೆ.  ಮುಖ್ಯವಾಗಿ ಪ್ರಜಾಪ್ರಭುತ್ವ ಎಂಬುದು ಒಂದು ರಾಜಕೀಯ ತತ್ವ, ಆದರ್ಶ. ಆದರೆ ವರ್ತಮಾನದಲ್ಲಿಂದು ಇದು ತನ್ನ ಸ್ವರೂಪವನ್ನು ಇನ್ನಷ್ಟು ವಿಸ್ತರಿಸಿಕೊಂಡು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ನೈತಿಕ ಅಂಶಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತಿದೆ.

ಪ್ರಜಾಪ್ರಭುತ್ವದ ಪರಿಕಲ್ಪನೆಯೂ ಅತ್ಯಂತ ಪುರಾತನವಾಗಿದೆ. ಪ್ರಪಂಚಕ್ಕೆ ಪ್ರಜಾಪ್ರಭುತ್ವವನ್ನು ಪರಿಚಯಿಸಿದ ಶ್ರೇಯಸ್ಸು ಗ್ರೀಕ್ ಜನರಿಗೆ ಸೇರುತ್ತದೆ. ಹಿಂದೆ ಭಾರತದಲ್ಲಿ ಕೆಲವು ಸಣ್ಣ ಪುಟ್ಟ ರಾಜ್ಯಗಳಲ್ಲಿಯೂ ಇಂತಹ ವ್ಯವಸ್ಥೆ ಇದ್ದ ಬಗ್ಗೆ ದಾಖಲೆಗಳಿವೆ. ಆಧುನಿಕ ಯುಗದ ಆರಂಭಿಕ ಕಾಲಘಟ್ಟದಲ್ಲಿನ ಅಮೆರಿಕಾ ಕ್ರಾಂತಿ, ಫ್ರಾನ್ಸ್ ಕ್ರಾಂತಿ (ಪುನರುಜ್ಜೀವನ), ಕೈಗಾರಿಕಾ ಕ್ರಾಂತಿ, ಪ್ರಜಾಪ್ರಭುತ್ವವಾದಿ ಚಿಂತನೆಯ, ಬರವಣಿಗೆಯ ಪ್ರಭಾವ ಮತ್ತು ಧಾರ್ಮಿಕ ಸುಧಾರಣೆಯ ಚಳುವಳಿಯ ಪರಿಣಾಮವಾಗಿ ವ್ಯಕ್ತಿಗೆ ಪ್ರಾಧಾನ್ಯತೆ ಕೊಡುವ ಹೊಸ ತತ್ವಗಳು ಪ್ರತಿಪಾದಿತವಾದವು. ಆಧುನಿಕ ಕಾಲದಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದ ಕೀರ್ತಿ ಬ್ರಿಟನ್ ದೇಶಕ್ಕೆ ಸಲ್ಲುತ್ತದೆ.

ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಮಾರು ಹೋಗಿ ಇಂದು ವಿಶ್ವದ ಸರ್ವಾಧಿಕಾರಿ ರಾಷ್ಟ್ರಗಳಲ್ಲಿಯೂ ಇದರ ಛಾಯೆ ಕಂಡುಬರುತ್ತಿದೆ. ಆದ್ದರಿಂದಲೆ ಇಂದಿನ ಯುಗವನ್ನು ಪ್ರಜಾಪ್ರಭುತ್ವವಾದಿಯುಗ ಎಂದು ಕರೆಯಲಾಗುತ್ತಿದೆ. ಪ್ರಜಾಪ್ರಭುತ್ವದ ಅರ್ಥವು ಅತ್ಯಂತ ವಿಶಾಲವೂ, ಸಾರ್ವತ್ರಿಕವೂ ಆಗಿದೆ. ಕೇವಲ ಸರಕಾರವನ್ನು ಮಾತ್ರವೇ ಗಮನಕ್ಕೆ ತೆಗೆದುಕೊಂಡು ರಾಜ್ಯ ಮತ್ತು ಸಮಾಜವನ್ನು ಅಲಕ್ಷ್ಯ ಮಾಡುವುದನ್ನು ಗಮನಿಸಬಹುದು. ಅದೇನೆ ಇರಲಿ ಆಧುನಿಕ ಜೀವನದಲ್ಲಿ ಪ್ರಜಾಪ್ರಭುತ್ವವು ನಿತ್ಯ ಜೀವನದಲ್ಲಿ ಅತ್ಯಂತ ರಚನಾತ್ಮಕವಾದ ಕಾರ್ಯಗಳನ್ನು ಮಾಡುತ್ತದೆ ಎನ್ನಲು ಯಾವುದೇ ಅನುಮಾನ ಬೇಡ. ಆದ್ದರಿಂದಲೆ ಇದೊಂದು ಬಗೆಯ ರಾಜ್ಯ ಪದ್ಧತಿಯೂ, ಸರಕಾರ ಪದ್ಧತಿಯೂ ಆಗಿದೆ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳನ್ನೇ ಮೈಗೂಡಿಸಿಕೊಂಡು ಆದರ್ಶಗಳಿಂದ ಅಲಂಕೃತವಾಗಿ ಜನರಿಗೆ ಸಹಾಯಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ಅಲ್ಲದೆ ಸಾಮುದಾಯಿಕ ಜೀವನದಲ್ಲಿ ವ್ಯಕ್ತಿಯ ವ್ಯಕ್ತಿತ್ವಕ್ಕೆ ಸಾರ್ವತ್ರಿಕವಾದ ಮನ್ನಣೆಯನ್ನು ನೀಡುತ್ತಿದೆ. ಹೀಗೆ ಉನ್ನತ ತತ್ವಾದರ್ಶಗಳ ಸಾರವಾಗಿರುವ ಪ್ರಜಾಪ್ರಭುತ್ವವು ಕೇವಲ ರಾಜಕೀಯ ವ್ಯವಸ್ಥೆಯ ಮೇಲೆ ಗಮನಹರಿಸದೆ, ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಸಾಮಾಜಿಕ ಉನ್ನತಿಗಾಗಿ ಗಮನಹರಿಸುತ್ತದೆ. ಸಾಮಾಜಿಕ, ನೈತಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳನ್ನು ಒಳಗೊಂಡು ಮೈದಳೆದಿದೆ. ಸಮಾಜದ ಅತ್ಯಂತ ಕಟ್ಟಕಡೆಯ ವ್ಯಕ್ತಿಯೂ ಸಹ ದೇಶದ ಉನ್ನತ ಹುದ್ದೆಯನ್ನು ಏರುವ ಅವಕಾಶವಿರುವುದು ಪ್ರಜಾಪ್ರಭುತ್ವವಾದಿ ದೇಶಗಳಲ್ಲಿ ಮಾತ್ರ ಸಾಧ್ಯ. ಹೀಗೆ ರಾಜಕೀಯದಲ್ಲಿ ಭಾಗವಹಿಸುವಿಕೆ, ಮುಕ್ತ ಅವಕಾಶಗಳನ್ನೂ ನೀಡಿ ವ್ಯಕ್ತಿಯ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಇದು ತುಂಬ ಪ್ರಯೋಜನಕಾರಿಯಾಗಿದೆ.

ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡ ಪ್ರಜಾಪ್ರಭುತ್ವವಾದಿ ರಾಷ್ಟ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಭಾರತದಲ್ಲಿ ಪ್ರಜಾಪ್ರಭುತ್ವವು ಅತ್ಯಂತ ಪ್ರಭಾವಶಾಲಿಯಾದ ಪಾತ್ರ ನಿರ್ವಹಿಸುತ್ತದೆ. ಭಾರತವನ್ನು ಒಂದು ಸರ್ವತಂತ್ರ, ಸಾರ್ವಭೌಮ ಪ್ರಜಾತಾಂತ್ರಿಕ ರಾಷ್ಟ್ರವನ್ನಾಗಿ ರೂಪಿಸಲು ಇದು ಅತ್ಯಂತ ಅವಶ್ಯವೂ, ಅಗತ್ಯವೂ ಆಗಿದೆ. ಅಲ್ಲದೆ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಎಂಬ ಆದರ್ಶಗಳನ್ನು ಸಾಕಾರಗೊಳಿಸುವುದೇ ಪ್ರಜಾಪ್ರಭುತ್ವದ ಮುಖ್ಯ ಆಶಯವಾಗಿದೆ. ಆದ್ದರಿಂದಲೆ ಡಾ. ಅಂಬೇಡ್ಕರ್ ಅವರು ''ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ತಳಹದಿಯ ಮೇಲೆ ಮಾತ್ರ ಒಂದು ಆದರ್ಶರಾಷ್ಟ್ರ ನಿರ್ಮಾಣ ಮಾಡಲು ಸಾಧ್ಯ. ಅಂತಹ ಶ್ರೇಷ್ಠ ಸುಸಂಸ್ಕೃತ ಸಮಾಜದ ನಿರ್ಮಾಣಕ್ಕಾಗಿ ಸಾಮಾಜಿಕ ಕ್ರಾಂತಿಯ ಅವಶ್ಯಕತೆ ಇದೆ ಎಂದಿದ್ದಾರೆ. ಅದಕ್ಕಾಗಿಯೇ ಅವರು ಅಸ್ಪೃಶ್ಯತೆಯ ನಿವಾರಣೆ ಮತ್ತು ಎಲ್ಲ ಅಲಕ್ಷಿತ, ದಮನಿತ ವರ್ಗಗಳ ವಿಮೋಚನೆಯಾಗದ ಹೊರತು ದೇಶದ ಸ್ವಾತಂತ್ರ್ಯ ಅರ್ಥರಹಿತ ಎಂಬ ಮೂಲತತ್ವವನ್ನು ಅವರು ಪ್ರತಿಪಾದಿಸಿದ್ದರು. ಪ್ರಜಾಪ್ರಭುತ್ವ ಎಂಬುದು ಕೇವಲ ಸರಕಾರಿ ಯಂತ್ರಗಳ ವಿವರಣೆಯು ಒಂದು ಸಿದ್ಧ ಮಾದರಿಯಲ್ಲ. ಅದೊಂದು ಸಮಾಜದ ತಾತ್ವಿಕ ಒಗ್ಗಟ್ಟಿನ ಸಂಕೇತ. ಮುಖ್ಯವಾಗಿ ಒಂದು ಸಮಾಜ ತನ್ನ ಸ್ವರೂಪದಲ್ಲಿ ಹಾಗೂ ಸ್ವಭಾವದಲ್ಲಿ ಪ್ರಜಾಪ್ರಭುತ್ವವಾದಿಯಾಗಿ ಕಾರ್ಯ ನಿರ್ವಹಿಸದಿದ್ದರೆ ಅಂತಲ್ಲಿ ಪ್ರಜಾಪ್ರಭುತ್ವಕ್ಕೆ ಯಾವುದೇ ಬೆಲೆ ಇರಲಾರದು. ಸರಕಾರಗಳು ತಾವು ಪ್ರಜೆಗಳ ಹಿತೋಭಿವೃದ್ಧಿಗಾಗಿ ಕಾಳಜಿಯನ್ನು ಹೊಂದಿದ್ದರೆ. ಸಮಾಜದ ಬಯಕೆ, ಆಶೋತ್ತರಗಳಿಗೆ ಸ್ಪಂದಿಸುವ ತವಕ

ಇದ್ದರೆ ಕಾರ್ಯ ನಿರ್ವಹಿಸುತ್ತಿರುವ ಸರಕಾರವಿರುವ ಆ ಸಮಾಜದಲ್ಲಿ ಪ್ರಜಾಪ್ರಭುತ್ವದ ಆಶಯ ಬೇರುಗಳು ಆಳವಾಗಿ ಬೇರೂರಿರಬೇಕು. ಸಮಾಜವು ಪ್ರಜಾಪ್ರಭುತ್ವದ ಸ್ವಭಾವವನ್ನು ಹೊಂದಿರದಿದ್ದರೆ ಅಂತಹ ಸರಕಾರ ಎಂದಿಗೂ ಪ್ರಜಾಪ್ರಭುತ್ವವಾದಿ ಸರಕಾರ ಎನಿಸಿಕೊಳ್ಳಲಾರದು. ಯಾವ ಸಮಾಜ ಆಳುವವರು ಆಳಿಸಿಕೊಳ್ಳುವವರು ಎಂದು ವಿಭಜನೆಯಾಗಿರುತ್ತಿದೆಯೋ ಅಲ್ಲೆಲ್ಲ ಸರಕಾರ ಆಳುವವರ ಕಾಲಡಿಯಲ್ಲಿಯೆ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಆದರ್ಶಗಳನ್ನು ಬಲಿ ಕೊಡುತ್ತಿರುತ್ತದೆ.

ಹೀಗೆ ಪ್ರಜಾಪ್ರಭುತ್ವವನ್ನು ಸ್ವಾತಂತ್ರ್ಯ, ಸಾಮಾಜಿಕ ನ್ಯಾಯ ಸಮಾನತೆಗಳಿಗೆ ಸಮೀಕರಿಸಲಾಗುತ್ತಿದೆ. ಮುಖ್ಯವಾಗಿ ಪ್ರಜಾಪ್ರಭುತ್ವದ ಕಾಳಜಿಯೇ ಸ್ವಾತಂತ್ರ್ಯ, ಸಮಾನತೆ, ಸಹೋದರತೆಯಾಗಿದೆ. ಇದನ್ನು ಶಾಶ್ವತವಾಗಿ ಉಳಿಸುವುದು ಕೆಲವರ ಪ್ರಕಾರ ಪ್ರಭುತ್ವದ ಕಾನೂನು. ಆದರೆ ಅದು ಸತ್ಯವಲ್ಲ. ಸಹ ಜೀವನ, ಸಹಬಾಳ್ವೆ, ಹೊಂದಾಣಿಕೆ, ಜಾತ್ಯತೀತ ಮನೋಭಾವನೆಯೇ ಪ್ರಜಾಪ್ರಭುತ್ವದ ಜೀವಾಳ. ಇವ್ಯಾವು ಇಲ್ಲದೆ ಹೋದರೆ ಪ್ರಜಾಪ್ರಭುತ್ವದ ನಾಶ ಖಂಡಿತ. ಪ್ರಜಾಪ್ರಭುತ್ವದಲ್ಲಿ ಸಮಾನತೆಯಿಂದ ಸ್ವಾತಂತ್ರ್ಯವೂ, ಸ್ವಾತಂತ್ರ್ಯದಿಂದ ಸಮಾನತೆಯೂ ನಾಶವಾಗದಿರಲು ಈ ಎರಡರ ಮೂಲದಲ್ಲಿರುವ ಭ್ರಾತೃತ್ವವೆ ಕಾರಣ. ಆದ್ದರಿಂದ ಭ್ರಾತೃತ್ವವು ಪ್ರಜಾಪ್ರಭುತ್ವದ ಆತ್ಮ. ಡಾ. ಅಂಬೇಡ್ಕರರು ಭ್ರಾತೃತ್ವವನ್ನು ಪ್ರಜಾಪ್ರಭುತ್ವದ ಮತ್ತೊಂದು ಹೆಸರು ಎಂದು ಅಭಿಪ್ರಾಯ ಪಟ್ಟಿದ್ದಾರೆ.

**೨.೨.೨. ಪಂಚಾಯತ್‌ರಾಜ್ ವ್ಯವಸ್ಥೆ**

ಮಹಾತ್ಮಾಗಾಂಧಿಯವರು "ಪಂಚಾಯತ್ ರಾಜ್ಯವು ಸರ್ವೋದಯದ ಒಂದು ಮಹತ್ವದ ಅಂಶವಾಗಿದೆ" ಎಂದು ಬಣ್ಣಿಸಿದ್ದಾರೆ. ಜಯಪ್ರಕಾಶ ನಾರಾಯಣರು 'ಪಂಚಾಯತ್ ರಾಜ್ಯವು ಕೇವಲ ಅಸ್ತಿತ್ವದಲ್ಲಿದ್ದ ಸಾಮಾಜಿಕ ಪದ್ಧತಿಯ ಘಟಕವಾಗಿರದೆ, ಹೊಸ ಸಾಮಾಜಿಕ ವ್ಯವಸ್ಥೆಗೆ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಅಗ್ರಮಾನ್ಯ ಸಾಧನವಾಗಿದೆ' ಎಂದಿದ್ದಾರೆ. ಪಂಚಾಯತ್‌ರಾಜ್ ಕಲ್ಪನೆಯ ಅರ್ಥವನ್ನು ಹಲವರು ವಿದ್ವಾಂಸರು ಹಲವಾರು ಬಗೆಯಲ್ಲಿ ವಿವರಿಸಿದ್ದಾರೆ. ಕೆಲವು 'ಪಂಚಾಯತ್ ರಾಜ್ಯವು ಸರಕಾರಕ್ಕೆ ಮತ್ತು ಉಚ್ಚಮಟ್ಟದ ಅಧಿಕಾರಿಗಳಿಗೆ ಒಂದು ಮಹತ್ವದ ಮಾಧ್ಯಮವಾಗಿದೆ' ಎಂದು ಹೇಳಿದರೆ, ಇನ್ನೂ ಕೆಲವರು ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಸಾಧನವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಹಲವು ವಿದ್ವಾಂಸರು ಪಂಚಾಯತ್‌ರಾಜ್ ಕಲ್ಪನೆಯ ವ್ಯಾಖ್ಯಾನವನ್ನು ಕೊಟ್ಟು ಅದರ ವಿವರಣೆಯನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ.

* ಜವಹರಲಾಲ್ ನೆಹರು: "ಪಂಚಾಯತ್ ರಾಜ್ಯವು ಗ್ರಾಮೀಣ ಅಭಿವೃದ್ಧಿಯ ಪ್ರಬಲವಾದ ಪ್ರಯೋಗವಾಗಿದೆ."
* ಎ.ಆರ್. ದೇಸಾಯಿ: "ಪಂಚಾಯತ್ ರಾಜ್ಯವು ನಿಜವಾದ ಪ್ರಜಾಪ್ರಭುತ್ವದಲ್ಲಿ, ರಾಜಕೀಯ ಭಾವಕರನ್ನಾಗಿದ್ದು, ಗ್ರಾಮೀಣ ಜನರಿಗೆ ಸಕ್ರಿಯವಾಗಿ ರಾಜಕೀಯದಲ್ಲಿ ಭಾಗವಹಿಸಲು ಪ್ರೋತ್ಸಾಹಿಸುತ್ತದೆ.

ಬಹುಸಂಖ್ಯೆಯ ದುರ್ಬಲ ಮತ್ತು ಬಡವರ್ಗಗಳ ಮೇಲೆ ನಿಯಂತ್ರಣವನ್ನು ಸಾಧಿಸುವ ಅವರ ಮತ್ತು ಅವರ ಕಲ್ಯಾಣಕ್ಕಾಗಿ ಶ್ರಮಿಸುವ ಸಂಸ್ಥೆಯಾಗಿದೆ.''

* ಬಲವಂತರಾಯ ಮೆಹತಾ: ''ಪಂಚಾಯತ್ ರಾಜ್ಯವು ಸ್ಥಾನಿಕ ಸ್ವರಾಜ್ಯವಾಗಿದ್ದು, ಪ್ರಜಾಪ್ರಭುತ್ವದ ಅಧಿಕಾರ ವಿಕೇಂದ್ರಿಕರಣವನ್ನು ಅಸ್ತಿತ್ವದಲ್ಲಿ ತರುವ ಸಾಧನ.
* ಪಿ.ಕೆ ಚೌಧರಿ: ಪಂಚಾಯತ್‌ರಾಜ್ಯ ಸಂಸ್ಥೆಗಳು ಕೇವಲ ರಾಜ್ಯ ಸರಕಾರದ ಮಾಧ್ಯಮ..... ಆಯಾ ಮಟ್ಟದಲ್ಲಿ ಅವು ಸರಕಾರದ ಅಂಗಾಂಗಗಳಾಗಿವೆ.

ಅಧಿಕಾರ ವಿಕೇಂದ್ರೀಕರಣದ ಪ್ರತಿಬಿಂಬವಾಗಿರುವ ಪಂಚಾಯತ್‌ರಾಜ್ ಸಂಸ್ಥೆಗಳು ಆಧುನಿಕ ಜೀವನದಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ನಿರ್ವಹಿಸುತ್ತಿವೆ. ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡ ಪ್ರಜಾಪ್ರಭುತ್ವವಾದಿ ರಾಷ್ಟ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಭಾರತದಂತಹ ರಾಷ್ಟ್ರದಲ್ಲಿ ಗಣತಂತ್ರ ವ್ಯವಸ್ಥೆಯ ಉಳಿವಿಗೆ ಇಂತಹ ವ್ಯವಸ್ಥೆಗಳು ಅತ್ಯಂತ ಪುರೋಗಾಮಿಗಳಾಗಿರುತ್ತವೆ. ಅಲ್ಲದೆ ಅಭಿವೃದ್ಧಿಯ ಯೋಜನೆಗಳು ಯಶಸ್ವಿಯಾಗಲು ಸ್ಥಳೀಯ ಸರಕಾರಗಳ ಪಾತ್ರ ಅತ್ಯಂತ ಪ್ರಮುಖವಾಗಿದೆ. ಏಕೆಂದರೆ ಇದು ಕೆಳಹಂತದಲ್ಲಿಯ ಅಧಿಕಾರ ಸಂಬಂಧಿ ರಚನೆಯಾಗಿರುವುದರಿಂದ ಎಲ್ಲ ಕಾರ್ಯಗಳು ರಾಜ್ಯ ಅಥವಾ ಕೇಂದ್ರ ಮಟ್ಟದಲ್ಲಿನ ಅಧಿಕಾರಿಗಳಿಗೆ ಅರಿವಿರದೆ ಇರಬಹುದು. ಆದ್ದರಿಂದಲೇ ಸ್ಥಳೀಯ ವಾಸಿಗಳಿಗೆ ಅಗತ್ಯವಿರುವ ಮೂಲಭೂತ ಅವಶ್ಯಕತೆಗಳನ್ನು ತಾವೇ ಸ್ವತಃ ನಿರ್ಧರಿಸಿ ನಿರ್ವಹಿಸುವಿಕೆಯಲ್ಲಿ ಸ್ಥಳೀಯ ಸರಕಾರಗಳ ಪಾತ್ರ ಅತ್ಯಂತ ಉಪಯೋಗಕಾರಿಯಾಗಿದೆ. ವಿಕೇಂದ್ರೀಕರಣದ ತತ್ವವು ಸಹ ಇದೇ ಆಗಿದೆ.

ಸಾಮಾನ್ಯವಾಗಿ ಸ್ಥಳೀಯ ಸರಕಾರಗಳು ಎಂದು ಕರೆಯಲ್ಪಡುತ್ತಿರುವ ಪಂಚಾಯಿತಿಗಳು ಸ್ಥಳೀಯ ಅಥವಾ ಪ್ರಾದೇಶಿಕ ಮಟ್ಟದಲ್ಲಿ ಕಾರ್ಯ ನಿರ್ವಹಿಸುವ ಶಾಸನೀಯ ಅಂಗಗಳಾಗಿವೆ. ಅಂದರೆ ನಿರ್ದಿಷ್ಟ ಪ್ರದೇಶಗಳ ಕಾರ್ಯನಿರ್ವಹಣೆಗಾಗಿ ಮತ್ತು ಅವುಗಳ ಅವಶ್ಯಕತೆಗಳನ್ನು ಪೂರೈಸುವಿಕೆಗಾಗಿ ಸಂವಿಧಾನಬದ್ಧವಾಗಿ ಜಾರಿಗೊಂಡು ಕಾರ್ಯ ನಿರ್ವಹಿಸುವ ಸ್ಥಳೀಯ ಸಂಸ್ಥೆಗಳು ಎಂದು ಪರಿಭಾವಿಸಬಹುದಾಗಿದೆ. ಡಾ.ಎಸ್. ರಾಧಾಕೃಷ್ಣನ್ ಅವರು ಸ್ಥಳೀಯ ಸಂಸ್ಥೆಗಳ ಮಹತ್ವವನ್ನು ಕುರಿತು ''ಸ್ಥಳೀಯ ಜನತೆಯ ಆಶೋತ್ತರ ಹಾಗೂ ಅವರ ಯೋಗಕ್ಷೇಮವನ್ನು ಸಾಧಿಸುವುದಕ್ಕಾಗಿ ಸ್ಥಾಪಿಸಲ್ಪಟ್ಟಿರುವ ಸ್ಥಳೀಯ ಸರಕಾರ''[3] ಎಂದು ಕರೆದಿದ್ದಾರೆ. ಅಂದರೆ ''ಸ್ಥಳೀಯ ಸರಕಾರಗಳೆಂದರೆ ಸ್ಥಳೀಯ ಜನರಿಂದ ಸ್ಥಾಪಿಸಲ್ಪಟ್ಟು, ಸ್ಥಳೀಯ ಜನರಿಗಾಗಿ, ಅವರಿಗೋಸ್ಕರ, ಅವರಿಂದ ನಡೆಸಲ್ಪಡುವ ಆಡಳಿತ ಇದಾಗಿದೆ. ಹೀಗಾಗಿ ರಾಜ್ಯಗಳಲ್ಲಿ ಕಾನೂನುಬದ್ಧವಾಗಿ ಸ್ಥಾಪಿಸಲ್ಪಟ್ಟಿರುವ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿರುವ ಸರಕಾರಿ ವ್ಯವಸ್ಥೆಗಳಿಗೆ ಸ್ಥಳೀಯ ಸರಕಾರ ಎಂದು ಕರೆಯಲಾಗಿದೆ.'' (ಎಸ್.ಟಿ. ಸೋಮಶೇಖರ, ೨೦೦೫. ೨೪೭) ವಿಕೇಂದ್ರಿಕರಣದ ಸಂದರ್ಭದಲ್ಲಿ ಸ್ಥಳೀಯ ಸ್ವಯಂ ಆಡಳಿತದ ಜೊತೆಗಿನ ವಿವಿಧ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ 'ಸ್ಥಳೀಯ ರಾಜಕಾರಣ' ಎಂಬ ಪರಿಕಲ್ಪನೆಯೂ ಬಳಸಲ್ಪಡುತ್ತಿದೆ. ಇದರ ರಾಜಕೀಯ, ಮಾನಸಿಕ, ಸಾಮಾಜಿಕ ಮತ್ತು ಆರ್ಥಿಕ ಗುಣಗಳ ಲಕ್ಷಣಗಳ ಮತ್ತು ಅವುಗಳ ಮಿತಿ ಇಲ್ಲವೇ ನಿರ್ಧಾರಗಳು ಯಾವುವು ಎಂಬ ಅಂಶಗಳು ಶೋಧಿಸುವ ಕುರಿತು ಚಿಂತಕರು ಅಭಿಪ್ರಾಯಗಳನ್ನು ಮುಂದಿಡುತ್ತಾರೆ.

ಅಂದರೆ ಇದನ್ನು ಸ್ಥಳೀಯತೆಗೆ ಪರ್ಯಾಯವಾಗಿ ಪ್ರಾದೇಶಿಕ ಮತ್ತು ಕೇಂದ್ರ ಘಟಕ ಪೂರಕವಾದ ಅಥವಾ ವಿರುದ್ಧವಾದ ರಾಜಕಾರಣ ಎಂದು ಪರಿಗಣಿಸಬೇಕೆಂಬುದರ ಕುರಿತಂತೆ ವಾದಗಳಿವೆ.'' (ಮಾಥುರ್, ೧೯೮೧, ಉದ್ಧೃತ ಎ. ಶ್ರೀಧರ ೨೦೦೬) ಈ ಸಂದರ್ಭದಲ್ಲಿ ಸ್ಥಳೀಯ ರಾಜಕಾರಣ ಎಂದರೆ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ರಾಜ್ಯ ಅಥವಾ ಕೇಂದ್ರ ಘಟಕಗಳೊಳಗಿನ ರಾಜಕೀಯ ಪ್ರಕ್ರಿಯೆಯ ವಿಸ್ತರತೆ ಎಂದು ಪರಿಗಣಿಸಲಾಗಿದೆ. ಸ್ಥಳೀಯ ಮಟ್ಟದಲ್ಲಿನ ವಿವಿಧ ಸಾಮಾಜಿಕ ಗುಂಪುಗಳ ನೆಲೆಗಳು ಮತ್ತು ಅವುಗಳ ಸಾಮಾಜಿಕ ಆರ್ಥಿಕ ಏರುಪೇರುಗಳಿಗೆ ಸಂಬಂಧಿಸಿದಂತೆ ಸಂಘರ್ಷಗಳ ಸ್ವರೂಪ ಮತ್ತು ಅವು ರೂಪುಗೊಳ್ಳುತ್ತಿರುವ ನಾಯಕತ್ವಕ್ಕೆ ಸಂಬಂಧಿಸಿದ ಅಂಶಗಳು ಮತ್ತು ಅಭಿವೃದ್ಧಿ ಕಾರ್ಯಗಳ ಸುತ್ತ ಸ್ಥಳೀಯ ಸರಕಾರಗಳ ರಾಜಕಾರಣವು ಗುರುತಿಸಲ್ಪಡುತ್ತದೆ.''

ಸ್ಥಳೀಯ ಸರಕಾರಗಳ ಪ್ರಮುಖ ನೆಲೆಯಾಗಿರುವ ಪಂಚಾಯಿತಿಗಳು ವಾಸ್ತವವಾಗಿ ಚಿಕ್ಕ ಚಿಕ್ಕ ಗಣರಾಜ್ಯಗಳಾಗಿ ಕಾರ್ಯ ನಿರ್ವಹಿಸುವಿಕೆಗೆ ಸಂಬಂಧಿಸಿದಂತೆ ಪಂಚಾಯತ್‌ರಾಜ್ ವ್ಯವಸ್ಥೆಯ ಉಗಮವಾಗಿರುವುದು. ಭಾರತವು ಒಂದು ಹಳ್ಳಿಗಳ ನಾಡೆಂದು ಗುರುತಿಸಲ್ಪಡುತ್ತಿರುವುದರಿಂದಲೇ ಇಲ್ಲಿ ಪಂಚಾಯಿತಿಗಳು ಹೆಚ್ಚು ಪ್ರಾಮುಖ್ಯತೆಯನ್ನು ಸಾಧಿಸಿವೆ. ಸ್ಥಳೀಯ ಪಂಚಾಯಿತಿಯಲ್ಲಿ ಭಾಗಿಯಾಗುವ ಸದಸ್ಯರು ತಾವು ರಾಷ್ಟ್ರ, ರಾಜ್ಯಗಳಲ್ಲಿಯ ಉನ್ನತ ಹಂತಗಳಲ್ಲಿಯೂ ಅಧಿಕಾರದ ಗದ್ದುಗೆಯನ್ನು ಪಡೆಯಲು ಇದು ಮೊದಲ ಹಂತವಾಗಿದೆ. ಆರಂಭದಲ್ಲಿಯೇ ಚುನಾವಣೆಯಂಥ ರಾಜಕೀಯ ಭಾಗವಹಿಸುವಿಕೆಯ ಮೂಲಕ ಸ್ಥಳೀಯ ನಿವಾಸಿಗಳಿಗೆ ರಾಜಕೀಯ ತರಬೇತಿಯನ್ನು ನೀಡಲಾಗುವುದು. ವಿಕೇಂದ್ರೀಕರಣ ತತ್ವಕ್ಕೆ ತಾತ್ವಿಕ ತಳಹದಿಯು ಪಂಚಾಯಿತಿಗಳ ಮೂಲಕ ಸಾಕಾರಗೊಳ್ಳುವುದು. ಅಲ್ಲದೆ ಸ್ಥಳೀಯ ಜನರಿಗೆ ತಮ್ಮ ಬೇಕು ಬೇಡಗಳನ್ನು ತಾವೇ ನಿರ್ಧರಿಸಿಕೊಳ್ಳಲು ತುಂಬ ಪ್ರಯೋಜನಕಾರಿಯಾದ ಪಾತ್ರ ನಿರ್ವಹಿಸುತ್ತದೆ. ಕೇಂದ್ರ ರಾಜ್ಯ ಸರಕಾರಗಳ ಅಧಿಕಾರ ಭಾರವನ್ನು ಕಡಿಮೆಗೊಳಿಸಿ ಆಡಳಿತ ಸುಲಲಿತವಾಗಿ ನಡೆಯಲು ಪೂರಕವಾಗಿ ಕಾರ್ಯ ನಿರ್ವಹಿಸುವುದು. ಹೀಗೆ ಪಂಚಾಯಿತಿ ಸಂಸ್ಥೆ ಅಥವಾ ಸ್ಥಳೀಯ ಸಂಸ್ಥೆಗಳು ಒಂದು ದೇಶ ಅಥವಾ ರಾಜ್ಯದ ರಾಜಕೀಯ ಭವಿಷ್ಯಕ್ಕೆ ಮುನ್ನುಡಿ ಬರೆಯಲು ಇಲ್ಲಿ ಅತ್ಯಂತ ಹೆಚ್ಚಿನ ಅವಕಾಶಗಳಿವೆ. ಗ್ರಾಮ ಪಂಚಾಯಿತಿಗಳನ್ನು ತಳಮಟ್ಟದಲ್ಲಿಯ ಸ್ವಯಂ ಆಡಳಿತ ಸಂಸ್ಥೆಗಳು ಎಂಬ ಪರಿಭಾಷೆಯನ್ನು ಮೇಲಿನ ಚರ್ಚೆಯಲ್ಲಿ ಕಾಣಬಹುದು. ಅವುಗಳನ್ನು ವಿಕೇಂದ್ರಿಕರಣದ 'ಪಾಯ' ಎಂದು ಪರಿಗಣಿಸಲಾಗಿದೆ.

ಸ್ಥಳೀಯ ಸರಕಾರ ಅಥವಾ ಪಂಚಾಯತ್ ರಾಜ್ಯ ಸಂಸ್ಥೆಯೂ ಪ್ರಜಾಪ್ರಭುತ್ವ ವ್ಯವಸ್ಥೆಯ ಒಂದು ಅತ್ಯಂತ ಪ್ರಮುಖ ಸಂಸ್ಥೆಯಾಗಿದೆ. ಈ ಸಂಸ್ಥೆಗಳು ಸ್ಥಳೀಯ ಸಮಸ್ಯೆಗಳಿಗೆ ಅಲ್ಲಿನ ಅವಶ್ಯಕತೆಗಳಿಗೆ ಮತ್ತು ಜನತೆಯ ಸ್ವಭಾವಕ್ಕೆ ತಕ್ಕಂತೆ ಪರಿಹಾರವನ್ನು ಇಲ್ಲಿ ಕಂಡುಕೊಳ್ಳಲಾಗುತ್ತದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಸ್ಥಳೀಯ ಮಟ್ಟದ ಎಲ್ಲ ಸಮಸ್ಯೆಗಳನ್ನು ಬಗೆಹರಿಸುವುದಿಲ್ಲ. ಸ್ಥಳೀಯ ಅವಶ್ಯಕತೆಗಳನ್ನು ಸ್ಥಳೀಯ ಜನತೆಯೇ ಅಥವಾ ಅವರ ಪ್ರತಿನಿಧಿಗಳ ಮೂಲಕವೇ ಪೂರೈಸಿಕೊಳ್ಳಲು ಸಾಧ್ಯ. ವಿಶ್ವದ ಬಹುತೇಕ ರಾಷ್ಟ್ರಗಳೆಲ್ಲ ಸ್ಥಳೀಯ ಸ್ವಯಂ ಸರಕಾರವು ಸ್ವಾಯತ್ತತಾ ಸಂಸ್ಥೆಯೇ ಆಗಿದೆ. ಅದು ಮಿತವಾದ ಅಧಿಕಾರವನ್ನು ಹೊಂದಿದ್ದರೂ ಹಲವಾರು ವಿಚಾರಗಳಲ್ಲಿ ಸ್ವತಂತ್ರವಾಗಿದೆ. ಒಂದು ಕಡೆ ಅದು ಕೇಂದ್ರ ರಾಜ್ಯ ಸರಕಾರದ ಕರ್ತವ್ಯವನ್ನು ಒಂದು ಮಿತವಾದ

ಕ್ಷೇತ್ರದಲ್ಲಿ ನಿರ್ವಹಿಸುವುದಲ್ಲದೆ ಮತ್ತೊಂದು ಕಡೆ ಸ್ವತಂತ್ರವಾಗಿಯೂ ಮತ್ತು ಜವಾಬ್ದಾರಿಯುತವಾಗಿಯೂ ಕಾರ್ಯ ನಿರ್ವಹಿಸುತ್ತದೆ.

**೨.೨.೩. ದಲಿತ ಮಹಿಳಾ ತಾತ್ವಿಕ ನೆಲೆಗಳು**

ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯನ್ನು ಹೊಂದಿರುವ ಭಾರತದಲ್ಲಿ ಮೀಸಲಾತಿ ಪ್ರಶ್ನೆ ಮೊದಲಿಗೆ ಹುಟ್ಟಿದ್ದು ಡಾ. ಅಂಬೇಡ್ಕರರ ಚಿಂತನೆಗಳ ಫಲವಾಗಿ. 'ಮೀಸಲಾತಿ' ಎಂಬ ನಿರ್ವಚನವೆ ಸೂಚಿಸುವಂತೆ ಇದು 'ಪ್ರತ್ಯೇಕವಾಗಿ ತಗೆದಿರಿಸಿರುವುದು' ಎಂಬ ಅರ್ಥ ಕೊಡುತ್ತದೆ. ಯಾವ ಸಮಾಜದಲ್ಲಿ ರೂಢಿಗತವಾಗಿರುವ, ಸಮಾಜದ ಎಲ್ಲ ಮೂಲಭೂತ ಅವಶ್ಯಕತೆಗಳು, ಹಕ್ಕುಗಳಿಂದ ವಂಚಿತವಾಗಿರುವ ಸಮುದಾಯಕ್ಕೆ ಸೂಕ್ತ ಅವಕಾಶ ನೀಡಿ ಅವರನ್ನು ಸಮಾಜದ ಮುಖ್ಯನೆಲೆಗೆ ತರುವುದು. ಮೀಸಲಾತಿಯ ಉದ್ದೇಶವಾಗಿದೆ. ಹೀಗೆ ಅವಕಾಶ ವಂಚಿತ ಸಮುದಾಯಗಳ ಸುಪರ್ದಿಯೊಳಗೆ ದಲಿತ ಮಹಿಳಾ ಸಮುದಾಯ ಅತ್ಯಂತ ಶೋಷಣೆಗೆ ಬಲಿಯಾಗಿರುವ ಸಮುದಾಯವಾಗಿದೆ. ಲಿಂಗ ಹಾಗೂ ಜಾತಿಯ ಕಾರಣದಿಂದಲೆ ತನ್ನ ಸಮುದಾಯ ಹಾಗೂ ಉನ್ನತ ಜಾತಿಯ ಪುರುಷರಿಂದ ನಿತ್ಯ ನಿರಂತರವಾಗಿ ಶೋಷಣೆಗೆ ಬಲಿಯಾಗಿದ್ದಾಳೆ. ಇಂತಹ ಶೋಷಿತ ದಲಿತ ಮಹಿಳೆಗೆ ಡಾ. ಅಂಬೇಡ್ಕರರು ರೂಪಿಸಿದ ಮೀಸಲಾತಿ ಒಂದು ವರವಾಗಿ ಸಿಕ್ಕಿತು. ಲಿಂಗಾಧಾರಿತವಾಗಿರುವ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲ ರಂಗಗಳಂತೆ ರಾಜಕೀಯ ರಂಗದಿಂದ ದೂರವೇ ಉಳಿದಿರುವ ದಲಿತ ಮಹಿಳೆಯ ರಾಜಕೀಯ ಸಬಲೀಕರಣಕ್ಕಾಗಿ ಮೀಸಲಾತಿ ಅತ್ಯಂತ ಪುರೋಗಾಮಿಯಾಯಿತು.

ಮೀಸಲಾತಿಯ ವಿಷಯ ಭಾರತಕ್ಕೆ ಹೊಸದೇನಲ್ಲ-೧೯ನೆಯ ಶತಮಾನದ ಕೊನೆಯಲ್ಲೇ ಬ್ರಿಟಿಷರು ತಮ್ಮ ಆಡಳಿತಾವಧಿಯಲ್ಲಿ ಮೀಸಲಾತಿಯನ್ನು ರೂಪಿಸಿದರು. ೨೦ನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಮೀಸಲು ಚುನಾವಣೆ ಕ್ಷೇತ್ರಗಳು ಮತ್ತು ಅಲ್ಪಸಂಖ್ಯಾತರಿಗೆ ಮೀಸಲಾತಿ ಬರುವಾಗಲೇ ಮಹಿಳಾ ಮೀಸಲಾತಿ ವಿಷಯವೂ ತಲೆ ಎತ್ತಿತ್ತು. ೧೯೫೭ರಲ್ಲಿ ಮಹಿಳೆಯರನ್ನು ಪಂಚಾಯಿತಿಗೆ ನಾಮಕರಣ ಮಾಡುವ ಪ್ರಸ್ತಾಪ ಬಂದಿತು. ೧೯೭೪ರಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಶೇ. ೩೦% ಮೀಸಲಾತಿ ನೀಡುವ ಶಿಫಾರಸ್ಸು ಬಂದಿತು. ೧೯೯೧ರ ನಂತರ ಪಂಚಾಯಿತಿ ಮೀಸಲಾತಿಯ ಮೂಲಕ ಒಂದು ಮಿಲಿಯನ್ ಮಹಿಳೆಯರು ರಾಜಕೀಯಕ್ಕೆ ಬರುವಂತಾಯಿತು. ಈ ಎಲ್ಲ ಚಾರಿತ್ರಿಕ ಶಿಫಾರಸ್ಸು, ಬದಲಾವಣೆಗಳ ಹಿನ್ನೆಲೆಯಲ್ಲಿ ಶಾಸನ ಸಭೆಗಳಲ್ಲಿ ೩೩% ಶೇ. ಮೀಸಲಾತಿ ಇರಬೇಕು ಎಂಬ ಚಿಂತನೆಯೂ ಬಂದಿತು. ಈ ಕುರಿತ ಪರ ವಿರೋಧಗಳು ಚರ್ಚೆ ನಡೆಯುತ್ತಲೇ ಇದೆ. ರಾಜಕಾರಣಿಗಳ 'ಮಹಿಳಾ ಪರತೆ'ಯ ಬಣ್ಣವೂ ಬಯಲಾಗಿದೆ. ಒಂದೇ ಸಲಕ್ಕೆ ೧೮೧ ಜನರ ಕೈಗೆ ಅಧಿಕಾರ ಸಿಕ್ಕು ತಾವು ಅಧಿಕಾರ ವಂಚಿತರಾಗುತ್ತೇವೆ ಎಂಬ ಭಯ ಪುರುಷಶಾಹಿಯಲ್ಲಿ ಮನೆ ಮಾಡಿಕೊಂಡಿದೆ."[1] (ಇದರ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ). ಮೀಸಲಾತಿಯಂತಹ ಉದಾತ್ತ ಚಿಂತನೆಯ ಫಲವಾಗಿ ಸಾಮುದಾಯಿಕ ಬದುಕಿನಲ್ಲಿ ನಿಕೃಷ್ಟವಾಗಿ ಜೀವನ ಸಾಗಿಸುತ್ತಿರುವ ದಲಿತ ಮಹಿಳೆಗೆ ಒಂದು ರಾಜಕೀಯ ವೇದಿಕೆ ಸಿಕ್ಕಂತಾಯಿತು. ಭಾರತ ಸಂವಿಧಾನದ ರಚನೆಯಾಗುವಾಗ ಅನುಚ್ಛೇದ ೧೫(೩)ರಲ್ಲಿ ಮಹಿಳಾ ಪರ ಉಪಬಂಧಗಳನ್ನು ಸೇರಿಸಲಾಗಿದೆ. ಈ ನಿಟ್ಟಿನಲ್ಲಿ ವಿಧಾನಸಭೆ, ಲೋಕಸಭೆಗಳಿಗೆ ಮಹಿಳಾ ಮೀಸಲಾತಿ ವಿಧೇಯಕ ಅಸಾಂವಿಧಾನಿಕವಲ್ಲ. ಈ ವಿಧೇಯಕದಲ್ಲಿ ೪ ಅಂಶಗಳಿವೆ.

೧. ಸಂವಿಧಾನ ತಿದ್ದುಪಡಿ ಮಾಡುವ ಮೂಲಕ ವಿಧಾನಸಭೆ, ಲೋಕಸಭೆಗಳ ಒಟ್ಟು ಸ್ಥಾನಗಳಲ್ಲಿ ೩/೧ ಸ್ಥಾನವನ್ನು ಮಹಿಳೆಗೆ ಮೀಸಲಿಡುವುದು.

೨. ಈ ಮೀಸಲಾತಿಯೂ ಅನಿರ್ಧಿಷ್ಟ ಅವಧಿಯವರೆಗೂ ವಿಸ್ತರಿಸಿರುತ್ತದೆ.

೩. ಮಹಿಳಾ ಮೀಸಲು ಕ್ಷೇತ್ರಗಳನ್ನು ಚೀಟಿ ಎತ್ತುವ ಮೂಲಕ ನಿರ್ಧರಿಸಲಾಗುತ್ತದೆ. ಪ್ರತಿ ಚುನಾವಣೆಯಲ್ಲಿ ಮೀಸಲಾತಿ ಕ್ಷೇತ್ರಗಳನ್ನು ಬದಲಾಯಿಸುತ್ತದೆ.

೪. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಈಗಾಗಲೇ ಸಂವಿಧಾನದಲ್ಲಿ ಕಲ್ಪಿಸಿರುವ ರಾಜಕೀಯ ಮೀಸಲಾತಿಯಲ್ಲಿ ೩/೧ ಸ್ಥಾನವನ್ನು ಆ ಜಾತಿಯ ಪಂಗಡಗಳ ಮಹಿಳೆಗೆ ಮೀಸಲಿಡುವುದು.

ಹೀಗೆ ಮಹಿಳಾ ಪರವಾದ ಸಂವಿಧಾನದ ಉಪವ್ಯಂದಗಳು ಬೆಂಬಲವಾಗಿರುವುದನ್ನು ಗಮನಿಸಬಹುದು. ದಲಿತ ಮಹಿಳೆಯ ರಾಜಕೀಯ ಆರಂಭ ಇಲ್ಲಿಂದಲೆ ಶುರುವಾಯಿತು. ರಾಜಕಾರಣದಲ್ಲಿ ಮಹಿಳಾ ಸಹಭಾಗಿತ್ವಕ್ಕೆ ಸಂವಿಧಾನವೇ ಬೆಂಗಾವಲಾಗಿದೆ. ಇಷ್ಟೆ ಅಲ್ಲದೇ

* ಸಂವಿಧಾನದ ೩೩೦ನೆಯ ವಿಧಿಯ ಪ್ರಕಾರ ಪ.ಜಾ, ಪ.ಪಂ.ಗಳಿಗೆ ಲೋಕಸಭೆಗಳಲ್ಲಿ ಮೀಸಲಾತಿಯನ್ನು ನೀಡಲಾಗಿದೆ.
* ರಾಜ್ಯ ವಿಧಾನಸಭೆಯಲ್ಲಿ ೩೩೨ನೆಯ ವಿಧಿಯ ಪ್ರಕಾರ ಮೀಸಲಾತಿಯನ್ನು ನೀಡಲಾಗಿದೆ.
* ೩೩೪ನೆಯ ಕಲಂ ಪ್ರತಿ ೧೦ ವರ್ಷಗಳಿಗೊಮ್ಮೆ ಮೀಸಲಾತಿಯ ಮುಂದೂಡಿಕೆಯನ್ನು ಮುಂದುಡಲು, ಪರಿಷ್ಕರಿಸಲು ಅವಕಾಶ ಕಲ್ಪಿಸಲಾಗಿದೆ.
* ೨೩೪ನೆಯ ವಿಧಿಯ ಅನ್ವಯ ಗ್ರಾಮ ಪಂಚಾಯತಿ, ತಾಲ್ಲೂಕ ಪಂಚಾಯತಿ, ಜಿಲ್ಲಾ ಪಂಚಾಯತಿ, ನಗರಸಭೆ, ಪುರಸಭೆಗಳಲ್ಲಿ ಮೀಸಲಾತಿಯನ್ನು ನೀಡಲಾಗಿದೆ.

ಹೀಗೆ ಸಂವಿಧಾನದಡಿಯಲ್ಲಿಯೇ ರೂಪಿತವಾದ ಪರಿಚ್ಛೇಧಗಳ ಅನ್ವಯ ದಲಿತ ಮಹಿಳಾ ರಾಜಕೀಯ ಪ್ರಕ್ರಿಯೆ ಆರಂಭವಾಯಿತು. ಹಿಂದಿನಿಂದಲೂ ರಾಜಕೀಯ ಎಂಬ ಪರಿಭಾಷೆಯ ಅರಿವೇ ಇರದಿದ್ದ ದಲಿತ ಮಹಿಳಾ ಸಮುದಾಯಕ್ಕೆ ಒಂದು ಹೊಸ ಶಕೆಯನ್ನು ಒದಗಿಸಲಾಯಿತು. ಅಧಿಕಾರ ಪಡೆಯುವ ಅವಕಾಶ ಇದ್ದರೂ, ಅಧಿಕಾರದಿಂದ ವಂಚಿತವಾಗಿರುವ ದಲಿತ ಮಹಿಳೆಯನ್ನು ಅಧಿಕಾರದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು ಇಂದಿನ ತುರ್ತು ಹಾಗೂ ಅಗತ್ಯವಾಗಿದೆ. ಆ ಮೂಲಕ ಪ್ರಜಾಪ್ರಭುತ್ವವನ್ನು ವಿಸ್ತರಿಸಬೇಕು, ಸ್ಥಿರಗೊಳಿಸಬೇಕು, ಯಥಾರ್ಥಗೊಳಿಸಬೇಕು ಎಂಬ ಚಿಂತನೆಗಳ ಫಲವಾಗಿ ದಲಿತ ಮಹಿಳೆಗೆ ರಾಜಕೀಯ ಅಧಿಕಾರ ದತ್ತವಾಗಿದೆ. ತದನಂತರದಲ್ಲೇ ಪ್ರಜಾಪ್ರಭುತ್ವದ ಒಂದು ನೆಲೆಗಟ್ಟಿಗೆ ತಾತ್ಕಾಲಿಕ ಬೆಂಬಲ ಬಂದಂತಾಯಿತು.

ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳು ಗತಿಸಿದರೂ ದಲಿತ ಮಹಿಳಾ ರಾಜಕಾರಣದಲ್ಲಿ ಸ್ವಾತಂತ್ರ್ಯವೇ ಇಲ್ಲದಂತಾಗಿದೆ. ರಾಜಕೀಯದ ಅಧಿಕಾರ ಸಿಕ್ಕರೂ ಅದನ್ನು ತನ್ನ ಸ್ವಂತ ಇಚ್ಛೆಯಂತೆ ಸ್ವತಂತ್ರವಾಗಿ ನಿರ್ಭಯವಾಗಿ ಚಲಾಯಿಸಲು ಪಿತೃಪ್ರಧಾನ ಮೌಲ್ಯಗಳು ಸಾಮಾಜಿಕ ಅಂಶಗಳು ತೊಡಕಾಗಿ ಪರಿಣಮಿಸಿವೆ. ಪಾರಂಪರಿಕವಾಗಿ

ಅವಳನ್ನು ನಿರಂತರ ಶೋಷಣೆಗೆ ಗುರಿಮಾಡುತ್ತಲೇ ಬಂದಿರುವ ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಪುರೋಹಿತಶಾಹಿಗಳಂಥ ಸಾಮಾಜಿಕ ನಿಯಂತ್ರಕಗಳಿಂದಲೇ ಅವಳ ಸ್ಥಿತಿ ದುರ್ಬಲವಾಗಿದೆ. ಎಲ್ಲಿ ಅವಳಿಗೆ ಅಧಿಕಾರ ನೀಡಿದರೆ ತನಗೆ ಪ್ರಶ್ನೆ ಎದುರಿಸಬೇಕಾಗುವುದು. ಅವಳ ಮೇಲೆ ತನ್ನ ನಿಯಂತ್ರಣವು ತಪ್ಪುವುದು ಎಂಬ ಚಿಂತೆ, ವ್ಯವಸ್ಥೆಗೆ ನಿರಂತರವಾಗಿ ಕಾಡುತ್ತಲೇ ಇದೆ. ಆ ಕಾರಣದಿಂದಲೇ ಕುಟುಂಬ, ಸಮಾಜ, ಧರ್ಮಗಳು ಅವಳ ರಾಜಕಾರಣಕ್ಕೆ ಅನುಮತಿ ನೀಡಲು ಹಿಂದೇಟು ಹಾಕುತ್ತಿವೆ. ಮೀಸಲಾತಿಯ ಸಮರ್ಪಕ ಬಳಕೆಗೆ ಇವು ಅತ್ಯಂತ ತೊಡಕಾಗಿವೆ.

ರಾಜಕೀಯವಾಗಿ ದಲಿತರು ಒಪ್ಪಿತ ಮೀಸಲಾತಿ ಮೀಸಲು ಕ್ಷೇತ್ರದಲ್ಲಿ ಮಾತ್ರ ಆಯ್ಕೆಗೊಳ್ಳುವ ಸ್ಥಿತಿ ಇದೆ. ಸಂವಿಧಾನಬದ್ಧವಾದ ಮೀಸಲಾತಿಯ ಪ್ರಶ್ನೆ, ಹಕ್ಕು ಈ ರೀತಿಯಾಗಿ ಪಾಲನೆಯಾಗುತ್ತಿವೆ. ಅಂದರೆ ದಲಿತರಿಗೆ ಸ್ವತಂತ್ರವಾಗಿ ಬೇರೆ ಸಾಮಾನ್ಯ ಕ್ಷೇತ್ರಗಳಿಂದ ಸ್ಪರ್ಧಿಸಲು ಅವಕಾಶ ಇಲ್ಲ ಎಂದಲ್ಲ. ಅವರಿಗೆ ಇರುವ ಪಾರಂಪರಿಕವಾದ ಸಾಮಾಜಿಕ ಭಯ ಅವರನ್ನು ತಡೆಯುತ್ತಿದೆ. ವಿವಿಧ ರಾಜಕೀಯ ಪಕ್ಷಗಳು ದಲಿತರ ಈ ಮೀಸಲಾತಿಯನ್ನು ದುರುಪಯೋಗಪಡಿಸಿಕೊಳ್ಳುತ್ತಿರುವುದು ಇಂದು ಸಾಮಾನ್ಯವಾಗಿದೆ. ರಾಜಕೀಯ ಮೀಸಲಾತಿಯೂ ಉಳ್ಳವರ ಪರವಾಗಿ ದಲಿತ ಮಹಿಳಾ ಸಮುದಾಯಕ್ಕೆ ನೀಡಿರುವ ಅಧಿಕಾರವನ್ನು ಕಸಿದುಕೊಂಡಿದೆ.

ಮೀಸಲಾತಿ ಎಂಬ ಚಿಂತನೆಯೂ ಭಾರತದ ಪ್ರಜಾಪ್ರಭುತ್ವದಲ್ಲಿ ಇರದಿದ್ದರೆ ದಲಿತ ಮಹಿಳಾ ಪಾಡು ಅತ್ಯಂತ ಶೋಚನೀಯವಾಗಿರುತ್ತಿತ್ತು. ಆ ಸ್ವರೂಪದ ದಲಿತ ರಾಜಕಾರಣಕ್ಕೆ ಅಸ್ತಿತ್ವವೇ ಇರುತ್ತಿರಲಿಲ್ಲ. ಪರೋಕ್ಷವಾಗಿ ಆಗ ಧಾರ್ಮಿಕ ವ್ಯವಸ್ಥೆಯೇ ಈಡೀ ಸಮಾಜದ ಅಧಿಪತಿಯಾಗುತ್ತಿತ್ತಲ್ಲದೆ ಹಿಂದಿನಂತೆಯೇ ದಲಿತರ ಸ್ಥಿತಿ ಮುಂದುವರೆಯುತ್ತಿತ್ತು. ಧರ್ಮ ತನಗೆ ಒದಗಿಬಂದಿರುವ ಧಾರ್ಮಿಕ ಚಟುವಟಿಕೆಗಳ ಕಡೆ ಗಮನ ನೀಡದೆ ಪ್ರಜಾಪ್ರಭುತ್ವದ ಅಡಿಪಾಯಕ್ಕೆ ಕಂಟಕವಾಗುತ್ತಿರುವುದು ತುಂಬ ಅಸಹನೀಯವಾದದ್ದು. ಹೀಗಾಗಿ ರಾಜಕಾರಣಿಗಳು ಸಾಮಾಜಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸುವಂತಾಗಿದೆ. ಅಲ್ಲದೆ ಈ ಬಗೆಯ ಆಡಳಿತಗಾರರಿಗೆ ಧರ್ಮಗಳ ಬೆಂಬಲವೂ ಇರುವುದರಿಂದ ಶೋಷಕ ಪ್ರವೃತ್ತಿ ಅವರಲ್ಲಿ ಅಧಿಕವಾಗಿ ಮನೆ ಮಾಡಿಕೊಂಡಿರುತ್ತದೆ.

ಮೀಸಲಾತಿಯಂತಹ ಚಿಂತನೆಯ ವಿಫಲತೆಗೆ ದಲಿತ ಮಹಿಳಾ ಪ್ರಶ್ನೆಯೇ ಅತ್ಯಂತ ಕಂಟಕಪ್ರಾಯವಾಗಿರುವುದು ಮಹಿಳೆಯನ್ನು ಮಹಿಳೆಯ ವಿರುದ್ಧ ಎತ್ತಿ ಕಟ್ಟುವ ವ್ಯವಸ್ಥಿತ ಪಿತೃಪ್ರಧಾನತೆಯ ಒಳಸಂಚು. ಮೀಸಲಾತಿಯ ವಿರೋಧಿಗಳು ಮಹಿಳಾ ಮೀಸಲಾತಿಯಲ್ಲಿ ದಲಿತ ಮಹಿಳೆಗೂ ಪಾಡು ಎಂಬ ಹಠ ಹಿಡಿದಿದ್ದಾರೆ. ವಾಸ್ತವವಾಗಿ ದಲಿತ ಮಹಿಳೆಯ ಬಗ್ಗೆ ಇಷ್ಟೊಂದು ಸಕಾರಾತ್ಮಕವಾಗಿ ಮಾತನಾಡುವ ಪುರುಷರು ಎಷ್ಟರ ಮಟ್ಟಿಗೆ ಅವಳಿಗೆ ತಮ್ಮ ರಾಜಕೀಯ ಪಕ್ಷಗಳಲ್ಲಿ ಅವಕಾಶವನ್ನು ನೀಡಿದ್ದಾರೆಂದು ಪ್ರಶ್ನಿಸಿದರೆ ತಲೆ ತಗ್ಗಿಸದೆ ಅವರಿಗೆ ವಿಧಿಯಿಲ್ಲ. ಸ್ವತಃ ದಲಿತ ಪುರುಷರೇ ದಲಿತ ಮಹಿಳೆಗೆ ಮೀಸಲಾತಿಯಲ್ಲಿ ಪಾಲನ್ನು ಕೇಳದಿರುವುದನ್ನು ಗಮನಿಸಿದರೆ ಇದರ ಹಿಂದಿರುವಂತ ರಾಜಕೀಯ ಅರ್ಥವಾಗುತ್ತದೆ. ದಲಿತ ಮಹಿಳಾ ಪರವಾಗಿರುವಂತಹ ಅವರ ಕಾಳಜಿಯೂ ಇಲ್ಲಿ ಏಕೆ ವ್ಯಕ್ತವಾಗುತ್ತಿಲ್ಲ? ಇಂತಹ ಇನ್ನೆಷ್ಟು ಸಮಸ್ಯೆಗಳಲ್ಲಿ ಮಹಿಳೆಯನ್ನು ಸಮಸಮವಾಗಿ ತನ್ನೊಂದಿಗೆ ನಡೆಸಿಕೊಂಡು ಜಾತಿ, ವರ್ಗ, ಧೋರಣೆಗಳು ಎಷ್ಟರ ಮಟ್ಟಿಗೆ ಸಾಗಿವೆ. ಜಾತಿಯಾಧಾರಿತವಾಗಿ ಮೀಸಲಾತಿಯನ್ನು ನೀಡಬೇಕು ಎಂಬ

ವಿಚಾರ ಎಲ್ಲೆಡೆಯೂ ಕೇಳಿಬರುತ್ತಿದೆ. ವಾಸ್ತವವಾಗಿ ಮೀಸಲಾತಿಯ ಉದ್ದೇಶವೇ ಜಾತಿಯಾಗಿದೆ. ಮೀಸಲಾತಿಯಲ್ಲಿ ಕೇವಲ ಶೈಕ್ಷಣಿಕ, ಆರ್ಥಿಕ, ರಾಜಕೀಯ ಅಂಶಗಳಲ್ಲಿ ಹಿಂದುಳಿದಿರುವ ವರ್ಗಗಳಿಗೆ ಮಾತ್ರ ಅವಕಾಶ ಕೊಡಲಾಗಿದೆ. ಪ.ಜಾ. ಪ.ವ. ಹಾಗೂ ಇತರೆ ಹಿಂದುಳಿದ ಸಮುದಾಯಗಳಿಗೆ ನೀಡಲಾಗಿರುವ ಮೀಸಲಾತಿಯೂ ಜಾತಿಯಾಧಾರಿತವಾಗಿದ್ದು, ಸಂವಿಧಾನವು ಜಾತಿಯನ್ನು ಸಂಪೂರ್ಣವಾಗಿ ಮಾನ್ಯ ಮಾಡಿದೆ (ಪ.ಜಾ, ಪ.ವ.ಗಳಿಗೆ ಸಿಗುವಂತಹ ಇಂತಹ ಸಂವಿಧಾನಿಕ ಮೀಸಲಾತಿಯೂ ಅಂಚಿನ ಜಾತಿಗಳನ್ನು ಬಲಪಡಿಸಿದೆ. ಇಂದು ದಲಿತರು ಎಚ್ಚರಿಕೆಯಿಂದ ಗಮನಿಸಬೇಕಾದ ಒಂದು ಶಕ್ತಿಯಾಗಿದ್ದಾರೆ. ಈ ಅಧಿಕಾರ ಎಂಬುದು ಅವರ ಜಾತಿಯ ಬಲದಿಂದ ಬಂದಿರುವಂತಹದ್ದು'''' (ರಾಜಶೇಖರ ವಿ.ಟಿ. ೨೦೦೫). ಇಂತಹ ಹಾರಿಕೆಯ ಬೆಂಬಲಿಸುವ ಮಾತುಗಳು ಹಲವು ಕಡೆಯಲ್ಲಿ ಕೇಳಿಬರುತ್ತಿವೆಯಾದರೂ ದಲಿತ ಮಹಿಳಾ ಬದುಕಿನಲ್ಲಿ ಮಾತ್ರ ದೂರವೇ ಉಳಿದಿವೆ. ಪ್ರಸ್ತುತ ದಲಿತ ಮಹಿಳಾ ಬದುಕಿನಲ್ಲಿ ಇದಕ್ಕಿಂತ ಭಿನ್ನವಾದ ಪಾತ್ರ ನಿರ್ವಹಣೆ ರಾಜಕೀಯ ರಂಗದಲ್ಲಿದೆ. ಜಾತಿಯಾಧಾರಿತವಾದಂತಹ ಭಾರತದಲ್ಲಿ ಇಂದಿಗೂ ಮೇಲುವರ್ಗಗಳು ದಲಿತರ ಬಗ್ಗೆ ಹಿಂದೆ ಯಾವ ಬಗೆಯ ಚಿಂತನೆಗಳನ್ನು ಹೊಂದಿದ್ದರೊ ಇಂದಿಗೂ ಅವುಗಳನ್ನೇ ಮುಂದುವರೆಸಿದ್ದಾರೆ. ಮೇಲ್ನೋಟಕ್ಕೆ ಅವುಗಳ ಸ್ವರೂಪ ಬದಲಾಗಿರಬಹುದು. ಆದರೆ ಅಂತರಾಳದಲ್ಲಿ ಮಾತ್ರ ಅವೇ ಚಿಂತನೆಗಳು ಮುಂದುವರೆದಿವೆ. ದಲಿತ ಮಹಿಳಾ ರಾಜಕಾರಣದಲ್ಲಿ ಈ ಕಾರಣದಿಂದಲೆ ಅವಳು ಹಲವಾರು ಬಿಕ್ಕಟ್ಟುಗಳನ್ನು, ಸಮಸ್ಯೆಗಳನ್ನು ಎದುರಿಸುತ್ತಿದ್ದಳಲ್ಲದೆ ಅಧಿಕಾರವನ್ನು ಚಲಾಯಿಸುವಿಕೆಯಲ್ಲಿ ಹಿಂಜರಿಯುತ್ತಿದ್ದಾಳೆ. ತನಗೆ ಸಿಕ್ಕಿರುವ ಸಂವಿಧಾನದತ್ತವಾದ ರಾಜಕೀಯ ಅಧಿಕಾರವನ್ನು ತನ್ನ ಸ್ವಂತನಿರ್ಧಾರ ತೆಗೆದುಕೊಳ್ಳುವ, ನಿರ್ಭಯವಾಗಿ ಮಾತನಾಡುವಲ್ಲಿ ತೊದಲುತ್ತಿದ್ದಾಳೆ. ಕಾರಣ ಎಂದರೆ ಪಾರಂಪರಿಕವಾಗಿ ಅವಳಲ್ಲಿ ನೆಲೆಯೂರಿರುವಂತಹ ಜಾತಿಯ ಭಯ. ಜಿಲ್ಲಾ ಪಂಚಾಯಿತಿ ಅಧ್ಯಕ್ಷೆಯಾಗಿ ದಲಿತ ಮಹಿಳೆ ಬಂದಾಗಲೂ ಅವಳು ಸ್ಥಾನವನ್ನು ಮಾತ್ರವೇ ಪಡೆಯುತ್ತಾಳೆ. ಕೆಲವು ಸಾರಿ ಅಧಿಕಾರವನ್ನು ಅವಳು ಪಡೆಯುವುದಿಲ್ಲ. ಇಂತಹ ವೈಚಿತ್ರ್ಯಗಳನ್ನು ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಸುಮಾರು ಕಡೆಗಳಲ್ಲಿ ಗಮನಿಸಿದ್ದೇನೆ.

**೨.೩ ಅಧ್ಯಯನದ ಮುಖ್ಯ ಪರಿಕಲ್ಪನೆಗಳು**

ಪ್ರಜಾಪ್ರಭುತ್ವವಾದಿ ರಾಷ್ಟ್ರ ಭಾರತದಲ್ಲಿ ಸಂವಿಧಾನ ನಿರ್ಮಾತೃಗಳು ದೇಶದಲ್ಲಿ ವಾಸಿಸುವ ಪ್ರತಿಯೊಬ್ಬರಿಗೂ ಮಾನವೀಯ ಹಾಗೂ ಜೀವಿಸುವ ಸಮಾನ ಅವಕಾಶಗಳನ್ನು ಪಡೆಯುವಂತಹ ಅವಕಾಶ ಹಾಗೂ ಹಕ್ಕುಗಳನ್ನು ನೀಡಿದ್ದಾರೆ. ಆಂಗ್ಲರ ಗುಲಾಮಗಿರಿಯಿಂದ ಬಿಡುಗಡೆ ಹೊಂದಿ ಸ್ವತಂತ್ರವಾದ ಸಂವಿಧಾನವನ್ನು ಅಳವಡಿಸಿಕೊಂಡಿದ್ದೇವೆ. ಚುನಾವಣೆಯ ಮೂಲಕ ತಮ್ಮ ನೇತಾರರನ್ನು ತಾವೇ ಆರಿಸುವಂತಹ ಅಧಿಕಾರವನ್ನು ಪ್ರಜಾಪ್ರಭುತ್ವ ನಮಗೆ ನೀಡಿದೆ. ಎಂ.ಪಿ., ಎಂ.ಎಲ್.ಎ., ಮುಖ್ಯಮಂತ್ರಿ, ಪ್ರಧಾನಮಂತ್ರಿಯ ವರೆಗಿನ ಎಲ್ಲಾ ಅಧಿಕಾರಗಳು ನೇರ ಪ್ರತ್ಯಕ್ಷ ಮತದಾನದ ಮೂಲಕವೆ ಜಾರಿಯಾಗುತ್ತವೆ. ಭಾರತದಲ್ಲಿ ವಾಸಿಸುವ ಪ್ರತಿಯೊಬ್ಬರೂ ಸಮಾನರು, ಮೇಲು ಕೀಳು ಎಂಬ ವ್ಯವಸ್ಥೆಯ ವರ್ಗೀಕರಣ ಸಲ್ಲದು. ಹೀಗೆ ಉನ್ನತಾದರ್ಶಗಳನ್ನು ಹೊಂದಿರುವ ಪ್ರಜಾಪ್ರಭುತ್ವದಲ್ಲಿ ಭಾರತೀಯ ಸಮಾಜದಲ್ಲಿಯ ಕೆಳ ಸಮುದಾಯಗಳ ಸ್ಥಿತಿಯನ್ನು ಒಮ್ಮೆ ಅವಲೋಕಿಸಿದಾಗ ನಿಜವಾಗಲೂ ನಮಗೆ ಪ್ರಜಾಪ್ರಭುತ್ವ ಇದೆಯಾ ಎಂಬ ಪ್ರಶ್ನೆಯೂ ಬರದಿರದು. ನಿತ್ಯ ನಿರಂತರವಾಗಿ ಜಾತಿಯ

ಕಾರಣಕ್ಕೆ ಮೇಲು ವರ್ಗದವರಿಂದ ಶೋಷಣೆಯನ್ನು ಅನುಭವಿಸುತ್ತಿರುವ ದಲಿತ ಮಹಿಳೆಯ ಪಾಡನ್ನು ಕಂಡರೆ ಯಾರಿಗೆ ಬಂತು ಎಲ್ಲಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ ಎಂಬ ಮಾತು ನಿಜವೆನಿಸುತ್ತದೆ. ಏಕೆಂದರೆ ಜಾತಿಯ ಕಾರಣದಿಂದ ಇಂದಿಗೂ ದಲಿತ ಸಮುದಾಯ ನಾಗರಿಕ ಜೀವನದೊಂದಿಗೆ ಸಮನಾಗಿ ಬೆಳೆಯಲು ಸಾಧ್ಯವಾಗಿಲ್ಲ. ಇಲ್ಲಿ ಸರಕಾರದ ಕೆಲವು ದೋಷಗಳಿರಬಹುದು. ಅಂಚಿನ ಸಮುದಾಯದಲ್ಲಿ ಬದುಕುವ ದಲಿತರು ಇಂದಿಗೂ ಜೀತ, ಮಲಹೊರುವಿಕೆ, ಜಾಡಮಾಲಿ, ಊರಿನ ಸ್ವಚ್ಛತೆ ಕಾಪಾಡುವುದು, ಸತ್ತ ದನ ಸಾಗಿಸುವುದು, ಚಪ್ಪಲಿ ಹೊಲಿಯುವಂತಹ ಪಾರಂಪರಿಕ ಹೀನ ಕಾರ್ಯಗಳಲ್ಲಿಯೇ ಇದ್ದಾರೆ. ಆಳಿಸಿಕೊಳ್ಳಲೆಂದೇ ಹುಟ್ಟಿರುವ ಈ ಸಮುದಾಯದ ದಲಿತ ಮಹಿಳೆಯರನ್ನು ದೇವರ ಹೆಸರಿನಲ್ಲಿ ಬಸವಿ ಬಿಡುವ, ಓಕುಳಿಯಾಡುವ, ಬೆತ್ತಲೆ ಪೂಜೆಯಂತಹ ಅಮಾನವೀಯ ಕಾರ್ಯಗಳಿಗೆ ಬಲಿಯಾಗುತ್ತಿದ್ದಾರೆ.

ಭಾರತೀಯ ಸಾಮಾಜಿಕ ಜೀವನದಲ್ಲಿ ಜಾತಿ ವ್ಯವಸ್ಥೆಯೂ ದಲಿತ ಮಹಿಳೆಯ ಸಂದರ್ಭದಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಅಲ್ಲದೆ ಅಪಾರವಾದ ಹಾನಿಯನ್ನು ಉಂಟುಮಾಡುತ್ತದೆ. ಈ ಬಗೆಯ ಹಾನಿಯೂ ಏಕರೂಪಿಯಾಗಿವೆ. ಆದರೆ ಸಮಾನ ತೀವ್ರತೆ ಹೊಂದಿದ್ದು, ವ್ಯವಸ್ಥೆಗೆ ಒಳಗಾಗುವ ಹೆಣ್ಣು ವ್ಯವಸ್ಥೆಯ ಗಡಿಗಳನ್ನು ಮೀರುವ ಮೂಲಕ ಅಪವಿತ್ರಗಳೆನಿಸಿ ಅಸ್ಪೃಶ್ಯಳಾಗಿ ಬಿಡುತ್ತಾಳೆ. ಎಲ್ಲ ಬಗೆಯ ಸಾಮಾಜಿಕ ಹಲ್ಲೆಗಳಿಗೆ ಬಲಿಯಾಗುತ್ತಾಳೆ. ಹೀಗೆ ಪಿತೃ ಪ್ರಧಾನ ಚೌಕಟ್ಟಿನ ಒಳಗೆ ಇರುವ ಸ್ಥಿತಿಯಲ್ಲಿ ಕೆಳವರ್ಗದ ಸ್ತ್ರೀ ಜಾತಿಯ ಕಾರಣಕ್ಕೆ ಅವಮಾನ ಹಾಗೂ ಶೋಷಣೆಗಳಿಗೆ ಒಳಪಡುವಳು. ಈ ಸಮಾಜದಲ್ಲಿ ಮಹಿಳಾ ದೌರ್ಜನ್ಯಕ್ಕೆ ಒಳಗಾಗುವ ಪ್ರಾತಿನಿಧಿಕ ಸ್ಥಿತಿಗಳು ಇವು. ಅಸ್ಪೃಶ್ಯತೆಯ ಅಪವಿತ್ರತೆಯನ್ನು ಹುಟ್ಟಿ ಹಾಕುವ ಮೂಲಕ ಜಾತಿ ಶ್ರೇಣೀಕರಣದ ಎಲ್ಲ ತತ್ವಗಳು ಸ್ತ್ರೀಯನ್ನು ನಿರಂತರವಾಗಿ ಶೋಷಿಸುತ್ತಲೆ ಇರುತ್ತವೆ ಎಂಬುದನ್ನು ಈ ಗ್ರಹಿಕೆಯೂ ಪ್ರತಿಪಾದಿಸುತ್ತದೆ. ಭಾರತೀಯ ಸಮಾಜವು ಜಾತಿಯಾಧಾರಿತ ಪಿತೃಪ್ರಧಾನ ರಚನೆಯನ್ನು ಹೊಂದಿರುವುದರಿಂದ ಅಸ್ಪೃಶ್ಯತೆ ಮತ್ತು ಅಪವಿತ್ರಗಳು ಒಂದೇ ನಾಣ್ಯದ ಎರಡು ಮುಖಗಳಾಗಿ ನಿಲ್ಲುತ್ತವೆ" (ಎಂ. ಉಷಾ, ೨೩, ೨೦೦೫).

ಸಾಂಸ್ಕೃತಿಕ ದೃಷ್ಟಿಕೋನದಿಂದ ಜಾತಿಯನ್ನು ಮೌಲ್ಯಗಳು ಮತ್ತು ಭಾವನೆಗಳ ಒಂದು ವ್ಯವಸ್ಥೆ ಎಂದು ಪರಿಗಣಿಸಲಾಗಿದೆ. ಸಾಮಾಜಿಕ ವ್ಯವಸ್ಥೆಯ ಎಲ್ಲ ರಂಗಗಳಲ್ಲಿಯೂ ಬಲಿಷ್ಠವಾಗಿರುವ ಧರ್ಮಕ್ಕೆ ಅತ್ಯಂತ ಹೆಚ್ಚಿನ ಪ್ರಾಶಸ್ತ್ಯ ಮತ್ತು ಪ್ರಾಮುಖ್ಯತೆಯನ್ನು ಇಲ್ಲಿ ಕೊಡಲಾಗಿದೆ. ಜಾತಿಯ ಸಂರಚನೆಯ ವ್ಯವಸ್ಥೆಯಲ್ಲಿ ಧರ್ಮಶಾಸ್ತ್ರಗಳು, ಧಾರ್ಮಿಕ ವಿಚಾರಗಳಿಗೆ ಮೌಲ್ಯ ಅತ್ಯುನ್ನತ ಪ್ರಾಧಾನ್ಯತೆ ಕೊಡಲಾಗಿದೆ. ಈ ಬಗೆಯ ಧಾರ್ಮಿಕ ವಿಚಾರಗಳಿಗೆ ಮೌಲ್ಯಗಳೇ ಶುದ್ಧ, ಅಶುದ್ಧ, ಉಚ್ಚ, ನೀಚ ಎಂಬಂತಹ ಸಾಮಾಜಿಕ ವಿಘಟನಾ ಕ್ರಮಗಳನ್ನು ರೂಪಿಸಿದ್ದು ಆರ್ಥಿಕತೆಯ ವಿಷಯಗಳಿಗೆ ಬದಲಾಗಿ ಸಂಸ್ಕಾರ ಸಂಬಂಧಿತ ಆಧಾರಗಳ ಮೇಲೆ ಜಾತಿಗಳನ್ನು ಸಮಾಜದ ಒಂದು ಅಂಗವನ್ನಾಗಿಸಿ ಒಂದು ಮಾಡುವ ಬದಲು ವಿಚ್ಛಿದ್ರಗೊಳಿಸಲಾಯಿತು. ಇದೆಲ್ಲದಕ್ಕೂ ಸಮಾಜದಲ್ಲಿ ಆಳವಾಗಿ ಬೇರೂರಿರುವಂತಹ ಜಾತಿ ಪದ್ಧತಿ ಸಮಾಜದ ವ್ಯವಸ್ಥೆಯಲ್ಲಿ ಪಾತ್ರಗಳು ವ್ಯತಿರಿಕ್ತವಾಗುತ್ತಿರುವುದು ಈ ಕಾರಣದಿಂದಲೆ. ಜಾತಿ ಮತ್ತು ಲಿಂಗ ವ್ಯವಸ್ಥೆಯನ್ನು ಕುರಿತಂತೆ ಸ್ತ್ರೀವಾದಿಗಳು, ಸಮಾಜಶಾಸ್ತ್ರಜ್ಞರು ಸಾಕಷ್ಟು ಚಿಂತನೆ ನಡೆಸಿದ್ದಾರೆ. ಮಹಿಳಾ ಅಭ್ಯುದಯಕ್ಕಾಗಿಯೇ ಆರಂಭವಾಗಿರುವ ಮಹಿಳಾ

ಅಧ್ಯಯನವು ಇಂತಹ ಜಾತಿಯಾಧಾರಿತವಾದ ಲಿಂಗವ್ಯವಸ್ಥೆಯಲ್ಲಿನ ಚಿಂತನೆಗಳನ್ನು ಮಹಿಳೆಯರ ಸಿದ್ಧ ಮಾದರಿಯ ಪಾತ್ರಗಳನ್ನು ಅವರ ಸ್ಥಾನಮಾನಗಳನ್ನು ಪಾತ್ರ ನಿರೀಕ್ಷೆಗಳನ್ನು ಸಮರ್ಪಕವಾಗಿ ಅಧ್ಯಯನ ಮಾಡುತ್ತಿದೆ.

ಪ್ರಾಚೀನ ಭಾರತದ ಜಾತಿ ವ್ಯವಸ್ಥೆಯಲ್ಲಿ ಹಿಂದೆ ಸರಿದರೂ ಮಹಿಳೆಯರು ಎಲ್ಲ ಜಾತಿ, ವರ್ಗಗಳಲ್ಲಿ ಅವಳ ಯಜಮಾನ ಅಥವಾ ಪುರುಷನಿಗೆ ಸೇವೆಯನ್ನು ಸಲ್ಲಿಸುತ್ತಲೇ ಬಂದಿರುವುದು ಸರ್ವವಿದಿತ. ಉನ್ನತ ಜಾತಿಯ ಸ್ತ್ರೀಯರು ಅವರ ಪುರುಷರಿಗೆ ಹಾಗೂ ಉನ್ನತ ಜಾತಿಯವರಿಗೆ ಮಾತ್ರ ಸೇವೆಯನ್ನು ಒದಗಿಸುತ್ತಿದ್ದರು. ಇದೇ ಮುಂದೆ ಸ್ತ್ರೀ ಪುರುಷ ಸಮಾನವಾದ ಎರಡು ಜಾತಿಯಿಂದ ಮೇಲು ಕೀಳು ವರ್ಣಗಳಿಗೆ ಕಾರಣವಾಯಿತು.[೬] ಮಹಿಳೆಯನ್ನು ಎಲ್ಲ ಜಾತಿಯ ಎಲ್ಲ ವರ್ಗದ ಪುರುಷಕೇಂದ್ರಿತ ವ್ಯವಸ್ಥೆಯೂ ದ್ವಿತೀಯ ಅಥವಾ ಕೆಳದರ್ಜೆಯಲ್ಲಿಟ್ಟು ತನ್ನ ಅಧಿಕಾರದ ನಿಯಂತ್ರಣ ಹೇರಿ ಅದನ್ನು ಕೈವಶ ಮಾಡಿಕೊಂಡಿತು.

ಸ್ತ್ರೀಯರ ಚೈತನ್ಯ ಹಾಗೂ ಉತ್ಸಾಹ ಹಿಂದಿನ ಸಮಾಜದಲ್ಲಿ ಕೆಳಗೆ ಇಳಿಯಲು ಪ್ರಮುಖ ಕಾರಣ ಎಂದರೆ ಜಾತಿ ಮತ್ತು ಸ್ತ್ರೀಯನ್ನು ಪ್ರತ್ಯೇಕವಾಗಿಟ್ಟು ವಿಶ್ಲೇಷಿಸುವ ಮನೋಭಾವದಿಂದ ಸಮಾಜದಲ್ಲಿ ಆಗ ತಾನೆ ಆರಂಭವಾಗಿದ್ದ ಲಿಂಗ ವಿಭಜನಾ ವ್ಯವಸ್ಥೆಯ ಕರಾಳತೆಯು ಇಲ್ಲಿಯೂ ಸೇರಿಕೊಂಡಿತು. ಲಿಂಗ ವ್ಯವಸ್ಥೆ ಆರಂಭ ಕಾಲದಿಂದಲೂ ಮನುಯೋಜಿತ ವಿಚಾರಗಳಿಂದ ಅತ್ಯಂತ ಪ್ರಭಾವಶಾಲಿಯಾಗಿ ಸಮಾಜದಲ್ಲಿ ತನ್ನ ನೆಲೆಯನ್ನು ಕಂಡುಕೊಂಡಿತು. ಸಮಾಜದ ಎಲ್ಲ ರಂಗಗಳ ಮೇಲೂ ಧಾರ್ಮಿಕ ವಿಧಿಶಾಸ್ತ್ರಗಳನ್ನು ರೂಪಿಸಿದ ಮನು ಸ್ತ್ರೀಯನ್ನು ಒಂದು ಕಡೆಯಲ್ಲಿ ಅವಳನ್ನು ಹೊಗಳಿ ಇನ್ನೊಂದು ಕಡೆಯಲ್ಲಿ ಅವಳ ಸ್ತ್ರೀತ್ವವನ್ನೇ ನಾಶ ಮಾಡುವಂತ ಕಾರ್ಯ ಮಾಡಿದ್ದಾನೆ. ಸಮಾಜದಲ್ಲಿ ಪುರುಷನಿಗೆ ಅಧಿಕ ಬೆಂಬಲ ನೀಡಿ ಅವನ ಸುಪರ್ದಿಗೆ ಸಾಮಾಜದ ಎಲ್ಲ ರಂಗಗಳ ಅಧಿಕಾರ ನೀಡಿ ಸ್ತ್ರೀಯನ್ನು ಅವನ ಅಡಿಯಾಳಾಗಿ ಮಾಡಿದನು. ಗಂಡು ಹೆಣ್ಣಿನ ಬಗ್ಗೆ ಇರುವ ಲಿಂಗವ್ಯವಸ್ಥೆಯ ಚಿಂತನೆಗಳು ಪುರುಷನನ್ನು ಶ್ರೇಷ್ಠ, ಸಾಹಸ, ಧೈರ್ಯ, ಶೌರ್ಯಗಳಿಗೆ ಹೋಲಿಸಿ ಹೆಣ್ಣನ್ನು ಕನಿಷ್ಠ ನೆಲೆಯಲ್ಲಿ ಮೂಲೆಗುಂಪು ಮಾಡಿದ. ಸ್ತ್ರೀಯನ್ನು ಹತ್ತಿಕ್ಕಲು ಪುರುಷನ ಹತ್ತಿರ ಅಥವಾ ಅವನ ಸರಿಸಮನಾಗಿ ಬೆಳೆಯಲು ಬಾರದಂತೆ ವ್ಯವಸ್ಥಿತವಾಗಿ ಹತ್ತಿಕ್ಕಲಾಯಿತು. ನೈಸರ್ಗಿಕವಾಗಿ ಅವಳಿಗೆ ದತ್ತವಾಗಿರುವ ಗರ್ಭ ಧರಿಸುವಿಕೆ ಮತ್ತು ಮಕ್ಕಳನ್ನು ಹೆರುವಂತಹ ಪವಿತ್ರಕಾರ್ಯಗಳಿಗೆ ಅಪವಿತ್ರ ಎಂಬ ನೆಲೆಗಟ್ಟನ್ನು ರೂಪಿಸಿ ಅವಳನ್ನು ಅಸ್ಪೃಶ್ಯಳನ್ನಾಗಿ ಮಾಡಲಾಯಿತು. ಇದನ್ನೇ ಮಹಿಳಾ ಅಧ್ಯಯನ ಪ್ರಶ್ನಿಸುತ್ತದೆ. ಪ್ರಕೃತಿ ಸಹಜವಾಗಿ ನಡೆಯುವ ಸ್ತ್ರೀತ್ವದ ಇಂತಹ ಚಟುವಟಿಕೆಗಳನ್ನು ಮಡಿಮೈಲಿಗೆಯ ಸ್ಪರ್ಶ ನೀಡಿ ಅವಳನ್ನು ದೂರ ಇರಿಸುವುದು ಸಹ ಇದರಲ್ಲಿ ಅಡಕವಾಗಿದೆ. ಗಂಡು ಹುಟ್ಟಿದ ಮನೆಯಲ್ಲಿ ಜೋರಾಗಿ ತಮಟೆ ಬಡಿಯುವುದರ ಮೂಲಕ ಅವನನ್ನು ಶ್ರೇಷ್ಠ ಎಂಬಂತೆ ಪ್ರತಿಬಿಂಬಿಸಲಾಗುವುದು. ಅದೇ ರೀತಿ ಹೆಣ್ಣು ಜನಿಸಿದರೆ ಸಪ್ಪೆಯಾದ ಪ್ರತಿಕ್ರಿಯೆ ಕುಟುಂಬದಲ್ಲೆಲ್ಲಾ ಆವರಿಸಿರುತ್ತದೆ. ಅಲ್ಲದೆ ಬುಟ್ಟಿಯನ್ನು ಬಾರಿಸುವುದು ಸಹ ಮಹಿಳೆಯನ್ನು ಅಸ್ಥಿರದ ಸಂಕೇತ ಎಂಬಂತೆ ಕಾಣಲಾಗುತ್ತದೆ. ಹೀಗೆ ಸ್ತ್ರೀಪುರುಷರ ಹುಟ್ಟಿನಿಂದಲೇ ಬರುವಂತಹ ಈ ಬಗೆಯ ಲಿಂಗ ರಾಜಕಾರಣ ಅಥವಾ ಲಿಂಗ ವ್ಯವಸ್ಥೆಯ ಪಕ್ಷಪಾತ ಅವರ ಜೀವನವುದ್ದಕ್ಕೂ ನಿರಂತರವಾಗಿ ಅವರ ಬೆಂಬಿಡದೆ ನೆರಳಿನಂತೆ ಸುತ್ತುವರೆಯುತ್ತಿರುತ್ತವೆ. ಪುರುಷನ ಬೆಂಗಾವಲಾಗಿ ಮಹಿಳೆಯು ಪೋಷಕಳಾಗಿ ಸದಾ ಅವನ ನೆರಳಿನಂತೆ ಇರುತ್ತಾಳೆ. ಕುಟುಂಬ ಬಾಳ್ವದಲ್ಲಿ ಹುಡುಗನಿಗೆ

ಬೆಳೆಸುವ ರೀತಿ ಹುಡುಗಿಯನ್ನು ಬೆಳೆಸುವ ರೀತಿ ಅತ್ಯಂತ ವೈಪರೀತ್ಯದಿಂದ ಕೂಡಿದೆ. ಹುಡುಗನಿಗೆ ವೀರ, ಶೂರ, ಸಾಹಸ ಕಥೆಗಳನ್ನು ತಿಳಿಸಿಕೊಟ್ಟರೆ, ಹುಡುಗಿಯನ್ನು ಮನೆಯ ಸ್ವಚ್ಛತೆ, ಗೃಹಾಲಂಕಾರ, ಹಿರಿಯರ ಬಂಧುಗಳ ಹಿತರಕ್ಷಣೆಯಂತಹ ಚಿಂತನೆಗಳನ್ನು ಕಲಿಸಲಾಗುತ್ತದೆ. ಹೀಗೆ ಸ್ತ್ರೀ ಪುರುಷರಿಗೆ ಸಿಗುವಂತಹ ಈ ಬಗೆಯ ಕೌಟುಂಬಿಕ ಸಮಾಜೀಕರಣವು ಅವರಿಗೆ ಜೀವನದುದ್ದಕ್ಕೂ ಯಾರು ಯಾವ ಕಾರ್ಯ ಮಾಡಬೇಕು, ಯಾವುದನ್ನು ಯಾರು ಮಾಡಬಾರದು ಎಂಬ ನಿಲುವುಗಳು ಇದರಿಂದಲೆ ರೂಪಿತವಾಗುತ್ತವೆ. ಉನ್ನತ ಶಿಕ್ಷಣ ಅಥವಾ ಪದವಿ ಶಿಕ್ಷಣದಲ್ಲಿಯೂ ಈ ಬಗೆಯ ತಾರತಮ್ಯ ನೀತಿಯನ್ನು ನಾವು ಕಾಣಬಹುದು. 'ಕೊಟ್ಟ ಮನೆಗೆ ಹೋಗುವವಳು' ಅವಳಿಗೇಕೆ ಶಿಕ್ಷಣ ಎಂಬ ತಾತ್ಸಾರ ತಂದೆ ತಾಯಿಗಳಲ್ಲಿರುತ್ತದೆ. ಶಿಕ್ಷಣದಲ್ಲಿ ಮೀಸಲಾತಿಯನ್ನು ನೀಡಲಾಗಿದ್ದರೂ ಸ್ತ್ರೀಯರು ಅಲ್ಲಿಯೂ ದಾಖಲಾತಿಯಾಗಲೂ ಪಿತೃಪ್ರಧಾನ ವ್ಯವಸ್ಥೆ, ಸಮಾಜ, ಕುಟುಂಬ ಬಿಡುತ್ತಿಲ್ಲ. ಇಂತಹ ವೈರುಧ್ಯಗಳು ಸಾಮಾಜಿಕ ಜೀವನದ ಪ್ರತಿಯೊಂದು ರಂಗಗಳಲ್ಲಿಯೂ ಮಹಿಳಾ ವಿರೋಧಿಯಾದಂತಹ ಅವೈಚಾರಿಕ, ಅನಿಷ್ಟ ನಿಲುವುಗಳು ಅನೇಕ ಇವೆ. ಇವುಗಳಿಗೆಲ್ಲ ಪ್ರಮುಖ ಕಾರಣ ಎಂದರೆ ಸಾಮಾಜಿಕ ಜೀವನದಲ್ಲಿ ಆಳವಾಗಿ ಬೇರುಬಿಟ್ಟಿರುವ ಪಿತೃಪ್ರಧಾನ ಮೌಲ್ಯಗಳು ಇನ್ನೂ ಜೀವಂತವಾಗಿರುವುದು ಎಂದು ಮಹಿಳಾ ಅಧ್ಯಯನ ಗುರುತಿಸುತ್ತದೆ. ಸ್ತ್ರೀ ಪುರುಷರ ನಡುವಿನ ಎಲ್ಲ ಬಗೆಯ ಲಿಂಗ ಅಸಮಾನತೆಗಳಿಗೆ ಆದಿಮ ಕಾಲಘಟ್ಟದಿಂದಲೂ ಇದೇ ರೀತಿಯ ವಿಚಾರ ಲಹರಿ ಸಮಾಜದಲ್ಲಿದೆ. ಈ ಲಿಂಗ ಅಸಮಾನತೆ ಅಥವಾ ಲಿಂಗ ವ್ಯವಸ್ಥೆಯ ರಾಜಕಾರಣವು ಅತ್ಯಂತ ಪ್ರಾಚೀನವೂ, ಸಾರ್ವತ್ರಿಕವೂ ಆಗಿದೆ. ಪುರುಷಪ್ರಧಾನತೆಯನ್ನು ಮೊದಲಿಗೆ ಪಿತೃ ಪ್ರಧಾನತೆ ಎಂದು ಕರೆಯಲಾಗುತ್ತಿತ್ತು. ಪಿತೃಪ್ರಧಾನತೆ ಎಂಬುದು ತಂದೆಯ ಅಥವಾ ಪ್ರಜಾಪ್ರಭುತ್ವ ಅರ್ಥವನ್ನು ಕೊಡುತ್ತದೆ. ಹೆಂಗಸರು, ಕಿರಿಯರು, ಮಕ್ಕಳು, ಗುಲಾಮರು, ಮನೆಯ ಕೆಲಸದವರನ್ನು ಒಳಗೊಂಡಂತೆ ಪುರುಷನೊಬ್ಬನ ಅಧೀನದಲ್ಲಿರುವ ವ್ಯವಸ್ಥೆಯನ್ನು ಪಿತೃಪ್ರಧಾನತೆ ಎಂದು ಕರೆಯಲಾಯಿತು. ಆದರೆ ಇದು ಕುಟುಂಬಕ್ಕೆ ಮಾತ್ರವೇ ಸೀಮಿತವಾಗಿರದೆ ಇಡೀ ಸಮಾಜದಲ್ಲಿ ವಿವಿಧ ರೂಪ, ಸ್ತರ ಹಾಗೂ ಆಯಾಮಗಳಲ್ಲಿ ಹರಡಿಕೊಂಡು ವಿಶಾಲಾರ್ಥವನ್ನು ಹೊಂದಿರುವುದರಿಂದ 'ಪುರುಷ ಪ್ರಧಾನ' ಎಂಬ ಪದದ ಬಳಕೆಯೂ ಆರಂಭವಾಯಿತು. ಈಗ ಅದನ್ನು ಪುರುಷ ಪ್ರಾಬಲ್ಯ, ಪುರುಷ ಮಹಿಳೆಯ ಮೇಲೆ ಹಿರಿತನ ಸಾಧಿಸುವ ಸಲುವಾಗಿ ಇವನ ಅಧಿಕಾರ ಸಂಬಂಧಗಳು ಮತ್ತು ಸ್ತ್ರೀಯನ್ನು ಬಹು ಬಗೆಯಲ್ಲಿ ದಬ್ಬಾಳಿಕೆಗೆ ಒಳಪಡಿಸುವ ವ್ಯವಸ್ಥೆಯನ್ನು ವಿವರಿಸಲು ಬಳಸಲಾಗುತ್ತಿದೆ. ಪುರುಷರಿಂದ ಪುರುಷರಿಗೋಸ್ಕರ, ಪುರುಷರೇ ರೂಪಿಸಿದ ಸಾಮಾಜಿಕ ವ್ಯವಸ್ಥೆ. ಇದು ದೇಶ, ರಾಜ್ಯ, ಧರ್ಮ, ಜಾತಿ, ಜನಾಂಗ ಮತ್ತು ಕುಲಾತೀತವಾಗಿ ಹಬ್ಬಿರುವ ಈ ಪುರುಷ ಪ್ರಧಾನತೆಯೂ ಮಹಿಳೆಯ ಪರಾಧೀನ ಸ್ಥಿತಿಗೆ ಕಾರಣವಾಯಿತು"[೮]

ಪಿತೃಪ್ರಧಾನತೆಯ ಕೂಪದಲ್ಲಿ ಬಿದ್ದಿರುವ ನಮ್ಮ ಸಾಮಾಜಿಕ ವ್ಯವಸ್ಥೆ ಇಂದಿಗೂ ಅದರಿಂದ ಹೊರಬಂದಿಲ್ಲ. ಮಹಿಳಾ ಸ್ಥಿತಿ ಸುಧಾರಣೆಯ ಸಲುವಾಗಿ ಸರಕಾರ ಹಲವಾರು ಯೋಜನೆಗಳನ್ನು ಹಾಕಿಕೊಂಡು ಅವಳ ಸಬಲೀಕರಣಕ್ಕೆ ಕಂಕಣಬದ್ಧವಾಗಿದ್ದರೂ, ಸಮಾಜದಲ್ಲಿರುವ ಮಹಿಳಾ ವಿರೋಧಿ ಸಾಂಪ್ರದಾಯಿಕ ಮನಸ್ಸುಗಳು ಬದಲಾದರೆ ಮಾತ್ರ ಅವಳ ಸ್ಥಿತಿಯಲ್ಲಿ ಬದಲಾವಣೆ ತರಲು ಸಾಧ್ಯ. ಲಿಂಗಾಧಾರಿತ ಪಾತ್ರಗಳ ನಿರ್ವಹಣೆ, ಶ್ರಮ ವಿಭಜನೆಯಲ್ಲಿ,

ಲಿಂಗಾಧಾರಿತವಾದ ಕೂಲಿಯ ವಿಭಜನೆ, ಮುಂತಾದ ತಾರತಮ್ಯದ ನೀತಿಗಳು ಸಮಾಜದ ಎಲ್ಲ ರಂಗಗಳಲ್ಲಿಯೂ ವ್ಯಾಪಿಸಿಕೊಂಡಿವೆ. ಅದರಲ್ಲಿ ರಾಜಕೀಯ ರಂಗವೂ ಒಂದು ಸ್ತ್ರೀ ರಾಜಕಾರಣ ಸಬಲೀಕರಣದ ಸಲುವಾಗಿ ಭಾರತ ಸರಕಾರ ಸಂವಿಧಾನದ ೭೩,೭೪ನೇ ವಿಧಿಗಳ ತಿದ್ದುಪಡಿಯನ್ವಯ ಮಹಿಳೆಗೆ ಸ್ಥಳೀಯ ಸಂಸ್ಥೆಗಳಾದ ಪಂಚಾಯಿತಿಗಳಲ್ಲಿ ಅಧಿಕಾರದ ಅವಕಾಶ ನೀಡಿ ಅವರ ಸಾಂಪ್ರದಾಯಿಕ ಚಟುವಟಿಕೆಗಳಿಂದ ಹೊರಬರಲು ಅವಕಾಶ ಮಾಡಿಕೊಟ್ಟಿತು. ಮಹಿಳೆಗೆ ರಾಜಕೀಯ ಅಧಿಕಾರವೇನೋ ಸಿಕ್ಕಿತು. ಅವಳು ತಾನು ಪುರುಷನಿಗಿಂತ ಯಾವುದರಲ್ಲಿಯೂ ಕಡಿಮೆ ಇಲ್ಲ ಎಂಬಂತೆ ರಾಜಕೀಯ ರಂಗದಲ್ಲಿ ಹಲವಾರು ಕಾರ್ಯಗಳನ್ನು ಮೆಚ್ಚುವಂತೆ ಮಾಡಿ ತೋರಿಸಿಕೊಟ್ಟಳು. ಆದರೆ ಮಹಿಳಾ ರಾಜಕಾರಣದ ಕುರಿತಾಗಿ ಸಮಾಜದಲ್ಲಿ ಬೇರುಬಿಟ್ಟಿರುವ ಪಿತೃಪ್ರಧಾನ ಮೌಲ್ಯಗಳು ಹಾಗೂ ಜಾತಿಯ ಅವಳ ರಾಜಕೀಯ ಅಧಿಕಾರಕ್ಕೆ ಕಂಟಕಪ್ರಾಯವಾಗಿ ಅಧಿಕಾರವನ್ನು ನಿರಾಕರಿಸಿದ. ಮುಖ್ಯವಾಗಿ ಅಂಚಿನ ಸಮುದಾಯದಲ್ಲಿ ನಿರಂತರವಾಗಿ ಶೋಷಣೆ, ದೌರ್ಜನ್ಯ, ಕ್ರೌರ್ಯ ಹಿಂಸೆಗಳಿಗೆ ಸಿಲುಕಿ ಬದುಕುತ್ತಿರುವ ದಲಿತ ಮಹಿಳೆ ಮೀಸಲಾತಿಯಡಿಯಲ್ಲಿ ರಾಜಕೀಯ ಅಧಿಕಾರ ಪಡೆದಿದ್ದರೂ ಆಯಾ ಗ್ರಾಮಗಳಲ್ಲಿನ ಊರಿನ ಹಿರಿಯರು, ಗೌಡರು, ಭೂಮಾಲೀಕರು, ಉನ್ನತ ಜಾತಿಯವರ ಬಗ್ಗೆ ಅವಳಿಗೆ ಇರುವ ಸಾಂಪ್ರದಾಯಿಕವಾದ ಭಯ, ಅವಳ ಆಡಳಿತ ನಿರ್ವಹಣೆಯಲ್ಲಿ ತಡೆಯೊಡ್ಡುತ್ತಿವೆ. ಕ್ಷೇತ್ರಕಾರ್ಯದ ಉದ್ದಕ್ಕೂ ನಾನು ಗಮನಿಸಿರುವಂತೆ ಮೀಸಲಾತಿಯಡಿಯಲ್ಲಿ ದಲಿತ ಮಹಿಳೆ ತಾನೇ ಸ್ವಂತ ಇಚ್ಛೆಯಿಂದ ರಾಜಕೀಯಕ್ಕೆ ಬಂದಿಲ್ಲ ಅಥವಾ ಅವಳ ಕುಟುಂಬವೂ ಇದರಲ್ಲಿ ಆಸಕ್ತಿಯನ್ನು ತೋರಿಸಿಲ್ಲ. ಬದಲಿಗೆ ಊರಿನ ಹಿರಿಯ, ಗೌಡರ ಅಣತಿಯಂತೆ ಅವಳು, ಅವರ ಒತ್ತಾಸೆಯಂತೆ ಒಪ್ಪಿಗೆ ಇರದಿದ್ದರೂ ರಾಜಕಾರಣಕ್ಕೆ ಪ್ರವೇಶವನ್ನು ಪಡೆದಿದ್ದಾಳೆ. ಹೀಗೆ ಇನ್ನೊಬ್ಬರ ಒತ್ತಾಯದ ಮೂಲಕ ಅಧಿಕಾರವನ್ನು ಪಡೆದ ದಲಿತ ಮಹಿಳೆ ತನಗೆ ಸಿಕ್ಕಿರುವ ಅಧಿಕಾರ ಎಷ್ಟರ ಮಟ್ಟಿಗೆ ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸುತ್ತಾಳೆಂಬುದು ಇಲ್ಲಿ ಮುಖ್ಯ. ಅವಳು ಸ್ಥಾನವನ್ನು ಮಾತ್ರ ಅಲಂಕರಿಕವಾಗಿ ಪಡೆದಿದ್ದಾಳೆಯೇ ವಿನಃ ಅವಳ ಅಧಿಕಾರ ಅವಳನ್ನು ನೇಮಿಸಿದವರಿಗೆ ಸಿಕ್ಕಿದೆ. ಪರಿಸ್ಥಿತಿ ಹೀಗಿರುವಾಗ ಪ್ರಜಾಪ್ರಭುತ್ವದ ಆಶಯಕ್ಕೆ ಪಟ್ಟಭದ್ರ ಹಿತಾಸಕ್ತಿಗಳ ಕಾರಣದಿಂದ ಕೊಡಲಿ ಪೆಟ್ಟು ಬಿದ್ದು ದಲಿತ ಮಹಿಳೆ ತುಂಬ ದೂರ ಉಳಿಯುವಂತಾಯಿತು.

ಜಾತಿಯ ಕಾರಣದಿಂದ ದಲಿತ ಮಹಿಳೆ ದಲಿತ ಪುರುಷರಿಗಿಂತ ಹತ್ತುಪಟ್ಟು ಹೆಚ್ಚಿಗೆ ಶೋಷಣೆಗೆ ಬಲಿಯಾಗಿದ್ದಾಳೆ. ತಮ್ಮ ಮೇಲೆ ಇರುವ ಸಾಮಾಜಿಕ ನಿಯಂತ್ರಣವನ್ನು ಮೆಟ್ಟಿ ನಿಲ್ಲುವುದು ಇವರಿಂದ ಸಾಧ್ಯವೇ? ಊರಿನ ಎಲ್ಲ ನಿಯಂತ್ರಕ ವ್ಯವಸ್ಥೆಯ ಅಧಿಪತಿಗಳನ್ನು ದಲಿತ ಪುರುಷರೇ ಎದುರಿಸುವುದು ದುಸ್ತರವಾಗಿರುವಾಗ ಹೆಣ್ಣಾಗಿ ತಾತ್ಸಾರಗಳಿಗೆ ಬಲಿಯಾಗಿರುವ ದಲಿತ ಮಹಿಳೆಯ ಸ್ಥಿತಿಯಂತೂ ತುಂಬ ಅತಂತ್ರವಾಗಿಯೇ ಇರುತ್ತದೆ. ಪಂಚಾಯಿತಿಯಲ್ಲಿ ಕಾರ್ಯ ನಿರ್ವಹಿಸುವ ಸಮಯದಲ್ಲಿ ದಲಿತ ಮಹಿಳೆಯ ಇಷ್ಟ, ಅನಿಷ್ಟಗಳಿಗೆ ಯಾವುದೇ ಪ್ರಾಧಾನ್ಯತೆ ನೀಡಲಾಗುವುದಿಲ್ಲ. ಅವಳು ಅಧ್ಯಕ್ಷೆಯಾಗಿದ್ದರೂ ಅವಳನ್ನು ಉತ್ಸವ ಮೂರ್ತಿಯಂತೆ ಇರಿಸಿ ಮೇಲ್ಜಾತಿಯವರೇ ಅಧಿಕಾರ ಚಲಾಯಿಸುತ್ತಾರೆ. ಅದನ್ನು ಪ್ರತಿಭಟಿಸುವಂತಹ ಅವಕಾಶವೂ ಅವಳಿಗಿಲ್ಲ. ಸುಮಾರು ಕಡೆಯಲ್ಲಿ ಪಂಚಾಯಿತಿಯ ಸಭೆಗಳಿಗೆ ಅವಳಿಗೆ ಆಹ್ವಾನವಿರುವುದಿಲ್ಲ. ಒಬ್ಬ ಗುಮಾಸ್ತನೇ ಸಭೆಗೆ

ಬಂದು ಅವಳಿಂದ ಹಾಜರಾತಿಯ ಸಹಿ ಹಾಕಿಸಿಕೊಂಡು ಹೋಗುವುದಂತೂ ಸಾಮಾನ್ಯವಾಗಿದೆ. ಸ್ವಾತಂತ್ರ್ಯ ಸಿಕ್ಕು ಅರವತ್ತು ವರ್ಷ ಗತಿಸಿದರೂ ಇಂದಿಗೂ ಅಸ್ಪೃಶ್ಯತೆಯ ಸಮಸ್ಯೆಯೂ ಅವಳನ್ನು ಬಿಟ್ಟಿಲ್ಲ. ಹಲವಾರು ಗುಡಿಗಳಲ್ಲಿ, ಹೋಟೆಲ್‌ಗಳಲ್ಲಿ ಅವಳು ಊರಿನ ಪ್ರಮುಖ ಅಧಿಕಾರಸ್ಥಾನ ಹೊಂದಿದ್ದರೂ ಅಲ್ಲಿ ಮುಕ್ತ ಪ್ರವೇಶ ಸಿಕ್ಕಿಲ್ಲ. ತನ್ನ ಸಹದ್ಯೋಗಿ ಉನ್ನತ ವರ್ಗದ ಮಹಿಳೆಯರು ಇವಳ ಸ್ಥಿತಿಗೆ ಸ್ಪಂದಿಸದೆ ಇರುವುದು ಪಿತೃಪ್ರಧಾನತೆಯ ವ್ಯವಸ್ಥಿತವಾದ ಸಂಚು.

ಸ್ತ್ರೀಯನ್ನು ಪಿತೃಪ್ರಧಾನ ವ್ಯವಸ್ಥೆ ಜನಾಂಗ, ಜಾತಿ ಹಾಗೂ ವರ್ಗದ ಆಧಾರದ ಮೇಲೆ ವಿಭಜಿಸಿ ಸ್ತ್ರೀಯರೊಳಗೆ ತಾರತಮ್ಯವನ್ನು ಸೃಷ್ಟಿಸಿದೆ. ಈ ಬಗೆಯ ತಾರಮತಮ್ಯವು ನಿಜವಾದ ಅರ್ಥದಲ್ಲಿ ಪಿತೃಪ್ರಧಾನತೆಯೂ ವಾಸ್ತವವಾಗಿ ಸಮಾಜದಲ್ಲಿ ಪ್ರಭಾವ ಬೀರಲು ಸಹಾಯಕವಾಯಿತು. ಸ್ತ್ರೀಯರ ಸಾಮಾಜಿಕ ಸ್ಥಾನಮಾನಗಳು ಅವರ ಕೌಟುಂಬಿಕತೆಯೊಂದಿಗೆ ರೂಪುಗೊಳ್ಳುತ್ತಿದ್ದರೂ ಜಾತಿ, ಜನಾಂಗ ಹಾಗೂ ವರ್ಗ ವ್ಯವಸ್ಥೆಗಳು ಉನ್ನತ ವರ್ಗದಿಂದ ನೇರವಾಗಿ ಬೇರೆಯಾಗಿ ಸೃಷ್ಟಿಸಿದೆ ಎಂಬುದು ಮಾತ್ರ ದಿಟ.

ಮೇಲೆ ಚರ್ಚಿಸಿದಂತೆ ಮಹಿಳೆಯಾಗಿರುವ ಕಾರಣದಿಂದಲೇ ಅವಳು ಅನುಭವಿಸುವ ನೋವು ಅವಮಾನ, ಶೋಷಣೆಗಳಿಗೆ ಸಮಾಜ ಸ್ತ್ರೀಯೇ ಕಾರಣ ಎಂದು ಪರಿಭಾವಿಸುತ್ತಿದೆ. ಮಹಿಳಾ ಅಧ್ಯಯನ ಇದನ್ನು ಸಾಂಪ್ರದಾಯಿಕ ಚಿಂತನೆ ಎಂದು ಕರೆಯುತ್ತದೆ. ಮೇಲೆ ಚರ್ಚಿಸಿದಂತೆ ದಲಿತ ಮಹಿಳೆಯ ಸಮಸ್ತ ಬದುಕಿನ ಗ್ರಹಿಕೆಯನ್ನು ಆ ಹಿನ್ನೆಲೆಯ ವೈಧಾನಿಕತೆಯಲ್ಲಿ ಬಳಸಿಕೊಂಡು ಈ ಅಧ್ಯಯನದ ಉದ್ದಕ್ಕೂ ಪರಾಮರ್ಶಿಸಲಾಗಿದೆ. ಹೀಗಾದಾಗ ಮಾತ್ರ ಅಂಚಿನಲ್ಲಿರುವ ದಲಿತ ಮಹಿಳೆಯ ಸಮಸ್ತ ವಾಸ್ತವಾಂಶಗಳನ್ನು ಪ್ರಾಯಶಃ ಅರಿಯಬಹುದು. ಆ ನೆಲೆಯಲ್ಲಿ ಈ ಅಧ್ಯಯನ ಸಾಗುತ್ತದೆ. ಮಹಿಳಾ ಸ್ಥಿತಿಗತಿಯನ್ನು ಕುರಿತು ಅಧ್ಯಯನ ಮಾಡುವ ಜ್ಞಾನಶಿಸ್ತಿಗೆ 'ಮಹಿಳಾ ಅಧ್ಯಯನ' ಎಂದು ಕರೆಯಲಾಗಿದೆ. ಮಹಿಳಾ ಅಧ್ಯಯನದ ಪ್ರಮುಖ ಕೇಂದ್ರ ಬಿಂದು ಮಹಿಳಾ ಸಮುದಾಯವೇ ಆಗಿದೆ. ಮಹಿಳಾ ಅಧ್ಯಯನ ಮೂಲಭೂತವಾಗಿ ಮಹಿಳಾ ಸಮಸ್ಯೆಗಳು, ಅದಕ್ಕೆ ಸಂಬಂಧಿಸಿದ ವಿಷಯಗಳನ್ನು, ಪರಿಹಾರೋಪಾಯಗಳನ್ನು ಸೂಚಿಸುತ್ತದೆ. ಇಲ್ಲಿ ಮುಖ್ಯವಾಗಿ ಸಮಸ್ಯೆಯನ್ನು ಸಮಗ್ರವಾಗಿ ಗ್ರಹಿಸಿ, ಅರಿವು ಮೂಡಿಸಿ, ಕ್ರಿಯಾತ್ಮಕ ಚಟುವಟಿಕೆಯಲ್ಲಿ ತೊಡಗಿಸುತ್ತದೆ. ಅಲ್ಲದೆ ಸಾಮಾಜಿಕ ಕ್ರಿಯಾತ್ಮಕ ಚಟುವಟಿಕೆಯಲ್ಲಿ ಸಂಪೂರ್ಣವಾಗಿ ಅವಳನ್ನು ಪಾಲುದಾರಳನ್ನಾಗಿ ಮಾಡುತ್ತದೆ. ಮಹಿಳೆಯರ ಅನುಭವಗಳನ್ನು ಮಹಿಳಾ ಅಧ್ಯಯನ ತನ್ನ ಅಧ್ಯಯನದ ಪ್ರಮುಖ ಕೇಂದ್ರವಾಗಿಸಿಕೊಳ್ಳುತ್ತದೆ. ಮಹಿಳಾ ಬದುಕಿಗೆ ಸಂಬಂಧಿಸಿದ ಎಲ್ಲ ವಿಷಯ, ವಿಚಾರಗಳನ್ನು ಸ್ತ್ರೀ ಸಂವೇದನೆಯ ನೆಲೆಯಲ್ಲಿ, ಪರೀಕ್ಷಿಸುವ ಆಸಕ್ತಿ ತೋರಿಸುತ್ತದೆ.''[೯] ಮಹಿಳಾ ಅಧ್ಯಯನದ ಪರಿಕಲ್ಪನೆಯಲ್ಲಿ ಸ್ತ್ರೀವಾದ ಎಂಬ ಪ್ರಮುಖ ಅಂಗವೂ ಇದೆ. ಸ್ತ್ರೀವಾದಿ ಚಳುವಳಿಗಳ ಮುಂದುವರೆದ ರೂಪವೇ ಮಹಿಳಾ ಅಧ್ಯಯನವಾಗಿ ರೂಪುಗೊಳ್ಳಲು ಕಾರಣವಾಯಿತು. ಮಹಿಳಾ ಚಳುವಳಿ ವಿಷಯಗಳ ಫಲವಾಗಿ ಮಹಿಳಾ ಅಧ್ಯಯನದ ಜನ್ಮವಾಯಿತು. ಮಹಿಳಾ ಅಧ್ಯಯನ ವಿವಿಧ ಅನ್ಯ ಜ್ಞಾನಶಿಸ್ತುಗಳೊಂದಿಗೆ ಸಂಯೋಗಗೊಂಡು ಒಂದು ಅಂತರ್‌ಶಿಸ್ತೀಯ ನೆಲೆಯಲ್ಲಿ ಅಧ್ಯಯನ ಮಾಡುತ್ತದೆ. ಅನ್ಯಜ್ಞಾನ ಶಿಸ್ತುಗಳಲ್ಲಿಯ ಮಹಿಳಾ ಪ್ರತಿನಿಧೀಕರಣ, ಸ್ಥಿತಿಯ ಬಗ್ಗೆ. ಅಲ್ಲಿಯ ಲಿಂಗ ರಾಜಕಾರಣದ ಬಗ್ಗೆ ಮಹಿಳಾ ಅಧ್ಯಯನ ಲಿಂಗ ಸಮಾನತೆಯ ದೃಷ್ಟಿಕೋನದಿಂದ ನೋಡುತ್ತದೆ.

ಪ್ರಧಾನಧಾರೆಯ ಸಂಸ್ಕೃತಿಯಲ್ಲಿ ಲಿಂಗಾಧಾರಿತ ಸಾಮಾಜಿಕ ವ್ಯವಸ್ಥೆ, ಮಹಿಳಾ ಸ್ಥಿತಿಗತಿಗಳಿಗೆ ರೂಪಿಸಿದ ನಿಯಮಗಳು, ಅದರಿಂದ ಅವಳಿಗೆ ಉಂಟಾದ ಅವಕಾಶ ವಂಚಿತ ಸ್ಥಿತಿ, ಗೃಹ ಬಂಧನ, ಗೃಹ ಸಂಬಂಧಿ ನೆಲೆಯಲ್ಲಿ ಮಾತ್ರ ತನ್ನನ್ನು ತಾನು ಗುರುತಿಸಿಕೊಳ್ಳಬೇಕಾದ ಸ್ಥಿತಿ, ಇದರಿಂದ ಪುರುಷ ಜಗತ್ತಿಗೆ ಉಂಟಾದ ಲಾಭ, ಒಟ್ಟು ಬದುಕಿನಲ್ಲಿ ಹೆಣ್ಣಿಗೆ ಉಂಟಾದ ಅನ್ಯಾಯ, ಶೋಷಣೆ ಇಂತಹ ಗಂಭೀರ ವಿಷಯಗಳು ಮಹಿಳಾ ಅಧ್ಯಯನದ ಪ್ರಧಾನ ಚರ್ಚೆಯಲ್ಲಿದೆ.

ಸಮಾಜದಲ್ಲಿ ಪಿತೃಪ್ರಧಾನತೆಯೂ ತನ್ನ ಉಳಿವಿಗಾಗಿ ಲಿಂಗೀಯ ನೆಲೆಯಲ್ಲಿ ಸ್ತ್ರೀ ಪುರುಷರ ನಡುವೆ ತಡೆಗೋಡೆಯನ್ನು ನಿರ್ಮಿಸಿದೆ. ಇದರಿಂದಾಗಿ ಸ್ತ್ರೀ ಪುರುಷರ ನಡುವೆ ವಿಭಜನೆಯಾಗಿದೆಯಲ್ಲದೆ ಪುರುಷನು ಶ್ರೇಷ್ಠ, ಮಹಿಳೆ ಕನಿಷ್ಠ ಎಂಬ ಚಿಂತನೆಗಳು ಸಹ ಮುಂದುವರೆಯಲು ಕಾರಣವಾಗಿದೆ. ಹೀಗೆ ಸಾಮಾಜಿಕ ಪರಂಪರೆ ಆರೋಪಿಸಿರುವ ಹೆಣ್ಣು ಗಂಡುಗಳ ಕುರಿತಾದ ಇಂತಹ ಅವೈಚಾರಿಕ, ಸ್ಥಾಪಿತ ಸಿದ್ಧಮಾದರಿಯ ಚಿಂತನೆಗಳು ಒಬ್ಬರಿಗೆ ಶ್ರೇಷ್ಠತೆಯನ್ನು ಲಾಭವನ್ನು ತಂದುಕೊಡುತ್ತಿದ್ದರೆ, ಇನ್ನೊಬ್ಬರನ್ನು ಕನಿಷ್ಠಗೊಳಿಸಿ ಶೋಷಣೆಗೆ ಬಲಿ ಮಾಡುತ್ತದೆ. ಇಂತಹ ಸಾಂಪ್ರದಾಯಿಕ ಅನ್ಯಾಯವನ್ನು ಮಹಿಳಾ ಅಧ್ಯಯನ ಪ್ರಶ್ನಿಸುತ್ತದೆ. ಅಲ್ಲದೆ ಪುರುಷ ಪ್ರಧಾನ ವ್ಯವಸ್ಥೆಯಡಿಯಲ್ಲಿ ನಿರಂತರ ಶೋಷಣೆ, ದೌರ್ಜನ್ಯಗಳಿಗೆ ಬಲಿಯಾಗುವ ಮಹಿಳಾ ಸಾಮರ್ಥ್ಯಗಳನ್ನು ಎತ್ತಿ ಹಿಡಿಯುತ್ತಲೇ ಅವಳನ್ನು ಶೋಷಣೆಗೆ ಈಡುಮಾಡಿ ದಮನಕಾರಿ ತಂತ್ರ ಅನುಸರಿಸುತ್ತಿರುವ ಪಿತೃಪ್ರಧಾನತೆಯ ವಿರುದ್ಧ ಪ್ರತಿಭಟಿಸುತ್ತದೆ.

ಹಿಂದೆಯೇ ಚರ್ಚಿಸಿದಂತೆ ಮಹಿಳಾ ಅಧ್ಯಯನವು ಸಾಮಾಜಿಕ ಸಂರಚನೆಯಲ್ಲಿ ಮಹಿಳಾ ಸ್ಥಿತಿಯನ್ನು ಅರಿಯುವುದು, ಸಮಾಜದ ರಚನೆ, ಕ್ರಿಯೆಗಳು ಮಹಿಳಾ ಲೈಂಗಿಕತೆಯನ್ನು ಕುರಿತಂತೆ ವೈಜ್ಞಾನಿಕವಾಗಿ ಕ್ರಮಬದ್ಧವಾಗಿಯೂ ಅಧ್ಯಯನ ಮಾಡುತ್ತದೆ. ಲಿಂಗಾಧಾರಿತವಾಗಿರುವ ಸಮಾಜದಲ್ಲಿ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಸಂಬಂಧಗಳನ್ನು ಸೇರಿಸಿ ಮಹಿಳಾ ಅಂತಸ್ತು, ಸ್ಥಾನಮಾನಗಳನ್ನು ಉತ್ತಮೀಕರಿಸುವಲ್ಲಿ ಶ್ರಮಿಸುತ್ತದೆ. ಸಮಾಜದಲ್ಲಿರುವ ಸ್ತ್ರೀ ಪುರುಷರ ಭಿನ್ನಭಿನ್ನ ಕಾರ್ಯ ಚಟುವಟಿಕೆಗಳನ್ನು ಅಧಿಕಾರ ಸಂರಚನೆಯ ಸ್ವರೂಪವನ್ನು ವೈಜ್ಞಾನಿಕವಾಗಿ ಅವಲೋಕಿಸುತ್ತದೆ.

ಸಾಮಾನ್ಯವಾಗಿ ಎಲ್ಲರೂ ಪರಿಭಾವಿಸುವಂತೆ ಮಹಿಳಾ ಅಧ್ಯಯನ ಪುರುಷ ವಿರೋಧಿಯಲ್ಲ. ಅಥವಾ ಪುರುಷ ನಿರಾಕರಣೆ ಅಥವಾ ಅವನ ವಿರುದ್ಧ ಪ್ರತಿಭಟಿಸುವ ತಂತ್ರವೂ ಅಲ್ಲ. ಯಾವ ರೀತಿ ಪುರುಷ ತಾನು ಸಮಾಜದ ಪ್ರತಿಯೊಂದು ರಂಗಗಳಲ್ಲಿ ಹೇಗೆ ಅಧಿಕಾರ ಪಡೆದು ಸಮಾಜವನ್ನು ನಿಯಂತ್ರಿಸುತ್ತಿದ್ದಾನೋ ಆ ನೆಲೆಯಲ್ಲಿ ಸಮಾನತೆಯ ತತ್ವದಡಿಯಲ್ಲಿ ಸ್ತ್ರೀಗೂ ಸಮಾನ ಅವಕಾಶ ಬೇಕು. ಹೆಣ್ಣಾಗಿರುವುದರಿಂದಲೇ ಅವಳಿಗೆ ಒದಗಿ ಬಂದಿರುವಂತಹ ಸಮಸ್ಯೆಗಳು, ಸವಾಲುಗಳ ಕುರಿತು ಪರಿಶೀಲಿಸುತ್ತದೆ. ಕೇವಲ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿ ಸುಮ್ಮನೆ ಕೂರದೆ ಅವಕ್ಕೆ ಪರಿಹಾರೋಪಾಯಗಳನ್ನು ಸಹ ಕಂಡುಹಿಡಿಯುತ್ತದೆ. ಅಲ್ಲದೆ ಸಾಮಾಜಿಕ ರಚನೆಯಲ್ಲಿ ಅವಳಿಗೂ ಸಹ ಸಮಪಾಲು ಸಿಗುವಂತೆ ವಿಶೇಷ ತರಬೇತಿಯನ್ನು ನೀಡುತ್ತದೆ. ಹೆಣ್ಣು ಅಬಲೆಯಲ್ಲ, ಸಬಲೆ ಎಂದು ತೋರಿಸಿಕೊಡುತ್ತದೆ. ಮಹಿಳಾ ಅಧ್ಯಯನವು ಮಹಿಳಾ ಸಾಮರ್ಥ್ಯಗಳನ್ನು ಗುರುತಿಸುತ್ತದೆ. ಅವಳ

ಅನನ್ಯತೆ, ಅಸ್ತಿತ್ವದ ಬಗೆಗಿರುವ ಮಿಥ್‌ಗಳನ್ನು ನಿರಾಕರಿಸುತ್ತದೆ. ಮಹಿಳೆ ಸಾಮಾಜಿಕ ರಂಗದಲ್ಲಿ ಸಕ್ರಿಯವಾಗಿ ಭಾಗವಹಿಸಲು ಅನುವು ಮಾಡಿಕೊಡುತ್ತದೆ. ನಿಸರ್ಗದತ್ತವಾಗಿ ಅವಳಿಗೆ ಒದಗಿ ಬಂದಿರುವಂತಹ ಸಾಂವಿಧಾನಿಕ ಮೂಲಭೂತ ಹಕ್ಕುಗಳ ಬಗ್ಗೆ ತಿಳುವಳಿಕೆಯನ್ನು ಮೂಡಿಸಿ, ಪುರುಷರಿಗೂ ಇದರ ಅರಿವು ಮೂಡಿಸುತ್ತದೆ. ಒಟ್ಟಾರೆಯಾಗಿ ಹೆಣ್ಣಿನ ಸಮಷ್ಟಿ ವ್ಯಕ್ತಿತ್ವ, ವ್ಯಕ್ತಿಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯವನ್ನು ಪುನರ್ ಸೃಷ್ಟಿಸಿ ಸಮಾಜದಲ್ಲಿ ಸ್ತ್ರೀಗೆ ಗೌರವಯುತ ಸ್ಥಾನಮಾನವನ್ನು ಪಡೆಯಲು ಸೂಕ್ತ ವಾತವರಣ ನಿರ್ಮಿಸಿಕೊಡುತ್ತದೆ.

ಸಾಮಾಜಿಕ ರಂಗದ ಅತ್ಯಂತ ಪ್ರಮುಖ ಅಂಗವಾಗಿರುವ ರಾಜಕೀಯವು ಸ್ತ್ರೀ ಪುರುಷರಿಬ್ಬರಿಗೂ ಸೇರಿದ್ದು. ಆದರೆ ಇಲ್ಲಿ ಪುರುಷನದೇ ಆಧಿಪತ್ಯವಿದೆ. ರಾಜಕಾರಣದಲ್ಲಿ ಇಂದಿಗೂ ಜನಸಂಖ್ಯೆ ಅರ್ಧದಷ್ಟಿರುವ ಮಹಿಳಾ ಸಮುದಾಯ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಸಾಧ್ಯವಾಗಿಲ್ಲ. ಬದುಕಿನಲ್ಲಿ ಪುರುಷನೊಂದಿಗೆ ಸರಿಸಮನಾಗಿ ನಿಲ್ಲುವಂತಾಗಿಲ್ಲ. ಆಡಳಿತದ ಉನ್ನತ ಹಂತಗಳಿಂದ ಹಿಡಿದು ಕೆಳಹಂತಗಳವರೆಗೂ ಪುರುಷನೇ ವಿಜೃಂಬಿಸುತ್ತಿರುವುದರಿಂದ ಮಹಿಳೆ ಅವುಗಳಿಂದ ದೂರವೇ ಉಳಿದಿದ್ದಾಳೆ. ಕೆಲವೆಡೆ ಮಹಿಳಾ ಅಧಿಕಾರಿಗಳಿದ್ದಾರಾದರೂ ಪುರುಷರ ಸಂಖ್ಯೆಗೆ ಹೋಲಿಸಿದರೆ ಅದು ಅತ್ಯಲ್ಪ. ಅಲ್ಲದೆ ಮಹಿಳೆಯರ ಕೈಕೆಳಗೆ ಕೆಲಸ ಮಾಡಲು ಪುರುಷರು ಹಿಂಸೆ, ಮುಜುಗರ ಪಡುತ್ತಾರೆ. ಅನಾದಿಕಾಲದಿಂದಲೂ ಆಳ್ವಿಕೆಯನ್ನು ಮಾಡುತ್ತಲೆ ಬಂದಿರುವ ಪುರುಷಶಾಹಿಗೆ ಮಹಿಳಾ ಅಧಿಕಾರ ಅಥವಾ ಆಡಳಿತ ಬಿಸಿತುಪ್ಪವಾಗಿದೆ. ಹಲವು ಕಡೆಯಲ್ಲಿ ಮಹಿಳೆ ಪುರುಷನೊಂದಿಗೆ ರಾಜಕೀಯದಲ್ಲಿ ಸಮಾನ ಅವಕಾಶ ಪಡೆದಿದ್ದರೂ ಅದು ಅವಳಿಗೆ ತಾನಾಗಿಯೇ ಬಂದದ್ದಲ್ಲ ಅಥವಾ ಅವಳ ಸ್ವಂತ ಆಸಕ್ತಿಯೂ ಅಲ್ಲ. ಹಲವು ಮಹಿಳೆಯರು ಜಾತಿ, ಶ್ರೀಮಂತಿಕೆ, ಹಣ ಹಾಗೂ ಧರ್ಮಗಳ ಪ್ರಭಾವದಿಂದಲೆ ರಾಜಕೀಯಕ್ಕೆ ಬಂದಿದ್ದಾರೆ. ಮಹಿಳೆ ರಾಜಕೀಯ ಬಂದಿರುವುದು ಕೇವಲ ಅವಳ ಸ್ಥಿತಿಯನ್ನಾಧರಿಸಿ ಎಂಬುದು ಮಾತ್ರ ಸತ್ಯ.

ಆರಂಭದಿಂದಲೂ ನಿರಂತರವಾಗಿ ಅಲಕ್ಷ್ಯಕ್ಕೆ, ತಾತ್ಸಾರಕ್ಕೆ ಶೋಷಣೆಗೆ ಬಲಿಯಾದ ದಲಿತ ಸಮುದಾಯದ ದಲಿತ ಮಹಿಳಾ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಜಾತಿಯ ಕಾರಣದಿಂದ ಹಲವಾರು ಸಾಮಾಜಿಕ ನಿಯಂತ್ರಣಗಳು ನಿರಂತರವಾಗಿ ಅವಳ ಸುತ್ತಲು ಸುತ್ತುತ್ತಿರುತ್ತವೆ. ಮೇಲ್ಜಾತಿಯ ಮಹಿಳೆಗೆ ಜಾತಿಯ ಅಸಮಾನತೆಯ ಬರ್ಬರತೆಯ ಅರಿವು ಇರುವುದಿಲ್ಲ. ಕೆಳಜಾತಿಯ ಪುರುಷನಿಗೆ ಲಿಂಗ ತಾರತಮ್ಯದ ಅನುಭವದ ಅರಿವು ಇರುವುದಿಲ್ಲ. ಆದರೆ ದಲಿತ ಮಹಿಳೆಗೆ ಈ ಎರಡೂ ಅಂಶಗಳು ಅನುಭವದಲ್ಲಿ ಸಿಕ್ಕವು. ಮೇಲ್ಜಾತಿಯ ಸ್ತ್ರೀಯರು ಜಾತಿ ಪದ್ಧತಿಯಲ್ಲಿ ಬಳಸಲ್ಪಟ್ಟವರು ಎಂದು ದಲಿತ ಸ್ತ್ರೀವಾದ ಈ ಕಾರಣದಿಂದಲೆ ಗುರುತಿಸುತ್ತದೆ. ಜಾತಿಯ ತಾರತಮ್ಯವನ್ನು ಸ್ವತಃ ಅನುಭವಿಸಿದ್ದ ಡಾ.ಬಿ.ಆರ್.ಅಂಬೇಡ್ಕರರು ಮೇಲ್ಜಾತಿಗಳ ರಾಜಕೀಯದಿಂದ ಮೇಲ್ಜಾತಿಯ ಸ್ತ್ರೀಯನ್ನು ಪ್ರತ್ಯೇಕವಾಗಿ ಪರಿಭಾವಿಸಲು, ಸಂಬೋಧಿಸಲು ಪ್ರಯತ್ನಿಸುತ್ತಾರೆ. ಮೇಲ್ವರ್ಗದ ಮಹಿಳೆಯರು ಕೆಳಜಾತಿಗಳೊಂದಿಗೆ ಸಮಾನ ವೇದಿಕೆಯಲ್ಲಿ ಕಾಣುವುದು ಸಮಾನ ಆಸಕ್ತಿಯನ್ನು ಗುರುತಿಸುವುದು ಸಾಧ್ಯವೆಂದು ಗುರುತಿಸಿದ್ದಾರೆ. ಜಾತಿ ಶ್ರೇಣಿಯ ವಿಧಿ ವಿಧಾನಕ್ಕೆ ಬ್ರಾಹ್ಮಣ ಸ್ತ್ರೀಯರೇ ಮುಂಚೂಣಿಯಲ್ಲಿರಬೇಕು ಎಂದು ಆಶಿಸುತ್ತಾರೆ. ಜಾತಿಯ ಕಾರಣದಿಂದ ದಲಿತ ಮಹಿಳಾ ಶೋಷಣೆಯ ನೆಲೆಗಳು ಅವಳ ಕುಟುಂಬದಲ್ಲಿ,

ಮಾತ್ರವೇ ಕಂಡುಬರದೆ ಅದರಾಚೆಗೂ ವಿಸ್ತರಿಸಿಕೊಂಡಿದೆ. ಮಹಿಳಾ ರಾಜಕೀಯ ಸಬಲೀಕರಣದ ಮುಖ್ಯ ಆಶಯ ಎಂದರೆ ಪಾರಂಪರಿಕವಾಗಿ ಅವಳಿಗೆ ನೀಡಲಾದ ಅಧಿಕಾರ ಸ್ಥಾನಗಳನ್ನು ಬಿಟ್ಟು ಸಮಾಜದ ಮುಖ್ಯ ನೆಲೆಗೆ ಬರುವಂತಾಗಲು ಪೂರಕವಾಗಿರುವಂತಿದೆ. ಆಧುನಿಕ ಭಾರತದಲ್ಲಿ ದಲಿತ ಮಹಿಳಾ ಸಮುದಾಯಕ್ಕೆ ರಾಜಕೀಯ ಅಧಿಕಾರ ಸಿಕ್ಕರೂ ಅದು ಕೇವಲ ಕಾಗದದಡಿಯಲ್ಲಿ ಮಾತ್ರವೆ ಉಳಿದಿದೆ. ಅಂತರಾಳದಲ್ಲಿ ಪಿತೃಪ್ರಧಾನ ಚಿಂತನೆಗಳನ್ನೇ ಅಳವಡಿಸಿಕೊಂಡಿರುವ ಸಮಾಜ, ಕುಟುಂಬ, ಧರ್ಮಗಳು ಇಂದಿಗೂ ತಮ್ಮ ಹಿಡಿತವನ್ನು ಸಡಿಲಿಸಿಲ್ಲ. ಪರಿಸ್ಥಿತಿ ಹೀಗಿರುವಾಗ ಸಾಮಾಜಿಕ ನ್ಯಾಯದ ಪರಿಕಲ್ಪನೆ ಯಶಸ್ವಿಯಾಗಲು ಸಾಧ್ಯವೇ ಇಲ್ಲ.

### ೨.೪. ಪ್ರಜಾಪ್ರಭುತ್ವ

ಪ್ರಜಾಪ್ರಭುತ್ವ ಎಂಬ ನಿರ್ವಚನವೇ ಸೂಚಿಸುವಂತೆ ಇದು ಸದಾ ಪ್ರಜೆಗಳ ಸಮಸ್ತ ಹಿತ ಸಾಧಿಸುವ, ಅವರ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸುವ; ಜೀವನವನ್ನು ಉತ್ತಮಗೊಳಿಸುವ, ಹಾಗೂ ಸಮಾನತೆಯನ್ನು ಕಾಪಾಡುವಂತಹ ಧ್ಯೇಯಗಳನ್ನು ಒಳಗೊಂಡಿದೆ. ಆದ್ದರಿಂದಲೇ ಅಮೆರಿಕಾ ಮಾಜಿ ಅಧ್ಯಕ್ಷರಾಗಿದ್ದ ಅಬ್ರಾಹಂ ಲಿಂಕನ್ ಅವರು ಪ್ರಜಾಪ್ರಭುತ್ವ ಎಂದರೆ ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ ಇರುವ ಸರಕಾರ ಎಂದು ಬಣ್ಣಿಸಿದ್ದಾರೆ. ಆಳುವ ಸರಕಾರಗಳು ಯಾವುದೇ ಒಂದು ಜಾತಿ, ವರ್ಗ, ಧರ್ಮಕ್ಕೆ ಅಡಿಯಾಳಾಗಿರದೆ ಸಮಸ್ತ ಪ್ರಜೆಗಳ ಹಿತವನ್ನು ಕಾಪಾಡುವಂತಿರಬೇಕು. ಜನರು ಪ್ರಜಾಪ್ರಭುತ್ವದಡಿಯಲ್ಲಿ ತಮ್ಮ ನಾಯಕರನ್ನು ತಾವೇ ಆರಿಸುವಂತ ಮೌಲ್ಯಯುತವಾದ ಅಧಿಕಾರ ಪಡೆದಿದ್ದಾರೆ. ತಾವು ಆರಿಸಿದ ಪ್ರತಿನಿಧಿಗಳ ಮೂಲಕ ಬೇಕು ಬೇಡಗಳನ್ನು ಪೂರೈಸಿಕೊಳ್ಳುವ ಅಧಿಕಾರ ಪ್ರಜೆಗಳಿಗಿದೆ. ಪ್ರತಿ ಐದು ವರ್ಷಗಳಿಗೊಮ್ಮೆ ನಡೆಯುವಂತಹ ಸಾರ್ವತ್ರಿಕ ಚುನಾವಣೆಯಲ್ಲಿ ಈ ಬಗೆಯ ಗಣತಂತ್ರದ ಅಂಶಗಳನ್ನು ನಾವು ಕಾಣಬಹುದು. ಎಲ್ಲಿ ಪ್ರಜಾಪ್ರತಭುತ್ವ ಇರುತ್ತದೆಯೋ ಅಲ್ಲಿ ನಿರ್ದಿಷ್ಟವಾದ ಸಂವಿಧಾನವಿರುತ್ತದೆ. ಸಂವಿಧಾನದ ಮೂಲ ಆಶಯವಾದ ಮೂಲಭೂತ ಹಕ್ಕುಗಳನ್ನು ಕಾಯಲು ಇದು ಸದಾ ಜಾಗೃತವಾಗಿರುತ್ತದೆ. ಪ್ರಜಾಪ್ರಭುತ್ವಕ್ಕೆ ಜನತಾ ಪರಮಾಧಿಕಾರವೇ ಮುಖ್ಯ ಅಂಗ.

ಮಾನವರು ಮೂಲತಃ ಸ್ವತಂತ್ರ್ಯರಾಗಿ ಅನಿರ್ಬಂಧಿತರಾಗಿ ಬಾಳಲು ಅವರಿಗೆ ಎಲ್ಲ ಹಕ್ಕು ಇದೆ ಎಂದು ಖ್ಯಾತ ತತ್ವಜ್ಞಾನಿಯಾದ ರೂಸೋ ಅಭಿಪ್ರಾಯ ಪಟ್ಟಿದ್ದಾನೆ. ಅಲ್ಲದೆ ಅವನು ಮುಂದುವರೆದು ಅವರು ಶೃಂಖಲೆಯಲ್ಲಿದ್ದಾರೆ, ಪ್ರತಿಹೆಜ್ಜೆಯಲ್ಲಿ ನಿರ್ಬಂಧಿತರಾಗಿದ್ದಾರೆ. ಎಂಬ ಸತ್ಯವನ್ನು ಹೇಳಿದ್ದಾನೆ. ಅಲ್ಲದೆ ಜನ ಸಾಮಾನ್ಯರ ಬಗ್ಗೆ ಇವನು ಹೇಳುವ ಮಾತುಗಳು ಇಂದಿಗೂ ಸಹ ಪ್ರಸ್ತುತವಾಗಿವೆ. ಯಾರನ್ನು ನಾವು ನಿರ್ಲಕ್ಷಿಸಿದ್ದೇವೆಯೋ, ಯಾರು ತಮ್ಮ ಹಕ್ಕುಗಳಿಂದ ವಂಚಿತರಾಗಿದ್ದಾರೋ, ಯಾರು ತುಳಿತಕ್ಕೆ ಒಳಗಾಗಿದ್ದಾರೋ ಆ ಶ್ರೀಸಾಮಾನ್ಯನೇ ಸಾಮಾಜಿಕ ಕ್ರಮಬದ್ಧತೆಯ ನಿರ್ಮಾತೃ. ಯಾರನ್ನು ನಾವು ಬಡವನೆನ್ನುತ್ತೇವೆಯೋ, ಯಾರಿಗೆ ಈ ಬಾಗಶಃ ನಿರ್ಮಿತ ಸಮಾಜದಲ್ಲಿ ಸ್ಥಾನವಿಲ್ಲವೋ ಅವನೇ ಈ ಸಮಾಜದ ಬೆನ್ನೆಲುಬು. ರಾಷ್ಟ್ರದ ಸತ್ವಸಾರ ಇವು ಪ್ರಜಾಪ್ರಭುತ್ವದ ಮಹತ್ವವನ್ನು ಅರಿಯುವಲ್ಲಿ ಅತ್ಯಂತ ಪ್ರಯೋಜನಕಾರಿಯಾಗಿವೆ.

ಪ್ರಜಾಪ್ರಭುತ್ವದ ಅಣತಿಯಂತೆ ಪ್ರತಿಯೊಬ್ಬರಿಗೂ ನೀಡುವ ಸಮಾನ ಅವಕಾಶ, ಹಕ್ಕುಗಳು ಯಾವುದೇ ರೀತಿಯ ಚ್ಯುತಿ ಬರದಂತೆ ಕಾಪಾಡುವುದು ಸರಕಾರದ ಕರ್ತವ್ಯವಾಗಿದೆ. ಭಾರತವು ಒಂದು ಏಣಿಶ್ರೇಣಿ ವ್ಯವಸ್ಥೆಯನ್ನು ಹೊಂದಿರುವ ಸಮಾಜವಾದುದರಿಂದ ಇದು ಅತ್ಯಂತ ಉಪಯುಕ್ತಕರವಾಗಿದೆ. ಭಾರತೀಯ ಸಂವಿಧಾನದ ನಿರ್ಮಾಪಕರು ಮಹಾತ್ಮಗಾಂಧಿಯವರ ಸ್ವರಾಜ್ಯ ಹಾಗೂ ರಾಮರಾಜ್ಯಗಳ ಸಿದ್ಧಾಂತ ಆಧರಿಸುವುದರಿಂದ ಇಲ್ಲಿ ಮಾನವೀಯ ಮೌಲ್ಯಗಳಿಗೆ, ಸಾಮಾಜಿಕ ಸಾಮರಸ್ಯಕ್ಕೆ ಅಗತ್ಯವಾದ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಇತರ ಎಲ್ಲ ಬಗೆಯ ಸರಕಾರ ಪದ್ಧತಿಗಳಿಂತ ಪ್ರಜಾಪ್ರಭುತ್ವ ಸರಕಾರ ಮೊದಲಿನಿಂದಲೂ ಅತ್ಯಂತ ಜನಪ್ರಿಯತೆ ಪಡೆದಿದೆ. ಪ್ರಜಾಪ್ರಭುತ್ವದಡಿಯಲ್ಲಿ ಭಾಗಿಯಾಗಿರುವ ವ್ಯಕ್ತಿಯೂ ತನ್ನ ವ್ಯಕ್ತಿತ್ವವನ್ನು ಉತ್ತಮಗೊಳಿಸಿಕೊಳ್ಳುವಲ್ಲಿ ಪ್ರಜಾಪ್ರಭುತ್ವ ತುಂಬ ಸಹಾಯಕವಾಗಿದೆ. ಈ ಮಾದರಿಯ ಸರಕಾರ ಪದ್ಧತಿಯಲ್ಲಿ ಜನರು ಅನುಭವಿಸುವಂತಹ ಅವಕಾಶ, ಸ್ವಾತಂತ್ರ್ಯಗಳು ಬೇರೆ ಯಾವುದೇ ಸರಕಾರ ಪದ್ಧತಿಯಲ್ಲೂ ಕಾಣಲು ಸಾಧ್ಯವಿಲ್ಲ. ವ್ಯಕ್ತಿಗಳ ವ್ಯಕ್ತಿತ್ವ ವಿಕಸನಕ್ಕೆ ಅಗತ್ಯವಾಗಿರುವ ಎಲ್ಲ ವಿಧವಾದ ಪೂರಕ ಹಕ್ಕುಗಳನ್ನು ಪ್ರಜಾಪ್ರಭುತ್ವವು ತನ್ನ ಪ್ರಜೆಗಳಿಗೆ ಒದಗಿಸಿಕೊಟ್ಟಿದೆ. ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆಯಂತಹ ಉದಾತ್ತ ಚಿಂತನೆಗಳು ಸಹ ಈ ನೆಲೆಯೊಳಗೆ ರೂಪುತಾಳಿದಂತಹವು. ಈ ಕಾರಣದಿಂದಲೇ ಇಂದಿನ ಯುಗವನ್ನು ಪ್ರಜಾಪ್ರಭುತ್ವವಾದಿ ಯುಗ ಎಂದು ಕರೆಯಲಾಗುತ್ತಿದೆ. ಕಮ್ಯೂನಿಸ್ಟ್ ದೇಶಗಳು ಇದರ ಕಡೆಗೆ ವಾಲುತ್ತಿರುವುದು ಇದರ ಹಿರಿಮೆಗೆ ಸಾಕ್ಷಿಯಾಗಿದೆ.

### ೨.೪.೧. ಪ್ರಜಾಪ್ರಭುತ್ವದ ಪ್ರಾಚೀನತೆ

ಪ್ರಜಾತಂತ್ರದ ಕುರುಹನ್ನು ಪ್ರಾಚೀನ ಕಾಲದಿಂದಲೇ ಗುರುತಿಸಬಹುದು. ಗ್ರೀಕ್ ದೇಶದ ಸ್ಪಾರ್ಟಾ ಮತ್ತು ಅಥೆನ್ಸ್ ಮೊದಲಾದ ಕಡೆಗಳಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಪ್ರಚಲಿತದಲ್ಲಿತ್ತು ಎಂದು ತಿಳಿದು ಬಂದಿದೆ. ಭಾರತದ ಪುರಾತನ ಲಿಚ್ಛವಿ, ವೈಶಾಲಿ, ಕುಶಾನ ಮುಂತಾದ ಕತೆಗಳಲ್ಲಿ ಇದು ಚಾಲನೆಯಲ್ಲಿತ್ತು ಎನ್ನಲಾಗಿದೆ. ಅಂದಿನ ಕಾಲಾವಧಿಯಲ್ಲಿ ಸುಮಾರು ಕಡೆಗಳಲ್ಲಿ ರಾಜಪ್ರಭುತ್ವವೇ ಸಾಮಾನ್ಯವಾಗಿ ಪ್ರಚಲಿತವಿತ್ತು. ರಾಜನೇ ಪ್ರತ್ಯಕ್ಷ ದೇವರು ಎಂಬ ನಂಬಿಕೆ ಅಂದಿನವರಲ್ಲಿ ಆಳವಾಗಿ ಬೇರೂರಿತ್ತು. ಆದ್ದರಿಂದಲೇ ಅಂದಿನ ಕಾಲದ ಜನರು ಪ್ರಜಾಪ್ರಭುತ್ವ ವ್ಯವಸ್ಥೆಯ ಕಡೆಗೆ ಗಮನಹರಿಸಲೇ ಇಲ್ಲ. ತಾತ್ವಿಕವಾಗಿ ಅತ್ಯಂತ ಭದ್ರ ತಳಪಾಯ ಹೊಂದಿದ್ದ ಪ್ರಜಾಪ್ರಭುತ್ವ ರೋಂನಲ್ಲಿ ಅತ್ಯಂತ ಜನಪ್ರಿಯವಾಗಿತ್ತು. ಮಧ್ಯಕಾಲೀನ ಕಾಲಾವಧಿಯಲ್ಲಿ ಕಂಡುಬರುವ ಊಳಿಗಮಾನ್ಯ ವ್ಯವಸ್ಥೆಯು ಅರಾಜಕತೆಯಲ್ಲಿ ತುಂಬಿಹೋಗಿತ್ತು. ಜಮೀನ್ದಾರರ ಆಡಳಿತದಲ್ಲಿ ಪ್ರಜಾಪ್ರಭುತ್ವಕ್ಕೆ ಅರ್ಥವೇ ಇರಲಿಲ್ಲ. ನಂತರ ಪುನರುಜ್ಜೀವನ ಧಾರ್ಮಿಕ ಸುಧಾರಣೆಗಳ ನಂತರದಲ್ಲಿ ರಾಜಪ್ರಭುತ್ವಕ್ಕೆ ಹೆಚ್ಚಿನ ಪ್ರಾಶಸ್ತ್ಯ ದೊರೆತು ಯುರೋಪಿಯನ್ ರಾಜರು ನಿರಂಕುಶ ಆಡಳಿತ ನಡೆಸುತ್ತಿದ್ದಾಗ ಇಂಗ್ಲೆಂಡ್‌ನಲ್ಲಿ ೧೬ ನೆಯ ಶತಮಾನದೊತ್ತಿಗೆ ಸ್ಟುಯರ್ಟ್ ದೇಶದ ದೊರೆಯೊಂದಿಗೆ ಹೋರಾಟ ನಡೆಯಿತು. ಹೀಗೆ ರಾಜರುಗಳು ನಿರಂಕುಶವಾಗಿ ಆಡಳಿತ ನಡೆಸುತ್ತಿದ್ದಾಗಲೇ ಪ್ರಜಾಪ್ರಭುತ್ವದ ಚಿಂತನೆ ಮೊಳಕೆಯೊಡೆಯಲು ಆರಂಭವಾಯಿತು. ಇಂಗ್ಲೆಂಡಿನ ವಿರುದ್ಧ ಜಯಗಳಿಸಿ ಸ್ವಾತಂತ್ರ್ಯ ಪಡೆದುಕೊಂಡ ಅಮೆರಿಕ ಜನತೆಯನ್ನು ತಲುಪುವ ಗುರಿಯೊಂದಿಗೆ ಪ್ರಜಾಪ್ರಭುತ್ವಕ್ಕೆ ಸ್ಪಂದಿಸುವಂತಹ ನೆಲೆಯೊಂದಿಗೆ ಸಂವಿಧಾನವನ್ನು ರೂಪಿಸಿಕೊಂಡಿತು. ಫ್ರಾನ್ಸ್ ದೇಶದಲ್ಲಿಯೂ ಅಲ್ಲಿಯ ನಿರಂಕುಶ ದೊರೆಗಳ ವಿರುದ್ಧ ಹೋರಾಟ ನಡೆದು ಗಣತಂತ್ರ ಸರಕಾರ ಸ್ಥಾಪನೆಯಾಯಿತು.

ಗಣತಂತ್ರ ವ್ಯವಸ್ಥೆ ಭಾರತಕ್ಕೆ ಹೊಸದೇನಲ್ಲ ಏಕೆಂದರೆ ಜನತಾ ಪರಮಾಧಿಕಾರಕ್ಕೆ ಮನ್ನಣೆ ಕೊಡುವಂತಹ ವ್ಯವಸ್ಥೆಯೂ ನಮ್ಮ ವೇದಗಳ ಕಾಲದಲ್ಲಿಯೇ ಇತ್ತು ಎನ್ನಲು ಪುರಾವೆಗಳಿವೆ. ವೇದಕಾಲದ ಹಾಗೂ ಬೌದ್ಧರ ಕಾಲದ ಸಾಹಿತ್ಯದಲ್ಲಿ ಸಭಾ ಮತ್ತು ಸಮಿತಿಗಳೆಂಬ ಉಲ್ಲೇಖಗಳಿವೆ. ಈ ಸಭಾ, ಸಮಿತಿಗಳು ಈಗಿನ ಪ್ರಜಾಪ್ರಭುತ್ವದ ಪರಿಕಲ್ಪನೆಯ ಅನುಸಾರವೇ ರಚನೆಯಾಗಿದ್ದಂತಹ ಜನಪ್ರತಿನಿಧಿಗಳ ಸಭೆಗಳೇ ಆಗಿದ್ದವು. ಋಗ್ವೇದದಲ್ಲಿಯ ಸಭಾ, ಸಮಿತಿಗಳ ಬಗ್ಗೆ ಸೂಕ್ಷ್ಮವಾದ ಉಲ್ಲೇಖಗಳಿವೆ. ಇವೆರಡು ಸಭೆಗಳು ರಾಜ್ಯ ಸಭೆ (ಹಿರಿಯರ ಸಭೆ) ಮತ್ತು ಸಾಮಾನ್ಯ ಸಭೆ(ಕಿರಿಯರ ಸಭೆ)ಗಳನ್ನು ಪ್ರತಿನಿಧಿಸುವಂತಹವು. ವೇದಕಾಲದಲ್ಲಿದ್ದಂತಹ ಪ್ರಜಾಪ್ರಭುತ್ವದ ಕಲ್ಪನೆಯೂ ನಂತರದಲ್ಲಿ ಪ್ರಾಚೀನ ಕಾಲದವರೆಗೂ ಮುಂದುವರೆಯಿತು. ಮಹಾಭಾರತದಲ್ಲಿಯೂ ಸಂಘ ಪ್ರತಿನಿಧಿ ಸಭೆಗಳನ್ನು ಸಂಘಗಳೆಂದೇ ಉಲ್ಲೇಖಿಸಲಾಗಿದೆ. ಅಲ್ಲದೆ `ಗಣ` ಎಂಬುದನ್ನು ಇದೇ ಅರ್ಥದಲ್ಲಿ ಬಳಸಲಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಣತಂತ್ರ ವ್ಯವಸ್ಥೆ ಅಳವಡಿಸಿಕೊಂಡಿರುವ ರಾಜ್ಯಗಳ ಬಗ್ಗೆ ಉಲ್ಲೇಖಗಳಿವೆ. ಹಿಂದೂ ರಾಜಕೀಯ ಚರಿತ್ರೆಯಲ್ಲಿಯೂ ಪ್ರಜಾಪ್ರಭುತ್ವದ ಕುರುಹುಗಳಿವೆ. ಅನಂತರದಲ್ಲಿ ಗ್ರಾಮ ಪಂಚಾಯಿತಿಗಳು ಎಂದು ಕರೆಯಲಾಗುವ ಪ್ರಾತಿನಿಧಿಕ ನಿಕಾಯಗಳ ಮೂಲಕ ಗಣತಂತ್ರ ವ್ಯವಸ್ಥೆಯ ತತ್ವಗಳನ್ನು ಬಳಸಲಾಗುತ್ತಿತ್ತು. ಮುಸ್ಲಿಂರ ಆಳ್ವಿಕೆಯಲ್ಲಿಯೂ ವ್ಯಾಪಾರ ಸಂಸ್ಥೆಗಳು ಮತ್ತು ಪಂಚಾಯಿತಿಗಳನ್ನು ಪ್ರಾತಿನಿಧಿಕ ಆಧಾರದ ರೀತಿಯಲ್ಲಿಯೇ ನಡೆಸಲಾಗುತ್ತಿತ್ತು. ಇದರಿಂದ ಅರಿವಾಗುವುದೇನೆಂದರೆ ಅವರ ಕಾಲಾವಧಿಯಲ್ಲಿಯೂ ಸಹ ಸ್ವಲ್ಪಮಟ್ಟಿಗೆ ಪ್ರಜಾಪ್ರಭುತ್ವ ಇರುವಿಕೆಯನ್ನು ಕಾಣಬಹುದಾಗಿದೆ.

ಮುಖ್ಯವಾಗಿ ಪ್ರಜಾಪ್ರಭುತ್ವದ ಎಳೆಗಳು ಅತ್ಯಂತ ಯೋಜಿತವಾದ ರೀತಿಯಲ್ಲಿ ಕಂಡುಬಂದಿದ್ದು ಬ್ರಿಟಿಷ್ ಕಾಲಾವಧಿಯಲ್ಲಿ. ಈ ಅವಧಿಯಲ್ಲಿ ನ್ಯಾಯಿಕ, ಕಂದಾಯ, ಕಾನೂನುಗಳನ್ನು ಆಡಳಿತದಲ್ಲಿ ಕೇಂದ್ರೀಕೃತಗೊಳಿಸುವುದರ ಮೂಲಕ ಜನಸಾಮಾನ್ಯರಿಂದ ದೂರ ಸರಿಸಲಾಯಿತು. ಬ್ರಿಟಿಷರ ಆಡಳಿತ ಕೊನೆಯ ಹಂತದಲ್ಲಿ ಅಂದರೆ ೧೯೩೫ರ `Government of India Act` ಅಡಿಯಲ್ಲಿ ಕೇಂದ್ರ ಮತ್ತು ಪ್ರಾಂತೀಯ ಸಭೆಗಳಿಗೆ ಚುನಾವಣೆಯನ್ನು ನಡೆಸಲಾಯಿತು.

ಭಾರತೀಯ ಸಂಸ್ಕೃತಿಯೊಂದಿಗೆ ನಿರಂತರವಾಗಿ ತನ್ನ ಅನನ್ಯತೆಯನ್ನು ಉಳಿಸಿಕೊಂಡು, ಬೆಳಸಿಕೊಂಡು ಬಂದಿರುವ ಪ್ರಜಾಪ್ರಭುತ್ವವು ಸ್ವಾತಂತ್ರ್ಯ ನಂತರದಲ್ಲಿಯೂ ಭಾರತೀಯ ಸಂಸ್ಕೃತಿಯೊಂದಿಗೆ ಹೊಸರೂಪ ಪಡೆದು ಸಾಗಿದೆ. ಭಾರತದ ಸಂವಿಧಾನ ನಿರ್ಮಾಪಕರು ಪ್ರಜಾಪ್ರಭುತ್ವದ ಬಗ್ಗೆ ಹೊಂದಿದ್ದ ಅದಮ್ಯ ಆಶಯ, ನಂಬಿಕೆ, ಆದರ್ಶಗಳ ಫಲವಾಗಿ ಇದಕ್ಕೊಂದು ಸೈದ್ಧಾಂತಿಕ ನೆಲೆ ಸಿಕ್ಕು ಅಧಿಕೃತವಾದ ಮುದ್ರೆಯನ್ನು ಹಾಕಲಾಯಿತು. ಪ್ರಪಂಚದಲ್ಲಿಯೇ ಅತ್ಯಂತ ವಿಶಾಲವಾದ, ಬೃಹತ್ತಾರ ಸಂವಿಧಾನ ಹೊಂದಿರುವ ಭಾರತ ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡ ಗಣತಂತ್ರ ವ್ಯವಸ್ಥೆ ಅಥವಾ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವ ರಾಷ್ಟ್ರ ಎಂಬ ಹಿರಿಮೆಗೆ ಪಾತ್ರವಾಗಿದೆ. ಸಾರ್ವತ್ರಿಕ ಚುನಾವಣೆಯ ಪರಿಕಲ್ಪನೆ ಭಾರತದ ಸಂವಿಧಾನದ ಅತ್ಯಂತ ಪ್ರಗತಿ ಪರ ಹಾಗೂ ವೈಚಾರಿಕತೆಯ ಲಕ್ಷಣವಾಗಿದೆ.

### ೨.೪.೨ ಪ್ರಜಾಪ್ರಭುತ್ವದ ವ್ಯಾಖ್ಯೆಗಳು

ವಾಸ್ತವವಾಗಿ ಪ್ರಪಂಚದ ಪ್ರತಿಯೊಂದು ರಾಷ್ಟ್ರವು ತನ್ನ ಆರ್ಥಿಕ, ಸಾಮಾಜಿಕ, ರಾಜಕೀಯ, ಪರಿಸ್ಥಿತಿಯ ಮೇಲೆ ಅಲ್ಲಿಯ ಪ್ರಜಾಪ್ರಭುತ್ವ ಅರ್ಥ ನಿರ್ಧರಿಸಲ್ಪಡುತ್ತದೆ.''' ಉದಾಹರಣೆಗೆ ಸ್ಪೇನ್‌ನಲ್ಲಿ ಪ್ರತ್ಯಕ್ಷ ಪ್ರಜಾಪ್ರಭುತ್ವ ಮಾದರಿಯ ಸರಕಾರ ಅಸ್ತಿತ್ವದಲ್ಲಿದ್ದರೆ ಭಾರತದಲ್ಲಿ ಅಪ್ರತ್ಯಕ್ಷ ಪ್ರಜಾಪ್ರಭುತ್ವ ಮಾದರಿಯ ಸರಕಾರದ ಅಸ್ತಿತ್ವವಿದೆ. ಇಂಡೋನೇಷಿಯಾದಲ್ಲಿ ನಿರ್ದೇಶಕ ಪ್ರಜಾಪ್ರಭುತ್ವ ಚೀನಾ, ರಷಿಯಾಗಳಲ್ಲಿ ಜನತಾ ಪ್ರಜಾಧಿಕಾರಗಳನ್ನು ಕಾಣಬಹುದು. ಹೀಗೆ ಅತ್ಯಂತ ಉದಾತ್ತ ಚಿಂತನೆ, ಆದರ್ಶ, ನಂಬಿಕೆಗಳ ಸಂಗಮವಾಗಿರುವ ಪ್ರಜಾಪ್ರಭುತ್ವದ ಹಿರಿಮೆಯನ್ನು ಹಲವರು ವ್ಯಾಖ್ಯಾನಿಸಿದ್ದಾರೆ.

ಹೆರೋಡೋಟಸ್ "ಎಲ್ಲಿ ಜನರಿಗೆ ನೇರವಾಗಿ ಆಡಳಿತ ನಡೆಸುವ ಅಧಿಕಾರ" ಸಮಾನವಾದ ಹಕ್ಕುಗಳು ಹಾಗೂ ಸರಕಾರ ಸಂಪೂರ್ಣವಾಗಿ ಪ್ರಜೆಗಳಿಗೆ ಜವಾಬ್ದಾರಿಯುತವಾಗಿರುತ್ತದೆಯೋ ಅದೇ ಪ್ರಜಾಪ್ರಭುತ್ವವಾದಿ ಸರಕಾರ."

ಅಲ್‌ಸ್ಟೇರ್ ಷರುಗಿಯಾ "ಜನರು ಎಲ್ಲಿ ಮುಕ್ತವಾಗಿ ಮಾತನಾಡುತ್ತಾರೋ ಅಲ್ಲಿ ಸ್ವಾತಂತ್ರ್ಯವಿರುತ್ತದೆ. ಸರಕಾರ ಎಲ್ಲಿ ಜನರ ಮಾತನ್ನು ಆಲಿಸುತ್ತದೆಯೋ ಅಲ್ಲಿ ಪ್ರಜಾಪ್ರಭುತ್ವವಿರುತ್ತದೆ."

ಲಾರ್ಡ್ ಬ್ರೈಸ್" ಅಧಿಕಾರವು ಒಂದು ಪ್ರಬಲ ವರ್ಗದವರಿಗಾಗಲಿ, ಕಡಿಮೆ ಸ್ಥಾನದ ಜನರಿಗಾಗಲಿ ಸೇರದೆ ಸಮಾಜದ ಎಲ್ಲ ಜನರಿಗೂ ಸೇರಿದ್ದಾದರೆ ಅದೇ ಪ್ರಜಾಪ್ರಭುತ್ವ".

ಶೀಲೆ: "ಪ್ರಜೆಗಳು ಆಡಳಿತದಲ್ಲಿ ಭಾಗವಹಿಸುವ ಸರಕಾರವೇ ಪ್ರಜಾಪ್ರಭುತ್ವ."

ಮಿಲ್: "ಬಹುಭಾಗ ಜನತೆಯ ಆಡಳಿತ ಅಧಿಕಾರವನ್ನು ಪ್ರತಿನಿಧಿಗಳ ಮೂಲಕ ನಡೆಸುವ ಸರಕಾರವೆ ಪ್ರಜಾಪ್ರಭುತ್ವ ಸರಕಾರ."

ಅಬ್ರಾಹಂ ಲಿಂಕನ್: "ಜನರ ಸಲುವಾಗಿ, ಜನರಿಂದಲೇ ರಚಿತವಾದ ಸರಕಾರ."

ಮ್ಯಾಜಿನಿ: "ಜಾಣರು ಮತ್ತು ಒಳ್ಳೆಯವರ ಧುರೀಣತ್ವದಲ್ಲಿ ಎಲ್ಲರ ಅಭಿವೃದ್ಧಿಯನ್ನು ಎಲ್ಲರ ಮುಖಾಂತರ ಮಾಡುವುದು."

ರೂಸ್‌ವೆಲ್ಟ್: "ಪ್ರಜಾಪ್ರಭುತ್ವವು ಕೇವಲ ವಯಸ್ಕರ ಮತದಾನವಾಗಲಿ ಅಥವಾ ಶಾಂತ ರೀತಿಯಿಂದ ನಡೆಸುವ ಸಾರ್ವತ್ರಿಕ ಚುನಾವಣೆಯಾಗಲಿ ಆಗಿರದೆ ಜನತೆಯ ಪ್ರತಿನಿತ್ಯ ಜೀವನದಲ್ಲಿ ನೇರ ಹಾಗೂ ರಚನಾತ್ಮಕ ಶಕ್ತಿಯಾಗಿ ಅವರ ರಾಜಕೀಯ, ಆರ್ಥಿಕ ಬೇಡಿಕೆಗಳನ್ನು ಪೂರೈಸುವ ಆಡಳಿತ ಶಕ್ತಿ."

" That shall be democratic which shall be of the people, by the people.

Greek philosopher ?

"Democracy is not a way of governing whethere by way of determining or otherwise but primerly a way of derermining who shall qobern and broady to what end."

-R.M.Maciver.

ಈ ಮೇಲಿನ ವಿವಿಧ ಚಿಂತಕರ ಉದಾತ್ತ ಚಿಂತನೆಗಳನ್ನು ಗಮನಿಸಿದಾಗ ಪ್ರಜಾಪ್ರಭುತ್ವ ಎಂದರೆ ಅದು ಜನರ ಸರಕಾರ, ಇಲ್ಲಿ ಪ್ರಜೆಗಳೆ ಪ್ರಭುಗಳು. ಇಲ್ಲಿ ಎಲ್ಲ ನಾಗರಿಕರೂ ಸರ್ವಸ್ವತಂತ್ರರು ಮತ್ತು ಸಮಾನರು. ಪ್ರತಿಯೊಬ್ಬ ವ್ಯಕ್ತಿಯ ಪುರೋಭಿವೃದ್ಧಿಗೆ ಇಲ್ಲಿ ಅವಕಾಶಗಳಿವೆ. ಇದು ಜಾಣ, ಬುದ್ಧಿವಂತ ಉತ್ಸಾಹಿ ಮತ್ತು ಸದಾ ಚಟುವಟಿಕೆಯುಳ್ಳ ನಾಗರಿಕ ಸರಕಾರ, ಎಲ್ಲರೂ ಎಲ್ಲರ ಅಭಿವೃದ್ಧಿಗೆ ಕೆಲಸ ಮಾಡಲೇಬೇಕು. ಎಲ್ಲಾ ವಯಸ್ಕ ನಾಗರೀಕರು ತಮ್ಮ ತಮ್ಮ ಅಭಿಪ್ರಾಯಗಳನ್ನು ಮತ್ತು ವಿಚಾರಗಳನ್ನು ಅಭಿವ್ಯಕ್ತಿಪಡಿಸುವ ಸ್ವಾತಂತ್ರ್ಯವನ್ನು ಇಲ್ಲಿ ಪಡೆದುಕೊಂಡಿರುತ್ತಾರೆ. ಪ್ರಜಾಪ್ರಭುತ್ವದ ಮೂಲ ಆಧಾರಸ್ತಂಭಗಳು ಈ ನೆಲೆಯಲ್ಲಿ ಸದಾಕಾಲವೂ ಜೀವಂತವಾಗಿರಬೇಕಾಗಿರುತ್ತದೆ.

**೨.೪.೩. ಡಾ.ಬಿ.ಆರ್. ಅಂಬೇಡ್ಕರ್ ಮತ್ತು ಪ್ರಜಾಪ್ರಭುತ್ವ**

ಡಾ. ಅಂಬೇಡ್ಕರರು ಪ್ರಜಾಪ್ರಭುತ್ವದಲ್ಲಿ ಅತ್ಯಂತ ಯಥಾವತ್ತಾದ ನಂಬಿಕೆಯನ್ನು ಹೊಂದಿದ್ದರು. ಸಂಪೂರ್ಣ ಮನಸ್ಸಿನಿಂದ ಅದನ್ನು ಮಾನ್ಯ ಮಾಡಿದ್ದರು. ಅಲ್ಲದೆ ಜೀವನದುದ್ದಕ್ಕೂ ಅದಕ್ಕೆ ಗೌರವಯುತವಾದ ಸ್ಥಾನವನ್ನು ನೀಡಿದ್ದರು. ಪ್ರಜಾಪ್ರಭುತ್ವದ ಬಗ್ಗೆ ಅವರಿಗಿದ್ದಂತಹ ಅಚಲವಾದ ನಂಬಿಕೆ, ಜಾತಿಯಾಧಾರಿತವಾದ, ವರ್ಗಾಧಾರಿತವಾದ, ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯನ್ನು ಒಳಗೊಂಡ ಭಾರತದಲ್ಲಿ ಪ್ರಜಾಪ್ರಭುತ್ವಕ್ಕೆ ವಿಶೇಷ ಸ್ಥಾನವಿದೆ ಎಂದು ಪ್ರತಿಪಾದಿಸಿದರು. "ಪ್ರಜಾಪ್ರಭುತ್ವವು ಒಂದು ಬಗೆಯ ಆಡಳಿತ ವಿಧಾನ ಮಾತ್ರವಲ್ಲ. ಅದೊಂದು ಮೂಲತಃ ಸಾಮಾಜಿಕ ಜೀವನ ಪದ್ಧತಿ. ಸಂಯುಕ್ತ ಸಂಪರ್ಕವುಳ್ಳ ಅನುಭವ, ದೇಶಬಾಂಧವರಲ್ಲಿ ಪರಸ್ಪರರನ್ನು ಗೌರವದಿಂದ ಕಾಣುವ ಮನೋವೃತ್ತಿ ಪ್ರಜಾಪ್ರಭುತ್ವದ ಮೂಲ ಲಕ್ಷಣವಾಗಿದೆ." ಎಂದು ಅಭಿಪ್ರಾಯಪಟ್ಟಿದ್ದಾರೆ[೧೩] ಸಮಾನತೆಯ ತತ್ವವನ್ನು ಆಧರಿಸಿರುವ ಅಂಬೇಡ್ಕರರ ಚಿಂತನೆಯೂ ಗ್ರಾಂಥಿಕ ಸಮಾನತೆಯ ಕಲ್ಪನೆಯನ್ನು ಬದಿಗೊತ್ತಿ, ಭಾರತದಂತಹ ಸಮಾಜದಲ್ಲಿ ಎಲ್ಲ ಬಗೆಯ ಅಸಮಾನತೆಗಳನ್ನು ನಿವಾರಿಸಬೇಕು. ಈ ಬಗೆಯ ಅಸಮಾನತೆಯ ನಿವಾರಣೆಗೆ ಸಕಾರಾತ್ಮಕವಾದ ತಾರತಮ್ಯ ಅತ್ಯಗತ್ಯ ಎಂದು ವಿಶ್ಲೇಷಿಸಿದರು. ಪ್ರಾಯಶಃ ಭಾರತದ ಇತರ ರಾಜನೀತಿ ಚಿಂತಕರಿಗಿಂತಲೂ ಡಾ.ಅಂಬೇಡ್ಕರರನ್ನು ಸಮಾನತೆಯ ನೆಲೆಯಲ್ಲಿಟ್ಟು ನೋಡಿದಾಗ ಅವರು ಅಗ್ರಮಾನ್ಯರಾಗಿ ಕಾಣುತ್ತಾರೆ. ಅನಾದಿಕಾಲದಿಂದಲೂ ಸಮಾಜದಲ್ಲಿ ಆಳವಾಗಿ ಬೇರೂರಿರುವಂತಹ ಶ್ರೇಷ್ಠ ಕನಿಷ್ಠ, ಉಚ್ಚ ನೀಚ, ಮೇಲು ಕೀಳು ಎಂಬ ಅಸಮಾನತೆಗಳನ್ನು ತೊಡೆದು ಹಾಕಲು ಪ್ರಜಾಪ್ರಭುತ್ವವು ಅತ್ಯಂತ ಉಪಯೋಗಕಾರಿಯಾದದ್ದು. ಸಮಾಜದ ಅಂಚಿನ ಸಮುದಾಯಗಳಿಗೆ ಮೇಲುಸ್ತರಗಳಂತೆ ಅವಕಾಶಗಳನ್ನು ನೀಡಿ ಅವರು ಸಹ ಸಮಾಜದ ಮುಖ್ಯನೆಲೆಗೆ ಬರಲು ಅವಕಾಶ ಮಾಡಿಕೊಡಬೇಕು ಎಂಬುದೇ ಅವರ ಅಂತಿಮ ಅಭಿಲಾಷೆಯಾಗಿತ್ತು. ಭಾರತದ ಸಮಾಜದಲ್ಲಿ ಆರ್ಥಿಕ, ಸಾಮಾಜಿಕ ಸಮಾನತೆ ಇಲ್ಲವೇ ಇಲ್ಲ. ಕೆಲವರು ಮೇಲು, ಕೆಲವರು ಕೀಳು, ಆರ್ಥಿಕವಾಗಿ ಕೆಲವರಿಗೆ ಸಂಪತ್ತು, ಅಧಿಕಾರ ಒದಗಿಬಂದಿದ್ದರೆ ಹಲವರಿಗೆ ಬಡತನವೇ ವರವಾಗಿ ಬಂದಿರುವುದು ಇಲ್ಲಿಯ ವಾಸ್ತವಿಕತೆ.

ಡಾ. ಅಂಬೇಡ್ಕರರು ಪ್ರಜಾಪ್ರಭುತ್ವವನ್ನು ಬೆಂಬಲಿಸುವುದು ಅದು ಕೇವಲ ಜನರಿಗೆ ಆಳ್ವಿಕೆಯಲ್ಲಿ ಪಾಲ್ಗೊಳ್ಳಲು ಅತ್ಯಂತ ಹೆಚ್ಚಿನ ಮಟ್ಟದಲ್ಲಿ ಅವಕಾಶ ನೀಡುತ್ತದೆ ಎಂಬ ಕಾರಣಕ್ಕಾಗಿ ಮಾತ್ರವಲ್ಲ. ಅದು ಯಾವುದೇ ರೀತಿಯ

ರಕ್ತಪಾತ ಮತ್ತು ಹಿಂಸೆಯ ನೆರವಿಲ್ಲದೆ ಶಾಂತಿಯುತವಾಗಿ ಸಾಮಾಜಿಕ ಸಮಸ್ಯೆಗಳಿಗೆ, ಸವಾಲುಗಳಿಗೆ ಮತ್ತು ಬದಲಾವಣೆಗಳಿಗೆ ಬಹಳಷ್ಟು ಅವಕಾಶ ನೀಡುತ್ತದೆ. ಅಧಿಕಾರ ಎಂಬುದು ಯಾವುದೇ ಒಂದು ಜನಾಂಗ ಅಥವಾ ವ್ಯಕ್ತಿಯ ಕೈಯಲ್ಲಿ ಕೇಂದ್ರೀಕೃತವಾಗುವ ಬದಲು ಸಾರ್ವತ್ರಿಕವಾಗಿ ಅದರಲ್ಲಿ ಎಲ್ಲ ಸಮುದಾಯಗಳ ಜನರೂ ಭಾಗಿಯಾಗಬೇಕು. ಇಂತಹ ವ್ಯವಸ್ಥೆಯಲ್ಲಿ ಜನರು ವಯಸ್ಕ ಮತದಾನ ಪದ್ಧತಿಯ ಮೂಲಕ ಚುನಾಯಿತ ವ್ಯವಸ್ಥೆಗೆ ಮಾತ್ರವೇ ರಾಜಕೀಯ ಅಧಿಕಾರ ದತ್ತವಾಗುತ್ತಿದೆ. "ನಾವು ಸಮಾನತೆಯನ್ನು ಎಲ್ಲಿಯವರ ನಿರಾಕರಿಸುತ್ತೇವೆಯೋ ಅಲ್ಲಿಯವರೆಗೆ ನಮ್ಮ ಪ್ರಜಾಪ್ರಭುತ್ವವನ್ನು ಗಂಡಾಂತರಕ್ಕೆ ಸಿಲುಕಿಸುತ್ತೇವೆ. (ನವೆಂಬರ್ ೨೫.೧೯೪೯ರಲ್ಲಿ ಸಂವಿಧಾನ ಸಭೆಯಲ್ಲಿ ಅಂಬೇಡ್ಕರರ ಉವಾಚ) ಹಾಗಾಗಿ ಅಂಬೇಡ್ಕರರು ಪ್ರಜಾಪ್ರಭುತ್ವವನ್ನು ಅತ್ಯಂತ ಪವಿತ್ರವಾದ, ಸರ್ವಶ್ರೇಷ್ಠವಾದ ಹಾಗೂ ಸಮಾಜದ ಸಮಾನತೆಯನ್ನು ತರುವಂತಹ ಏಕಮೇವ ರಾಜಕೀಯ ವ್ಯವಸ್ಥೆ ಎಂದು ಕರೆದಿದ್ದಾರೆ.[೧೪]

ಭಾರತೀಯ ಸಂವಿಧಾನ ಶಿಲ್ಪಿ ಎಂದು ಬಿಂಬಿತವಾಗಿರುವ ಡಾ.ಬಾಬಾ ಸಾಹೇಬ್ ಅಂಬೇಡ್ಕರರು ಭಾರತ ಸಂವಿಧಾನ ರಚನೆಯಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ನಿರ್ವಹಿಸಿದ್ದಾರೆ. ಪರಸ್ಪರರಲ್ಲಿ ಮೇಲು ಕೀಳು ಎಂಬ ವಿಘಟನೆಯನ್ನು ತೊಡೆದುಹಾಕಲು ಡಾ. ಅಂಬೇಡ್ಕರರು 'ಸಮಾನ ನಾಗರಿಕ ಸಂಹಿತೆ' (Unf form civil code) ಗೆ ಅತ್ಯಂತ ಅಧೀನವಾಗಿದ್ದರು. ಇವರಲ್ಲಿ ಅಡಕವಾಗಿದ್ದ ಅದಮ್ಯ ಚಿಂತನೆಗಳು ಕಾನೂನಿನ ಬಗ್ಗೆ ಇವರಿಗಿದ್ದ ಕಾಳಜಿ, ಗೌರವ, ಸಮಾಜದ ಬಗ್ಗೆ ಅವರು ಹೊಂದಿದ್ದ ಸೈದ್ಧಾಂತಿಕ ಸಿದ್ಧಾಂತವನ್ನು ಪ್ರತಿಬಿಂಬಿಸುತ್ತವೆ. ಸಮಾಜದಲ್ಲಿ ಹಿಂದಿನಿಂದಲೂ ಅವ್ಯಾಹತವಾಗಿ ನಡೆದುಕೊಂಡು ಬಂದಿರುವ ಅವೈಚಾರಿಕ ಆಚಾರ, ಸಂಪ್ರದಾಯಗಳು ಮೇಲ್ಜಾತಿಯ ಅಥವಾ ಸ್ಥಾಪಿತ ಹಿತಾಸಕ್ತಿಗಳ ಫಲವಾಗಿರುವುದರಿಂದ ಇವು ಅಂಚಿನ, ತಳ ಸಮುದಾಯಗಳಿಗೆ ನಿರಂತರ ಶೋಷಣೆ ಮಾಡುತ್ತಿರುತ್ತವೆ. ಆದ್ದರಿಂದಲೇ ಶೋಷಿತ ಅಲಕ್ಷಿತ, ಮಹಿಳಾ ಸಮುದಾಯಗಳಿಗೆ ಕಾನೂನು ನಿರ್ಮಾತೃಗಳು, ರಾಜಕೀಯ ತಜ್ಞರು ಶ್ರಮಿಸಬೇಕು. ಹಲವಾರು ವರ್ಷಗಳಿಂದಲೇ ಆಳವಾಗಿ ಬೇರೂರಿರುವ ಇಂತಹ ಮೇಲು, ಕೀಳು, ಉಚ್ಚ, ನೀಚ ಎಂಬ ವರ್ಗ ವಿಭಜನ ಕ್ರಮಗಳು ಅತ್ಯಂತ ಜಿಗುಟುತನದಿಂದ ಕೂಡಿರುವುದರಿಂದ ಅವು ಜನರಿಗೆ ಕಾಲಕ್ಕೆ ತಕ್ಕಂತೆ ಬದಲಾಗಲೂ ಅವರಿಗೆ ಇಲ್ಲಿ ಯಾವ ಅವಕಾಶವನ್ನು ನೀಡಲಾರವು. ಅಲ್ಲದೇ ಇವು ನೈತಿಕತೆ ಮತ್ತು ವೈಚಾರಿಕತೆಗಳೆರಡನ್ನು ನಿರಂತರವಾಗಿ ದೂರವಿಡುತ್ತವೆ. ಹೀಗಾಗಿ ಇಲ್ಲಿ ಕಾನೂನು ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಬೇಕು. ಸಾಮಾಜಿಕ ಜೀವನದಲ್ಲಿನ ಅಸಮಾನತೆಗಳನ್ನು ಬಗೆಹರಿಸಿ ಸಾಮಾಜಿಕ ನ್ಯಾಯವನ್ನು ಒದಗಿಸಬೇಕು. ಇಂತಹ ಸಮಯದಲ್ಲಿ ಸಾಂವಿಧಾನಿಕ ಕಾನೂನುಗಳು ಮತ್ತು ಶಾಸನಗಳು ಎರಡೂ ಜನರ ಮತ್ತು ಪ್ರಜಾಪ್ರಭುತ್ವದ ಆಶೋತ್ತರಗಳನ್ನು ಆಧಾರಿತವಾಗಿಯೇ ರೂಪಿತವಾಗಬೇಕು. ಒಟ್ಟಾರೆಯಾಗಿ ಅಂಬೇಡ್ಕರರ ತಾತ್ವಿಕ ಚಿಂತನಾ ಲಹರಿಯೂ ಸಮಾಜವನ್ನು ಕಾಪಾಡುವ ಮುನ್ನಡೆಸುವ ಕಾನೂನುಗಳು ಪ್ರಜಾಪ್ರಭುತ್ವದ ತತ್ವಗಳನ್ನು ಆಧರಿಸಿ ಅದರ ನೆರಳಿನಲ್ಲಿಯೇ ಜಾರಿಯಾಗುವಂತಾಗಬೇಕು ಎಂಬುದು ಇವರ ಅಂತಿಮ ಕಾಳಜಿಯಾಗಿತ್ತು.[೧೫]

ಸಂವಿಧಾನದಡಿಯಲ್ಲಿಯೇ ರೂಪಿತಗೊಂಡಿರುವ ಆಡಳಿತಾಂಗವು ಅತ್ಯಗತ್ಯವಾದವು, ಅದು ಸಾಮಾಜಿಕ ವಾಸ್ತವವನ್ನು ಪ್ರತಿಬಿಂಬಿಸುವಂತಿರಬೇಕು. ಅಧಿಕಾರ ಯಾವಾಗಲೂ ದರ್ಪದಿಂದ ಕೂಡಿರುವುದರಿಂದ ಇಲ್ಲಿ

ಕೆಳಸಮುದಾಯಗಳ ಪಾಡು ಅತ್ಯಂತ ನಿಕೃಷ್ಟವಾಗಿರುತ್ತದೆ. ಆದ್ದರಿಂದಲೇ ಅಧಿಕಾರ ವರ್ಗ ಯಾವಾಗಲೂ ತುಳಿತಕ್ಕೆ ಬಲಿಯಾದ ಸಮುದಾಯಗಳ ಹಕ್ಕುಗಳನ್ನು ಕಾಪಾಡುವಂತ ನೆಲೆಯೊಂದಿಗೆ ಸಾಗಬೇಕು.

ಪ್ರಜೆಗಳ ಜೀವನದಲ್ಲಿ ಪ್ರಜಾಪ್ರಭುತ್ವವು ಒಂದು ಜೀವನ ವಿಧಾನವಾಗಬೇಕು. ಕಾಲ ಕಳೆದಂತೆ ರಾಜ್ಯಾಡಳಿತವನ್ನು ನಿರ್ವಹಿಸುವ ಮತ್ತು ಅದನ್ನು ಮುನ್ನಡೆಸುವ ರಾಜಕೀಯ ಕ್ಷೇತ್ರವನ್ನು ಪ್ರಜ್ಞಾವಂತಿಕೆಯಿಂದ ನಿಯಂತ್ರಿಸುವ ಒಂದು ಸಾಧಿತವನ್ನಾಗಿ ನಾಗರಿಕ ಸಮಾಜವನ್ನು ಡಾ. ಅಂಬೇಡ್ಕರರು ಕಂಡರು. ಆಡಳಿತರಂಗದಲ್ಲಿ ಪ್ರತಿಯೊಬ್ಬರೂ ತಮ್ಮ ಮಾನವೀಯ ಹಕ್ಕುಗಳಿಗಾಗಿ ಹೋರಾಡಬೇಕು. ಇವರ ಕಲ್ಪನೆಯ ನಾಗರಿಕ ಸಮಾಜದಲ್ಲಿ ರಾಜಕೀಯ ಪಕ್ಷ, ಸಮೂಹ ಮಾಧ್ಯಮಗಳು, ಶಿಕ್ಷಣ ಸಂಸ್ಥೆಗಳು, ವಿವಿಧ ಸಂಘ ಸಂಸ್ಥೆಗಳೊಂದಿಗೆ ಧರ್ಮವು ಸಹ ಒಂದು ನಾಗರಿಕ ಸಮಾಜದ ಮುಖ್ಯ ಸಂಸ್ಥೆ ಎಂದು ಅಂಬೇಡ್ಕರರು ಭಾವಿಸುತ್ತಾರೆ. ಪ್ರಜಾಪ್ರಭುತ್ವ ಇರುವುದು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಬೌದ್ಧಿಕ ಸ್ವಾತಂತ್ರ್ಯ ವೃದ್ಧಿಗೊಳಿಸಲು. ಹೀಗಾಗಿ ಪ್ರಭುತ್ವದ ಅಧಿಕಾರ ಮತ್ತು ವ್ಯಕ್ತಿಯ ಸ್ವಾತಂತ್ರ್ಯದ ನಡುವೆ ಸಮತೋಲನ ಏರ್ಪಡಬೇಕು. ಪ್ರಭುತ್ವದ ಅಸ್ತಿತ್ವ, ದೌರ್ಜನ್ಯ, ದಬ್ಬಾಳಿಕೆ, ಮತ್ತು ಅನ್ಯಾಯವನ್ನೂ ಪಡೆಯಲು ಬಲಹೀನರ ಸೇವೆ ಮಾಡಲು ಎಂದು ಅಂಬೇಡ್ಕರರು ನಂಬಿದ್ದರು.

ಭಾರತೀಯ ಸಮಾಜ ಹೊಂದಿರುವ ಏಣಿಶ್ರೇಣಿ ವ್ಯವಸ್ಥೆಗೆ ಮೂಲ ನೆಲೆ ಎಂದರೆ ಜಾತಿಯಾಧಾರಿತವಾದ ವ್ಯವಸ್ಥೆ. ಮನುಷ್ಯ ಮನುಷ್ಯರ ನಡುವೆ ವಿವಿಧ ಬಗೆಯಲ್ಲಿ ತಾರತಮ್ಯ ಮಾಡುವ, ಶೋಷಣೆ ನಡೆಸುವ ಜಾತಿಯ ವಿಷ ಬೀಜದ ಬಗ್ಗೆ ಅಂಬೇಡ್ಕರರು ಕಡು ವಿರೋಧಿಗಳಾಗಿದ್ದರು. ಇವರ ಸಾಮಾಜಿಕ ನ್ಯಾಯದ ಪರಿಕಲ್ಪನೆಯಲ್ಲಿ ಜಾತಿ ವ್ಯವಸ್ಥೆಯ ನಾಶ, ಅಸ್ಪೃಶ್ಯತೆಯ ನಿರ್ಮೂಲನೆಯ ವಿಚಾರಗಳು ಅತ್ಯಂತ ಪ್ರಮುಖ ಕೇಂದ್ರಸ್ಥಾನದಲ್ಲಿದ್ದವು.

ವಕ್ರವಾಗಿರುವ ಜಾತಿ ಪದ್ಧತಿಯನ್ನು ನಿರ್ಮೂಲನೆಗೊಳಿಸಿ ಸಮಾಜದಲ್ಲಿ ಸಮಾನತೆಯನ್ನು ತರಲು, ಅಸ್ಪೃಶ್ಯರಿಗೆ, ದುರ್ಬಲರಿಗೆ, ಮಹಿಳೆಯರಿಗೆ, ಶೋಷಿತರಿಗೆ ಪ್ರತಿಯೊಂದು ರಂಗಗಳಲ್ಲಿಯೂ ಮೀಸಲಾತಿಯನ್ನು ನೀಡುವುದರ ಮೂಲಕ ಅವರಿಗೆ ಸಮಾನ ಅವಕಾಶ ಕಲ್ಪಿಸಬೇಕು. ಆದ್ದರಿಂದಲೇ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಸಮಯದಲ್ಲಿ ಶೋಷಿತ ಸಮುದಾಯಗಳಿಗೆ ಸಾಮಾಜಿಕ ನ್ಯಾಯಕ್ಕನುಗುಣವಾಗಿ ರಾಷ್ಟ್ರೀಯ ರಾಜಕಾರಣದಲ್ಲಿ ನ್ಯಾಯ ಒದಗಿಸಲು ಭಾರತ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ಹಾಗೂ ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ತಮ್ಮ ಸಾಮಾಜಿಕ ನ್ಯಾಯದಡಿಯಲ್ಲಿ ರೂಪಿಸಿದ ಕೀರ್ತಿ ಬಾಬಾ ಸಾಹೇಬ ಅಂಬೇಡ್ಕರರಿಗೆ ಸಲ್ಲುತ್ತದೆ. ಭಾರತೀಯ ಸಾಮಾಜಿಕ ರಂಗದ ನಿರ್ಮಾತೃ ಡಾ.ಅಂಬೇಡ್ಕರರು ಸಮಾಜವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದವರಾಗಿದ್ದರು. ಪ್ರತಿಯೊಂದು ವಿಚಾರಗಳನ್ನು ವಿಶಿಷ್ಟವಾದ, ಆಳವಾದ ಚಿಂತನೆಯನ್ನು ಆಧರಿಸಿಯೇ ಅಂಬೇಡ್ಕರರು ವಿಶ್ಲೇಷಿಸುತ್ತಿದ್ದರು. ಅವರು ಪ್ರವೇಶ ಮಾಡದ ರಂಗವೇ ಇಲ್ಲ ಎಂದು ಹೇಳಬಹುದು. ಸಮಾಜದ ಕೊನೆಯ ಅಂಚಿನಲ್ಲಿ ಎರಡನೆಯ ದರ್ಜೆಯಲ್ಲಿ ಬದುಕುತ್ತಿರುವ ಮಹಿಳಾ ಸಮುದಾಯದ ಬಗ್ಗೆ ಅಂಬೇಡ್ಕರರು ವಿಶೇಷ ಆಸಕ್ತಿ ಹೊಂದಿದ್ದರು. ಮಹಿಳಾ ಹಕ್ಕುಗಳು ಇವರ ಕೇಂದ್ರ ಸ್ಥಾನದಲ್ಲಿದ್ದವು. ಪಿತೃ ಪ್ರಧಾನ ವ್ಯವಸ್ಥೆಯ ಕಾರಣದಿಂದ ನಲುಗಿ ಹೋಗಿದ್ದ ಮಹಿಳಾ ಸಮುದಾಯದ ಹೀನಾಯವಾದ ಬದುಕನ್ನು ಅತ್ಯಂತ ವಿಮರ್ಶಾತ್ಮಕವಾಗಿ ಅರಿತಿದ್ದ ಡಾ.ಅಂಬೇಡ್ಕರರು ಮಹಿಳಾ ಶೋಷಣೆಯನ್ನು ನಿವಾರಿಸುವ ದೃಷ್ಟಿಯಿಂದ ಮಹಿಳಾ ಸಬಲೀಕರಣಕ್ಕಾಗಿ

ಚಿಂತಿಸಿದರು. ಸಮಾಜದ ತಾತ್ಸಾರಗಳಿಗೆ ಬಲಿಯಾಗಿ ಅತ್ಯಂತ ನಿಕೃಷ್ಟ ಜೀವನ ನಡೆಸುತ್ತ ಅಂಧಕಾರದಲ್ಲಿ ಮುಳುಗಿದ್ದ ಸ್ತ್ರೀ ಸಮುದಾಯಕ್ಕೆ ಅಂಬೇಡ್ಕರರು ಒಬ್ಬ ಪ್ರವಾದಿಯಂತೆ ಬಂದರು. ಜಾತಿ, ಧರ್ಮದ ರೂಪದಲ್ಲಿ ತನ್ನ ಅನನ್ಯತೆಯನ್ನು, ಅಸ್ತಿತ್ವವನ್ನು ಕಳೆದುಕೊಂಡಿದ್ದ ಮಹಿಳೆಯ ಪಾಲಿಗೆ ಅಂಬೇಡ್ಕರರು ವಿಶೇಷವಾದ ಕಾಯಿದೆಗಳನ್ನು ರೂಪಿಸಿದರು. ಆಸ್ತಿಯ ಮೇಲಿನ ಹಕ್ಕು, ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು, ಹಿಂದೂ ವಿಧವಾ ಪುನರ್ ವಿವಾಹದಂತಹ ತುಂಬ ಯೋಜಿತವಾದ ಮೂಲಭೂತ ಹಕ್ಕುಗಳ ಬಗ್ಗೆ ಹೋರಾಡಿದರು. ಇವೇ ಮಹಿಳಾ ಸಬಲೀಕರಣಕ್ಕೆ ಅತ್ಯಂತ ಪ್ರಮುಖವಾದ ಹಕ್ಕುಗಳು ಎಂದು ಅವರು ಭಾವಿಸಿದ್ದರು. ಈ ಹಕ್ಕುಗಳು ಮಹಿಳೆಗೆ ಇಲ್ಲದಿರುವುದರಿಂದಲೇ ಪುರುಷನು ಅವಳನ್ನು ಗುಲಾಮಳನ್ನಾಗಿ ಮಾಡಿಕೊಂಡಿದ್ದಾನೆ. ಪುರುಷಶಾಹಿಯಿಂದ ವಿಮುಕ್ತಿ ಪಡೆಯಲು ಇವುಗಳ ಅಗತ್ಯತೆ ಇತ್ತು. ಇವರ ಇಂತಹ ವೈಚಾರಿಕ ಚಿಂತನೆಗಳ ಫಲವಾಗಿ ಸ್ತ್ರೀ ಅಲ್ಪ ಪ್ರಮಾಣದಲ್ಲಾದರೂ ತನ್ನ ಹಕ್ಕುಗಳ ಬಗ್ಗೆ ಅರಿಯುವಂತಾದಳು. ಹೀಗೆ ನಾವು ನೋಡುವಂತಹ ಮಹಿಳಾ ಪರ ಚಿಂತಕರಲ್ಲಿಯೇ ಪ್ರಾಯಶಃ ಡಾ.ಅಂಬೇಡ್ಕರರು ಆಗ್ರಮಾನ್ಯರಾಗಿ ಕಾಣುತ್ತಾರೆ.

ರಾಜಕೀಯಕ್ಕೂ ಧರ್ಮಕ್ಕೂ ಆಧುನಿಕ ಸಮಾಜದಲ್ಲಿ ಅತ್ಯಂತ ಹೆಚ್ಚಿನ ಅನ್ಯೂನತೆಯನ್ನು ನಾವು ಕಾಣಬಹುದು. ಧರ್ಮಾಧಾರಿತವಾದ ರಾಜಕಾರಣ ಇಂದು ಪ್ರತಿಯೊಂದು ಕಡೆಯಲ್ಲಿಯೂ ಕಂಡುಬರುತ್ತಿದೆ. ಧರ್ಮದ ಹೆಸರಿನಲ್ಲೇ ಅಧಿಕಾರ ಚುಕ್ಕಾಣಿ ಹಿಡಿದ ಉದಾಹರಣೆಗಳು ಸಹ ಇವೆ. ಪ್ರತಿಯೊಂದು ರಾಜಕೀಯ ಕ್ಷೇತ್ರದಲ್ಲಿ ನಡೆಯುವಂತಹ ಕಾರ್ಯ ಚಟುವಟಿಕೆಗಳು ಒಂದೊಂದು ಧರ್ಮದೊಂದಿಗೆ ತಾಳೆ ಹಾಕಿಕೊಂಡಿರುತ್ತವೆ. ಅಲ್ಲದೆ ಪ್ರತಿಯೊಂದು ಜಾತಿಯೂ ತನ್ನ ಅನನ್ಯತೆ, ಅಸ್ತಿತ್ವದ ಉಳಿವಿಗಾಗಿ ರಾಜಕೀಯವಾಗಿ ತನ್ನ ಜಾತಿಯನ್ನು ಮುನ್ನಡೆಸಲು ಒಬ್ಬ ಸ್ವಾಮಿಯನ್ನು ನೇಮಿಸಿಕೊಂಡಿರುತ್ತವೆ. ಅವನ ಮೂಲಕವೇ ಪ್ರತಿಯೊಂದು ಸಮಾಜದ ಆಗುಹೋಗುಗಳನ್ನು ನಿರ್ವಹಿಸುತ್ತಿದೆ. ರಾಜಕೀಯದ ಮೇಲೆ ಜಾತಿಯ ಸ್ವಾಮಿಗಳು ತಮ್ಮದೇ ಆದ ಪ್ರಭಾವವನ್ನು ಬೀರುತ್ತಿರುತ್ತಾರೆ. ಒಂದು ರೀತಿಯಲ್ಲಿ ಈ ಸ್ವಾಮಿಗಳು ಅಧಿಕಾರರಹಿತ ಅಧಿಪತಿಗಳು ಪ್ರತಿಯೊಂದು ಸಭೆ, ಸಮಾರಂಭಗಳಲ್ಲಿಯೂ ಒಬ್ಬೊಬ್ಬ ಸ್ವಾಮಿಯ ಸಾನಿಧ್ಯ ಅತ್ಯಂತ ಪ್ರಮುಖವಾಗಿರುತ್ತದೆ. ಜಾತ್ಯತೀತವಾದಂತಹ ಸೆಕ್ಯುಲರ್ ಸಿದ್ಧಾಂತದಡಿಯಲ್ಲಿ ರಚನೆಯಾಗಿರುವಂತಹ ಭಾರತದ ಸಂವಿಧಾನದಲ್ಲಿ ಇಂತಹ ನಿಲುವುಗಳು ಅಕ್ಷಮ್ಯ ಅಪರಾಧವಾಗಿದ್ದರೂ ಕೂಡ ಇವು ಯಾವುದೇ ಅಡೆ ತಡೆ ಇಲ್ಲದೆ ಮುಂದುವರೆಯುತ್ತಿವೆ. ಇದರ ಹಿನ್ನೆಲೆಯಲ್ಲಿ ನಾವು ಚುನಾವಣೆಯನ್ನು ಗಮನಿಸಿದಾಗ ಪ್ರತಿಯೊಂದು ರಾಜಕೀಯ ಪಕ್ಷಗಳು ವ್ಯಕ್ತಿಯ ಜಾತಿಯನ್ನಾಧರಿಸಿ ಟಿಕೆಟ್ ನೀಡುವುದು, ಜಾತಿಯನ್ನು ಆಧರಿಸಿ ಮಂತ್ರಿ, ಮುಖ್ಯಮಂತ್ರಿ, ಪ್ರಧಾನ ಮಂತ್ರಿಯ ಸ್ಥಾನಗಳನ್ನು ನೀಡುವುದು ಜಾತಿಯಾಧಾರಿತವಾಗಿಯೇ. ಜಾತಿ ಹಾಗೂ ರಾಷ್ಟ್ರೀಯತೆಯ ಪ್ರಶ್ನೆಯನ್ನು ಜನಸಾಮಾನ್ಯನಿಗೆ ಬಹುಮತ ಪಡೆದರೆ ಬಹುಶಃ ಅವರು ಆರಿಸಿಕೊಳ್ಳುವುದು ಜಾತಿಯನ್ನು, ನಂತರ ದೇಶವನ್ನು. ಹೀಗೆ ಜಾತಿಯ ಬಗೆಗೆ ಇರುವಂತಹ ವ್ಯಕ್ತಿಗಳ ಬಲವು ದೇಶದ ಗಣತಂತ್ರ ವ್ಯವಸ್ಥೆಗೆ ಅತ್ಯಂತ ಕಂಟಕಪ್ರಾಯವಾಗಿದೆ. ಜಾತಿ, ಹಣ, ರಾಜಕೀಯದ ಪ್ರಭಾವವಿದ್ದವರು ಚುನಾವಣೆಯಲ್ಲಿ ಹಾವು ದೊಂಬಿ, ಹೆಂಡ, ಹೆಣ್ಣು ಮುಂತಾದವುಗಳಿಂದ ಗೆದ್ದು ಬಂದು ಸಂವಿಧಾನದ ಆಶಯಗಳಿಗೆ ಭಂಗ ತರುತ್ತಿದ್ದಾರೆ.[೨]

ಹಿಂದೆಯೇ ಚರ್ಚಿಸಿದಂತೆ ರಾಜಕೀಯ ರಂಗ ತಲೆ ಹಿಡುಕರಿಗೆ ಕಳ್ಳರಿಗೆ, ಕೊಲೆಗಾರರಿಗೆ, ನಿರುದ್ಯೋಗಿಗಳಿಗೆ, ಕ್ರಿಮಿನಲ್‌ಗಳಿಗೆ ಒಂದು ರೀತಿ ಪರ್ಯಾಸ್ಸಿ ಸಂಸ್ಥೆಯಾಗಿ ಪರಿಣಮಿಸಿದೆ. ರಾಜಕೀಯ ಒಂದೇ ಅವರಿಗೆ ಸಾಮಾಜಿಕ ಜೀವನದಲ್ಲಿ ಉತ್ತಮ ಸ್ಥಾನಮಾನ ಪಡೆಯಲು ಉತ್ತಮ ವೇದಿಕೆಯಾಗಿ ರೂಪುಗೊಂಡಿದೆ. ಹೀಗೆ ದುರಾಡಳಿತ, ದುಂದು ವೆಚ್ಚಗಳಿಂದಲೆ ರಾಜಕೀಯಕ್ಕೆ ಬರುವ ಕುಳಗಳ ಸಂಖ್ಯೆ ದಿನಂಪ್ರತಿ ಹೆಚ್ಚುತ್ತಿದೆ. ಸಮಾಜ ಸೇವೆ ಎಂಬ ಹೆಸರು ಕೇವಲ ರಾಜಕೀಯದಿಂದ ಮಾತ್ರ ಸಾಧ್ಯವೇ ಎಂಬುದು ಇಲ್ಲಿ ಪ್ರಶ್ನೆಯಾಗುತ್ತದೆ. ಸ್ವತಂತ್ರ ಭಾರತದಲ್ಲಿ ಬಡವರ, ಹಿಂದುಳಿದವರ, ದಲಿತರ, ಮಹಿಳೆಯರ ಸ್ಥಿತಿ ಹೀನಾಯವಾಗಿ ಉಳಿಯಲು ಮುಖ್ಯ ರಾಜಕಾರಣದ ಕಾರಣದಿಂದ ಪ್ರಜಾಪ್ರಭುತ್ವ ವ್ಯವಸ್ಥೆ ಮನುಕುಲದ ಅತ್ಯಂತ ಮಹತ್ವದ ಪರಿಕಲ್ಪನೆ ಮನುಕುಲದ ಸಮಸ್ತ ಉನ್ನತೀಕರಣ ಸಾಧಿಸುವ, ಸರ್ವರಿಗೂ ಸಮಾನತೆ, ಸಾಮಾಜಿಕ ನ್ಯಾಯ ದೊರಕಿಸಿಕೊಡುವಂತ ಧ್ಯೇಯೋದ್ದೇಶ ಹೊಂದಿದೆ. ಆದರೆ ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿರಾಜಕಾರಣದಂತಹ ಸಂಕುಚಿತ ಅಂಶಗಳಿಗೆ ಬಲಿಯಾಗಿ, ಜಾಗತೀಕರಣದ ಅಡಿಯಲ್ಲಿ ನಲುಗುತ್ತಿದೆ. ಒಂದು ರೀತಿಯಲ್ಲಿ ಪ್ರಜಾಪ್ರಭುತ್ವದ ಜಾಗತೀಕರಣದ ಕೂಸಾದ ಮಾರ್ಕೆಟ್ಟೀಕರಣದ ಪರವಾಗುತ್ತಿದೆ. ಗಣತಂತ್ರದ ಮಾನವೀಯ ಮೌಲ್ಯಗಳು ಮಾಯವಾಗುತ್ತಿದೆ. ಹೀಗೆ ಜಾಗತೀಕರಣ, ಜಾತಿಯಂತಹ ಕಾರಣಗಳಿಂದ ಇಂದು ಪ್ರತಿಯೊಂದು ರಂಗಗಳಲ್ಲಿಯೂ ಖರೀದಿ, ವಿಕ್ರಯ, ಲಾಭಗಳಿಗೆ, ಜಾತಿಯ ನಿಷ್ಠೆ ಪರಾಕಾಷ್ಠೆ ತಲುಪುತ್ತಿವೆ. ಶಿಶುವಿನ ಜನನದಿಂದಡಿದು ಅವರ ಮರಣದವರೆಗೂ ಪ್ರತಿಯೊಂದು ಅವರ ಜಾತಿ, ಧರ್ಮದ ಅಡಿಯಲ್ಲಿ ನಿರ್ಧರಿತವಾಗುತ್ತಿವೆ. ಪ್ರತಿಸಾರಿಯೂ ಚುನಾವಣೆ ನಡೆದಾಗ ಸರಕಾರ ಹಣ, ಹೆಂಡ, ಸೀರೆ, ಮನೆಗಳ ಕೊಂಡುಕೊಳ್ಳುವಿಕೆಯನ್ನು ಸಂಪೂರ್ಣವಾಗಿ ನಿಷೇಧಿಸಿದ್ದರೂ ಇವು ಯಾವುದೇ ಅಡೆತಡೆಯಿಲ್ಲದೆ ನಿರಾತಂಕವಾಗಿ ಸಾಗುತ್ತಿರುತ್ತವೆ.

ಹೀಗೆ ಪ್ರಜಾಪ್ರಭುತ್ವದಲ್ಲಿ ಮೇಲಿನ ಎಲ್ಲ ಬಗೆಯ ಅಂಶಗಳು ಭಾರತೀಯ ಜನ ಸಮುದಾಯವನು ಶುದ್ಧ ನಾಗರೀಕರನ್ನಾಗಿಸುವ ಬದಲು ಗುಲಾಮಗಿರಿಯತ್ತ ಕೊಂಡೊಯ್ಯುತ್ತಿವೆ. ಮಹಾತ್ಮ ಗಾಂಧೀಜಿಯವರು ಪಟ್ಟಿ ಮಾಡಿಟ್ಟ ಏಳು ಪಾಪಗಳಲ್ಲಿ "ನೈತಿಕತೆ ಇಲ್ಲದ ರಾಜಕೀಯವೂ" ಒಂದು. ಇಂತಹ ರಾಜಕಾರಣದಲ್ಲಿ ಅವಕಾಶವಾದಿತನ, ದುರಾಡಳಿತ, ಲಂಚಗುಳಿತನಗಳೇ ತಾಂಡವ ಮಾಡುತ್ತಿದೆ. ಅಧಿಕಾರದ ಲಾಲಸೆಗಾಗಿ ಜನಪ್ರತಿನಿಧಿಗಳು ಜನತಂತ್ರದ ಉದಾತ್ತ ಮೌಲ್ಯಗಳನ್ನು ಗಾಳಿಗೆ ತೂರುತ್ತಿದ್ದಾರೆ. ಹೀಗೆ ಮುಂದುವರೆದರೆ ನಾವು ಈವರೆಗೂ ಗಳಿಸಿದ ಸ್ವಾತಂತ್ರ್ಯ ಮತ್ತೆ ನಮ್ಮಿಂದ ಮರೆಯಾಗುವುದಲ್ಲದೆ ಮತ್ತೆ ಗುಲಾಮಗಿರಿಯತ್ತ ಸಾಗುವುದು ಅನುಮಾನವೇ ಇಲ್ಲ. ನಮ್ಮನ್ನು ಆಳುವ ಸರಕಾರಗಳು, ಸಂಘ ಸಂಸ್ಥೆಗಳು, ಮಠಮಾನ್ಯಗಳು ಈ ಬಗ್ಗೆ ಸ್ವಲ್ಪ ಕಾಳಜಿ ವಹಿಸುವುದು ಅತ್ಯಂತ ಅಗತ್ಯವಾಗಿದೆ.

**೨.೫. ಪಂಚಾಯತ್‌ರಾಜ್ ಸಂಸ್ಥೆಯ ಸ್ಥೂಲ ಪರಿಚಯ**

'ಪಂಚಾಯತಿ' ಎಂಬ ನಿರ್ವಚನವು ಭಾರತೀಯ ಸಾಮುದಾಯಿಕ ಸಾಂಸ್ಕೃತಿಕ ಬದುಕಿನೊಂದಿಗೆ ನಿರಂತರವಾಗಿ ನಡೆದುಕೊಂಡು ಬಂದಿರುವುದಾಗಿದೆ. ಮಾನವನ ಬದುಕಿನಷ್ಟೇ ಇದರ ಇರುವಿಕೆಯೂ ಅತ್ಯಂತ ಪುರಾತನಕಾಲದಿಂದಲೂ ಇದೆ. ಪಂಚಾಯತ್ ಆಡಳಿತವು ಭಾರತದ ಇತಿಹಾಸದುದ್ದಕ್ಕೂ ಹಾಸುಹೊಕ್ಕಾಗಿದೆ. ಇದು ಕೇವಲ ಆಡಳಿತಾಂಗ

ಮಾತ್ರವಾಗಿರದೆ ಭಾರತೀಯ ಸಾಂಸ್ಕೃತಿಕ ಪರಂಪರೆಯ ಹಿರಿಮೆಯನ್ನು ಪ್ರತಿಬಿಂಬಿಸುವ ಆಚಾರ, ವಿಚಾರ, ಸಂಸ್ಕೃತಿ, ನೀತಿ, ನಿಯಮಗಳ ಸಂಗಮವಾಗಿದೆ. "ಪ್ರಾಚೀನ ಪಂಚಾಯಿತಿ' 'ಪಂಚಪರಮೇಶ್ವರ' ಎಂಬ ದೈವಿಕನೆಲೆಯಲ್ಲಿ ತನ್ನ ಸ್ಥಾನವನ್ನು ಅಲಂಕರಿಸಿತ್ತು. ಮಧ್ಯಕಾಲೀನ ಅವಧಿಯಲ್ಲಿ ಪರಕೀಯರ ಆಡಳಿತದವಧಿಯಲ್ಲಿ ಗುಪ್ತಗಾಮಿನಿಯಂತಿತ್ತು "(ವಸಂತ ಪಾಟೀಲ, ೧೯೮೭)." ಮುಖ್ಯವಾಗಿ ಗ್ರಾಮೀಣ ಸಮುದಾಯದ ಒಳಿತನ್ನು ಅತ್ಯಂತ ಆಳವಾಗಿ ಅರಿತಿದ್ದ ಗಾಂಧೀಜಿಯವರು ದೇಶದ ಉನ್ನತಿಗಾಗಿ ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿ ಮನಗಂಡು ಗ್ರಾಮಗಳ ಉದ್ಧಾರವಾಗದೆ ದೇಶದ ಏಳಿಗೆ ಅಸಾಧ್ಯ ಎಂದು ಪ್ರತಿಪಾದಿಸಿದ್ದರು. ಗ್ರಾಮಾಡಳಿತವು ಆಯಾ ದೇಶದ, ಸಮುದಾಯದ ಮುಖ್ಯ ಹಂತ. ಆದ್ದರಿಂದಲೇ ಗಾಂಧೀಜೀಯವರು ಗ್ರಾಮ ಸ್ವರಾಜ್ಯದ ಮೂಲಕವೇ ಸ್ವರಾಜ್ಯದ ಕನಸನ್ನು ಕಂಡಿದ್ದರು. ಅದಕ್ಕಾಗಿ ಪಂಚಾಯತ್ ಎಂಬ ಆಡಳಿತಾತ್ಮಕ ಸಂಸ್ಥೆಯನ್ನು ಗಾಂಧೀವಾದದ ಒಂದು ತಿರುಳಿನಂತೆ ನಮ್ಮ ಸಂವಿಧಾನ ಅಂಗೀಕರಿಸಿರುವುದು.

ಅನಾದಿಕಾಲದಿಂದ ಇಂದಿನವರೆಗೂ ಪಂಚಾಯಿತಿಗಳು ಮುಂದುವರೆಯಲು ಅವುಗಳಲ್ಲಿ ಇರುವ ಸಾಮಾಜಿಕ ಮಾನ್ಯತೆ ಮುಖ್ಯ ಕಾರಣ ಎಂದು ಹೇಳಬಹುದು. ಏಕೆಂದರೆ ಪ್ರಾಚೀನ ಕಾಲದಿಂದ ಇಂದಿನವರೆಗೆ ಭಾರತದಲ್ಲಿ ಸುಮಾರು ರಾಜರು, ಸರಕಾರಗಳು ಬಂದು ಹೋದರು ಸಹ ಹಳ್ಳಿಗಳು ತಮ್ಮ ಅನನ್ಯತೆಯನ್ನು ಉಳಿಸಿಕೊಂಡೇ ಬರುತ್ತಿವೆ. 'ಪಂಚಾಯಿತಿ' ಎಂಬುದು ಹಳ್ಳಿಯ ಐದು ಜನ 'ಪಂಚರ' ಒಂದು ಸ್ಥಳೀಯ ಕಾನೂನಾತ್ಮಕ ಸಂಸ್ಥೆಯಾಗಿದ್ದು, ಇದು ಗ್ರಾಮೀಣ ವಲಯದಲ್ಲಿ ಎಲ್ಲ ಬಗೆಯ ಕಾರ್ಯಚಟುವಟಿಕೆಗಳಿಗೆ ಮೂಲ ನೆಲೆಯಾಗಿದೆ. ಜಾತ್ರೆಗಳು, ಧಾರ್ಮಿಕ ಕಾರ್ಯಗಳು, ವ್ಯಾಜ್ಯೆಗಳು, ಜಗಳ, ತಕರಾರು, ಶಿಕ್ಷೆ, ವಿವಾಹ ಸಂಬಂಧಿ ವಿಚಾರಗಳು ಇದರ ಸುಪರ್ದಿಗೆ ಬರುತ್ತಿದ್ದವು. ಇದು ನೀಡುವ ನಿರ್ಣಯವನ್ನು ಅಲ್ಲಿಯ ಪ್ರತಿಯೊಬ್ಬ ವ್ಯಕ್ತಿಯೂ ಒಪ್ಪಲೇಬೇಕಿತ್ತು. ಹಾಗೆ ಅದನ್ನು ಶಿರಸಾವಹಿಸಿ ಪಾಲನೆ ಮಾಡಲೇ ಬೇಕಿತ್ತು. ಇಲ್ಲವಾದರೆ ಬಹಿಷ್ಕಾರ, ಇಲ್ಲ ಕೋರ್ಟು, ಕಛೇರಿ, ನ್ಯಾಯಪೀಠ ಎಲ್ಲವೂ ಪಂಚರೆ ನಿರ್ವಹಿಸುತ್ತಿದ್ದರು. ಆದ್ದರಿಂದ ಇಂದಿಗೂ ಗ್ರಾಮೀಣ ವಲಯಗಳಲ್ಲಿ ಪಂಚರಿಗೆ ಅತ್ಯಂತ ಮಾನ್ಯತೆ ಇದೆ. ಹಳ್ಳಿಯ ಸಂಪೂರ್ಣ ರಾಜಕೀಯಕ್ಕೆ ಸಂಬಂಧಿಸಿದಂತೆ ಇದು ತುಂಬ ಜವಾಬ್ದಾರಿಯುತವಾಗಿ ಕಾರ್ಯ ನಿರ್ವಹಿಸುವುದು.

ಇಂತಹ ಆದರ್ಶನೀಯ ಚಿಂತನೆಯನ್ನು ಹೊಂದಿದ್ದ ಪಂಚಾಯಿತಿ ಸಂಸ್ಥೆಯ ಚಿಂತನೆಗಳಿಗೆ ಮಾರುಹೋಗಿದ್ದ ಮಹಾತ್ಮ ಗಾಂಧೀಜಿಯವರ ಆಶಯದಂತೆ ಸ್ವಾತಂತ್ರ್ಯಾನಂತರದಲ್ಲಿ ಇವುಗಳಿಗೆ ಸಂವಿಧಾನಾತ್ಮಕವಾಗಿ ಆಡಳಿತಾತ್ಮಕ ಮರುಜೀವ ನೀಡಿ ಮತ್ತೆ ಮುಂದುವರೆಯಲು ಅವಕಾಶ ಕಲ್ಪಿಸಿಕೊಡಲಾಯಿತು. ಸಂವಿಧಾನ ನಿರ್ಮಾಪಕಗರು ಸಹ ಇದಕ್ಕೆ ಸಂವಿಧಾನಾತ್ಮಕ ಮಾನ್ಯತೆ ನೀಡಿದರು. ಪಂಚಾಯಿತಿ ಆಡಳಿತವು ಕೇವಲ ಗ್ರಾಮ ಪಂಚಾಯಿತಿಗೆ ಮಾತ್ರವೇ ಮೀಸಲಾಗಿರದೆ ಅದಕ್ಕಿಂತ ಮೇಲಿನ ಹಂತವಲ್ಲಿಯ ತಾಲ್ಲೂಕು, ಜಿಲ್ಲಾ ಪಂಚಾಯಿತಿಗಳ ಮಿತಿಯಲ್ಲಿ ತನ್ನದು ಒಂದು ಪಾಲನ್ನು ನೀಡುತ್ತಿದೆ. ಒಟ್ಟಿನಲ್ಲಿ ಈ ಮೂರು ಬಗೆಯ ಪಂಚಾಯಿತಿ ವ್ಯವಸ್ಥೆಗಳ ಒಟ್ಟು ಗುರಿಯೇ ಗ್ರಾಮೀಣಾಭಿವೃದ್ಧಿ. ಪ್ರತಿಯೊಂದು ಗ್ರಾಮಗಳು ಸ್ವಅಭಿವೃದ್ಧಿಯನ್ನು ಸಾಧಿಸಿ ತನ್ನ ಗ್ರಾಮಸ್ಥರಿಗೆ ಅಗತ್ಯವಾಗಿರುವ ಮೂಲಭೂತ ಸೌಕರ್ಯಗಳನ್ನು ದೊರಕಿಸಿಕೊಟ್ಟು ಅವರ ಜೀವನ ಮಟ್ಟವನ್ನು ಉತ್ತಮಗೊಳಿಸುವ ಗುರಿ ಹೊಂದಿದೆ.

ಪ್ರತಿಯೊಂದು ಗ್ರಾಮವು ಈ ರೀತಿ ಗ್ರಾಮೀಣ ಜನರ ಸಮಗ್ರ ಬೆಳವಣಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸುವಂತಾದರೆ ಗಾಂಧೀಜಿಯವರ ರಾಮರಾಜ್ಯದ ಕನಸು ನನಸಾಗಬಹುದು. ಇದೇ ದೇಶದ ಸಂಸತ್ತಿಗೆ ಕೆಳಮನೆಯಾಗಿರುವ ಲೋಕಸಭೆಗೆ ಅದರ ಹಳ್ಳಿಗಳ ಗ್ರಾಮಸಭೆಗೂ ಎರಡಕ್ಕೂ ಅನ್ಯೋನ್ಯತೆಯ ಸಂಬಂಧ ಏರ್ಪಡುವುದು. ಇದುವೇ ಗ್ರಾಮಾಡಳಿತದ ದೃಷ್ಟಿಯಿಂದ ಗಾಂಧಿಯವರು ಹೊಂದಿದ್ದ ಆಶಯವಾಗಿತ್ತು. ಇದನ್ನು ಆಧರಿಸಿಯೇ ಸಂವಿಧಾನದ ನಾಲ್ಕನೆಯ ಭಾಗದಲ್ಲಿನ 'ರಾಜ್ಯ ನೀತಿ ನಿರ್ದೇಶಕ ತತ್ವಗಳು' ಅಡಿಯಲ್ಲಿ ೪೦ನೇ ಕಲಂ ಪಂಚಾಯತಿಗಳ ಇರುವಿಕೆಯನ್ನು ಸೂಚಿಸುತ್ತದೆ. ಹಾಗೆ ಪಂಚಾಯತ್ ಆಡಳಿತವನ್ನು ಸಹ ಸೂಚಿಸುವುದು.

'ಪಂಚಾಯತ್' (ಪಂಚ+ಆಯತ) ಎಂಬ ಶಬ್ದವು ಬಹುಶಃ ಭಾರತದ ಸಾಂಸ್ಕೃತಿಕ ಇತಿಹಾಸದುದ್ದಕ್ಕೂ ಬಂದಿರುವಂತಹದ್ದು. ಪಂಚ ಪರಮೇಶ್ವರರು ಎಂಬ ಪದವಿ ಸೂಚಿಸುವಂತೆ ನ್ಯಾಯಗಳು, ನಿರ್ಣಯ, ಸತ್ಯ ಇವೆಲ್ಲವುಗಳ ಮುಂದುವರಿಕೆಯಾಗಿ ನ್ಯಾಯಾಲಯಗಳ ಉಗಮವಾಗಿದೆ. ಹಿಂದಿನಿಂದಲೂ ಗ್ರಾಮಗಳು ತಮ್ಮದೇ ಆದಂತಹ ಸ್ವಾಯತ್ತ ಗಣತಂತ್ರ ವ್ಯವಸ್ಥೆಯನ್ನು ತಮ್ಮ ತಮ್ಮಲ್ಲಿಯೇ ಅಳವಡಿಸಿಕೊಂಡು ಎಲ್ಲ ಬಗೆಯಲ್ಲಿಯೂ ಸ್ವಯಂ ಪರಿಪೂರ್ಣತೆ ಹೊಂದಿದ್ದವು. ಹಿಂದೆ 'ಪಂಚ' ಎಂಬ ಪದವು ಸಾಂಖ್ಯವಾಗಿದ್ದರೆ ಇಂದು ಅದು ಕಾನೂನಾತ್ಮಕವಾಗಿ ಸದಸ್ಯತ್ವದ ಪರಿಕಲ್ಪನೆಯಲ್ಲಿ ಅಧಿಕೃತವಾದ ಸ್ಥಾನಮಾನ ನೀಡುವಂತಹ ಸಂಸ್ಥೆಯಾಗಿದೆ. ಅಂದರೆ ಹಿಂದಿನ ಪಂಚರೇ ಇಂದಿನ ಪಂಚಾಯಿತಿಯ ಸದಸ್ಯರು ಆಗಿದ್ದಾರೆ. ಹಿಂದಿನ ಪಂಚಾಯಿತಿಯ ಸದಸ್ಯರ ಸ್ಥಾನಮಾನ, ಜಾತಿ, ಅಂತಸ್ತು, ಗುಣ, ಧರ್ಮಗಳ ಅಡಿಯಲ್ಲಿ ಸಿಗುತ್ತಿದ್ದವು. ಆದರೆ ಇಂದು ಸಾರ್ವತ್ರಿಕವಾಗಿ ಆ ಅಧಿಕಾರ ಪ್ರತಿಯೊಬ್ಬರಿಗೂ ಸಿಗಲಿ ಎಂಬ ಘನ ಉದ್ದೇಶದಿಂದ ಚುನಾವಣೆಯ ಮೂಲಕ ಆಯ್ಕೆ ಮಾಡಲಾಗುತ್ತಿದೆ. ಈ ಪಂಚಾಯಿತಿಗಳಿಂದ ಆಯಾ ಗ್ರಾಮಗಳ ಜನರ ಪ್ರತಿನಿಧಿಗಳ ಪ್ರತಿನಿಧೀಕರಣದ ಪ್ರತೀಕವಾಗಿವೆ. ಹಿಂದಿನ ಪಂಚಾಯಿತಿಯ ಸದಸ್ಯರ ಸಂಖ್ಯೆ ಐದಕ್ಕೆ ಸೀಮಿತವಾಗಿದ್ದರೆ ಇಂದು ಅದು ಎಲ್ಲ ವರ್ಗಗಳನ್ನು ಸೇರಿಸಿ ಅಧಿಕಗೊಳಿಸಲಾಗಿದೆ. ಆ ಮೂಲಕ ಎಲ್ಲ ವರ್ಗಗಳಿಗೂ ಇಲ್ಲಿ ಸಾಮಾಜಿಕ ನ್ಯಾಯ ದೊರಕಿಸಿಕೊಡಲಾಗುತ್ತಿದೆ.

**೨.೫.೧. ಪಂಚಾಯತ್ ಸಂಸ್ಥೆಯ ಐತಿಹಾಸಿಕ ಹಿನ್ನೆಲೆ**

ಭಾರತದ ಆರಂಭದ ಸಂಸ್ಕೃತಿಯನ್ನು ನಾವು ಸಿಂಧೂ ಹರಪ್ಪ ನಾಗರಿಕತೆಗಳೊಂದಿಗೆ ತುಲನೆ ಮಾಡಿ ಮುಂದು ವರಿಯುವ ಪರಿಪಾಟ ಅಳವಡಿಸಿಕೊಂಡಿದ್ದೇವೆ. ಕ್ರಿ.ಪೂ. ೫೦೦೦ದಲ್ಲಿ ಈ ನಾಗರಿಕತೆ ಉಗಮವಾಗಿತ್ತು ಎಂದು ನಂಬಲಾಗಿದೆ. ಈ ಸಂಸ್ಕೃತಿಯಲ್ಲಿ ನಾವು ಮುಖ್ಯವಾಗಿ ಗಮನಿಸುವುದು ಅಲ್ಲಿನ ಉಡುಗೆ, ತೊಡಿಗೆಗಳನ್ನು, ಕೃಷಿ ಸಾಮಗ್ರಿಗಳನ್ನು ಹಾಗೆಯೇ ಅತ್ಯಂತ ಸುಸಜ್ಜಿತವಾದ ನಗರ ಯೋಜನೆಯನ್ನು. ಈ ಸಂಸ್ಕೃತಿಯಲ್ಲಿ ಶೌಚಾಲಯ, ವಸತಿ ಸಮುಚ್ಚಯ, ರಸ್ತೆಗಳು ತುಂಬ ವಿಶಿಷ್ಟವಾಗಿ ರೂಪ ಪಡೆದಿವೆ. ಇದನ್ನು ಇತಿಹಾಸತಜ್ಞರು ಪಂಚಾಯಿತಿಯ ಆರಂಭದ ಭಾಗ ಎಂದು ಗುರುತಿಸಿದ್ದಾರೆ. ನಂತರ ಭಾರತದ ಮೇಲೆ ಪರಕೀಯರಾದ ಆರ್ಯರ ಆಕ್ರಮಣದಿಂದ ಇಲ್ಲಿಯ ಸಂಸ್ಕೃತಿ ನಾಶವಾಯಿತು. ಅಲ್ಲದೆ ಆರ್ಯರು ಸ್ಥಳೀಯ ವಾಸಿಗಳಾದ ದ್ರಾವಿಡರನ್ನು ಗುಲಾಮರನ್ನಾಗಿ ಮಾಡಿಕೊಂಡು ಆಧಿಪತ್ಯ ಸ್ಥಾಪಿಸಿದರು. ಈ ಕಾಲಾವಧಿಯಲ್ಲಿ ಜನ್ಮ ತಾಳಿದ ವೇದಗಳು ಉಪನಿಷತ್ತುಗಳು, ಸ್ಮೃತಿಗಳು ಪಂಚಾಯಿತಿಯ ಇರುವಿಕೆಯನ್ನು ತಿಳಿಸುತ್ತವೆ.[೨೬]

ವಾಲ್ಮೀಕಿಯ ರಾಮಾಯಣದಲ್ಲಿ `ಜನಪದ` ಎಂಬ ಪದ ಉಪಯೋಗಿಸಲಾಗಿದೆ. ಇಲ್ಲಿ `ಜನತೆ` ಸಾರ್ವಜನಿಕ ಅಭಿಪ್ರಾಯ `ರಾಷ್ಟ್ರೀಯತೆ` ಎಂಬರ್ಥದಲ್ಲಿ ನಾವೀಗ ಉಪಯೋಗಿಸುತ್ತಿದ್ದೇವೆ. ಜನತಾ ಸಾರ್ವಭೌಮತ್ವವನ್ನು ಇದು ಸೂಚಿಸುತ್ತಿದೆ. `ಅಂದಿನ ಸಾಮಾಜಿಕ ಜೀವನದಲ್ಲಿ `ಜನಪದಕ್ಕೆ` ಅತ್ಯಂತ ಗೌರವಯುತ ಸ್ಥಾನಮಾನ ನೀಡಲಾಗಿತ್ತು.

ವ್ಯಾಸನ 'ಮಹಾಭಾರತ'ದಲ್ಲಿ `ಗ್ರಾಮಸಂಘ` ಎಂಬ ಪದದ ಬಳಕೆಯಾಗಿದೆ. ಇದನ್ನು ಗ್ರಾಮ ಪಂಚಾಯಿತಿ ಎಂದೇ ಕರೆಯಲಾಗುತ್ತಿದೆ. ಈ ಗ್ರಾಮ ಸಂಘಗಳೇ ಇಂದು ಒಂದು ರೀತಿಯಲ್ಲಿ ಸಂಸತ್ತಿನ ಆರಂಭದ ಪಳೆಯುಳಿಕೆಗಳಾಗಿವೆ.

ಮೌರ್ಯರ ಕಾಲಾವಧಿಯಲ್ಲಿ ಪಂಚಾಯಿತಿಗಳ ಇರುವಿಕೆಯ ಬಗ್ಗೆ ಅನೇಕ ದಾಖಲೆಗಳಿವೆ. ಅಂದಿನ ಪಂಚಾಯಿತಿಗಳು ಅತ್ಯಂತ ಹೆಚ್ಚಿನ ಸ್ವಾಯತ್ತತೆಯನ್ನು ಸಾಮಾಜಿಕ ರಂಗದಲ್ಲಿ ಪಡೆದಿದ್ದವು. ಕೇಂದ್ರ ಆಡಳಿತವು ಇವುಗಳ ಆಂತರಿಕ ವಿಷಯದಲ್ಲಾಗಲಿ ಅಥವಾ ಆಡಳಿತಾತ್ಮಕ ವಿಷಯಗಳಲ್ಲಾಗಲಿ ತಲೆ ಹಾಕುತ್ತಿರಲಿಲ್ಲ. ಗ್ರಾಮಗಳ ಆರ್ಥಿಕ, ನೈತಿಕ, ಸಾಂಸ್ಕೃತಿಕ, ಭೌದ್ಧಿಕ ಬೆಳವಣಿಗೆಗೆ ಇವು ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದವು.

ಗ್ರಾಮ ಆಡಳಿತದಿಂದ ರಾಜ್ಯಾಡಳಿತದವರೆಗೆ ಅತ್ಯಂತ ಸುವ್ಯವಸ್ಥಿತ ವ್ಯವಸ್ಥೆಯನ್ನು ಗುಪ್ತರ ಕಾಲಾವಧಿಯಲ್ಲಿ ಕಾಣಬಹುದಾಗಿದೆ. ಆದ್ದರಿಂದ ಒಂಬತ್ತನೆಯ ಶತಮಾನದವರೆಗೆ ಪಂಚಾಯತ್‌ಗಳು ಜೀವಂತ ಸಂಸ್ಥೆಗಳಾಗಿದ್ದವು. ಅವು ಹಿರಿಯರ ಮಂಡಳಿಗಳಾಗಿದ್ದವು.

ಬ್ರಿಟಿಷರ ಕಾಲಾವಧಿಯಲ್ಲಿ ಶಿಕ್ಷಣ, ಉದ್ಯೋಗ, ನೈರ್ಮಲ್ಯ ಮುಂತಾದ ಕಾರ್ಯಗಳಿಗೆ ವೈಜ್ಞಾನಿಕವಾದ ಸುಧಾರಣೆಗಳ ಜಾರಿಯಲ್ಲಿ ಸ್ಥಳೀಯ ಆಡಳಿತ ಅಂಗಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಯಿತು. ತಾಲ್ಲೂಕು, ಜಿಲ್ಲೆ, ಡಿವಿಜನ್ ಎಂಬ ಆಡಳಿತ ಅಂಗಗಳು ಇದೇ ಅವಧಿಯಲ್ಲಿ ರೂಪುತಾಳಿದ್ದವು. ಇಂದಿಗೂ ಇದೇ ಬಗೆಯ ಆಡಳಿತ ವ್ಯವಸ್ಥೆ ಮುಂದುವರೆದಿದೆ.

ಭಾರತದ ಆಡಳಿತದಲ್ಲಿ `ಸ್ಥಾನಿಕ ಸ್ವರಾಜ್ಯಗಳ ಜನಕ` ಎಂದು ಕರೆಯಲಾಗುವ ಲಾರ್ಡ್ ರಿಪ್ಪನ್‌ನು ೧೮೮೨ ರಲ್ಲಿ ಸ್ಥಳೀಯ ಸಂಸ್ಥೆಗಳ ಠರಾವನ್ನು ಪಾಸುಮಾಡಿ ಜಾರಿಗೆ ತಂದನು. ಅಂದಿನಿಂದಲೇ ಭಾರತದಲ್ಲಿ ಜಿಲ್ಲೆ, ತಾಲ್ಲೂಕ್ ಮಂಡಳಿಗಳ ಆವಿರ್ಭಾವವಾಯಿತು. ೧೯೧೨ರಲ್ಲಿ, ಭಾರತೀಯ ಮಂಡಳಿಗಳ ಕಾಯಿದೆಯೂ ಕೆಲ ಸುಧಾರಣೆಯನ್ನು ಮಾಡಿ ೧೯೦೦ರ ಕಾಯಿದೆಯಾಗಿ ಈ ಮಂಡಳಿಗಳಿಗೆ ಸ್ವಾಯತ್ತತೆಯನ್ನು ನೀಡಿತಲ್ಲದೆ ಚುನಾವಣೆಗಳ ಮುಖಾಂತರ ನಾಗರಿಕರು ತಮ್ಮ ಪ್ರತಿನಿಧಿಗಳನ್ನು ಆರಿಸುವ ಪ್ರಜಾಪ್ರಭುತ್ವ ಪದ್ಧತಿಯನ್ನು ಯೋಜಿತವಾಗಿ ಮೊದಲ ಬಾರಿಗೆ ಕಾರ್ಯಾತ್ಮಕವಾಗಿ ಒದಗಿಸಿಕೊಟ್ಟರು. ೧೯೧೭ರ ಆಗಸ್ಟ್ ೨೦ರ ಸುಮಾರಿಗೆ ಭಾರತಕ್ಕೆ ಸಂಬಂಧಿಸಿದ [Secretary of state for India] ಮೊಂಟ್ಯೆಗೋ ಬ್ರಿಟಿಷ್ ಸಂಸತ್ತಿನ ಕೆಳಮನೆಯಲ್ಲಿ "ಭಾರತದಲ್ಲಿ ಹೊಣೆಗಾರ ಸರಕಾರವನ್ನು ತರಲು ಹಂತ ಹಂತವಾಗಿ ಸ್ವರಾಜ್ಯ ಸಂಸ್ಥೆಗಳನ್ನು ಬೆಳೆಸುವುದು ಬ್ರಿಟಿಷ್ ಸರಕಾರದ ನೀತಿಯಾಗಿದೆ" ಎಂದಿದ್ದರು. ಈ ಕಾರಣದಿಂದಲೇ ಭಾರತದಲ್ಲಿ ಆಡಳಿತಕ್ಕೆ ಹೊಸ ತಿರುವನ್ನು ಹಾಗೂ ಭಾರತ ರಾಷ್ಟ್ರೀಯತೆಗೆ ಹೊಸ ಚೈತನ್ಯವನ್ನು

ನೀಡಿತು. ಈ ಘಟನೆಯು ಪ್ರಣಾಳಿಕೆಯು ಮೇಲೆ ಹಾಗೂ ಮೊಂಟೆಗೋ ಚೇಮ್ಸ್‌ಫರ್ಡ್ ಸುಧಾರಣೆಗಳನ್ನಾಧರಿಸಿಕೊಂಡು ಬಂದ '೧೯೧೯ ಭಾರತ ಸರಕಾರದ ಕಾಯಿದೆ'ಯೂ ಸ್ಥಳೀಯ ಸಂಸ್ಥೆಗಳಿಗೆ ಸ್ವಾಯತ್ತತೆಯನ್ನು ನೀಡಿತು. ಈ ಕಾಯ್ದೆಯು ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸಲ್ಪಟ್ಟಿತು. ಪ್ರಾದೇಶಿಕ ಆಡಳಿತದಲ್ಲಿ ಕಾಯ್ದಿಟ್ಟ ವಿಷಯಗಳು ಬ್ರಿಟಿಷರ ಕೈಯಲ್ಲಿಯೂ, ವರ್ಗಾಯಿಸಲ್ಪಟ್ಟ ವಿಷಯಗಳು ಭಾರತೀಯರ ಕೈಯಲ್ಲಿ ಬಂದವು. ಇದಕ್ಕೆ ದ್ವಿವಿಧ ಆಳ್ವಿಕೆ ಎಂಬ ಹೆಸರಿತ್ತು."[೧೮]

ಬ್ರಿಟೀಷರ ಕಾಲಾವಧಿಯಲ್ಲಿ ಗ್ರಾಮ ಪಂಚಾಯಿತಿಗಳು ತುಂಬ ನಿರ್ಲಕ್ಷ್ಯಕ್ಕೆ ಒಳಪಟ್ಟವು ಎನ್ನಲಡ್ಡಿ ಇಲ್ಲ. ಆಗ ಹಳ್ಳಿಗಳಲ್ಲಿ ಪರಂಪರಾಗತವಾಗಿ ತಮ್ಮ ಹಿಡಿತದಲ್ಲೇ ಇಡೀ ಗ್ರಾಮದ ಅಧಿಕಾರವನ್ನೇ ಕೈವಶ ಮಾಡಿಕೊಂಡಿದ್ದ ಗೌಡ, ಕುಲಕರ್ಣಿ, ಶಾನುಭೋಗ ಮುಂತಾದವರ ದಬ್ಬಾಳಿಕೆ ಹಾಗೂ ಸುಲಿಗೆಗಳಲ್ಲಿ ತೊಡಸಿಕೊಂಡವು. ಸ್ವಾತಂತ್ರ್ಯ ನಂತರದಲ್ಲಿ ಪಂಚಾಯಿತಿ ಆಡಳಿತವು ಹೊಸ ಬಗೆಯ ರೂಪ ಪಡೆಯಿತು. ಗಾಂಧಿವಾದ, ಸಮಾಜವಾದ, ಸಮುದಾಯದ ಏಳಿಗೆ, ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ, ಹಳ್ಳಿಗಳ ಅಭ್ಯುದಯ, ಹಳ್ಳಿಗಾಡಿನ ಪ್ರಜಾಪ್ರಭುತ್ವ, ಸ್ವರಾಜ್ಯ, ರಾಮರಾಜ್ಯ, ಕಲ್ಯಾಣ ರಾಜ್ಯ, ಪಂಚವಾರ್ಷಿಕ ಯೋಜನೆಗಳು ಮುಂತಾದ ಧ್ಯೇಯೋದ್ದೇಶಗಳನ್ನು ಕ್ರೋಢೀಕರಿಸಿಕೊಂಡು ಮುನ್ನಡೆಯುವ ಆದರ್ಶವನ್ನು ಇಂದಿನ ನಮ್ಮ ಪಂಚಾಯತ್ ಸಂಸ್ಥೆಗಳು ಹೊಂದಿವೆ."[೧೯] ಸ್ವಾತಂತ್ರ್ಯನಂತರ ಭಾರತದ ನೀತಿತಜ್ಞರು ಪಂಚಾಯಿತಿಯ ಕಲ್ಪನೆಯೂ ಗಾಂಧೀವಾದದೊಂದಿಗೆ ಇರುವ ಭಾವನಾತ್ಮಕ ಸಂಬಂಧವನ್ನು ಸಾಕಾರಗೊಳಿಸುವ ಸಲುವಾಗಿ ನೇಮಿಸಿ ಪಂಚಾಯಿತಿಯ ಇರುವಿಕೆಯನ್ನು ಮತ್ತಷ್ಟು ವಿಸ್ತರಿಸಿತು.

**೨.೫.೨. ಬಲವಂತರಾಯ ಮೆಹತಾ ಸಮಿತಿ**



"ಮೋಚಿಗನಿಗೆ ಬೂಟು ತಯಾರಿಸುವುದು ಗೊತ್ತೇ ವಿನಃ ಅದು ಎಲ್ಲಿ ಚುಚ್ಚುವುದು ಎಂಬುದು ಅದನ್ನು ಧರಿಸಿದವರಿಗೆ ಮಾತ್ರ ಗೊತ್ತಿರುತ್ತದೆ." ಎಂಬುದು ಪ್ಯಾರಿಸ್‌ನ ಅತ್ಯಂತ ಪ್ರಾಚೀನ ಗಾದೆ. ಸ್ಥೂಲವಾಗಿ ಹೇಳಬೇಕೆಂದರೆ ಯಾವ ವರ್ಗ ಅಥವಾ ಜನರಿಗೆ ತಮಗೆ ಏನು ಬೇಕು, ಬೇಡಗಳನ್ನು ಅವರೇ ನಿರ್ಧರಿಸುವಂತಾಗಬೇಕು. ಕೇಂದ್ರಮಟ್ಟದಲ್ಲಿ ಕುಳಿತು ಹವಾನಿಯಂತ್ರಿತ ಕೊಠಡಿಯಲ್ಲಿ ಬಜೆಟ್ ತಯಾರಿಸುವ ಜನರಿಗೆ ಗ್ರಾಮೀಣ ಜನರ ಸಮಸ್ಯೆಗಳ ಅರಿವು ಆಗುವುದಿಲ್ಲ. ಈ ಕಾರಣದಿಂದಲೇ ಭಾರತ ಘನ ಸರಕಾರವು ಪಂಚಾಯಿತಿಗಳ ಸಮಗ್ರ ಅಭಿವೃದ್ಧಿಗೆ ಅಂದಿನ ಗುಜರಾತದ ಮುಖ್ಯಮಂತ್ರಿಯಾಗಿದ್ದ ಶ್ರೀ ಬಲವಂತರಾಯ ಮೆಹತಾರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿತು.[೨೦] ಈ ಸಮಿತಿಯಲ್ಲಿ ಡಾ.ಡಿ.ಎಸ್.ಶರ್ಮ. (ಮುಖ್ಯಮಂತ್ರಿಗಳು ಮಧ್ಯಪ್ರದೇಶ), ಠಾಕೂರ ಫೂಲಸಿಂಗ್ (ಉಪಮುಖ್ಯಮಂತ್ರಿಗಳು, ಉತ್ತರ ಪ್ರದೇಶ), ಬಿ.ಜಿ.ರಾವ್ (ಮಧ್ಯಪ್ರದೇಶದ ಹಿಂದಿನ ಮುಖ್ಯ ಕಾರ್ಯದರ್ಶಿ) ಇದರ ಪ್ರಮುಖ ಸದಸ್ಯರು. ಈ ಸಮಿತಿಯೂ ತನ್ನ ಶಿಫಾರಸ್ಸುಗಳನ್ನು ಸಂಪುಟಗಳಲ್ಲಿ ನೀಡಿತು. ಎಲ್ಲ ರಾಜ್ಯ ಸರಕಾರಗಳು ಇದರ ಯಥಾವತ್ ಜಾರಿಗೆ ತರಲು ಆದೇಶಿಸಿತು (೧೯೫೭).

ಬಲವಂತರಾಯ ಸಮಿತಿಯ ವರದಿಯ ಪ್ರಕಾರ ಸ್ಥಳೀಯ ಪಂಚಾಯಿತಿ ಆಡಳಿತ ವ್ಯವಸ್ಥೆಯೂ ೩ ಬಗೆಯ ವರ್ಗೀಕರಣಕ್ಕೆ ಒಳಪಟ್ಟಿತು. ಗ್ರಾಮ, ತಾಲ್ಲೂಕು, ಹಾಗೂ ಜಿಲ್ಲಾ ಮಂಡಳಿಗಳ ರಚನೆಯನ್ನು ಇದು ಪ್ರಸ್ತಾಪಿಸಿತು. ಒಟ್ಟಿನಲ್ಲಿ ಇದು ಸ್ಥಳೀಯ ಪ್ರಜಾಪ್ರಭುತ್ವವಾದಿ ಆಡಳಿತ ಎನ್ನಲು ಅಡ್ಡಿ ಇಲ್ಲ. ಪಂಚವಾರ್ಷಿಕ ಯೋಜನೆಗಳು

ಸಮರ್ಪಕವಾಗಿ ಜಾರಿಗೆ ಬರಬೇಕು. ಹಾಗೆ ಅಧಿಕಾರದಲ್ಲಿ ವಿಕೇಂದ್ರೀಕರಣ ಆಗಬೇಕು. ಅಲ್ಲದೆ ಗ್ರಾಮೀಣ ಸಮುದಾಯ ತಮ್ಮ ಬೇಕು ಬೇಡಗಳನ್ನು ತಿಳಿಸುವ ಧ್ಯೇಯ ಇದರಲ್ಲಿತ್ತು.[೨೧]

ಪಂಡಿತ್ ಜವಹರಲಾಲ್ ನೆಹರು ಅವರು ಗಾಂಧೀಜಿಯವರ ಕನಸಿನ ಕೂಸಾದ ಸ್ವರಾಜ್ಯದ ಕಲ್ಪನೆಗೆ ಪೂರಕವಾಗಿ 'ಗಾಧೀ ಜಯಂತಿ'ಯಂದೇ (ಅಕ್ಟೋಬರ್ ೨,೧೯೫೯) ರಾಜಸ್ಥಾನದ ನಾಗೌರ ಎಂಬಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಗೆ ಅಧಿಕೃತವಾಗಿ ಚಾಲನೆ ಕೊಟ್ಟರು. ತದನಂತರ ಇದರಲ್ಲಿ ಅಡಕವಾಗಿದ್ದ ಉದಾತ್ತ ಚಿಂತನೆಗಳಿಗೆ ಮಾರು ಹೋದ ರಾಜ್ಯಗಳು ಯಥಾವತ್ತಾಗಿ ಇದನ್ನು ಜಾರಿಗೊಳಿಸಿದವು.

### ೨.೫.೩. ೧೯೬೨ರ ಕೊಂಡಜ್ಜಿ ಬಸಪ್ಪ ಸಮಿತಿ

ಈ ಸಮಿತಿಯನ್ನು ವಾಸ್ತವವಾಗಿ ಪಂಚಾಯತ್‌ರಾಜ್ ಸಂಸ್ಥೆಯ ಅಧಿಕೃತ ಸಮಿತಿ ಎಂದು ಕರೆಯಲಾಗುತ್ತಿದೆ. ಜಿಲ್ಲೆಯ ಮಟ್ಟದಲ್ಲಿ ಜಿಲ್ಲಾ ಪರಿಷತ್ತುಗಳನ್ನು ಸ್ಥಾಪಿಸಿ ಇದಕ್ಕೂ ಇತರ ಸಂಸ್ಥೆಗಳಂತೆಯೇ ನೇರ ಚುನಾವಣೆ, ಮಹಿಳೆಯರಿಗೆ, ಪರಿಶಿಷ್ಟ ಜಾತಿ, ಜನಾಂಗದವರಿಗೂ ಪ್ರಾತಿನಿಧ್ಯ, ಗ್ರಾಮಸಭೆಯನ್ನು ಬಲಪಡಿಸುವಿಕೆ, ನ್ಯಾಯ ಪಂಚಾಯಿತಿಗಳ ರಚನೆಗೆ ವಿಶೇಷ ಒತ್ತು ಕೊಡುವುದು. ಆದರೆ ಈ ಸಮಿತಿಯಿ ಶಿಫಾರಸ್ಸುಗಳು ಕೆಲವು ಕಾರಣಗಳಿಂದ ಮಸೂದೆಯಾಗಿ ಜಾರಿಗೆ ಬರಲಿಲ್ಲ. ಜಿಲ್ಲಾ ಮಟ್ಟದಲ್ಲಿ ಮಹಿಳಾ ಪ್ರಾತಿನಿಧ್ಯವನ್ನು ಪ್ರಸ್ತಾಪಿಸಿದ್ದು ಈ ಸಮಿತಿಯ ವಿಶೇಷತೆಯಾಗಿದೆ.

### ೨.೫.೪. ಅಶೋಕ ಮೆಹತಾ ಸಮಿತಿ ೧೯೭೭

ಅಶೋಕ ಮೆಹತಾ ಅವರ ಅಧ್ಯಕ್ಷತೆಯಲ್ಲಿ ಅಧಿಕಾರ ವಿಕೇಂದ್ರೀಕರಣದ ಮಹತ್ವ ಕುರಿತ ಹಿನ್ನೆಲೆಯಲ್ಲಿ ಒಂದು ಸಮಿತಿ ರಚನೆಯಾಯಿತು. ತನ್ನ ವರದಿಯನ್ನು ಈ ಸಮಿತಿಯು ೧೯೭೮ರಲ್ಲಿ ಸಲ್ಲಿಸಿತು. ಇದು ಗ್ರಾಮ ಹಾಗೂ ಜಿಲ್ಲಾ ಮಟ್ಟದಲ್ಲಿ ದ್ವಿವಿಧ ಬಗೆಯ ವ್ಯವಸ್ಥೆಗೆ ಶಿಫಾರಸ್ಸು ಮಾಡಿತು. ಪ್ರತ್ಯಕ್ಷ ಚುನಾವಣೆಯ ಮೂಲಕ ಸದಸ್ಯರನ್ನು ಆಯ್ಕೆ ಮಾಡಿ ಅವುಗಳ ನಡುವಿನ ಸಂಬಂಧವನ್ನು ಸಂಸತ್ತು, ವಿಧಾನಸಭೆ, ವಿಧಾನ ಪರಿಷತ್ತಿನೊಂದಿಗೆ ಜೋಡಿಸಿ ಅಧಿಕಾರಿ ಮತ್ತು ಚುನಾಯಿತ ಸದಸ್ಯರ ನಡುವಿನ ಸಂಬಂಧವನ್ನು ಗುರುತಿಸಿ ಹಣಕಾಸಿನ ಹಂಚಿಕೆಯ ಬಗೆಗೂ ತನ್ನ ವರದಿ ಸಲ್ಲಿಸಿತು.[೨೪]

### ೨.೫.೫. ವಿಕೇಂದ್ರೀಕರಣ ತತ್ವ

ಭಾರತೀಯ ಸಂವಿಧಾನ ಸ್ಥಳೀಯ ಸಂಸ್ಥೆಗಳ ಇರುವಿಕೆಯನ್ನು ಮಾನ್ಯ ಮಾಡಿದೆ. ಆದರೆ ಅವುಗಳ ಜಾರಿಯಲ್ಲಿ ಸಮರ್ಪಕವಾದಂತಹ ಫಲಿತಾಂಶ ಪಡೆಯುವಲ್ಲಿ ವಿಫಲವಾಗಿದೆ. ಪ್ರತಿಯೊಂದು ಅಭಿವೃದ್ಧಿ ಯೋಜನೆಗಳು ಆರಂಭಗೊಂಡರೂ ಅವು ತಮ್ಮಷ್ಟಕ್ಕೆ ತಾವೇ ಕಾರ್ಯ ನಡೆಸುವಂತಾಗಿ ಸ್ಥಳೀಯ ಸಂಸ್ಥೆಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಇವುಗಳ ಅಸ್ತಿತ್ವವನ್ನೇ ಮರೆತುಬಿಟ್ಟವು. ಸಮುದಾಯ ಅಭಿವೃದ್ಧಿಯ ಯೋಜನೆಗಳನ್ನು ಬ್ಲಾಕ್ ಮಟ್ಟದಲ್ಲಿ ಜಾರಿಗೆ ತಂದರೂ ಸಹ ಅವೆಲ್ಲವೂ ಸಾಂಸ್ಥಿಕವಾದಂತ ತಾತ್ವಿಕ ಚೌಕಟ್ಟು ಇರಲಿಲ್ಲ. ಹೀಗಿರುವಾಗ ಸ್ಥಳೀಯ ಸಂಸ್ಥೆಗಳು ಸ್ವಾತಂತ್ರ್ಯ ನಂತರದ ಪ್ರತಿಯೊಂದು ದೊಡ್ಡ ಯೋಜನೆಗಳ ವಿಫಲತೆಗೆ ಕಾರಣವಾದವು.

ಇಂತಹ ವಿಫಲತೆಗಳಿಗೆ ಕಾರಣಗಳನ್ನು ಕಂಡುಹಿಡಿಯಲೆಂದೇ ಹಲವಾರು ಬಗೆಯ ಪ್ರಯತ್ನಗಳು ನಡೆದವು. ಅಭಿವೃದ್ಧಿಯ ಫಲಗಳು ಅಂಚಿನ ಸಮುದಾಯಗಳಿಗೆ ತಲುಪದಿರಲು ಮುಖ್ಯ ಕಾರಣ ಎಂದರೆ ಗ್ರಾಮಾಡಳಿತವು ಇಂದಿಗೂ ಊಳಿಗಮಾನ್ಯಶಾಹಿ ವ್ಯವಸ್ಥೆಯ ಕಪಿಮುಷ್ಟಿಯಲ್ಲಿರುವದು.

ಊಳಿಗಮಾನ್ಯ ವ್ಯವಸ್ಥೆ ಅಲ್ಲಿಯ ಪ್ರತಿಯೊಂದು ಅಭಿವೃದ್ಧಿ ಯೋಜನೆಗಳನ್ನು ತಾನೇ ಕಬಳಿಸಿಕೊಂಡು ಉದ್ದೇಶಿತ ವರ್ಗಕ್ಕೆ ಏನೂ ದಕ್ಕದಂತೆ ಮಾಡಿತು. ಈ ಎಲ್ಲ ಕಾರಣಗಳಿಂದಲೇ ಅಭಿವೃದ್ಧಿಯ ಯೋಜನೆಯ ಪಾಲು ಎಲ್ಲಾ ವರ್ಗಗಳಿಗೂ ತಲುಪುವಂತಾಗಲೂ ಸಾಂಸ್ಥಿಕ ರಚನೆಯನ್ನು ಸ್ಥಾಪಿಸಿ ಅದರಲ್ಲಿ ಪ್ರತಿಯೊಂದು ವರ್ಗಗಳ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿಸಬೇಕು ಎಂಬ ಕೂಗು ಕೇಳಿಬರತೊಡಗಿತು. ಆ ಕಾರಣದಿಂದಲೇ ಪಂಚಾಯಿತಿ ವಲಯದಲ್ಲಿ ೩ ಹಂತದ ಆಡಳಿತ ವ್ಯವಸ್ಥೆಗೆ ವೇದಿಕೆಯನ್ನು ಸಿದ್ಧ ಮಾಡಲು ಪ್ರಯತ್ನಗಳು ನಡೆದವು. ಅಭಿವೃದ್ಧಿ ಯೋಜನೆಗಳನ್ನು ಒಂದು ಕಡೆಯಲ್ಲಿ ಯಥಾವತ್ತಾಗಿ ವಿಸ್ತೃತಗೊಳಿಸುತ್ತಲೇ ಇನ್ನೊಂದು ಕಡೆಯಲ್ಲಿ ಪ್ರಜಾಪ್ರಭುತ್ವವಾದಿ ವಿಕೇಂದ್ರಿಕರಣದ ಮೂಲಕ ಅದನ್ನು ತಳಸಮುದಾಯಗಳ ಹತ್ತಿರ ತರುವ ಪ್ರಯತ್ನ ಮಾಡಲಾಯಿತು.

ಹಿಂದಿನಿಂದಲೂ ಸಮಾಜದಲ್ಲಿ ಯಥಾವತ್ತಾಗಿ ಸಾಗಿ ಬಂದಿರುವ ಊಳಿಗಮಾನ್ಯವಾಗಿ ವ್ಯವಸ್ಥೆ ಬ್ರಿಟಿಷ್ ಕಾಲಾವಧಿಯಲ್ಲಿಯೂ ಅತ್ಯಂತ ಪ್ರಭಾವಶಾಲಿಯೇ ಆಗಿತ್ತು. ನಂತರದಲ್ಲಿಯೂ ಅದರ ಕರಾಳ ಛಾಯೆಗಳು ಸಮಾಜವನ್ನು ತನ್ನಿಂದ ಬಿಡಿಸಿಕೊಳ್ಳಲಾರದಂತೆ ತನ್ನ ಕಪಿಮುಷ್ಟಿಯಲ್ಲಿಟ್ಟುಕೊಂಡವು. ಸರಕಾರ ಎಲ್ಲ ವರ್ಗಗಳಿಗೂ ಸಮಾನ ಅವಕಾಶವನ್ನು ಸ್ಥಳೀಯ ಸಂಸ್ಥೆಗಳಲ್ಲಿ ನೀಡಿದ್ದರೂ ಸಹ ಬಲಿಷ್ಠ ವ್ಯವಸ್ಥೆಗಳೇ ಅದನ್ನು ಅನುಭವಿಸುತ್ತಿದ್ದವು. ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ಜನತೆಯನ್ನು ಅಭಿವೃದ್ಧಿಯ ಪ್ರಯತ್ನದಲ್ಲಿ ಅಳಡಿಸುವ ತನ್ನ ಮುಖ್ಯವಾದ ನಿರೀಕ್ಷಿತ ಗುರಿಯನ್ನು ಸಾಧಿಸಲಾಗಲಿಲ್ಲ. ಇದು ಗ್ರಾಮೀಣ ಜನತೆಯಲ್ಲಿ ನಿರೀಕ್ಷಿತ ಉತ್ಸಾಹ ಮತ್ತು ಅಭಿವೃದ್ಧಿಯನ್ನು ಹುಟ್ಟು ಹಾಕಲಿಲ್ಲ.

ಆದ್ದರಿಂದಲೇ ಈ ಕಾರ್ಯಕ್ರಮದ ಪುನರವಲೋಕನದ ಅವಶ್ಯಕತೆ ಇದೆ ಎಂದು ಕೇಂದ್ರ ಸರಕಾರ ಶ್ರೀ ಬಲವಂತರಾಯ ಮೆಹತಾ ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿತು.[೨೯] ಮುಖ್ಯವಾಗಿ ಈ ಸಮಿತಿಯ ಕಾರ್ಯ ದೇಶ ಅಭಿವೃದ್ಧಿ ಯೋಜನೆಗಳ ಸಮರ್ಪಕತೆಯನ್ನು ಕಂಡುಹಿಡಿಯುವುದಾಗಿತ್ತು. ಇದು ದೇಶದ ತುಂಬೆಲ್ಲಾ ತನ್ನ ಕಾರ್ಯ ಮುಗಿಸಿ ಅಂತಿಮವಾಗಿ ಒಂದು ನಿರ್ಣಯ ಮಂಡಿಸಿತು. ಗ್ರಾಮೀಣ ವ್ಯವಸ್ಥೆಗೆ ಅಗತ್ಯವಾಗಿರುವಂತಹ ಯೋಜನೆಗಳು ಕೇಂದ್ರ, ರಾಜ್ಯ ಮಟ್ಟಗಳಲ್ಲಿ ತಯಾರಾಗುತ್ತಿರುವುದರಿಂದಲೇ ತಳಮಟ್ಟದ ಜನರ ಬೇಕು ಬೇಡಗಳು ಮೇಲುಸ್ತರದ ಅಧಿಕಾರಿಗಳ ಗಮನಕ್ಕೆ ಬರುವುದೇ ಇಲ್ಲ. ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯ ಪಥದಲ್ಲಿ ಹಿಂದುಳಿದಿರಲು ಕಾರಣ ಎಂದರೆ ಜವಾಬ್ದಾರಿ ಮತ್ತು ಅಧಿಕಾರಗಳ ವಿಕೇಂದ್ರೀಕರಣವಾಗದೇ ಇರುವುದು. ಅಲ್ಲದೆ ಹಿಂದಿನಿಂದಲೂ ನಮ್ಮ ಸಂಸ್ಕೃತಿಯೊಂದಿಗೆ ಸಮ್ಮಿಳಿತವಾಗಿ ಬಂದಿರುವ ಗ್ರಾಮ ಪಂಚಾಯಿತಿಗಳ ಸಶಕ್ತೀಕರಣಕ್ಕೆ ಆಸ್ಪೆ ಹೊಸದಿರುವುದು. ಈ ಸಮಿತಿಯು ಈ ಎಲ್ಲ ಅಂಶಗಳ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಸಿದ್ಧಾಂತಕ್ಕೆ ಪ್ರತಿಸ್ಪಂದಿಸಿ ಪಂಚಾಯತ್ ರಾಜ್ ವ್ಯವಸ್ಥೆಗೆ ಹೊಸರೂಪ ನೀಡಿತು.[illegible] ೩ ಹಂತಗಳ ಪಂಚಾಯಿತಿಗಳ ರಚನೆಗೆ

ಈ ಸಮಿತಿಯೂ ಶಿಫಾರಸ್ಸು ಮಾಡಿತು. ಸ್ಥಳೀಯ ಜನತೆ ಭಾಗವಹಿಸುವಿಕೆಯಲ್ಲಿ ಗ್ರಾಮೀಣ ಮಟ್ಟದ ರಾಜಕೀಯ ಮತ್ತು ಆಡಳಿತ ಪರಿಸರವೇ ಕಾರಣ ಎಂದು ಹೇಳಿ ಪ್ರಮುಖ ಕಾರ್ಯಗಳನ್ನು ಪಟ್ಟಿ ಮಾಡಿತು. ಚುನಾವಣೆಯ ಮೂಲಕವೇ ಸ್ಥಳೀಯ ಸಂಸ್ಥೆಗಳನ್ನು ಸಂಘಟಿಸಬೇಕೆಂದು ಸಲಹೆ ನೀಡಿತು. ಇದರ ಶಿಫಾರಸ್ಸುಗಳು ಹೀಗಿವೆ.

೧. ಮೂರು ಹಂತದ ಪಂಚಾಯತ್‌ರಾಜ್ ಸಂಸ್ಥೆಯನ್ನು ರಚಿಸಿ ಈ ಮೂರು ಸ್ತರಗಳು ಒಂದಕ್ಕೊಂದು ಅಂತರ, ಅವಿನಾಭಾವ ಸಂಬಂಧ ಹೊಂದಿರಬೇಕು.

೨. ಪಂಚಾಯತ್‌ರಾಜ್ ವ್ಯವಸ್ಥೆಯ ೩ ಹಂತದ ಸಂಸ್ಥೆಗಳಿಗೆ ಬೇಕಾಗುವ ಸಂಪನ್ಮೂಲಗಳನ್ನು ಸರಕಾರಗಳು ಒದಗಿಸಿಕೊಡಬೇಕು.

೩. ಅಭಿವೃದ್ಧಿಯ ಕಾರ್ಯಕ್ರಮಗಳು ಈ ಸಂಸ್ಥೆಗಳ ಮೂಲಕವೇ ಅನುಷ್ಠಾನವಾಗಬೇಕು.

೪. ಸ್ಥಳೀಯ ಸಂಸ್ಥೆಗಳಿಗೆ ಜವಾಬ್ದಾರಿ ಮತ್ತು ಅಧಿಕಾರಗಳನ್ನು ಒದಗಿಸಬೇಕು."[೨೭]

ಈ ಎಲ್ಲಾ ಶಿಫಾರಸ್ಸುಗಳ, ಸೂಚನೆಗಳ ಅನ್ವಯ ಭಾರತ ಸರಕಾರದ ಕನಸಿನ ಕೂಸಾದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ೧೯೫೯ರಲ್ಲಿ ರಾಜಸ್ಥಾನ ಮತ್ತು ಆಂಧ್ರಪ್ರದೇಶಗಳು ಮೊದಲಿಗೆ ಜಾರಿಗೊಳಿಸಿದವು. ಬಲವಂತರಾಯ ಮೆಹತಾ ವರದಿಯ ಅನ್ವಯವೇ ವಿಕೇಂದ್ರೀಕರಣ ವ್ಯವಸ್ಥೆ ಜಾರಿಯಾಯಿತು. ೩ನೆಯ ಪಂಚವಾರ್ಷಿಕ ಯೋಜನೆಯವರೆಗೂ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿತು. ಆದರೆ ಇಲ್ಲಿಯೂ ಸಹ ಹೆಚ್ಚಿನ ಫಲಿತಾಂಶ ಬರಲಿಲ್ಲ. ಹೀಗೆ ವಿಕೇಂದ್ರೀಕರಣ ತತ್ವ ಯಶಸ್ವಿಯ ಹಾದಿಯನ್ನು ಹಿಡಿಯಲೇ ಇಲ್ಲ.

೧೯೭೭ರಲ್ಲಿ ರಚನೆಯಾದ ಶ್ರೀ ಅಶೋಕ ಮೆಹತಾ ಅವರ ಸಮಿತಿಯೂ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಪುನರ್ ಸಂಘಟಿಸುವ ದೃಷ್ಟಿಯಿಂದ ರಚಿಸಲಾಯಿತು. ಜನತೆಯೆಡೆಗೆ ಅಧಿಕಾರ ಎಂಬ ಘೋಷಣೆಯನ್ನು ಸಾಕಾರಗೊಳಿಸಲು ಕಂಕಣ ಕಟ್ಟಿಗಿತ್ತು. ಪಂಚಾಯತ್‌ರಾಜ್ ವ್ಯವಸ್ಥೆಯ ವಿಫಲತೆಗೆ ಕಾರಣವಾಗಿರುವ ದೋಷಗಳನ್ನು ಇದು ಗುರುತಿಸಿತು. ಆರ್ಥಿಕ ನೆರವು, ಮೀಸಲಾತಿಯ ಅನುಷ್ಠಾನದಲ್ಲಿ ತೊಂದರೆ, ಆರ್ಥಿಕ ಸಂಪನ್ಮೂಲಗಳ ಮೇಲೆ ಹಿಡಿತ ಇಲ್ಲದಿರುವಿಕೆ, ಈ ಸಮಿತಿಗೆ ಕಂಡು ಬಂದಂತ ಪ್ರಮುಖ ದೋಷಗಳು. ಹೀಗೆ ಇರುವಾಗ ಪಂಚಾಯತ್‌ರಾಜ್ ವ್ಯವಸ್ಥೆಗೆ ಪೂರಕ ವಾತಾವರಣ ಸೃಷ್ಟಿಯಾಗಲೇ ಇಲ್ಲ. ಈ ಸಮಿತಿಯೂ ಸಹ ತನ್ನ ಅಂತಿಮವಾದ ಘೋಷಣೆಯಲ್ಲಿ ವಿಕೇಂದ್ರೀಕರಣ ತತ್ವವನ್ನು ಪ್ರಬಲವಾಗಿ ಪ್ರತಿಪಾದಿಸಿತು.

ಆರು, ಏಳನೆಯ ವಾರ್ಷಿಕ ಯೋಜನೆಯಲ್ಲಿಯೂ ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣವನ್ನು ಬಲಿಷ್ಠಗೊಳಿಸಲು ಪ್ರಯತ್ನಿಸಲಾಯಿತು. ೮ನೇ ಯೋಜನೆಯಲ್ಲಿ ತಳ ಮಟ್ಟದ ಯೋಜನೆಗಳಿಗೆ ಪ್ರಶಸ್ತಿ ನೀಡಲಾಯಿತು. ಜಿಲ್ಲೆ, ತಾಲ್ಲೂಕು, ಗ್ರಾಮಗಳ ಮಟ್ಟದಲ್ಲಿ ಯೋಜನೆ ತಯಾರಾಗುವಂತೆ ಈ ಆಯೋಗ ಶಿಫಾರಸ್ಸು ಮಾಡಿತು. ಹೀಗೆ ಪಂಚವಾರ್ಷಿಕ ಯೋಜನೆಯಲ್ಲಿಯೂ ಇದನ್ನು ಬಲಿಷ್ಠಗೊಳಿಸಲು ಪ್ರಯತ್ನಿಸಲಾಯಿತು.

**೨.೫.೬. ೭೩ ನೇಯ ತಿದ್ದುಪಡಿ**

ಪಂಚಾಯತ್‌ರಾಜ್ ಸಂಸ್ಥೆಯ ಬಗ್ಗೆ ಬಹಳಷ್ಟು ಸಮಿತಿಗಳು ಸಲಹೆ ಶಿಫಾರಸ್ಸುಗಳ, ಸರಕಾರದ ಯೋಜಿತ ಪಂಚವಾರ್ಷಿಕ ಯೋಜನೆಗಳ ನೆರವಿನಿಂದ ಪಂಚಾಯತ್‌ರಾಜ್ ವ್ಯವಸ್ಥೆಗೆ ಒಂದು ಸಾಂಸ್ಥಿಕ ಬಲ

ಬಂದಿತು. ಪಂಚಾಯತ್‌ರಾಜ್ ಸಂಸ್ಥೆಗಳನ್ನು ಇನ್ನಷ್ಟು ಬಲಗೊಳಿಸಲು, ವಿಸ್ತರಿಸಲು ೧೯೯೩ರಲ್ಲಿ ಸಂವಿಧಾನಕ್ಕೆ ೭೩ನೆಯ ತಿದ್ದುಪಡಿಯನ್ನು ತರುವುದರ ಮೂಲಕ ಸಾಮಾಜಿಕ ನ್ಯಾಯದ ತತ್ವಕ್ಕೆ ಹೆಚ್ಚಿನ ಮಹತ್ವ ನೀಡಲಾಯಿತು. ಇದರಲ್ಲಿ ಅಡಕವಾಗಿದ್ದ ಅಂಶಗಳು ಹೀಗಿವೆ.

೧. ನಿಯಮಿತವಾಗಿ ಐದು ವರ್ಷಗಳಿಗೊಮ್ಮೆ ಚುನಾವಣೆ ನಡೆಸುವುದು.

೨. ಜಿಲ್ಲೆ, ತಾಲ್ಲೂಕು, ಗ್ರಾಮ ಮಟ್ಟದಲ್ಲಿ ಚುನಾಯಿತ ಸಂಸ್ಥೆಗಳ ಸ್ಥಾಪನೆ.

೩. ಸ್ಥಳೀಯ ಸಂಸ್ಥೆಗಳಿಗಾಗಿಯೇ ವಿಶೇಷ ಪ್ರತ್ಯೇಕ ಚುನಾವಣಾ ಆಯೋಗದ ರಚನೆ.

೪. ಪರಿಶಿಷ್ಟ ಜಾತಿ, ಜನಾಂಗಗಳಿಗೆ ಸಂಬಂಧಿಸಿದಂತೆ ಆಯಾ ಪ್ರದೇಶಗಳಲ್ಲಿಯ ಅವರ ಜನಸಂಖ್ಯೆಗೆ ಅನುಗುಣವಾಗಿ ಸದಸ್ಯ ಸ್ಥಾನಗಳಲ್ಲಿ, ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳಲ್ಲಿ ಮೀಸಲಾತಿ.

೫. ಪ್ರತಿವರ್ಗದಲ್ಲಿನ ಸದಸ್ಯ ಸಂಖ್ಯೆಯಲ್ಲಿನ ೩ರಷ್ಟು ಭಾಗಕ್ಕಿಂತ ಕಡಿಮೆ ಇದ್ದಲ್ಲಿ ಸ್ಥಾನಗಳನ್ನು ಮತ್ತು ಹುದ್ದೆಗಳನ್ನು ಆಯಾ ವರ್ಗದ ಸ್ತ್ರೀಯರಿಗೆ ಮೀಸಲಿಡುವುದು.

೬. ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಹಣಕಾಸಿನ ಕ್ರೋಢೀಕರಣ, ಸಂಪನ್ಮೂಲಗಳ ಕ್ರೋಢೀಕರಣಗಳ ಮೇಲೆ ನಿಯಂತ್ರಣ ಸಾಧಿಸಲು ಕೇಂದ್ರ ರಾಜ್ಯಗಳ ಅನುದಾನದ ಸಮರ್ಪಕ ಅನುಷ್ಠಾನಕ್ಕಾಗಿ ಹಣಕಾಸು ಆಯೋಗದ ರಚನೆ.

೭. ಪ್ರತಿ ಜಿಲ್ಲೆಯಲ್ಲಿಯೂ ಸ್ಥಳೀಯ ಸಂಸ್ಥೆಗಳ ಯೋಜನೆಯನ್ನು ತಯಾರಿಸಲು ಯೋಜನಾ ಸಮಿತಿಯ ರಚನೆ." [೨೯]

ಈ ಕಾಯಿದೆಯ ಇತರ ವಿಷಯಗಳೊಂದಿಗೆ ಎಲ್ಲ ರಾಜ್ಯಗಳಲ್ಲಿಯೂ ಸಮಾನ ಸ್ವರೂಪದ ಪಂಚಾಯತ್‌ರಾಜ್ ಆಡಳಿತ ವ್ಯವಸ್ಥೆಯನ್ನು ಸರಿಪಡಿಸಬೇಕು ಎಂದು ಕಡ್ಡಾಯಗೊಳಿಸಲಾಗಿದೆ. ಇದರಿಂದಾಗಿ ಪಂಚಾಯತ್‌ರಾಜ್ ಸಂಸ್ಥೆಗೆ ಒಂದು ಸಾಂಸ್ಥಿಕ ಸ್ವರೂಪ ದೊರಕಿತು. ಜನತೆಗೆ ಅಧಿಕಾರ ಎಂಬ ಪರಿಕಲ್ಪನೆಯನ್ನು ಜಾರಿಗೆ ತರಲು ಅದಕ್ಕೆ ಅಗತ್ಯವಾದ ಕಾನೂನಿನ ಚೌಕಟ್ಟು ಒದಗಿ ಬಂದಿತು." [೩೦]

ಪಂಚಾಯತ್‌ರಾಜ್ ಸಂಸ್ಥೆಯ ಸಫಲ ಕಾರ್ಯಕ್ಕೆ ವಿಕೇಂದ್ರೀಕರಣವು ತುಂಬ ಯಶಸ್ವಿಯಾಗಿ ಪಾಲನೆಯಾಗಬೇಕು. ಈ ಸಂಸ್ಥೆಯ ಉನ್ನತಿಗೇ ಸಶಕ್ತೀಕರಣಕ್ಕೆ ಇದು ಅಗತ್ಯ ಕೂಡ. ಹಿಂದಿನಿಂದಲೂ ನಿತ್ಯ ನಿರಂತರವಾಗಿ ಶೋಷಣೆಗೆ ಬಲಿಯಾಗಿರುವ ದಲಿತ ಸಮುದಾಯ, ಹಿಂದುಳಿದ ವರ್ಗ, ಬುಡಕಟ್ಟು ಸಮುದಾಯ, ಮಹಿಳಾ ಸಮುದಾಯಗಳಿಗೆ ಈ ಕಾಯಿದೆಯಿಂದ ಪ್ರಾತಿನಿಧ್ಯದ ಭಾಗ್ಯ ಒದಗಿ ಬಂದಿತು.

### ೨.೬. ಮಹಿಳಾ ಮೀಸಲಾತಿ ಒಂದು ಟಿಪ್ಪಣಿ

ಸಾಮಾನ್ಯವಾಗಿ ನಾವು ಮೀಸಲಾತಿ ಎಂದರೆ ಪ್ರತ್ಯೇಕವಾಗಿ ತೆಗೆದಿರಿಸಿರುವುದು. ವಿಶೇಷ ಸಂದರ್ಭಗಳಿಗಾಗಿ ಕಾಯ್ದಿರಿಸಿರುವುದು, ಮೀಸಲು ಇಡುವುದು, ಸ್ಥಾನಗಳನ್ನು ಮೀಸಲಿಡುವ ಪದ್ಧತಿ ಎಂಬ ಅರ್ಥವಿದೆ." ಮೀಸಲಾತಿಯ [illegible] ಭಾಗಕ್ಕೆ [illegible] ಏಕೆಂದರೆ ಮೀಸಲಾತಿಯು [illegible]

ಭಾರತದ ಆರಂಭದ ಕಾಲಘಟ್ಟದಲ್ಲಿಯೇ ಕಂಡುಬರುತ್ತಿವೆ. ಮಹಿಳಾ ಮೀಸಲಾತಿಯನ್ನು ಕುರಿತು ಗೌತಮ ಬುದ್ಧನು ತನ್ನ ಅನುಯಾಯಿಗಳಿಗೆ ಭೌದ್ಧ ಬಿಕ್ಷುಣಿಯರ ಸಂಘ ಸ್ಥಾಪಿಸಲು ಸೂಚಿಸಿದ್ದನು. ಮಹಿಳೆಗೆ ಯಾವುದೇ ಭೇಧಭಾವಗಳಿಲ್ಲದೆ ಸಮಾನವಾದ ಅವಕಾಶ ಕಲ್ಪಿಸಿದ್ದು ಬುದ್ಧ, ಮಹಿಳೆ ಪುರುಷನಷ್ಟೇ ಸಬಲವಾಗಿರುವುದರಿಂದ ಅವಳೂ ಸಹ ಪುರುಷನಂತೆ ಎಲ್ಲಾ ಬಗೆಯ ಅವಕಾಶಗಳನ್ನು ಪಡೆಯಲು ಅರ್ಹಳು, ಎಂದು ಬುದ್ಧನು ಮನಗಂಡಿದ್ದನು." [೬೨] ಶಿವಶರಣರ ವಚನಕಾಲ ಘಟ್ಟದಲ್ಲಿಯೂ ಸಹ ಸಮಾನತೆಯ ತತ್ವವನ್ನಾಧರಿಸಿದ ಸ್ತ್ರೀ ಪುರುಷರ ಸಮಾನತೆ ಕಾಣಬುಹುದು.

ಹಿಂದೂ ಧರ್ಮದ ಉನ್ನತಿಗಾಗಿ ರಚನೆಯಾಗಿರುವ ಸ್ಮೃತಿಗಳು, ಉಪನಿಷತ್ತುಗಳು, ವೇದಗಳು ಮಹಿಳಾ ಸಹಭಾಗಿತ್ವಕ್ಕೆ ಪೂರಕವಾದ ಅವಕಾಶ ನೀಡಲೇ ಇಲ್ಲ. ಮುಖ್ಯವಾಗಿ ಮನು ಸ್ಮೃತಿಯ ಕರ್ತೃ ಮನು ಮಹಿಳಾ ಶೋಷಣೆಗೆ ಒಂದು ಬಲವಾದ ಅಸ್ತ್ರವಾಯಿತು. ಮಹಿಳೆಯ ಎಲ್ಲಾ ಬಗೆಯ ಅಧಿಕಾರಗಳಿಗೆ ಕತ್ತರಿ ಹಾಕಿ ಅವನ್ನು ಮನೆಯ ಒಳಗೆ ಬಂಧಿಯಾಗಿ ಮಾಡಿದ್ದು ಇದೆ ಮನು, ಅಷ್ಟಕ್ಕೆ ಸುಮ್ಮನಾಗದೆ ಅವನು ಅವಳ ಮೇಲೆ ವಿವಿಧ ಕಟ್ಟುಪಾಡುಗಳನ್ನು ವಿಧಿಸಿ ಯಥಾವತ್ತಾಗಿ ಪಾಲನೆಯಾಗುವಂತೆ ಮಾಡಿದನು. ಮನುವಿನ ಶುದ್ಧ ಅನುಚರರಾದ ವೈದಿಕರು ಧರ್ಮದ ನೆಲೆಯಲ್ಲಿ ಸ್ತ್ರೀಯನ್ನು ಭಾರತದ ಇತಿಹಾಸದುದ್ದಕ್ಕೂ ನಿರಂತರವಾಗಿ ಶೋಷಣೆಗೆ ಈಡು ಮಾಡುತ್ತಲೇ ಬಂದಿದ್ದಾರೆ. ಅವೈಚಾರಿಕದ ಮತ್ತು ಅವೈಜ್ಞಾನಿಕ ಹತ್ತು ಹಲವು ಕಾಲ್ಪನಿಕ ಮಿಥ್‌ಗಳನ್ನು ಸೃಷ್ಟಿಸಿ ಮಹಿಳೆ ಹೀಗೆ ಇರಬೇಕು ಎಂಬ ಕಟ್ಟಳೆ ರಚನೆಯಾಗಲು ಕಾರಣೀಭೂತನಾದನು. ಆ ಮೂಲಕ ಅವಳ ಎಲ್ಲಾ ಅಧಿಕಾರಗಳಗೂ ದಿಗ್ಬಂಧನ ಹಾಕಿದನು. ಇಂತಹ ಅವೈಚಾರಿಕ ಚಿಂತನೆಗಳ ಫಲವಾಗಿ ಭಾರತದ ಇತಿಹಾಸದ ಉದ್ದಕ್ಕೂ ಸ್ತ್ರೀ ಸಮುದಾಯ ಪುರುಷನೊಂದಿಗೆ ಸ್ಪರ್ಧಿಸದೆ ಅವನ ಹಿಂಬಾಲಕಳಾಗಿ ಬಂದಳು. ಮಹಿಳೆಗೆ ಸಾಮಾಜಿಕ ಶೈಕ್ಷಣಿಕ, ರಾಜಕೀಯ, ಹಾಗೂ ಆರ್ಥಿಕ ಹಕ್ಕುಗಳನ್ನು ನಿರಾಕರಿಸಲು ವ್ಯವಸ್ಥಿತವಾಗಿ ರಚಿಸಿದ ಮನುಸ್ಮೃತಿಯೂ ಯಥಾವತ್ತಾಗಿ ಪಾಲನೆಯಾಗುತ್ತಲೇ ಬಂದಿದೆ. ಅವಳಿಂದ ಎಲ್ಲಾ ಅಧಿಕಾರ ಕಿತ್ತುಕೊಂಡು ಅವಳನ್ನು ಕೇವಲ ಅಲಂಕಾರಿಕ, ಭೋಗದ ವಸ್ತುವನ್ನಾಗಿ ರೂಪಿಸಿದ್ದು ಮನುವಿನ ವಿಕೃತ ಮನಸ್ಸಿನ ಒಂದು ನಿದರ್ಶನ ಮಾತ್ರ.

"ಮಾತ್ರಸ್ವತ್ರಾ ಮಹಿತ್ತಾವಾವ ವಿವಿಕ್ತಸನೋ ಭವೇತ್ ಬಲವಾನಿಂದ್ರೀಯ ಗ್ರಾಮೋ ವಿದ್ವಾಂಸ ಮಡಿಕರ್ಷಿತಿ" (೨೧೫) ಎಂಬ ಮನುವಿನ ಶ್ಲೋಕವು ಅವನ ವಿಕೃತ ಮನಸ್ಸಿನ ಒಂದು ಎಳೆಮಾತ್ರ. ಮನುವಿನ ದೃಷ್ಟಿಯಲ್ಲಿ ಮಹಿಳೆಗೆ ಶಿಕ್ಷಣ ನೀಡುವುದು ಸುತರಾಂ ಒಪ್ಪಿಗೆ ಇರಲಿಲ್ಲ. ಅವಳಿಗೆ ಶಿಕ್ಷಣ ನಿರಾಕರಿಸಲು ಕಾರಣ ಎಂದರೆ ಎಲ್ಲಿ ತನ್ನ ಅಧಿಕಾರದ ಬಗ್ಗೆ ಪ್ರಶ್ನಿಸುವಳೋ ಎಂಬ ಅಂಜಿಕೆಯಿಂದ, ಶಿಕ್ಷಣದಿಂದ ಅವಳು ಹೊರ ಜಗತ್ತಿನ ವಿಷಯಗಳನ್ನು ತಿಳಿದುಕೊಂಡು ಸ್ವಂತ ವಿಚಾರ ಮಾಡುವ ಶಕ್ತಿಯನ್ನು ಪಡೆದರೆ ಪುರುಷನಿಗೆ ಅಳಿವು ಖಂಡಿತ ಎಂಬುದು ಇವನ ಕುತಂತ್ರವಾಗಿದಿತ್ತು. ಆದ್ದರಿಂದಲೇ ಅವನು ಮಹಿಳೆಗೆ ಸಾಮಾಜಿಕ ರಂಗದಲ್ಲಿನ ಎಲ್ಲಾ ಬಗೆಯ ಅಧಿಕಾರಗಳನ್ನು ಕಿತ್ತುಕೊಂಡನು.

ಆರಂಭಕಾಲದಿಂದಲೂ ಮನುವಿನ ವಿಚಾರಗಳಿಗೆ ವಿರೋಧಿಯಾಗಿ ಅವನ ವಿಚಾರಗಳನ್ನು ತುಳಿಯುತ್ತಲೇ ಬಂದಿದ್ದ ದಲಿತ ಚೇತನ ಡಾ.ಬಿ.ಆರ್. ಅಂಬೇಡ್ಕರ್ ಅವರು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯನ್ನು ಗಂಡಸ

ಮನೆಯವರು ಶೋಷಣೆ ಮಾಡುವುದನ್ನು ತುಂಬ ಸೂಕ್ಷ್ಮವಾಗಿ ಗಮನಿಸಿದ್ದರು." ಗಂಡನು ಹೆಣ್ಣಿಗೆ ಧಾರ್ಮಿಕ ಮನಸ್ಥಿತಿ ಎಂದು ಕಾಣುವುದಾಗಲಿಲ್ಲ. ಬದಲಾಗಿ ಹೆಣ್ಣನ್ನು ಗಂಡಿಗೆ ಕಟ್ಟಿ ಗಂಡನ್ನು ತಡೆಯುವುದಿಲ್ಲ. ಬದಲಾಗಿ ತನಗಿಷ್ಟವಾದರೆ ಅವನು ಹೆಂಡತಿಯನ್ನು ಬಿಡುವುದಕ್ಕೆ ಮಾತ್ರವಲ್ಲದೆ ಅವಳ ಮಾರಾಟಮಾಡುವುದಕ್ಕೆ ಮನು ಅನುಮತಿ ನೀಡುತ್ತಾನೆ. ಮನುವಿನ ಮೂಲ ಉದ್ದೇಶವೇನೆಂದರೆ ಮಹಿಳೆ ಹೆಂಡತಿಯಾಗಿರಬೇಕೇ ವಿನಃ ಸಮಾನವಾಗಿರಲು ಅಗತ್ಯವಿಲ್ಲ. ಎನ್ನುತ್ತಾರೆ."[೩೩] (ಟಿ.ಎಂ.ಭಾಸ್ಕ, ೨೦೦೬)

ಸಮಾಜ ಎಂಬುದು ಸ್ತ್ರೀ ಪುರುಷರಿಬ್ಬರೂ ಸೇರಿಕೊಂಡು ರೂಪಿಸಿದ ವ್ಯವಸ್ಥೆ, ಇಲ್ಲಿ ಅವರಿಬ್ಬರೂ ಸರಿಸಮಾನವಾದ ಅವಕಾಶಗಳನ್ನೊಂದಿದ್ದಾರೆ. ಇಲ್ಲಿ ಯಾರೂ ಮೇಲಲ್ಲ ಯಾರು ಕೀಳಲ್ಲಾ ಎಂಬುದು ಇದರಿಂದ ಅರ್ಥವಾಗುತ್ತದೆ. ಆದರೆ ಮನುವಿನ ಕಟ್ಟುನಿಟ್ಟಾದ ವಿಚಾರಗಳು ತುಂಬ ಪ್ರಭಾವಶಾಲಿಯಾಗಿ ಸಾಮಾಜಿಕ ಸಮಾನತೆ, ಸಾಮರಸ್ಯಕ್ಕೆ ಅಡ್ಡಿಯಾದವು, ಸ್ತ್ರೀ ಪ್ರಗತಿ ಗಾಮಿಯಾಗಿ ಮುಂದುವರೆಯುವುದು ಅವನಿಗೆ ಒಪ್ಪಿಗೆ ಇರಲಿಲ್ಲ. ಇದಕ್ಕೆ ಸಂವಾದಿಯಾಗಿ ಪುರುಷಾರ್ಥಗಳು, ವೇದಗಳು, ಮಹಾಕಾವ್ಯಗಳು ಸಹ ಬೆಂಗಾವಲಾಗಿ ನಿಂತವು. ಸಾಮಾಜಿಕ ಜೀವನದಲ್ಲಿ ಪ್ರತಿನಿತ್ಯ ನಡೆಯುವಂತಹ ಘಟನೆಯಲ್ಲಿ ಸ್ತ್ರೀಯನ್ನು ಎರಡನೆಯ ದರ್ಜೆಯಲ್ಲಿ ನೋಡುವಂತ ಪರಿಪಾಠ ಇಂದಿಗೂ ಇದೆ. ಏಕೆಂದರೆ ಯಾವುದು ಯಾರಿಗೆ ಎಂಬ ಮೀಸಲು ಪಟ್ಟಿಯನ್ನು ಈ ಹಿಂದೇಯೇ ರೂಪಿಸಲಾಗಿರುವುದರಿಂದ ಅದಕ್ಕನುಗುಣವಾಗಿ ಅವರು ನಡೆಯಲೇಬೇಕು.

ಶಿಷ್ಟ ಮಹಾಕಾವ್ಯ, ಪುರಾಣ, ರಾಜಕೀಯ, ಇತಿಹಾಸಗಳ ಸಂದರ್ಭಗಳಲ್ಲಿ ಮಹಿಳೆಯೂ ಅಲ್ಪಮಟ್ಟಿಗೆ ರಾಜಕೀಯದಲ್ಲಿದ್ದಳು ಎಂಬುದು ಚರಿತ್ರೆಯ ಪುಟಗಳಿಂದ ತಿಳಿದು ಬರುತ್ತದೆ. ಅವಳೂ ಸಹ ಧಾರ್ಮಿಕ ದತ್ತಿ ಕಾರ್ಯಗಳ ಜನೋಪಕಾರಿ ಕಾರ್ಯಗಳ ಮೂಲಕ ತನಗೆ ಸಿಕ್ಕಿದ್ದ ಅವಕಾಶವನ್ನು ಅಲ್ಪಮಟ್ಟಿಗಾದರೂ ಸಮರ್ಥವಾಗಿ ನಿಭಾಯಿಸಿದ್ದಾಳೆ. ಆದರೆ ಚರಿತ್ರೆಯಲ್ಲಿ ದಾಖಲಾಗಿರುವ ಮಹಿಳಾ ಪ್ರಮಾಣ ಪುರುಷರಿಗೆ ಹೋಲಿಸಿದರೆ ಅತ್ಯಧಿಕವೇನಲ್ಲ. ಅವರ ಪ್ರತಿನಿಧೀಕರಣದ ಸ್ವರೂಪ ಮಾತ್ರ ರಾಜನ, ಮಗನ ಅನುಪ ಸ್ಥಿತಿಯಲ್ಲಿ ಅಥವಾ ಆಪತ್ಕಾಲದಲ್ಲಿಯ ಅಧಿಕಾರ ಎಂಬಂತೆ ಪ್ರತಿನಿಧೀಕರಿಸಲ್ಪಟ್ಟಿದ್ದಾಳೆ. ಇದು ಪ್ರಾಚೀನ ಭಾರತದ ಚರಿತ್ರೆಯ ವಿಷಯವಾಯಿತು. ಮಧ್ಯಕಾಲೀನ ಯುಗದಲ್ಲಿ ವಿವಿಧ ವಿದೇಶಿಯರ ಧಾಳಿಗೆ ಈಡಾದ ಭಾರತ ಹತ್ತು ಹಲವು ಏರುಪೇರುಗಳನ್ನು ಕಂಡಿತು. ಈ ಅವಧಿಯಲ್ಲಂತೂ ಅವಳು ರಾಜಕೀಯದ ಹತ್ತಿರ ಸುಳಿಯಲೂ ಆಗಲಿಲ್ಲ. ಏಕೆಂದರೆ ಈ ಅವಧಿಯಲ್ಲಿ ಪುರುಷರೇ ಗುಲಾಮಗಿರಿಗೆ ಅಥವಾ ಸೆರೆಸಿಕ್ಕಿರುವಾಗ ಮಹಿಳೆಯರ ಪಾಡುಯಾವ ರೀತಿ ಇರಬಹುದು ಎಂದು ಉಹಿಸಬಹುದು.

ಬ್ರಿಟೀಷರ ಕೈವಶವಾಗಿ ಎರಡು ನೂರು ವರ್ಷಗಳವರೆಗೆ ಗುಲಾಮಗಿರಿಯಲ್ಲಿ ನಲುಗುತ್ತಿದ್ದ ಅಖಂಡ ಭಾರತದ ರಾಜಕೀಯ ವಲಯದಲ್ಲಿ ಮೊದಲ ಬಾರಿಗೆ ಮಹಿಳೆ ರಾಜಕೀಯ ಪ್ರವೇಶ ಆಯಿತು. ಸ್ವಾತಂತ್ರ್ಯದ ಸಮಯದಲ್ಲಿ ತಮ್ಮದೂ ಒಂದು ಪಾಲನ್ನು ಅತ್ಯಂತ ಯೋಜಿತವಾಗಿ, ಯಶಸ್ವಿಯಾಗಿ ನೀಡಿದ್ದರು. ಇಲ್ಲಿ ಯಾವುದೇ ಬಗೆಯ ಸಾಮಾಜಿಕ ಕೀಳರಿಮೆ ಇರಲಿಲ್ಲ. ಎಲ್ಲರ ಉದ್ದೇಶ ಒಂದೇ ಅದೇ ಸ್ವಾತಂತ್ರ್ಯ. ಒಟ್ಟಾರೆ ರಾಜಕಾರಣದ ಪ್ರಶ್ನೆಯಲ್ಲಿ ಮಹಿಳೆಯರು ತೊಡಗಿಕೊಂಡದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ. ಇದು ಮಹಿಳೆಯರು ಜಾತಿ, ವರ್ಗ, ಜನಾಂಗದ

ಗಡಿದಾಟಿ ಬಂದು ಸಮೂಹವಾಗಿ ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಯಿತು. ಎಂದು ನಾನು ಪರಿಭಾವಿಸುತ್ತೇನೆ."
"[32] ಏಕೆಂದರೆ ಈ ಅವಧಿಯಲ್ಲಿ ಪುರುಷನೆ ಅಡಿಯಾಳಾಗಿ ಹೇಗಾದರೂ ಸರಿ ಸ್ವಾತಂತ್ರ್ಯದ ಪಡೆಯಲೇಬೇಕು ಎಂಬ ಆಶಯವನ್ನು ಹೊಂದಿದ್ದನು. ಹೀಗೆ ಎಲ್ಲರ ತ್ಯಾಗ ಬಲಿದಾನಗಳ ಮೂಲಕ ಭಾರತಕ್ಕೆ ಸ್ವಾತಂತ್ರ್ಯಬಂದಿತು. ಕ್ರಮೇಣ ಸರಕಾರ ರಚನೆಯ ಸಂದರ್ಭದಲ್ಲಿ ಆಯಾ ಜಾತಿವಾರು ಪುರುಷರು ತಾವೇ ನಾಯಕರಾಗಬೇಕು ಎಂಬ ಆಸೆಯಿಂದ ತಮ್ಮ ತಮ್ಮ ಜಾತಿ, ಸಮಾಜದ ಮಹಿಳೆಯನ್ನು ಬದಿಗೆ ಸರಿಸಿ ರಾಜಕೀಯದ ಸಂಪೂರ್ಣ ಅಧಿಕಾರವನ್ನು ತಾವೇ ಪಡೆದುಕೊಂಡರು. ಅದರ ಪ್ರತಿಫಲವಾಗಿ ರಾಜಕೀಯ ಕ್ಷೇತ್ರದಲ್ಲಿ ಭಾರತೀಯ ನಾರಿ ಪುರುಷನಷ್ಟು ಅಧಿಕಾರ ಪಡೆಯದೆ ವಂಚಿತಳಾದಳು."[33] ಇದು ಸ್ತ್ರೀ ರಾಜಕಾರಣಕ್ಕೆ ಮೊದಲಿಗೆ ಬಿದ್ದ ಕೊಡಲಿ ಪೆಟ್ಟು, ಒಂದು ವೇಳೆ ಸರಕಾರ ಸಮಾನತೆಯನ್ನು ಸಾಧಿಸುವ ಅಥವಾ ಸಾಮಾಜಿಕ ನ್ಯಾಯದ ಬಗ್ಗೆ ನಿಜವಾದ ಕಾಳಜಿಯನ್ನು ಹೊಂದಿದ್ದರೆ ಖಂಡಿತ ಅವಳಿಗೂ ಸಮಪಾಲು ದೊರೆಯುತ್ತಿತ್ತು. ಮಹಿಳೆಯರು ರಾಜಕೀಯವಾಗಿ ಸಕ್ರಿಯರಾಗಬೇಕೆಂಬುದನ್ನು ವಿಶೇಷವಾಗಿ ಸಮರ್ಥಿಸಿದ ಜವಹರಲಾಲ್ ನೆಹರೂ ಹಾಗೂ ಗಾಂಧೀಜಿಯವರು ಕೂಡ ರಾಜಕೀಯ ಪ್ರಸಂಗಗಳಲ್ಲಿ ಮಹಿಳೆಯರು ಭಾಗವಹಿಸುವಿಕೆಯನ್ನು ಅಷ್ಟಾಗಿ ಬೆಂಬಲಿಸಲು ಮುಂದಾಗಲಿಲ್ಲ[34] (ಶ್ರೀಮತಿ ಎಚ್.ಎಸ್.೨೮೫.೨೦೦೧)

ಸ್ವಾತಂತ್ರ್ಯ ನಂತರ ಭಾರತದ ಅಧಿಕಾರವನ್ನು ತನ್ನಡೆಗೆ ಪಡೆದ ಭಾರತೀಯ ಕಾಂಗ್ರೇಸ್ ಪಕ್ಷ ಸ್ವಾತಂತ್ರ್ಯ ನಂತರದಲ್ಲಿ ಮಹಿಳಾ ಪರವಾದ ನಿರ್ಲಕ್ಷ್ಯಭಾವನೆಯನ್ನೇ ಮುಂದುವರಿಸಿತು. ಸ್ವಾತಂತ್ರ್ಯದ ಹೋರಾಟದಲ್ಲಿ ಮಹಿಳೆಯರನ್ನು ಸಂಪೂರ್ಣವಾಗಿ ತೊಡಗಿಕೊಳ್ಳಲು ಹುರಿದುಂಬಿಸಿದ ರಾಷ್ಟ್ರಪಿತ ಗಾಂಧೀಜಿಯವರೂ ಈ ವಿಷಯದಲ್ಲಿ ನಿರ್ಲಿಪ್ತತೆ ಹೊಂದಿದರು. ಅಂದಿನ ಸಂಪುಟದಲ್ಲಿ ಒಬ್ಬ ಮಹಿಳೆಯನ್ನು ಈ ಪಕ್ಷ ಸೇರಿಸಿಕೊಳ್ಳಲಿಲ್ಲ. ನಂತರ ಬಂದ ಒತ್ತಡಗಳಿಂದ ಶ್ರೀಮತಿ ಸರೋಜಿನಿ ನಾಯ್ಡು ಅವರನ್ನು ನೇಮಿಸಿಕೊಂಡು ಮೂಗಿಗೆ ತುಪ್ಪ ಹಚ್ಚುವ ಕಾರ್ಯಕ್ಕೆ ಮುಂದಾಗಿ ಈ ಮಹಿಳಾ ಸಮುದಾಯಕ್ಕೆ ನ್ಯಾಯಸಲ್ಲಿಸಿದೆವು ಎಂದು ಬೀಗತೊಡಗಿದರು. ಹೀಗೆ ಮಹಿಳೆಯನ್ನು ಕಾಂಗ್ರೆಸ್ ಪಕ್ಷ ಕಡೆಗಣಿಸಲು ಕಾರಣ ಏನೆಂದು ನೆಹರೂ ಅವರನ್ನು ಪ್ರಶ್ನಿಸಿದಾಗ ಅವರು "ಸಾರ್ವಜನಿಕ ವೇದಿಕೆಯಲ್ಲಿ ಮಹಿಳೆಯರು ಕೇಳಿಸದೆ ಹೋಗುವ ದುರ್ಬಲವಾದ ದನಿಯಲ್ಲಿ ಏಕೆ ಪ್ರತಿಭಟಿಸುತ್ತಾರೆ ಎಂದು ಆಕ್ಷೇಪಿಸುತ್ತ, ಭಾರತೀಯ ನಾರಿಯರು ತಮ್ಮ ಹಕ್ಕುಗಳನ್ನು ಧೈರ್ಯವಾಗಿ ಒತ್ತಾಯಿಸುವುದನ್ನು ಕಲಿಯಬೇಕಿದೆ" ಎಂದಿದ್ದರು.[35] ಹೀಗೆ ಶ್ರೀಯುತ ಗಾಂಧಿ ಹಾಗೂ ನೆಹರೂರವರ ಮಹಿಳಾಪರವಾದ ಆಲೋಚನಗಳೆ ಅವಳನ್ನು ಸಮರ್ಪಕವಾಗಿ ರಾಜಕೀಯದಲ್ಲಿ ಆರಂಭದಲ್ಲೇ ಬಳಸಿಕೊಳ್ಳಲು ಎಡವಿದರು.

ಅಧಿಕಾರ ಸ್ಥಾನಗಳಲ್ಲಿ ಹೆಚ್ಚು ಹೆಚ್ಚು ಮಹಿಳೆಯರು ಬರಬೇಕು ಎಂಬುದು ತಮ್ಮ ವಾಸ್ತವ ಅಪೇಕ್ಷೆಯಾಗಿದ್ದಾಗಲೂ ಕೂಡ ತನಗಿಂತಲೂ ಹೆಚ್ಚು ಸಂಪ್ರದಾಯವಾದಿಗಳಾದ ಸಹೋದ್ಯೋಗಿ ಪುರುಷರಿಂದಾಗಿಯೂ, ಇದು ಕೈಗೂಡುತ್ತಿಲ್ಲ ಎಂದು ಹಳಹಳಿಸಿದರು. ಮಹಿಳೆಯರ ಕರ್ತವ್ಯ ನಿಷ್ಠೆಯನ್ನು ಕುರಿತು ನೆಹರೂ ಯಾವಾಗಲೂ ಹಿತೋಪದೇಶವನ್ನೇ ಮಾಡುತ್ತಿದ್ದರು. ರಾಜಕೀಯ ಸ್ವಾತಂತ್ರ್ಯದ ಧ್ಯೇಯದಲ್ಲಿ ಪುರುಷರಿಗೆ ಜೊತೆಯಾಗಿ ನಿಲ್ಲಬೇಕು ಎಂಬುದು ಮಹಿಳೆಯರ ಆದ್ಯ ಕರ್ತವ್ಯವಾಗಿದೆ ಎನುತ್ತಿದ್ದ ಅವರು ಮಹಿಳೆಯರ ಸ್ವಂತ

ಏಳಿಗೆಗೆ ಹೋರಾಟ ಕೇವಲ ಮಹಿಳೆಯರದು ಮಾತ್ರವೇ ಎಂದು ಹೇಳುತ್ತಿದ್ದರು. ತಮ್ಮ ಹಕ್ಕುಗಳನ್ನು ತಮಗೆ ಕೊಡಬೇಕೆಂದು ಅವರು ಪುರುಷರನ್ನು ಒತ್ತಾಯಿಸುತ್ತಿದ್ದರು".[೩೮] ಭಾರತೀಯ ಸಾಮಾಜಿಕ ನೆಲೆಯಲ್ಲಿ ಮಹಿಳೆಯನ್ನು ಕುರಿತು ಅಧ್ಯಯನ ಮಾಡುವಾಗ ಈ ದೇಶದ ಪುರುಷನ ದೃಷ್ಟಿಯಲ್ಲಿ ಅವಳು ಅಸ್ಪೃಶ್ಯತೆ ವಿನಃ ತನ್ನಂತೆ ಸಮಾನವಾದವಳು ಎಂಬ ಸತ್ಯ ಪುರುಷರಿಗೆ ಇಲ್ಲವೆ ಇಲ್ಲ. ಈ ಸೂಕ್ಷ್ಮತೆಯನ್ನು ಅರಿತ ಡಾ.ಬಿ.ಆರ್.ಅಂಬೇಡ್ಕರವರು ಮಹಿಳಾ ಮೀಸಲಾತಿಯ ಪರವಾಗಿ ಅವಳ ರಾಜಕೀಯ ಸಬಲೀಕರಣದ ಕುರಿತು ಮುಂದಿನ ಅವಳ ಉಜ್ವಲ ಭವಿಷ್ಯತ್ತಿಗಾಗಿ ಸಂವಿಧಾನಾತ್ಮಕವಾದ ನೆಲೆಯಲ್ಲಿ ಚಿಂತಿಸಿದರು. ಅವರು ಚುನಾಯಿತ ಸದಸ್ಯರಾಗಿ ಪಾರ್ಲಿಮೆಂಟಿನಲ್ಲಿ 'ಹಿಂದೂ ಕೋಡ್‌ಬಿಲ್'ನ್ನು ಮಂಡಿಸುವುದರ ಮೂಲಕ ಸ್ವತಂತ್ರ ಭಾರತದ ನಾರಿಯ ಬಂಧನವನ್ನು ಮುಕ್ತಗೊಳಿಸಲು ಪ್ರಯತ್ನಿಸಿದರು. ಅವರು ಮಂಡಿಸಿದ ಪರಿಚ್ಛೇದದ ಹಿಂದಿರುವ ಮಹಿಳಾ ಪರ ಮನಸ್ಸಿನ ಭಾವನೆಗಳನ್ನು ಮುಂದುವರೆದ ಮನಸ್ಸುಗಳು ಅರ್ಥ ಮಾಡಿಕೊಳ್ಳಲೇ ಇಲ್ಲ. ಅರ್ಥಮಾಡಿಕೊಂಡರೂ ಪಾರ್ಲಿಮೆಂಟಿನಲ್ಲಿ ಅದನ್ನು ಬೆಂಬಲಿಸದಿದ್ದು ದುರಂತವೆ.

ಮಹಿಳಾ ರಾಜಕೀಯ ಮೀಸಲಾತಿ ವಿಧಿಯು ಭಾರತಕ್ಕೇನು ಹೊಸದಲ್ಲ. ೧೯ನೇ ಶತಮಾನದ ಕೊನೆಯಲ್ಲಿ ಅಂದರೆ ಬ್ರಿಟೀಷರ ಆಡಳಿತಾವಧಿಯಲ್ಲಿ ಮೀಸಲಾತಿಯ ಮೊಳಕೆಯೊಡೆಯಿತು. ೨೦ನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಮೀಸಲು ಚುನಾವಣಾ ಕ್ಷೇತ್ರಗಳು ಮತ್ತು ಅಲ್ಪ ಸಂಖ್ಯಾತರಿಗೆ ಮೀಸಲಾತಿ ಬರುವಾಗಲೆ 'ಮಹಿಳಾ ಮೀಸಲಾತಿ'ಯ ವಿಷಯವೂ ಸಹ ಪ್ರಸ್ತಾಪವಾಗಿತ್ತು. ೧೯೫೭ರಲ್ಲಿ ಮಹಿಳೆಯರನ್ನು ಪಂಚಾಯತಿಗೆ ನಾಮಕರಣ ಮಾಡುವ ಪ್ರಸ್ತಾಪವೂ ಬಂದಿತ್ತು. ೧೯೭೪ರಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಶೇ.೩೦%ರಷ್ಟು ಮೀಸಲಾತಿ ನೀಡುವ ಶಿಫರಸ್ಸು ಬಂದಿತು. ೧೯೯೧ರ ನಂತರ ಪಂಚಾಯತಿ ಮೀಸಲಾತಿಯ ಮೂಲಕ ಸುಮಾರು ಒಂದು ಮಿಲಿಯನ್ ಮಹಿಳೆಯರು ರಾಜಕೀಯ ಅಖಾಡಕ್ಕೆ ಬರುವಂತಾಯಿತು. ಈ ಎಲ್ಲಾ ಶಿಫಾರಸ್ಸು, ಸಲಹೆ, ಬದಲಾವಣೆಗಳ ಹಿನ್ನೆಲೆಯಲ್ಲಿ ಶಾಸನ ಸಂಸ್ಥೆಗಳಲ್ಲಿ ಶೇ.೩೩%ರಷ್ಟು ಮೀಸಲಾತಿ ಇರಬೇಕು ಎಂಬ ಮಸೂದೆಯೂ ಮಂಡನೆಯಾಯಿತು. ಆ ಕುರಿತಂತೆ ಪರವಿರೋಧಿ ಚರ್ಚೆಗಳು ನಡೆಯುತ್ತವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಏನೆಲ್ಲ ಪ್ರಗತಿ ಯೋಜನೆಗಳನ್ನು ಜಾರಿಗೆ ತರುವಾಗ ನಾವು ಮೊದಲಿಗೆ ಆ ಕುರಿತು ನಮ್ಮ ಸಂವಿಧಾನದಲ್ಲಿ ಏನನ್ನು ವಿವರಿಸಲಾಗಿದೆ. ಎಂಬುದನ್ನು ಮಾಡುವುದು ಅಗತ್ಯವಾಗಿದೆ. ಈ ಕುರಿತಂತೆ ಸಂವಿಧಾನದ ೭೩ನೆಯ ತಿದ್ದುಪಡಿಯೂ ಸ್ಥಳೀಯ ಸಂಸ್ಥೆಗಳಲ್ಲಿ (ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ನಗರಸಭೆಗಳಲ್ಲಿ) ರಾಜಕೀಯ ಅಧಿಕಾರ ಸೂತ್ರ ಹಿಡಿಯುವಾಗ ಮಹಿಳೆಗೆ ಶೇ.೩೩% ಮೀಸಲಾತಿಯ ಮಾನದಂಡವನ್ನು ಅನುಸರಿಸಬೇಕೆಂದು ನಿರ್ಧರಿಸಲಾಯಿತು. ಅಲ್ಲದೆ ಇವರ ಹಿನ್ನೆಲೆಯನ್ನು ಇಟ್ಟುಕೊಂಡೆ ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳಿಗೂ ಮೀಸಲಾತಿಯನ್ನು ವಿಸ್ತರಿಸಲಾಯಿತು.

ಇದೊಂದು ರಚನಾತ್ಮಕವಾದ ಕ್ರಾಂತಿ ಎಂದು ನಾವು ಪರಿಭಾಷಿಸಬಹುದು. ಮುಂದೆ ೧೯೯೩ರಲ್ಲಿ 'ಕರ್ನಾಟಕ ರಾಜ್ಯ ಪಂಚಾಯತ್‌ರಾಜ್ ಅಧಿನಿಯಮ' ಜಾರಿಗೊಳಿಸಿ ಪರಿಶಿಷ್ಟ ಜಾತಿ, ವರ್ಗ, ಹಿಂದುಳಿದ ವರ್ಗ ಹಾಗೂ ಮಹಿಳೆಗೂ ಶೇ.೩೩ರಷ್ಟು ರಾಜಕೀಯ ಮೀಸಲಾತಿ ಪ್ರಕ್ರಿಯೆಯು ಮಹಿಳಾ ಮೀಸಲಾತಿ ಕಲ್ಪಿಸುವ ಬಗ್ಗೆ

ಮುನ್ನಡೆಯಾಯಿತು. ಸಂವಿಧಾನಾತ್ಮಕವಾಗಿ ಮಹಿಳಾ ರಾಜಕೀಯ ಸಬಲೀಕರಣದ ಉದ್ದೇಶದೊಂದಿಗೆ ಮಹಿಳಾ ಮೀಸಲಾತಿಯ ಸಂವೇದನೆಯ ಅಧಿಸೂಚನೆಗಳು ಪ್ರಕಟಗೊಳ್ಳುತ್ತಿದ್ದಂತೆ ರಾಜ್ಯ, ರಾಷ್ಟ್ರದ ರಾಜಕೀಯ ಪಕ್ಷಗಳಲ್ಲಿ ತಳ ಮಳ ಶುರುವಾಯಿತು. ಅಲ್ಲದೇ ವಿವಿಧ ಪಕ್ಷಗಳು ಸೇರಿ ತಮ್ಮ ತಮ್ಮಲ್ಲೇ ಈ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳ ತೊಡಗಿದವು. ಸಂಸತ್ತಿನಲ್ಲಿ ಹಾವು ಮುಂಗುಸಿಯಂತೆ ಕಾದಾಡುವ ಆಡಳಿತ ಪಕ್ಷ, ವಿರೋಧ ಪಕ್ಷಗಳು ಈ ಕಾರ್ಯದಲ್ಲಿ ಒಂದೇ ಆದವು. ಈ ಎರಡರ ಚಿಂತನೆಗಳೂ, ಒಂದೇ ಅದೇ ಪಿತೃ ಪ್ರಧಾನ ಮೌಲ್ಯಗಳಿಗೆ ಧಕ್ಕೆಯಾಗದಂತೆ ನೋಡಿಕೊಳ್ಳುವುದು. ಹೇಗಾದರೂ ಮಾಡಿ ಮಹಿಳೆಯನ್ನು ಈ ದೇಶದ ರಾಜಕೀಯ ಪ್ರಕ್ರಿಯೆಯಲ್ಲಿ ಸೇರಿಸಲು ಪ್ರಗತಿಪರ ಚಿಂತಕರು, ಪಕ್ಷಗಳು ನಿರ್ಧರಿಸಿದವು. ಅಲ್ಲದೆ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳಾ ಸಮುದಾಯಕ್ಕೆ ಸಿಗಬೇಕಾದ ನ್ಯಾಯ ಸಿಗುವಂತೆ ಮಾಡುವುದು ಎಲ್ಲಾ ರಾಜಕೀಯ ಪಕ್ಷಗಳ ಆದ್ಯ ಕರ್ತವ್ಯವಾಗಿತ್ತು.

**ಮಹಿಳಾ ಮೀಸಲಾತಿ ಎಂದರೇನು? ಇದರ ಉದ್ದೇಶ, ಗುರಿಗಳು ಏನು?**

ಎರಡನೆಯ ಜಾಗತಿಕ ಯುದ್ಧದ ನಂತರ ಜಾಗತಿಕ ಶಾಂತಿ ಹಾಗೂ ಸುವ್ಯವಸ್ಥೆ, ಅಭಿವೃದ್ಧಿಯ ಸಲುವಾಗಿ ವಿಶ್ವಸಂಸ್ಥೆಯೂ ೧೯೭೦ರ ಸುಮಾರಿಗೆ ತನ್ನ ಅಧೀನ ಎಲ್ಲಾ ಸದಸ್ಯರಾಷ್ಟ್ರಗಳಿಗೆ ಸಬಲೀಕರಣದತ್ತ ದಾಪುಗಾಲಿಡಲು ಸೂಕ್ತ ಯೋಜನೆ ತಯಾರಿಸಿತು. ಅಲ್ಲದೆ ಆಯಾ ದೇಶಗಳಲ್ಲಿರುವ ಮಹಿಳಾ ಸಮುದಾಯದ ಸ್ಥಿತಿಗಳ ಕುರಿತು ಒಂದು ವರದಿಯನ್ನು ಕಳುಹಿಸಿಕೊಡಲು ತಿಳಿಸಿತು. ೧೯೭೫ನ್ನು 'ಅಂತರಾಷ್ಟ್ರೀಯ ಮಹಿಳಾ ವರ್ಷ' ಎಂದು ಆಚರಿಸುವುದರ ಕುರಿತು ಮಹಿಳೆ ಬಗ್ಗೆ ಅತೀವ ಕಾಳಜಿ, ಆಸಕ್ತಿಯನ್ನು ವಹಿಸತೊಡಗಿತು. ಭಾರತದಲ್ಲಿ ಇದರ ಅನ್ವಯ ಸಮಾನತೆಯೆಡೆಗೆ ಎಂಬ ವರದಿಯನ್ನು ೧೯೭೪ರಲ್ಲಿ ಫುಲರೇಣು ಗುಹಾರವರ ನೇತೃತ್ವದ ಸಮಿತಿಯೂ ಸಲ್ಲಿಸಿತು. ಇದು ನೀಡಿದ ವರದಿಯ ಅನ್ವಯ ಭಾರತದಂತಹ ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿಯೂ ಮಹಿಳೆಯರು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಕ್ಷೇತ್ರದಂತ ಎಲ್ಲಾ ರಂಗಗಳಲ್ಲಿಯೂ ಹಿಂದುಳಿದಿರುವುದನ್ನು ಮೊದಲ ಭಾರಿಗೆ ಜಾಗತಿಕ ಮಟ್ಟದಲ್ಲಿ ಚರ್ಚೆಗೆ ಬಂದಿತು.

ಮಹಿಳಾ ಸಮಾಜೋ ರಾಜಕೀಯ ವಿಷಯಗಳ ಬಗ್ಗೆ ಹಾಗೂ ಅಭಿವೃದ್ಧಿಯ ವಿಚಾರವಾಗಿ ಎತ್ತಿದ ಪ್ರಶ್ನೆಗಳಿಗೆ ಅನುಸಾರವಾಗಿಯೇ ಮಹಿಳಾ ಪ್ರಗತಿಯನ್ನು ಸಾಧಿಸಬಹುದೆಂಬ ಆಶಾಭಾವನೆಯಿಂದ U.N.O ತನ್ನ ಸದಸ್ಯ ರಾಷ್ಟ್ರಗಳಲ್ಲಿನ ಮಹಿಳಾ ಸ್ಥಿತಿಗತಿಗಳ ಸುಧಾರಣೆಗೆ ಅತಿಯಾದ ಕಾಳಜಿ ತೋರಿಸಿತಲ್ಲದೆ ಮಹಿಳಾ ಸ್ಥಿತಿಗತಿ ಸುಧಾರಿಸಲು, ಅವಳ ಜೀವನ ಮಟ್ಟವನ್ನು ಸುಧಾರಿಸಲು ಯೋಜನೆಗಳನ್ನು ತಯಾರಿಸುವಾಗ ಮಹಿಳಾ ಪರವಾದಂತಹ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲು ವಿಶ್ವಸಂಸ್ಥೆ ತನ್ನ ಸದಸ್ಯ ರಾಷ್ಟ್ರಗಳಿಗೆ ಒತ್ತಾಯ ಮಾಡಿತು. ಇದರ ಅನ್ವಯವೇ ಭಾರತದಲ್ಲಿ ಮಹಿಳೆಯರಿಗಾಗಿಯೇ ಪ್ರತ್ಯೇಕ ಇಲಾಖೆಗಳನ್ನು ಸ್ಥಾಪಿಸಲಾಯಿತು. ಆದರೆ ಮಹಿಳಾ ಸಮಸ್ಯೆಗಳಿಗೆ ಮೂಲ ಕಾರಣವಾದ ಪಿತೃಪ್ರಧಾನ ಸಮಾಜದ ರಚನೆ, ಅದರ ಲಿಂಗತಾರತಮ್ಯ ಧೋರಣೆಯನ್ನು ಬಳಸಿಕೊಂಡದ್ದಾಗಲಿ, ತಾವು ರೂಪಿಸಿದ ಕಾರ್ಯಕ್ರಮಗಳ ಪ್ರಾಮಾಣಿಕ ಅನುಷ್ಠಾನಕ್ಕಾಗಿ ಬೇಕಾದ ಸಂಕಲ್ಪ ಶಕ್ತಿಯನ್ನಾಗಲಿ ಅವು ಪ್ರದರ್ಶಿಸಲಿಲ್ಲ. ಆದರೂ ಮಹಿಳಾ ಸಬಲೀಕರಣದ ಉದಾತ್ತ ಚಿಂತನೆಗೆ ತಲೆಬಾಗಿ ಭಾರತದಲ್ಲಿ ಮಹಿಳಾ ಉನ್ನತಿಯ ಕಾರ್ಯಕ್ರಮಗಳು ಹೆಚ್ಚು ಹೆಚ್ಚು ಪ್ರವರ್ಧಮಾನಕ್ಕೆ ಬರತೊಡಗಿದವು. ೧೯೬೦ರ

ನಂತರ ಭಾರತದಲ್ಲಿ ಕಂಡುಬಂದ ಸ್ತ್ರೀವಾದಿ ಚಿಂತನೆಗಳು, ಮಹಿಳಾ ಚಳುವಳಿಗಳು ಮಹಿಳಾ ಸಂಘಟನೆಯ ಧ್ಯೆಯೋದ್ದೇಶಗಳನ್ನು ಪುನರ್ ನಿರ್ದೇಶಿಸಿದವು. ಅದರ ಮೊದಲ ಪರಿಣಾಮ ಎಂದರೆ ಅದುವರೆಗಿನ ಸುಧಾರಣವಾದಿ ಚಳುವಳಿಯ ಮೇಲ್‌ಪದರದ ಸುಧಾರಣೆಗಳನ್ನು ತಿರಸ್ಕರಿಸಿ ಆಮೂಲಾಗ್ರವಾದ ಬದಲಾವಣೆಗೆ ಆಗ್ರಹಿಸಿತು. ಮಹಿಳಾ ಸಮಸ್ಯೆ ಇರುವುದು ವ್ಯಕ್ತಿಗತ ನೆಲೆಯಲ್ಲಿ ಅಲ್ಲ, ಸಮಾಜದ ಸಂರಚನೆಯ ನೆಲೆಯಲ್ಲಿ. ಆದ್ದರಿಂದ ಸಮಾಜದ ಪ್ರಮುಖ ಸಂಸ್ಥೆಗಳಾದ ವಿವಾಹ, ಕುಟುಂಬ, ಶಿಕ್ಷಣ, ಧರ್ಮ ಹಾಗೂ ರಾಜಕಾರಣಗಳಲ್ಲಿರುವಂತಹ ಲಿಂಗ ಪೂರ್ವಗ್ರಹದ ನೆಲೆಗಳು, ಧೋರಣೆಗಳು ಬದಲಾಗದ ಹೊರತು ಯಾವುದೇ ಕಾನೂನಿನ ರಚನೆಯೂ ಉಪಯುಕ್ತವಾಗಲಾರದು. ಹಾಗೆ ಬದಲಾವಣೆಯನ್ನು ಇನ್ನಾರೋ ಮಾಡುತ್ತಾರೆ ಎಂಬುದು ಮಿಥ್ಯ. ಮಹಿಳೆ ತನ್ನ ಸಮಸ್ಯೆಗಳನ್ನು ತಾನೆ ಬಗೆಹರಿಸಿಕೊಳ್ಳಬೇಕು. ಅದಕ್ಕಾಗಿ ಆಕೆಗೆ ಸಬಲೀಕರಣದ ಅಧಿಕಾರ ಕೇಂದ್ರಗಳಲ್ಲಿ ಅವಕಾಶ ಸಾಮರ್ಥ್ಯವು ಮಾತ್ರ ಸಮಾಜದಲ್ಲಿ ಆಮೂಲಾಗ್ರವಾದ ಬದಲಾವಣೆಯನ್ನು ತರಬಲ್ಲದು. ಅದಕ್ಕಾಗಿ ಕುಟುಂಬದಿಂದ ಹಿಡಿದು ರಾಜಕೀಯದವರೆಗೆ ಎಲ್ಲೆಲ್ಲಿ ಅಧಿಕಾರ ರಚನೆಗಳಿರುತ್ತವೆಯೋ ಅಲ್ಲಲ್ಲಿ ಮಹಿಳೆಗೆ ಪ್ರಾತಿನಿಧ್ಯ ದೊರೆಯಬೇಕು. ಅಂತಹ ನಿರ್ಧಾರಕ ಸ್ಥಾನಗಳಲ್ಲಿನ ಪ್ರಾತಿನಿಧ್ಯವನ್ನು ಪಡೆಯುವಲ್ಲಿ, ಯಶಸ್ವಿಯಾಗಿ ನಿಭಾಯಿಸಲು ಬೇಕಾಗುವಂತಹ 'ಧಾರಣಾಶಕ್ತಿ'ಯನ್ನು ಆಕೆಗೆ ಒದಗಿಸಿಕೊಡಬೇಕು. ಮಹಿಳಾ ಅಭಿವೃದ್ಧಿಯೇ ಕಾರ್ಯಕ್ರಮಗಳ ನೆಲೆಯಾಗಬೇಕು. ಆಗಮಾತ್ರ ಮಹಿಳಾ ಅಭಿವೃದ್ಧಿಯು ಸಾಧ್ಯ ಎಂಬ ವಿಚಾರಗಳು ಮುಂಚೂಣಿಗೆ ಬಂದವು.[೩೮] ಈ ಬಗೆಯಲ್ಲಿ ಎಲ್ಲಾ ಯೋಜಿತ ಕಾರ್ಯಕ್ರಮಗಳಿಗೆ ಅನುಗುಣವಾಗಿ ಮಹಿಳಾ ಮೀಸಲಾತಿ ಪ್ರಶ್ನೆ ಎದ್ದಿತು.

**೨.೬.೧. ಮೀಸಲಾತಿ ಏಕೆ ಬೇಕು?**

* ಜನಸಂಖ್ಯೆಯಲ್ಲಿ ಪುರುಷನಿಗೆ ಸಮವಾಗಿರುವ ಮಹಿಳೆ ಎಲ್ಲಾ ರಂಗಗಳಲ್ಲೂ ಹಿಂದುಳಿದಿರುವುದರಿಂದ ಮೀಸಲಾತಿಯ ಅವಶ್ಯಕತೆ ಇದೆ.
* ಮಹಿಳಾ ಹಕ್ಕು ಮತ್ತು ಅವಕಾಶಗಳಿಗೆ ಪ್ರಾತಿನಿಧ್ಯ ನೀಡಲು ಮೀಸಲಾತಿ.
* ಮಹಿಳಾ ಮೀಸಲಾಯಿಂದ ಜಾಗೃತಿ ಮತ್ತು ನಾಯಕತ್ವದ ಗುಣಗಳನ್ನು ಸೃಷ್ಟಿಸಿ ಸರ್ವತೋಮುಖವಾದ ಬೆಳವಣಿಗೆಗೆ ಪ್ರೋತ್ಸಾಹಿಸುವುದು.
* ಹಿಂದಿನ ಪುರುಷ ಪ್ರಧಾನತೆಯನ್ನು ಮರೆತು ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ಮಹಿಳೆಯರು ಸಾಮಾಜಿಕ, ಆರ್ಥಿಕ ಸವಾಲುಗಳನ್ನು ನಿರ್ಭಯವಾಗಿ ಎದುರಿಸಬಲ್ಲ ವ್ಯಕ್ತಿತ್ವದ ಬೆಳವಣಿಗೆಗೆ ಅವಕಾಶ ಕಲ್ಪಿಸುತ್ತದೆ.
* ಮಹಿಳೆಯರೇನು ಅಂಚಿನಲ್ಲಿರುವವರಲ್ಲಾ ಜನಸಂಖ್ಯೆಯ ಅರ್ಧಭಾಗ ಅವರು ಆವರಿಸಿಕೊಂಡಿದ್ದಾರೆ. ಅವರ ರಾಜಕೀಯ ಭಾಗವಹಿಸುವಿಕೆಗೆ ಪಕ್ಷಗಳು ಒತ್ತಾಸೆಯಾಗಿರಬೇಕಾಗುತ್ತದೆ. ಈ ಪಕ್ಷಗಳಲ್ಲಿ ಮಹಿಳೆಯ ಬಗ್ಗೆ ಆಸಕ್ತಿ ಇಲ್ಲದಿರುವುದು ದುರಾದೃಷ್ಟ. ಇದು ನೇರವಾಗಿ ಪಿತೃ ಪ್ರಧಾನತೆಯ ಪ್ರತೀಕವೇ ಎಂಬುದರಲ್ಲಿ ಸಂಶಯವಿಲ್ಲ.
* ಇದು ಸಂಪನ್ಮೂಲಗಳಿಗೆ ಸಂಬಂಧಿಸಿರುವುದರಿಂದ ಮಹಿಳೆ ತಾನೇ ಸ್ವನಿಯಂತ್ರಣ ಸಾಧಿಸಿಕೊಳ್ಳದು ಸಹಾಯಕವಾಗಿದೆ.

* ಸಮಾನತೆಯನ್ನು ಸಾಧಿಸುವುದು ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕನ್ನು ಪಡೆಯಲು ಇದು ಅತ್ಯಂತ ಸಹಾಯಕವಾಗಿದೆ.
* ಮಹಿಳೆಯರು ಆತ್ಮ ವಿಶ್ವಾಸ ಬೆಳಸಿಕೊಳ್ಳುವುದು, ಉತ್ಪಾದಕ ಸಾಮರ್ಥ್ಯ ಬೆಳಸಿಕೊಳ್ಳುವುದು, ಈಗಿನ ಅಧಿಕಾರ ಸಂಬಂಧಿಗಳನ್ನು ಅಳಿಸುವುದು.
* ಮೀಸಲಾತಿ ಪರಿಕಲ್ಪನೆಯನ್ನು ಮಹಿಳೆಗೆ ಅನ್ವಯಿಸಿದಾಗ ಅವರು ಆಸಕ್ತರು ಎಂಬುದನ್ನು ತೋರಿಸುತ್ತದೆ. ಯಾಕೆಂದರೆ ಮಹಿಳೆಯರಲ್ಲಿ ಅಧಿಕಾರದ ಶಕ್ತಿ ಮೂಲವಾದ ಸಂಪನ್ಮೂಲಗಳ ಲಭ್ಯತೆ, ಭಾವನಾತ್ಮಕ ಚಿಂತನೆ, ಸ್ವಂತಿಕೆಯ ಮೇಲೆ ನಿಯಂತ್ರಣವಿರುವುದು, ಇದ್ದರೂ ಕೆಲವೊಮ್ಮೆ ಸೀಮಿತವಾಗಿರುತ್ತವೆ.
* ಮೀಸಲಾತಿ ಕೇವಲ ಅಧಿಕಾರ, ಆಸ್ತಿ ಹೊಂದುವುದಷ್ಟೆ ಅಲ್ಲ. ಅದು ವಿಶಾಲ ಅರ್ಥವನ್ನು ಒಳಗೊಂಡಿದೆ. ಅಲ್ಲದೆ ವಿವಿಧ ಮೆಟ್ಟಿಲುಗಳನ್ನು ಪಡೆದಿದೆ. ಅವುಗಳು ಯಾವುವೆಂದರೆ ಶೈಕ್ಷಣಿಕ, ಆರ್ಥಿಕ, ಜಾಗತೀಕ, ಸಂಘಟನಾ ಹಾಗೂ ರಾಜಕೀಯ ಪ್ರವೇಶ.[೩೯]

೧೯೮೫ರ ಬೀಜಿಂಗ್ ಸಮಾವೇಶವು ಮಹಿಳಾ ರಾಜಕೀಯ ಸಬಲೀಕರಣಕ್ಕೆ ಮುನ್ನುಡಿ ಬರೆಯಿತು. ಮಹಿಳೆಯ ನಿಜವಾದ ಉನ್ನತಿಯೂ ರಾಜಕೀಯದಿಂದಲೇ ಆಗಬೇಕು ಎಂಬ ನಿಲುವು ತಾಳಿತು. ಭಾರತದಲ್ಲಿ ಅನುಷ್ಠಾನಕ್ಕೆ ತಂದ ಎಲ್ಲಾ ಯೋಜನೆಗಳು ಜನರಿಗೆ ತಲುಪದೆ ಅವು ವಿಫಲತೆ ಹೊಂದುತ್ತಿರುವುದು ಮಹಿಳಾ ಸಹಭಾಗಿತ್ವದ ಕಾರಣದಿಂದ ಎಂಬ ಅಂಶವು ಪ್ರಮುಖವಾಗಿ ಗಮನ ಸೆಳೆಯಿತು. ಆದ್ದರಿಂದಲೇ ಮಹಿಳಾ ಸಬಲೀಕರಣ ಎಂಬುದು ಮಹಿಳಾ ರಾಜಕೀಯ ಸಬಲೀಕರಣ ಎಂಬ ನೆಲೆಯಲ್ಲಿ ನಿರ್ವಚಿಸಲ್ಪಟ್ಟಿತು. ಇದುವೆ ಅಂದಿನ ಕೇಂದ್ರ ವಿಷಯವಾಯಿತು. ಗ್ರಾಮೀಣ ಮಟ್ಟದಲ್ಲಿಯ ಗ್ರಾಮ ಪಂಚಾಯತಿಗಳಿಂದಿಡಿದು ವಿಧಾನಸಭೆ, ಲೋಕಸಭೆಯವರೆಗಿನ ಎಲ್ಲಾ ಅಧಿಕಾರದ ಹಂತಗಳಲ್ಲಿ ಮಹಿಳಾ ಸಹಭಾಗಿತ್ವವಾಗುವುದರಿಂದ ಮಹಿಳೆ ತನ್ನ ಅಸ್ತಿತ್ವ, ಹಿತಾಸಕ್ತಿಯನ್ನು ಕಾಪಾಡಲು ಇದು ಅತ್ಯಂತ ಅವಶ್ಯವೂ, ಅನಿವಾರ್ಯವೂ ಆಗಿದೆ.

ಸಂವಿಧಾನದತ್ತವಾದ ರಾಜಕಾರಣ ಹಕ್ಕು ಎಂಬುದು ವಾಸ್ತವ ಸಂದರ್ಭದಲ್ಲಿ ಪಿತೃ ಪ್ರಧಾನ ಸಮಾಜದ 'ದಯೆ'ಯನ್ನು ಅವಲಂಬಿಸಿದೆ. ಮಹಿಳೆಯ ಅವಕಾಶಗಳ ಬಗ್ಗೆ ಎಲ್ಲಾ ಮಾತುಗಳನ್ನು ಆಡುತ್ತಲೆ ಆಕೆಯನ್ನು ಉಪೇಕ್ಷಿಸಲಾಗುತ್ತದೆ. ಇಂತಹ ಸಂದಿಗ್ಧ ಪರಿಸ್ಥಿಯಲ್ಲಿ ಅಪರೂಪಕ್ಕೆ ದೊರೆಯುವ ಅವಕಾಶವು ಆಕೆಯನ್ನು ಮಹಿಳಾ ರಾಜಕಾರಣದ ಪ್ರತಿನಿಧಿಯಾಗಲು ಬಿಡುವುದಿಲ್ಲ. ಅಲ್ಪಸಂಖ್ಯಾತ ಮಹಿಳಾ ರಾಜಕಾರಣಗಳು ಪುರುಷರಿಗಿಂತ ಭಿನ್ನವಾಗಿ ತಮ್ಮನ್ನು ರೂಪಿಸಿಕೊಳ್ಳುವ ಸವಾಲನ್ನು ಸ್ವೀಕರಿಸಲಾರದವರಾಗಿದ್ದಾರೆ. ಹಾಗಾಗಿ ಒಟ್ಟು ವಾತಾವರಣದಲ್ಲಿಯೂ ಮಹಿಳಾ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಪ್ರಸ್ತುತ ಮಹಿಳಾ ಚಳುವಳಿ ಸ್ವಾತಂತ್ರ್ಯ ಪೂರ್ವಕ್ಕಿದ್ದ ತನ್ನೆಲ್ಲಾ ನಿಲುವನ್ನು ಬದಿಗೊತ್ತಿ ಮೀಸಲಾತಿಯ ಕುರಿತು ವಿಶೇಷ ಗಮನ ಹರಿಸಿತು. ದೇಶದಾದ್ಯಂತ ಸಂಘಟನೆಯನ್ನು ರೂಪಿಸುತ್ತ ಶಾಸಕಾಂಗ ಸ್ಥಾನಗಳಲ್ಲಿ ಮಹಿಳೆ ೩೩%ರಷ್ಟು ಮೀಸಲಾತಿಯನ್ನು ನೀಡಬೇಕು ಎಂಬ ಒತ್ತಾಯವನ್ನು ಹೇರಲು ಆರಂಭಿಸಿದವು. ಈ ಹೋರಾಟದ ಪರಿಣಾಮವಾಗಿ ಸಂವಿಧಾನದ

೮೧ನೆಯ ತಿದ್ದುಪಡಿಯ ಮೂಲಕ ಮಹಿಳಾ ಮೀಸಲಾತಿಯನ್ನು ಸದನದಲ್ಲಿ ಮಂಡಿಸಲಾಯಿತು. ಇದನ್ನು ಮುಂಚೆ ಸರಕಾರವು ಈ ಕಾಯ್ದೆಯನ್ನು ರೂಪಿಸುವ ಮೊದಲು ಸಂಸತ್ ಸದಸ್ಯರಾಗಿದ್ದ ಗೀತಾ ಮುಖರ್ಜಿಯವರ ಜಂಟಿ ಸಮಿತಿಗೆ ಇದನ್ನು ಒಪ್ಪಿಸಿತು. ಸಮಿತಿಯೂ ಕೆಲವು ಶಿಫಾರಸ್ಸುಗಳನ್ನು ಸೂಚಿಸಿತಲ್ಲದೆ ಅವುಗಳನ್ನು ಪಾಲಿರಿಸಲು ಒತ್ತಾಯಿಸಿತು.[೪೦]

ಇಷ್ಟೆಲ್ಲ ಯೋಜಿತ ಸ್ತ್ರೀವಾದಿ ಚಳುವಳಿಗಳ ಕಾರ್ಯಸೂಚಿಗಳ ಫಲವಾಗಿ ಸರಕಾರ ಮಹಿಳಾ ಮೀಸಲಾತಿಯ ಬಗ್ಗೆ ಒಲವು ತೋರಿಸಿತು. 'ಮೀಸಲಾತಿ'ಯೂ ಸಮಾಜ ಮುಖಿಯಾದ ಕಾರ್ಯ ಎಂದು ಮನಗಂಡ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಪ್ರಣಾಳಿಕೆಯಲ್ಲಿ ಮಹಿಳಾ ಮೀಸಲಾತಿ ನೀಡುತ್ತೇವೆಂದು ಘೋಷಿಸಿಬಿಟ್ಟವು. ಮಹಿಳೆಯನ್ನು ಒಂದು 'Vote Bank' ಆಗಿ ಪರಿವರ್ತಿಸಿ ಗೆದ್ದವು. ನಂತರ ಅಧಿಕಾರಕ್ಕೆ ಬಂದ ದೇವೆಗೌಡರ ಸಮ್ಮಿಶ್ರ ಸರಕಾರ ಪಕ್ಷದ ಪ್ರಣಾಳಿಕೆಯಂತೆ ೧೯೯೬ರಲ್ಲಿ ಮಹಿಳಾ ಮೀಸಲಾತಿಯನ್ನು ಸೆಪ್ಟೆಂಬರ್ ೧೨ರಂದು ಮೊದಲ ಬಾರಿಗೆ ಲೋಕಸಭೆಯಲ್ಲಿ ಮಂಡಿಸಲಾಯಿತು. ಆಡಳಿತರೂಢ ಪಕ್ಷದ ಪಾಲುದಾರ ಪಕ್ಷವಾದ ಜನತಾದಳದ ಶರದ್ ಪವಾರ್‌ರವರು ೩೩% ರಷ್ಟು ಮೀಸಲಾತಿಯ ಬಗ್ಗೆ ಅಪಸ್ವರ ಎತ್ತಿದರು. ಹಿಂದುಳಿದ, ದಲಿತ ಮಹಿಳೆಯನ್ನು ಮುಂದೊಡ್ಡಿ ಅಪಸ್ವರ ತಗೆದರು. ೩೩% ರಷ್ಟು ಮೀಸಲಾತಿಯನ್ನು ನೀಡುವುದರಿಂದ ಸಂಸತ್ತಿನ ತುಂಬೆಲ್ಲ ಬಾಬ್‌ಕಟ್‌ಗಳೆ ತುಂಬುತ್ತವೆ ಎಂಬಂತಹ ಕುಟೀಲ ಮಾತುಗಳನ್ನಾಡಿದರು. ಇದಕ್ಕೆ ಲಾಲೂ ಪ್ರಸಾದಯಾದವರೂ ಸಹ ಧ್ವನಿಗೂಡಿಸಿದರು. ನಂತರ ಇದನ್ನು ಮತ್ತೆ ಗೀತಾ ಮುಖರ್ಜಿಯವರಿಗೆ ಪರಿಶೀಲನೆಗಾಗಿ ಕಳುಹಿಸಲು ಈ ಸಮಿತಿಯೂ ಒಳ ಮೀಸಲಾತಿಯ ಅವಶ್ಯಕತೆಯನ್ನು ನಿರಾಕರಿಸಿತು. ಡಿಸೆಂಬರ್ ೧೨ ಈ ಕುರಿತಂತೆ ರಂದು ಈ ಕುರಿತಂತೆ ವಿಧೇಯಕವನ್ನು ಮತ್ತೆ ಸದನದಲ್ಲಿ ಮಂಡಿಸಿದಾಗ ಪಿತೃ ಪ್ರಧಾನ ಚಿಂತನೆಗಳ ವಾರಸುದಾರರು ಹಾಗೆ ಮನುವಾದಿಗಳ ಭಾರಿ ಪ್ರತಿರೋದ ಎದುರಾಯಿತು. ನಂತರ ೧೯೯೭ರಲ್ಲಿ ಇಂದ್ರಕುಮಾರ ಗುಜ್ರಾಲ್‌ರವರು ಪ್ರಧಾನಿಯಾಗಿದ್ದ ಸಮಯದಲ್ಲಿ ೩ ನೇಯ ಭಾರಿಗೆ ಇದನ್ನು ಮಂಡಿಸಲಾಯಿತು. ಅಲ್ಲಿಯೂ ಇದು ವಿಫಲವಾಯಿತು. ಹಿಂದಿನ ವಾಜಪೇಯಿ ಸರಕಾರ ಎರಡು ಭಾರಿ ಇದನ್ನು ಮಂಡಿಸಿ ಸೋತಿದೆ. ಲಾಲೂ, ಶರದ್ ಪವಾರ ಎಂಬ ಇಬ್ಬರೆ ಇದನ್ನು ಆರಂಭದಲ್ಲಿ ಕುಂಠಿತಗೊಳ್ಳಲು ಕಾರಣರಾದದ್ದು ದುರ್ದೈವ, ದುರಂತ ಎಂದು ಉಮಾಭಾರತಿ, ಸಾಧ್ವಿ ರಿಂತಬರಿಯಂತಹ ಮಹಿಳಾ ರಾಜಕಾರಣಿಗೆ ಇದನ್ನು ವಿರೋಧಿಸ ತೊಡಗಿದರು ಎಂದರೆ ಎಂತಹ ವಿಪರ್ಯಾಸ. ಒಂದು ಕಡೆಯಲ್ಲಿ ಕಾಂಗ್ರೆಸ್, ಎಡರಂಗ, ತೃಣಮೂಲ ಕಾಂಗ್ರೆಸ್ ಇದನ್ನು ಬೆಂಬಲಿಸಿ ತಮ್ಮ ವೈಚಾರಿಕತೆಯನ್ನು ಆರಂಭದಲ್ಲಿ ತೋರಿಸಿದವಾದರೂ ತದನಂತರ ಹಿಂದೆ ಸರಿದಬಿಟ್ಟವು. ಕಾರಣ ಎಂದರೆ ಮಹಿಳಾ ಮೀಸಲಾತಿಯನ್ನು ಒಪ್ಪಿ ಜಾರಿಗೊಳಿಸಿದರೆ ಅದರ ಕ್ರೆಡಿಟ್ ಎಲ್ಲಾ ಎನ್.ಡಿ.ಎ. ಸರಕಾರಕ್ಕೆ ಬರುತ್ತದೆ ಎಂಬ ದುರಾಲೋಚನೆ. ಈ ರಾಜಕೀಯ ಮೇಲಾಟದಲ್ಲಿ ವಿವಿಧ ರಾಜಕೀಯ ಪಕ್ಷಗಳು ಸಹ ವಿನಕ್ಕೊಂದು ಗಿಮಿಕ್ ಮಾಡತೊಡಗಿದವು. ಇದೇ ಸಂದರ್ಭದಲ್ಲಿ ಮುಸ್ಲಿಂ ಲೀಗ್ ಪಕ್ಷ ಕೂಡ ಮುಸ್ಲಿಂ ಮಹಿಳೆಗೆ ಪ್ರತ್ಯೇಕ ಮೀಸಲಾತಿ (೧೫%) ಕೊಡಬೇಕು ಎಂಬ ಬೇಡಿಕೆಯನ್ನು ಮುಂದಿಟ್ಟು ಈ ಮಸೂದೆಗೆ ಕೊನೆಯ ಹೊಡೆತಕೊಟ್ಟಿತು.

"ಮೀಸಲಾತಿಯ ವಿರೋಧಿಗಳು ಒಡ್ಡುವ ಕಾರಣಗಳು ಹೀಗಿವೆ."

೧. ಮೀಸಲಾತಿ ನೀತಿಯೂ ಜಾರಿಗೆ ಬಂದಲ್ಲಿ ಸಮಾಜದಲ್ಲಿರುವ ಪ್ರತಿಷ್ಠಿತರ ಮಹಿಳೆಯರೆ ಕಬಳಿಸುತ್ತಾರೆ.

೨. ರಾಜಕೀಯರಂಗದಲ್ಲಿರುವ ರಾಜಕಾರಣಿಗಳ ಕುಟುಂಬದ ಮಹಿಳೆಯರೆ ಮತ್ತೆ ಅಧಿಕಾರ ಪಡೆಯುವರು.

೩. ಮಹಿಳೆಗೆ ರಾಜಕೀಯ ಜ್ಞಾನವಿಲ್ಲ. ಅವಳು ಆಡಳಿತ ನಡೆಸಲು ಸಮರ್ಥಳಲ್ಲ. ಹೀಗಾಗಿ ಮೀಸಲಾತಿಯಿಂದ ಅನುಕೂಲಕ್ಕಿಂತ ಅನಾನುಕೂಲವೆ ಹೆಚ್ಚು.

೪. ವೈಯಕ್ತಿಕ ದ್ವೇಷ ಸಾಧನೆಯಲ್ಲಿ ಪುರುಷ ರಾಜಕಾರಣಿಗಳ ಕ್ಷೇತ್ರವನ್ನು ಮಹಿಳಾ ಮೀಸಲು ಕ್ಷೇತ್ರವಾಗಿ ಪರಿವರ್ತಿಸುವ ಮೂಲಕ ಅವರನ್ನು ರಾಜಕೀಯವಾಗಿ ಮುಗಿಸುವ ಸಂಚಿದೆ.

೫. ಮೀಸಲಾತಿ ಕ್ಷೇತ್ರದಲ್ಲಿ ಮತದಾರರಿಗೆ ಆಯ್ಕೆಯ ಸ್ವಾತಂತ್ರ್ಯವಿರುವುದಿಲ್ಲ.

೬. ಸ್ತ್ರೀ ಪುರುಷರಿಗೆ ಚುನಾವಣೆಗೆ ನಿಲ್ಲಲು ಸಮಾನ ಹಕ್ಕು ಇರುವಾಗ ಮಹಿಳೆಗೆ ೩೩% ಮೀಸಲಾತಿ ಕೇಳುವದರಿಂದ ಉಳಿದ ೬೭% ರಷ್ಟು ಸೀಟುಗಳನ್ನು ಅವರು ಕಳೆದುಕೊಳ್ಳಬೇಕಾಗುತ್ತದೆ.

೭. ೩೩% ರಷ್ಟು ಮಹಿಳಾ ಮೀಸಲಾತಿ ನೀಡುವ ವಿಧೇಯಕ ದೇಶದ ಪ್ರಗತಿ ವಿರೋಧಿಯಾಗಿದೆ. ಇದು ಕೌಟುಂಬಿಕ ವ್ಯವಸ್ಥೆಯನ್ನೆ ತಪ್ಪುದಾರಿಗೆ ಎಳೆಯುವ ಶಾಸನ."[೧೧]

ಮಹಿಳಾ ಮೀಸಲಾತಿಯ ವಿಷಯಕ್ಕೆ ಒಡ್ಡುವ ಮೇಲಿನ ಕಾರಣಗಳೆಲ್ಲವೂ ಮಹಿಳಾ ಸಂದರ್ಭಕಷ್ಟೆ ಉದ್ಭವಿಸುವ ಪ್ರಶ್ನೆಗಳು ಎಂಬುದನ್ನು ಗಮನಿಸಬೇಕು. ಕೋಟಾದೊಳಗೊಂದು ಕೋಟಾ ಎಂಬ ಬೇಡಿಕೆ ಮಹಿಳೆಯರು ಒಂದು ಸಮೂಹ ಶಕ್ತಿಯಾಗಿ ಬೆಳೆಯುವುದನ್ನು ಪಡೆಯುವ, ಒಡೆಯುವ ಒಂದು ಪುರುಷ ತಂತ್ರ. ಹೀಗೆ ವಾದಿಸುವವರು ತಮ್ಮ ಒಳ ಮೀಸಲಾತಿಯ ಬೇಡಿಕೆಯನ್ನು ಹಿಂದುಳಿದ ದಲಿತ ಮಹಿಳಾ ಪರ ಎಂಬಂತೆ ಬಹಳ ಜಾಣ್ಮೆಯಿಂದಲೆ ವಾದ ಮಾಡುತ್ತಾರೆ. ಮಹಿಳೆಗೆ ಜಾತಿಯಾಧಾರಿತ ಮೀಸಲಾತಿಯನ್ನು ಬಯಸುವುದು ಇವರು ಈಗಿರುವ ವಿಧಿ ಸಂದರ್ಭದಲ್ಲಿ ಒಳ ಮೀಸಲಾತಿಗೆ ಒತ್ತಾಯಿಸುತ್ತಿಲ್ಲ ಯಾಕೆ? ಜನಸಂಖ್ಯೆಯಾಧಾರಿತ ಮೀಸಲಾತಿಯನ್ನು ಒತ್ತಾಯಿಸುತ್ತಿರುವ ಜಾತಿ ಸಂಘಟನೆಗಳು ಮಹಿಳಾ ಸಂದರ್ಭದಲ್ಲಿ ತಮ್ಮ ಜನಸಂಖ್ಯೆ ಸಿದ್ಧಾಂತಕ್ಕೆ ಒಪ್ಪಿಕೊಳ್ಳದಿರುವುದೇಕೆ? ಮಹಿಳಾ ಮೀಸಲಾತಿಯ ಸಂದರ್ಭದಲ್ಲಿ ಕಾಣುವ ಇವರ 'ಸ್ತ್ರೀಪರ' ಕಾಳಜಿ ನಿಜವಾದದ್ದೆ ಆದರೆ ತಮ್ಮ ಪಕ್ಷದ ಸಮಿತಿಗಳಲ್ಲಿ ಮಹಿಳೆಯರಿಗೆ ಎಷ್ಟು ಸ್ಥಾನ ನೀಡಿದ್ದಾರೆ? ಯಾವ ಬಗೆಯ ಸ್ಥಾನ ಮತ್ತು ಅಧಿಕಾರವನ್ನು ಕಲ್ಪಿಸಿದ್ದಾರೇ? ಅಥವಾ ಲೋಕಸಭೆ, ವಿಧಾನ ಸಭೆ ಚುನಾವಣೆಗಳಲ್ಲಿ ಮಹಿಳೆಯರಿಗೆ ಪಕ್ಷದಲ್ಲಿ ಎಷ್ಟು ಅವಕಾಶ ಕಲ್ಪಿಸಿರುವರು. ಎಂಬುದು ಇವರ ಮಹಿಳಾ ಪರ ಕಾಳಜಿಯ ಅಸಲಿತನ ಬಯಲಾಗುತ್ತದೆ.[೧೨] ಮುಖ್ಯವಾಗಿ ಮೀಸಲಾತಿಯನ್ನು ವಿರೋಧಿಸುವ ಕುತರ್ಕಗಳು ಮಂಡಿಸುವ ಇಂತಹ ಸೋಫಿಸ್ಟ್ ವಾದಗಳಲ್ಲಿ ಅಂತಹ ವೈಚಾರಿಕ ಕಾಳಜಿ ಏನು ಇಲ್ಲ. ಅಡಗಿರುವುದು ತಮ್ಮ ನೆಲೆಯನ್ನು ಕಳೆದುಕೊಳ್ಳುತ್ತೇವೆಂಬ ಭಯ. ದಲಿತ, ಹಿಂದುಳಿದ ಮಹಿಳೆ ಎಂಬ ಸಿದ್ಧಾಂತ ಮುಂದೊಡ್ಡಿ ಬರುತ್ತಿರುವ ಇವರು ಆ ಸಮುದಾಯಗಳ ಮಹಿಳೆಯರಿಗೆ ಎಷ್ಟು ಪ್ರಮಾಣದಲ್ಲಿ ಸ್ಥಾನಮಾನವನ್ನು ಪಕ್ಷದಲ್ಲಿ ನೀಡಿದ್ದಾರೆ ಎಂದು ಪ್ರಶ್ನಿಸಿದರೆ ಅವರು ತಲೆ ತಗ್ಗಿಸದೆ ಇರಲಾರರು.

**ಮೀಸಲಾತಿಯನ್ನು ವಿರೋಧಿಸುವವರಲ್ಲಿ ಅಡಗಿರುವ ಭಯ, ಆತಂಕಗಳು**

* ಮಹಿಳೆಯ ಒಂದು ಸಮೂಹವಾಗಿ ಸ್ಥಾಪಿಸಿಕೊಂಡು ಬಂದಾಗುವುದಲ್ಲದೆ ಪುರುಷನಿಷ್ಠ ಮೌಲ್ಯಗಳ ವಿರುದ್ಧ ಅವರ ಅಧಿಕಾರದ ವಿರುದ್ಧ ಪ್ರಶ್ನಿಸುವಂತಾಗುವರು.
* ವಿದೇಯಕ ಅಂಗೀಕೃತವಾದರೆ ಮಹಿಳೆಯರು ಭಾ.ಜ.ಪ. ಪಕ್ಷದ ಕಡೆಗೆ ವಾಲುತ್ತಾರೆ. ಅಂಗೀಕೃತವಾಗದೆ ಹೋದರೆ ಹಿಂದುಳಿದ ವರ್ಗ, ದಲಿತ ವರ್ಗಗಳು ಮಸೂದೆಯನ್ನು ವಿರೋಧಿಸುವವರ ಕಡೆ ಬರುತ್ತವೆ.
* ಸದ್ಯ ಈಗ ಲೋಕಸಭೆಯಲ್ಲಿರುವ ಸದಸ್ಯರ ಒಟ್ಟು ಸಂಖ್ಯೆ ೫೪೦ ಮೀಸಲಾತಿ ವಿದೇಯಕ ಅಂಗೀಕರಿಸಿದ್ದಲ್ಲಿ ೧೮೧ ಮಹಿಳೆಯರು ಪಾರ್ಲಿಮೆಂಟಿಗೆ ಬರುತ್ತಾರೆ. ಅಲ್ಲದೆ ಈಗಿರುವ ೧೩೧ ಪುರುಷರು ಜಾಗ ಖಾಲಿಮಾಡಬೇಕಾಗುತ್ತದೆ.

ತಮ್ಮ ತಮ್ಮಲ್ಲೆ ಈ ಬಗೆಯ ಅಂಜಿಕೆ, ಭಯಗಳನ್ನು ಇಟ್ಟುಕೊಂಡಿರುವ ನಮ್ಮನ್ನಾಳುವ ನಾಯಕರುಗಳು ಅವೈಚಾರಿಕ ನಿಲುವುಗಳನ್ನು, ಕುತರ್ಕಗಳನ್ನು ವ್ಯವಸ್ಥಿತವಾಗಿ ಮಂಡಿಸುತ್ತಲೆ ಮೀಸಲಾತಿಯನ್ನು ಮುಂದೂಡಿತ್ತಿವೆ. ಪರಂಪರಾಗತವಾಗಿ ತಮ್ಮ ಅಧೀನದಲ್ಲೆ ಇರುವ ಅಧಿಕಾರ, ಪ್ರಭುತ್ವ ತಮ್ಮನ್ನು ಬಿಟ್ಟು ಬೇರೆಯಾರಿಗೂ ಸಿಗಬಾರದು. ತಾವೇ ಅದನ್ನು ಅನುಭವಿಸುವಂತಾಗಲೂ ಈ ಬಗೆಯ ಕುತಂತ್ರಗಳನ್ನು ಮುಂದೂಡುತ್ತಿದ್ದಾರೆ. ಒಂದು ಸಾಮಾಜಿಕ ವ್ಯವಸ್ಥೆಯನ್ನು ನಿಯಂತ್ರಿಸುವ ತನಗೆ ತೋಚಿದಂತೆ ಬದಲಾಯಿಸುವ ಅಧಿಕಾರ ಶಕ್ತಿ ಇರುವುದು ರಾಜಕೀಯ ಕ್ಷೇತ್ರಕ್ಕೆ. ಆದ್ದರಿಂದಲೆ ಇಂತಹ ಪ್ರಭಾವಶಾಲಿಯಾದ ಅಧಿಕಾರ ಸ್ಥಾನವನ್ನು ಸ್ತ್ರೀಗೆ ಕೊಡಲು ಪಿತೃಪ್ರಧಾನ ಮೌಲ್ಯಗಳ ಸಾಕಾರ ಮೂರ್ತಿಯಾಗಿರುವ ಪುರುಷರು ಹಿಂದೇಟು ಹಾಕುತ್ತಿರುವುದು. ಮೇಲೆ ತಿಳಿಸಿರುವಂತೆ ನಿಜವಾಗಿಯೂ ಮೀಸಲಾತಿಯೂ ಜಾರಿಯಾದರೆ ಅದು ಮುಂದುವರೆದ, ಶ್ರೀಮಂತ, ಬಲಿಷ್ಠ ಜಾತಿಗಳ ಮಹಿಳೆಯರ ಪಾಲಾಗುತ್ತಿದೆಂಬುದು ವಾಸ್ತವಕ್ಕೆ ವಿರುದ್ಧವಾಗಿದೆ. ಕಳೆದ ಸುಮಾರು ವರ್ಷಗಳಿಂದ ಪುರುಷ ರಾಜಕಾರಣಿಗಳ ತಂದೆ, ಮಗ, ಅಳಿಯ, ಭಾವ ಹೀಗೆ ಎಲ್ಲಾರೂ ನಿರಂತರವಾಗಿ ಅಧಿಕಾರ ನಡೆಸಿಲ್ಲವೆ ಎಂದು ಪ್ರಶ್ನಿಸಬೇಕಾಗುತ್ತದೆ. ಪುರುಷ ತನಗೆ ಒಲ್ಲದ ಸಮಸ್ಯೆಯನ್ನು ಮಹಿಳೆಯ ಮೇಲಾಕಿ ಅವಳನ್ನು ದೋಷಿಸುವುದು ಹಿಂದಿನಿಂದಲೂ ನಡೆದು ಬಂದಿರುವಂತಹದ್ದೆ.

ಜನಸಂಖ್ಯೆಯಲ್ಲಿ ಸರಿಸುಮಾರು ಪುರುಷನಂತೆ ಸಮಪಾಲನ್ನು ಹೊಂದಿರುವ ಮಹಿಳೆಯರ ರಾಜಕೀಯದ ಬಗ್ಗೆ ಎಲ್ಲಾ ಕಡೆಯಿಂದಲೂ ಅನುಕಂಪ ಆಧಾರಿತವಾದ ಮಾತುಗಳ ಚಿಂತಕರು, ರಾಜಕಾರಣಿಗಳಿಂದ ಬರುತ್ತಲೆ ಇವೆ. ಮಹಿಳಾ ರಾಜಕೀಯ ಪ್ರಾತಿನಿಧ್ಯದ ಬಗ್ಗೆ, ಮಹಿಳಾ ಅಭಿವೃದ್ಧಿಯ ಬಗ್ಗೆ ಸ್ತ್ರೀ ಪುರುಷ ಸಮಾನತೆಯ ಬಗ್ಗೆ ಎಲ್ಲಾರೂ ಎಷ್ಟು ಬೇಕಾದರೂ ಮಾತನಾಡುತ್ತಾರೆ. ಆದರೆ ಮಹಿಳಾ ಪ್ರಾತಿನಿಧ್ಯ ನೀಡುವ ವಿಷಯ ಬಂದಾಗ ಮೌನವಹಿಸುತ್ತಾರೆ. ಇದು ಇತಿಹಾಸದುದ್ದಕ್ಕೂ ನಿರಂತರವಾಗಿ ಕಂಡುಬಂದಿರುವ ಸತ್ಯ. ಪ್ರತಿಯೊಂದು ರಾಷ್ಟ್ರೀಯ ಪಕ್ಷಗಳು ಚುನಾವಣೆಯ ಸಮಯದಲ್ಲಿ ಮಹಿಳಾ ಮೀಸಲಾತಿಯ ಬಗ್ಗೆ ಉದ್ದುದ್ದ ಭಾಷಣವನ್ನು ನೀಡುತ್ತವೆ. ಮಹಿಳಾ ಮತದಾರರಿಂದ ಓಟು ಪಡೆದು ಗೆದ್ದ ನಂತರ ಮರೆಯುತ್ತಿವೆ. ಚುನಾವಣೆಯು ನಡೆಯಿತು. ಅದರಲ್ಲಿ ಯಾವ ಯಾವ ಪಕ್ಷಗಳು ಮಹಿಳಾ ಸಮುದಾಯಕ್ಕೆ ಟಿಕೆಟ್ ನೀಡಿದ್ದವು? ಎಂಬುದನ್ನು ಯಾರು ಮರೆತಿಲ್ಲ. ಏಕೆ

ಹೀಗೆ? ಇದಕ್ಕೆ ಕಾರಣವೇನು ? ಎಂಬುದನ್ನು ವಿಶ್ಲೇಷಣೆಗೊಳಪಡಿಸಿದಾಗ ರಾಜಕೀಯಕ್ಕೆ ರಾಜಕೀಯವೇ ಸಾಟಿ ಎಂಬಂತೆ ಬೇರೊಂದನ್ನು ಹೋಲಿಸಲಾಗದ ಕ್ಷೇತ್ರ ಇದಾಗಿದೆ. ಹಣ, ಹೆಂಡ, ಜಾತಿ, ಧರ್ಮಗಳೇ ಅಧಿಕಾರ ಶಕ್ತಿಯ ಮೂಲ ನೆಲೆಯಾಗಿರುವ ರಾಜಕೀಯದ ಅಖಾಡದಲ್ಲಿ ಮಹಿಳೆಯರು ಸ್ಪರ್ಧೆಗೆ ಇಳಿಯಲು ಪಿತೃ ಪ್ರಧಾನತೆಯ ಮೌಲ್ಯಗಳು ಅವಕಾಶ ಕೊಡುತ್ತಲೆ ಇಲ್ಲ.

ರಾಜಕೀಯವನ್ನು ಪ್ರವೇಶಿಸಲು, ಅಧ್ಯಯನ ಮಾಡಲು ಸಮಾಜ ಮಹಿಳೆಯನ್ನು ಎಂದೂ ಬಿಟ್ಟೇ ಇಲ್ಲ. ಇಲ್ಲಿ ಕೆಲವೆ ಕೆಲವು ಜನ ಸ್ತ್ರೀಯರು ಅವಕಾಶ ಪಡೆದರಾದರೂ ಅವರೆಲ್ಲರು ಶ್ರೀಮಂತ, ಭೂಮಾಲಿಕ , ರಾಜಕೀಯ ಹಿನ್ನೆಲೆಯುಳ್ಳ ಮನೆತನದವರಾಗಿದ್ದುದೆ ಕಾರಣವಾಗಿದೆ. ಪಂಚಾಯತಿ ವ್ಯವಸ್ಥೆಯನ್ನು ಬಿಟ್ಟರೆ ಉಳಿದಂತೆ ಎಲ್ಲಾ ಕಡೆಯಲ್ಲಿಯೂ ಅಪ್ಪಿತಪ್ಪಿಯೂ ಅಧಿಕಾರ ಪಡೆದಿರುವವರೆಂದರೆ ಇಂತಹ ಪ್ರತಿಷ್ಠಿತ ಮಹಿಳೆಯರೆ. ಆರ್ಥಿಕ ಬೆಂಬಲ, ರಾಜಕೀಯ ಲಾಭಗಳ ಮೂಲಭೂತ ಗುಣವಾಗಿರುವ ಇಂದಿನ ರಾಜಕೀಯಕ್ಕೆ ಮಹಿಳೆಯ ಬರಬೇಕಾದರೆ ಮನೆ ಮಂದಿಯ ಕೃಪಾಕಟಾಕ್ಷವಿದ್ದರಷ್ಟೆ ಸಾಧ್ಯ. ಗ್ರಾಮ ಪಂಚಾಯತಿಯಾಗಿರಲಿ ಅಥವಾ ಲೋಕ ಸಭೆಯಾಗಿರಲಿ ಮಹಿಳಾ ಪ್ರತಿನಿಧೀಕರಣದ ಸ್ಥಿತಿ ಮಾತ್ರ ಒಂದೆ. ಏಕೆಂದರೆ ಈ ವಿಚಾರದಲ್ಲಿ ಸ್ವಂತಃ ಸ್ವತಂತ್ರ, ನಿರ್ಧಾರ ತೆಗೆದುಕೊಳ್ಳುವ ಸಾಮಾಜಿಕ ಹಕ್ಕು ಅವಳಿಗೆ ಇಲ್ಲ. ಮಹಿಳೆಯರು ಬಹುತೇಕ ಹಣಕಾಸಿನ ಸ್ವಾತಂತ್ರ್ಯ ಹೊಂದಿಲ್ಲದಿರುವುದು, ರಾಜಕೀಯಶಕ್ತಿ ನಡೆಸಲು ಸಾಧ್ಯವಿಲ್ಲದಿರುವುದು ರಾಜಕೀಯ ಕ್ಷೇತ್ರಗಳಲ್ಲಿ ಹಣ, ಶಕ್ತಿಗಳೇ ಪ್ರಮುಖವಾಗಿರುವುದರಿಂದ ಮಹಿಳೆಯರು ಸ್ಪರ್ಧಿಸಿ ಗೆಲ್ಲುವ ಅವಕಾಶ ತುಂಬ ಕಡಿಮೆ. ಇದು ಒಂದು ಬಗೆಯಾದರೆ, ಇನ್ನೊಂದು ಬಗೆ ರಾಜಕೀಯ ಅಧಿಕಾರ ಮತ್ತು ಹಣ ಒಳಪಟ್ಟುಕೊಂಡು ಬರುತ್ತಿರುವುದರಿಂದ ಅದನ್ನು ಬಿಟ್ಟು ಕೊಡಲು ಪುರುಷ ರಾಜಕಾರಣಿಗಳು ಮಾನಸಿಕವಾಗಿ ಸಿದ್ಧರಿಲ್ಲ. ಅಲ್ಲದೆ ಮಹಿಳೆಯರು ಗೆಲ್ಲುವ ಕುದುರೆಗಳೂ ಅಲ್ಲ. 'Winning power' ಅವಳಿಗೆ ಇಲ್ಲಾ. ಅವಳಿಗೆ ಟಿಕೇಟ್ ಕೊಟ್ಟರೆ ನಷ್ಟ ಎಂಬ ವಿಚಾರಗಳಿಂದಲೆ ಅವಳಿಗೆ ರಾಜಕೀಯ ದೂರವಾಗುತ್ತಿದೆ. ಹೀಗಾದಾಗ ಮೌಲ್ಯಾಧಾರಿತ ರಾಜಕಾರಣ ಎಂಬುದನ್ನು ಗುರುತಿಸಬೇಕಲ್ಲ ಇಂದು ಶಕ್ತಿ ರಾಜಕಾರಣ, ಅವಕಾಶವಾದಿ ರಾಜಕಾರಣ, ಪಕ್ಷರಾಜಕಾರಣ ಹಾಗೂ ಜಾತಿ ರಾಜಕಾರಣಗಳ ಅರ್ಭಟವೆ ತುಂಬಿ ರಾಜಕಾರಣವನ್ನೆಲ್ಲ ಕುಲಗೆಡಿಸಿರುವುದರಿಂದ ನಿಜವಾದ ರಾಜಕಾರಣ ಎಂಬುದು ಇಲ್ಲವೆ ಇಲ್ಲ ಎಂಬಂತಾಗಿದೆ. ಈ ಕಾರಣದಿಂದಲೆ ಮಹಿಳಾ ರಾಜಕಾರಣದ ಹಕ್ಕು ಮೊಟಕಾಗಿರುವುದು."[೬೨]

ಅತ್ಯಂತ ಹಿಂದುಳಿದಿರುವ ಪ್ರದೇಶಗಳಲ್ಲಿ ಮಹಿಳಾ ಸ್ಥಿತಿಯೂ ಅದಕ್ಕಿಂತ ಹಿಂದುಳಿದಿರುತ್ತದೆ. ಅಂತಹ ಕಡೆಗಳಲ್ಲಿ ಮಹಿಳಾ ಸ್ಥಾನಗಳನ್ನು ಹೆಚ್ಚಿಸಬೇಕು. ಮೀಸಲಾತಿಗಿಂತಲೂ ಇಲ್ಲಿ ತೆರೆದ ಮನಸ್ಸಿನಿಂದ ಮುಕ್ತ ಸ್ಪರ್ಧೆಗೆ ಸ್ತ್ರೀ ಪುರುಷರಿಬ್ಬರೂ ಆರೋಗ್ಯಕರ ವಾತಾವರಣ ಸ್ಥಾಪಿಸಲು ಸಮವಾಗಿ ಚುನಾವಣೆ ಎದುರಿಸಬೇಕು. ಆಗ ಮಾತ್ರ ರಾಜಕಾರಣದ ಹಕ್ಕು ಹೆಚ್ಚು ಅರ್ಥಪೂರ್ಣವಾಗುವುದಲ್ಲದೆ, ಸಮಾನತೆಯನ್ನು ಸಾಧಿಸಿದಂತಾಗುವುದು. ಇಲ್ಲವಾದರೆ ಒಂದು ವರ್ಗವನ್ನು ಹೊರಗಿಟ್ಟು ಅಥವಾ ಅವಳನ್ನು ದುರ್ಬಲಗೊಳಿಸುವ ತಂತ್ರಮಾಡಿ ಏಕ ಪಕ್ಷೀಯವಾಗಿ ಕೇಂದ್ರಗೊಳ್ಳುವ ಶಕ್ತಿ ಅಧಿಕಾರಗಳು ಸಮಾಜದ ಎಲ್ಲಾ ವರ್ಗದ ಜನರಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡಲಾರವು. ಇದೊಂದು ವಿಧದಲ್ಲಿ ಸರ್ವಾಧಿಕಾರವೆ ಆಗುತ್ತದೆ".[೬೩]

ಪ್ರತಿಯೊಬ್ಬರೂ ಸಮಾಜದಲ್ಲಿ ರಾಜಕೀಯವನ್ನೂ ತಮ್ಮ ಪ್ರಜ್ಞೆಯ ಪರದಿಗೆ ವಿತರಿಸಿಕೊಳ್ಳುವಂತಹ ಪ್ರಯತ್ನ ಮಾಡಬೇಕು. ವೈಚಾರಿಕ ಚಿಂತನೆಯನ್ನು ಒರೆಗೆ ಹಚ್ಚಿ ಅವರ ತತ್ವ ಪ್ರತಿಭೆಯನ್ನು ಅರ್ಥಮಾಡಿಕೊಳ್ಳುವ ರಾಜಕೀಯವಾಗಿ ಬೆಳೆಯಲು ಬಿಡಬೇಕು.

### ೨.೭. ಪರ್ಯಾಯ ರಾಜಕಾರಣದಲ್ಲಿ ದಲಿತ ಚಿಂತನೆ

ಸಮಸ್ತ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಇಡೀ ದಲಿತ ಸಮುದಾಯಕ್ಕೆ ಅನ್ವಯವಾಗುವ, ಪೂರಕವಾಗುವ ನ್ಯಾಯದ ವಿಸ್ತರಣೆಗಾಗಿ ಹಾಗೂ ಡಾ.ಬಿ.ಆರ್ ಅಂಬೇಡ್ಕರ್‌ರವರ ತತ್ವ ಸಿದ್ಧಾಂತಗಳನ್ನು ಸಮಕಾಲಿನ ಸಂದರ್ಭಕ್ಕೆ ಮುಖಾ ಮುಖಿಯಾಗಿಸುವುದು ಇಂದು ಅತ್ಯಂತ ಜರೂರಿನದಾಗಿದೆ. ಸಮಾಜದ ಮುಖ್ಯವಾಹಿನಿಯಿಂದ ನಿರಂತರವಾಗಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ರಾಜಕೀಯದಂತಹ ವಿಚಾರಗಳಿಂದ ದೂರ ಉಳಿದಿರುವ ದಲಿತ ಸಮುದಾಯಕ್ಕೆ ಸಮಾಜಿಕ ಭವಿಷ್ಯ ರೂಪಿಸಲು ಈ ಬಗೆಯ ಪರ್ಯಾಯ ದಲಿತ ರಾಜಕಾರಣ ಅವಶ್ಯಕತೆ ಇದೆ. ಹಾಗಾದರೆ ಪರ್ಯಾಯ ರಾಜಕಾರಣ ಎಂದರೇನು? ನಿಘಂಟಿನ ಅರ್ಥದಲ್ಲಿ ಪರ್ಯಾಯ ರಾಜಕಾರಣವನ್ನು ಅರ್ಥೈಸುವುದಾದರೆ ಪ್ರಸ್ತುತವಾಗಿರುವ 'ರಾಜಕಾರಣದ ಬದಲು' ಎನ್ನುವ ಅರ್ಥದಲ್ಲಿ ಪರಿಭಾವಿಸಿಕೊಳ್ಳಬೇಕಾಗುತ್ತದೆ."[೫] (ಪಿ.ಮಹಾದೇವಯ್ಯ,೨೦೦೫) ವರ್ತಮಾನದ ರಾಜಕೀಯದ ಸ್ವರೂಪ ಯಾವ ರೀತಿಯಾಗಿದೆ ಎಂಬ ವಿಚಾರಗಳಿಂದಲೆ ಚರ್ಚೆ ಆರಂಭವಾಗಬೇಕಾಗಿದೆ.

ಆಧುನಿಕ ರಾಜಕೀಯ ವ್ಯವಸ್ಥೆಯ ಸ್ವರೂಪ ಯಾವ ರೀತಿಯಾಗಿದೆ. ಸಂವಿಧಾನದ ಆಶಯಗಳಿಗೆ ಪೂರಕವಾಗಿ ಎಲ್ಲಾ ಸಮುದಾಯಗಳಿಗೂ ಸಮಾನ ಅವಕಾಶಗಳು ಸಿಗುತ್ತಿವೆಯೇ? ಇಲ್ಲವಾದರೆ ಏಕೆ? ಪ್ರಶ್ನೆಗಳ ಸರಮಾಲೆಯೇ ಮುಂದುವರೆಯುತ್ತದೆ. ರಾಜಕಾರಣ ಎಂಬುದು ಜಾತಿಗಳ ಅತ್ಯುನ್ನ ಸಂಗಮ. ರಾಜಕೀಯದ ಅಂಗಳದಲ್ಲಿ ಪ್ರಬಲ ಜಾತಿಗಳು ನಿರಂತರವಾಗಿ ಚಲಿಸುತ್ತಲೆ ಇರುತ್ತವೆ. ಅಲ್ಲದೆ ಪ್ರಭುತ್ವವನ್ನು ತಮ್ಮ ಕೈವಶ ಮಾಡಿಕೊಂಡು ಅಂಚಿನ ಶೋಷಿತ ಸಮುದಾಯಗಳಿಗೆ ಅಧಿಕಾರ ನೀಡಿದಂತೆ ಮಾಡಿ ತಾವೆ ಅವರೆಲ್ಲ ಅಧಿಕಾರವನ್ನು ಲಪಟಾಯಿಸುವ ಕ್ರಮ ಇಲ್ಲಿದೆ. ಭಾರತದ ಸಂದರ್ಭದಲ್ಲಿ ಶೋಷಣೆ, ಶೋಷಿತ ಎಂಬ ಪದಗಳು ಏಕರೂಪದಲ್ಲಿ ಇರುವುದಿಲ್ಲ. ಭಾರತ ಅಳವಡಿಸಿಕೊಂಡಿರುವ ಜನತಂತ್ರ ವ್ಯವಸ್ಥೆಗೆ ಇವು ಅನಿವಾರ್ಯ ಎನ್ನುವಷ್ಟರ ಮಟ್ಟಿಗೆ ಬೆಳೆದು ನಿಂತಿವೆ. ಬೆಳೆಯುತ್ತಲೆ ಇವೆ. ಗಣತಂತ್ರ ವ್ಯವಸ್ಥೆಯಲ್ಲಿ ಕಲ್ಯಾಣರಾಜ್ಯದ ಮುಖ್ಯಸಾರ ಎಂದರೆ ತುದಿಯಲ್ಲಿರುವವರನ್ನು ತಳಕ್ಕೂ, ತಳದಲ್ಲಿರುವವರನ್ನು ತುದಿಗೂ ತಳ್ಳುವ ಅಂಶವನ್ನು ಜನತಂತ್ರ ವ್ಯವಸ್ಥೆಯಡಿಯಲ್ಲಿದೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ರಾಜಕೀಯಾಧಿಕಾರವು ಬಲಿಷ್ಠ ಜಾತಿಗಳ ಪಾಲಾಗಿರುವುದರಿಂದ ಪ್ರಭುತ್ವವು ಜಾತಿಗಳಿಗೆ ತಲೆ ಬಾಗಿಸಲೇಬೇಕಿದೆ. ಹೀಗೆ ಪ್ರಭುತ್ವದಲ್ಲಿ ಸ್ಥಾನ ಪಡೆದುಕೊಂಡ ಮೇಲ್‌ಜಾತಿಗಳಿಗೆ ಸ್ವರ್ಗ ಕೈಯಲ್ಲಿಯೇ ಇರುತ್ತದೆ. ಸಂಗ್ರಹ ಪಿಪಾಸೆ ಎಲ್ಲೆ ಮೀರಿರುತ್ತದೆ. ಕಲ್ಯಾಣ ರಾಜ್ಯದ ಎಲ್ಲಾ ಅಧಿಕಾರ ಸಂರಚನೆಯ ಸವಲತ್ತುಗಳು ಅವರ ಪಾಲಾಗುತ್ತವೆಯಲ್ಲದೆ ಶೋಷಿತರನ್ನು ತುಳಿಯುತ್ತಲೆ ಇವರನ್ನು ಹಿಡಿದಿಟ್ಟುಕೊಂಡು ತಾವೇ ಅಧಿಪತಿಗಳಾಗುತ್ತಾರೆ.

ಬಲಿಷ್ಠ ದಲಿತ, ಹಿಂದುಳಿದ ಜಾತಿಗಳು ಅಧಿಕಾರದಲ್ಲಿ ಪಾಲು ಪಡೆದು ಆಳುವ ಜಾತಿಗಳೊಡನೆ ಅಧಿಕಾರ ಕೇಂದ್ರಿತ ಜಾತಿಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಅಧಿಕಾರದಿಂದ ಆಚೆಗೆ ಉಳಿದ ಅಂಚಿನ ಜಾತಿಗಳು, ದಲಿತ

ಸಮುದಾಯಗಳು ಅಧಿಕಾರ ಪಡೆಯದೆ ವಂಚಿತವಾಗಿ ಅಧಿಕಾರ ವಂಚಿತ ಜಾತಿಗಳಾಗಿ ಬಿಡುತ್ತವೆ. ಅಧಿಕಾರದ ಸಮಸ್ತ ನಿಯಂತ್ರಣ ಆಳುವ ಅಥವಾ ಬಲಿಷ್ಠ ಜಾತಿಗಳ ಪಾಲಾಗುವುದರಿಂದ ರಾಜಕೀಯದ ಚದುರಂಗದಲ್ಲಿ ಅವರೆ ಪ್ರಭುಗಳಾಗಿ ಮೆರೆಯುತ್ತಾರೆ. ಅಧಿಕಾರ ಕೇಂದ್ರದ ಎಲ್ಲಾ ವಿಭಾಗಗಳಲ್ಲಿಯೂ ತಾವೆ ಯಥೇಚ್ಛವಾಗಿ ತಿಂದುಂಡು ಉಳಿದ ಸಿಪ್ಪೆಯನ್ನು ತಳಸಮುದಾಯದ ಅಧಿಕಾರ ವಂಚಿತ ಜಾತಿಗಳಿಗೆ ಕೊಡುತ್ತಾರೆ. ಸ್ವಾತಂತ್ರ್ಯ ನಂತರ ಭಾರತದ ಸುಧಾರಣಾ ಜೀವಿಗಳು ಕಂಡಂತಹ ರಾಮರಾಜ್ಯ ಕನಸಿನ ಮಾತೆ ಆಯಿತು. ಹಿಂದಿನ ಹಲವಾರು ಸಾಮಾಜಿಕ ಸಮಸ್ಯೆಗಳು ಯಥಾ ಪ್ರಕಾರ ಮುಂದುವರೆದು ಭಾರತೀಯ ಸಮಾಜದ ಪರಿವರ್ತನೆಗೆ ಅಡ್ಡಿಯಾಯಿತಲ್ಲದೆ ಸಮಾಜದ ವಿಘಟನೆಗೂ ಸಹ ಕಾರಣವಾಯಿತು. ಶ್ರೀಮಂತರೂ ಶ್ರೀಮಂತರಾಗುತ್ತಲೆ ಇದ್ದಾರೆ. ಬಡವ ಬಡವರಾಗುತ್ತಲೆ ಇದ್ದಾರೆ. ಶ್ರೀಮಂತ ಕುಟುಂಬದ ಮಹಿಳೆ ಮಾನಸಿಕವಾಗಿ ಶೋಷಣೆಗೆ ಒಳಗಾಗಿದ್ದರೆ, ದಲಿತ ಮಹಿಳೆ ಜಾತಿಯ ಕಾರಣದಿಂದ ದೌರ್ಜನ್ಯಗಳಿಗೆ, ಅತ್ಯಾಚಾರಗಳಿಗೆ ಬಲಿಯಾಗುತ್ತಿದ್ದಾಳೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಆಳುವ ಸರಕಾರಗಳು ತಾವು ನಡೆದು ಬಂದ ಅನೈತಿಕ ದಾರಿಯಲ್ಲೆ ಸಮಾಜ, ದೇಶವನ್ನು ಮುನ್ನಡೆಸುತ್ತಿವೆ. ರಷಿಯಾ, ಚೀನಾಗಳಲ್ಲಿ ಒಂದು ಅಥವಾ ಮೂರು ಪಂಚವಾರ್ಷಿಕ ಯೋಜನೆಗಳು ಆ ದೇಶಗಳನ್ನು ಅಭಿವೃದ್ಧಿ ಹೊಂದಿದ ದೇಶಗಳಾಗಿ ಮಾಡಿದರೆ ಭಾರತ ೧೦ ಪಂಚವಾರ್ಷಿಕ ಯೋಜನೆಗೆ ಒಳಗಾದರೂ ಪರಿಸ್ಥಿತಿ ಮಾತ್ರ ಯಥಾ ಪ್ರಕಾರವಿದೆ. ಇದಕ್ಕೆ ಪ್ರಮುಖ ಕಾರಣ ಎಂದರೆ ಆಳುವ ವರ್ಗಗಳ ಬೂಷ್ವಾರ್ನೀತಿ, ಬಂಡವಾಳಶಾಹಿತನ, ಲಂಚಗೂಳಿತನ, ಪ್ರಮುಖ ಕಾರಣಗಳಾಗಿವೆ. ಕೇವಲ ಹಣ, ಹೆಂಡದಂತಹ ಅನೈತಿಕ ಕಾರ್ಯಗಳ ಮೂಲಕ ರಾಜಕೀಯಕ್ಕೆ ಬಂದ ನಮ್ಮ ನಾಯಕರುಗಳು ತಮ್ಮ ಸ್ವ ಅಭಿವೃದ್ಧಿಗೆ ಪಡುವ ಕಷ್ಟವನ್ನು ಜನತೆಯ ಸೇವೆಗೆ ಮೀಸಲಿಡದಿರುವುದು ಆಳಲ್ಪಡುತ್ತಿರುವ ನಮ್ಮೆಲ್ಲರ ದೌರ್ಬಲ್ಯವೇ ಸರಿ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಮನಸ್ಸುಗಳೆಲ್ಲೆಲ್ಲಾ ಸಮಾನ ಮನಸ್ಥಿತಿಯಿಂದ ತಾತ್ವಿಕವಾಗಿ ಆಲೋಚಿಸುವ, ಎಲ್ಲಾರಲ್ಲಿಯೂ ಸಂಘಟನ ಕೌಶಲ್ಯ ಬೆಳೆಸುವ ಗುರಿಯೊಂದಿಗೆ ಬದಲಾವಣೆಯಂತಹ ಕಾರ್ಯಕ್ಕೆ ಅಣಿಯಾಗಬೇಕಾಗಿದೆ. ಈ ಬದಲಾವಣೆಗೆ ಸ್ವಲ್ಪಕಾಲ ಹಿಡಿಯಬಹುದಾದರೂ ಮುಂದೊಂದು ದಿನ ಬದಲಾವಣೆ ಸಾಧ್ಯವಿದೆ. ಈ ಬಗೆಯ ಆಲೋಚನೆಗಳ ಲಹರಿಯಲ್ಲಿ ಪರ್ಯಾಯ ರಾಜಕಾರಣದ ಚರ್ಚೆ ಆರಂಭಿಸಬಹುದು. ಏಕೆಂದರೆ ಪರಿವರ್ತನೆ ಸಮಾಜದ ನಿಯಮವಾಗಿರುವುದರಿಂದ ಎಲ್ಲಾ ಬದಲಾಗುತ್ತಿರುತ್ತದೆ. ಪರ್ಯಾಯ ರಾಜಕಾರಣವನ್ನು ಕುರಿತಂತೆ ಹಲವಾರು ವಿದ್ವಾಂಸರು ತಮ್ಮದೆ ಆದ ಸಿದ್ಧಾಂತದವಿಯಲ್ಲಿ ನಿರ್ವಚಿಸಿದ್ದಾರೆ. ಕೆಲವರು ಪರ್ಯಾಯ ರಾಜಕಾರಣ ಎಂದರೆ 'ಜನತೆಯ ರಾಜಕಾರಣ' ಎಂದು ಕರೆದರೆ ಇನ್ನು ಕೆಲವರು ಗುಡಿಸಲು ರಹಿತ ಸಮಾಜ ನಿರ್ಮಾಣವೆ ಪರ್ಯಾಯ ರಾಜಕಾರಣ. ಇನ್ನೂ ಮುಂದುವರೆದು ಕೆಲವರು 'ಪರ್ಯಾಯ ರಾಜಕೀಯ ವ್ಯವಸ್ಥೆ' ಎಂದು ಅಭಿಪ್ರಾಯ ಪಟ್ಟಿದ್ದಾರೆ.'' 'ಗ್ರಾಮರಾಜ್ಯ ನಿರ್ಮಾಣವೆ ಪರ್ಯಾಯ ರಾಜಕಾರಣ' ಎಂದು ಕೆಲವರು ವಾದಿಸಿದ್ದಾರೆ. ಮತ್ತೆ ಕೆಲವರು 'ಪರ್ಯಾಯ ರಾಜಕೀಯ ವ್ಯವಸ್ಥೆ' ಎಂದು ಇನ್ನೂ ಕೆಲವರು ಪರ್ಯಾಯ ಸಾಂಸ್ಕೃತಿಕ ವ್ಯವಸ್ಥೆ ಆಗಬೇಕಿದೆ ಎನ್ನುತ್ತಾರೆ. ಇಂತಹ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಒಳ ಮನಸ್ಸು ಹಾಗೂ ಹೊರ ಮನಸ್ಸುಗಳನ್ನು ಮುಕ್ತವಾಗಿ ತೆರೆದು ಚರ್ಚೆ ಮಾಡಬೇಕಿದೆ''.'' ಪರ್ಯಾಯ ರಾಜಕಾರಣದ ಬಗ್ಗೆ ಪ್ರತಿಯೊಬ್ಬ ಪ್ರಜ್ಞಾವಂತರೂ ಹಂಬಲಿಸುತ್ತಿದ್ದಾರೆ. ಪ್ರಸ್ತುತ ಕೊಳೆತುನಾರುತ್ತಿರುವ ರಾಜಕೀಯ ವ್ಯವಸ್ಥೆಗೆ ಇದು ಒಂದು ಉತ್ತಮ ವೇದಿಕೆಯಾಗಬಲ್ಲದು.

ಪರ್ಯಾಯ ಎಂಬುದನ್ನು 'Revolution' ಎಂಬ ಅರ್ಥದಲ್ಲಿ ಬಳಸಬೇಕು. Rapid Disposition ಎಂಬ ಅರ್ಥವೂ ಇದೆ. Methodical Disposition ಅಥವಾ ಕ್ರಮಬದ್ಧವಾದ ಪರಿವರ್ತನೆ ಎಂಬ ಅರ್ಥವಿದೆ. ಪರ್ಯಾಯ ಎಂಬುದು ಕೇವಲ ರಾಜಕಾರಣಕ್ಕೆ ಮಾತ್ರ ಸೀಮಿತವಾಗಿಲ್ಲ. ಈ ಪರ್ಯಾಯ ಶಬ್ದಕ್ಕೆ ಮೂಲ ಶಬ್ದ 'ಪರ್ಯಾಯ' 'ಪರ್ಯಾಯ' ಎಂದರೆ ಶಾಸ್ತ್ರ ವಿಚಾರಗಳಿಗೆ ಶಾಸ್ತ್ರೀಯ ವಿಚಾರಗಳಿಗೆ ವಿರುದ್ಧವಾದದ್ದು ಎಂಬ ಅರ್ಥವಿದೆ.[೪೬] ಸಾಮಾಜಿಕ ವ್ಯವಸ್ಥೆಯ ಅಂಚಿನಲ್ಲಿ ಬದುಕುತ್ತಿರುವ ದಲಿತ ಸಮುದಾಯ ಇಂತಹ ಪರ್ಯಾಯ ರಾಜಕಾರಣದಲ್ಲಿ ಅತ್ಯಂತ ಪ್ರಮುಖವಾದ ಸ್ಥಾನ ನಿರ್ವಹಿಸುವ ಅಗತ್ಯವಿದೆ. ದಲಿತ ಸಮುದಾಯದ ಪ್ರಮುಖವಾದ ಅಸ್ತ್ರವಾಗಬಲ್ಲದು. ಇಂತಹ ಚಿಂತನಾ ಲಹರಿಯಲ್ಲಿಯೇ ನಾವು ಪರ್ಯಾಯ ರಾಜಕಾರಣದಲ್ಲಿ ದಲಿತ ಸಮುದಾಯದ ಪಾತ್ರದ ಬಗ್ಗೆ ಚಿಂತಿಸಬಹುದು. ಸ್ವಾತಂತ್ರ್ಯ ನಂತರವೂ ಹಿಂದಿನ ಪಾರಂಪರಿಕ ಸಂದರ್ಭದಲ್ಲಿ ದಲಿತರು ಯಾವ ರೀತಿಯ ನಿಕೃಷ್ಟ ಸ್ಥಿತಿಯಲ್ಲಿದ್ದರೋ ಇಂದಿಗೂ ಅದೇ ಸ್ಥಿತಿಯಲ್ಲಿ ಮುಂದುವರೆಯುತ್ತಿದ್ದಾರೆ. ಶೋಷಣೆ ನಿತ್ಯನಿರಂತರವಾಗಿ ಇವರನ್ನು ಬೆಂಬಿಡದೆ ಕಾಡುತ್ತಲೆ ಇದೆ. ಶತಮಾನಗಳುರುಳಿದರೂ ದಲಿತ ಸಮುದಾಯದ ಸಮಸ್ಯೆಗಳಿಗೆ ಪರಿಹಾರ ಸಿಗಲೇ ಇಲ್ಲ. ಈ ಸಮುದಾಯದ ಮೂಲಭೂತ ಸಮಸ್ಯೆಗಳು ಹಾಗೆ ಜೀವಂತ ಉಳಿದಿದೆ.

ಸಂವಿಧಾನಿಕ ಲಾಭವು ವ್ಯಕ್ತಿ ನೆಲೆಯಾಗದೆ ಹೊರತು ಸಾಮುದಾಯಿಕ ನೆಲೆಯದಲ್ಲ. ನಿಜವಾಗಲೂ ಪರ್ಯಾಯ ರಾಜಕಾರಣ ಎಂದರೆ ರಾಜ್ಯಾಧಿಕಾರವನ್ನು ವಿಕೇಂದ್ರಿಗೊಳಿಸಿ ರಾಜಕಾರಣದ ವಿರುದ್ಧ ರಾಜಕಾರಣ ಮಾಡುವಂತಾಗಬೇಕು. ಯಾವುದೇ ಒಂದು ಸರಕಾರಿ ನೀತಿ ನಿಯಮಗಳಲ್ಲಿ ಅಥವಾ ಯೋಜನೆಗಳಲ್ಲಿ ಪಾಲು ಪಡೆಯಲು ಸಂಘಟನೆಗಿಂತ ಪರ್ಯಾಯದೊಳಗಿನ ಸಂಘಟನೆಯೂ ಅತ್ಯಂತ ಮುಖ್ಯವಾಗುತ್ತದೆ. ಅಂದರೆ ಸಾಮುದಾಯಿಕವಾಗಿರುವ ಸಂಘಟನಾ ತಂತ್ರ ಎಷ್ಟೋಸಾರಿ ವಿಫಲವಾಗುತ್ತದೆ. ರಾಜಕೀಯದ ಸಂಘಟನೆಗೆ ಅಧಿಕಾರದ ಲಾಲಸೆ ಇರುತ್ತದೆ. ಆದರೆ ಇದು ವ್ಯಕ್ತಿ ನೆಲೆಯದಾಗಿರುತ್ತದೆ. ಇಲ್ಲಿ ಸ್ವಾರ್ಥಕತೆಯೂ ಅಧಿಕವಾಗಿರುತ್ತದೆ. ಆದ್ದರಿಂದಲೆ ಶೋಷಿತ ಸಂಘಟನೆಗಳು ಮೊದಲು ತಾವು ಸಂಘಟನಾ ಮನೋಭಾವದಡಿಯಲ್ಲಿ ಒಂದಾಗಬೇಕು. ಆ ಮೂಲಕ ರಾಜಕೀಯ ಪಕ್ಷಗಳಿಗೆ ನಿರ್ದೇಶನ ನೀಡುವ, ಒತ್ತಡ ಹಾಕುವಂತ ತಂತ್ರ ಪಡೆಯಲು ಸ್ವ ಹಿತಾಸಕ್ತಿಯ ಸಲುವಾಗಿ ರಾಜಕೀಯದಲ್ಲಿ ಸಬಲರಾಗುವುದು ತುಂಬ ಪರಿಣಾಮಕಾರಿಯಾದುದು. ರಾಜಕೀಯದಲ್ಲಿ ಯಾವುದು ಅಸಾಧ್ಯವಾದದು ಇಲ್ಲ. ರಾಜಕೀಯ ಅಧಿಕಾರ ಪಡೆದರೆ ಸಾಮುದಾಯಿಕ ಹಿತಾಸಕ್ತಿಗೆ ಅನುಗುಣವಾಗಿ ಎಷ್ಟು ಕಾರ್ಯಗಳನ್ನು ಮಾಡಬಹುದು. ಇದಕ್ಕೆ ನಮಗೆ ಒಳ್ಳೆಯ ಉದಾಹರಣೆ ಎಂದರೆ, ಕರ್ನಾಟಕದಲ್ಲಿ ಬಲಿಷ್ಠವಾಗಿರುವ ಒಕ್ಕಲಿಗ, ಲಿಂಗಾಯತ ಜಾತಿಗಳು ಒಂದು ಜಾತಿ ಸಂಘಟನೆಯ ಅಡಿಯಲ್ಲಿ ಒಂದಾಗಿ ರಾಜಕೀಯ ಪಕ್ಷಗಳಿಗೆ ನೀಡಿ ನಿದರ್ಶನಗಳನ್ನು ಮಾಡುತ್ತವೆಯಲ್ಲದೆ ಸಮುದಾಯದ ಒಳಿತಿಗಾಗಿ ಅನೇಕ ಯೋಜನೆಗಳನ್ನು, ನೇಮಕಾತಿಗಳನ್ನು ಒತ್ತಡದ ಗುಂಪಾಗಿ ಪಡೆದುಕೊಂಡು ಸಬಲವಾಗಿವೆ. ಇತ್ತೀಚೆಗೆ ಪ್ರಭಾವಶಾಲಿಯಾಗಿ ಬೆಳೆಯುತ್ತಿರುವ ಕುರುಬರು ಸಹ ರಾಜಕೀಯದಲ್ಲಿ ಅತ್ಯಂತ ನಿರ್ಣಾಯಕವಾದ ಪಾತ್ರ ವಹಿಸುತ್ತಲೆ ಸಬಲವಾಗುತ್ತಿದ್ದಾರೆ. ಪರ್ಯಾಯ ರಾಜಕಾರಣ ಎನ್ನುವುದು ಕೇವಲ ರಾಜಕೀಯಕಷ್ಟೆ, ರಾಜಕಾರಣಕ್ಕಷ್ಟೇ, ರಾಜಕೀಯ ವ್ಯವಸ್ಥೆಗಷ್ಟೆ ಅಥವಾ ದಲಿತ ರಾಜಕಾರಣಕಷ್ಟೆ ಸೀಮಿತವಾದದ್ದಲ್ಲ. ಪರ್ಯಾಯ ಅಥವಾ ಪರ್ಯಾಯ

ರಾಜಕಾರಣ ಎನ್ನುವಂತಹದ್ದು ಇಡೀ ನಮ್ಮ ಸಾಮಾಜಿಕ ಜೀವನದ ಒಂದು ಪರ್ಯಾಯ ವ್ಯವಸ್ಥೆಯನ್ನು ನಿರ್ಮಾಣಮಾಡುವಂತಹದು. ಇದು ಪರ್ಯಾಯ ರಾಜಕಾರಣದ ಪರ್ಯಾಯ ವ್ಯವಸ್ಥೆಯ ರಾಜಕೀಯದ ಒಂದು ಬಹುಮುಖವಾದರೆ ಪರ್ಯಾಯ ಸಂಸ್ಕೃತಿ ಇನ್ನೊಂದು ಮುಖ ಅಂತ ಹೇಳಬಹುದು.[೩೭] ಕೇವಲ ಪರ್ಯಾಯವನ್ನು ರಾಜಕೀಯಕ್ಕೆ ಸೀಮಿತಗೊಳಿಸಿಕೊಂಡರೆ ಅಲ್ಲಿ ಇತರ ವಲಯಗಳ ಬಗ್ಗೆ ನಿಜವಾಗಲೂ ನಿರ್ಲಕ್ಷಿಸಿದಂತಾಗುತ್ತದೆ.

ಜಾತ್ಯಾತೀತ ಸಿದ್ಧಾಂತವನ್ನು ಅಳವಡಿಸಿಕೊಂಡಿರುವ ಭಾರತದ ಘನ ಸಂವಿಧಾನ ಇದನ್ನು ಜಾರಿಗೆ ತರುವಲ್ಲಿ, ಸಮಾಜದಲ್ಲಿ ಸಮಾನತೆ ತರುವಲ್ಲಿ ಅತ್ಯಂತ ಯೋಜನಾ ಬದ್ಧವಾದ ರೀತಿಯಲ್ಲಿ ಅಳವಡಿಸಿಕೊಂಡಿತು. ಡಾ. ಬಿ.ಆರ್. ಅಂಬೇಡ್ಕರವರ ಜಾತ್ಯಾತೀತ ತತ್ವದ ಸಾರವೂ ಇದೆ ಆಗಿತ್ತು. ಇಡೀ ಭಾರತದ ಸಮಾಜವನ್ನು ಛಿದ್ರಗೊಳಿಸಿದ್ದು ಜಾತಿಯಾಧಾರಿತವಾದ ನಂಬಿಕೆಗಳಿಗೆ, ಆಚಾರಗಳಿಗೆ ಇದು ತುಂಬ ಪರಿಣಾಮಕಾರಿಯಾದ ಅಸ್ತ್ರವಾಗಬಲ್ಲದೆಂದು ಅಂದಿನ ಎಲ್ಲಾ ಸುಧಾರಣಾವಾದಿಗಳ ಆಶಯವೂ ಆಗಿತ್ತು. ಜಾತಿನಿಷ್ಠವಾದ ಅಂಶಗಳು ಸದಾಕಾಲವೂ ಸಮಾಜದಲ್ಲಿ ಐಕ್ಯತೆಗೆ ಅತ್ಯಂತ ತೊಡಕಾಗಿ ಪರಿಣಮಿಸಿವೆ. ಅಲ್ಲದೆ ಸಮಾಜವನ್ನು ನಿರಂತರವಾಗಿ ಸೀಳುತ್ತಲೆ ಮುಂದುವರೆಯುತ್ತಿವೆ. ವರ್ತಮಾನದ ರಾಜಕೀಯವೂ ಕೂಡ ಇಂತಹ ಸಾಂಪ್ರದಾಯಿಕ ವಿಚಾರಗಳಿಂದ ಮುಕ್ತವಾಗಿಲ್ಲ. ಸಮಾಜದಲ್ಲಿ ಆಳವಾಗಿ ಬೇರೂರಿರುವ ಇಂತಹ ಅವೈಚಾರಿಕ ಅಂಶಗಳು ರಾಜಕೀಯವನ್ನು ನಿಯಂತ್ರಿಸುವ, ಪರಾಮರ್ಶಿಸುವ, ಅಂಶಗಳಾಗಿ ಕಾರ್ಯನಿರ್ವಹಿಸುತ್ತಿವೆ. ಇಂದಿನ ಪ್ರತಿಯೊಂದು ರಾಜಕೀಯ ಪಕ್ಷದ ಅಭ್ಯರ್ಥಿಯೂ ಜಾತಿಯಾಧಾರಿತವಾಗಿಯೇ ಸಮಾಜದ ಮುಂಚೂಣಿಗೆ ಬರುತ್ತಿದ್ದಾರೆ. ಅಲ್ಲದೆ ಆ ಸಮುದಾಯದ ಎಲ್ಲಾ ಬಗೆಯ ಆಗುಹೋಗುಗಳನ್ನು ಅವರೆ ನಡೆಸುತ್ತಿದ್ದಾರೆ. ಇಂತಹ ಸಂಕೀರ್ಣ ವಿಷಮ ಪರಿಸ್ಥಿತಿಯಲ್ಲಿದ್ದ ದಲಿತ ಸಮುದಾಯಗಳ ಸ್ಥಿತಿ ಅತ್ಯಂತ ನಿಕೃಷ್ಟವಾಗಿಯೇ ಇರುತ್ತದೆಂಬುದು ಮೇಲ್‌ನೋಟಕ್ಕೆ ಕಂಡುಬರುತ್ತದೆ. ಇದು ವಾಸ್ತವಕೂಡ. ಅಲ್ಲದೆ ಈ ಸಮುದಾಯದ ಮಹಿಳಾ ಸ್ಥಿತಿಯಂತೂ ಊಹಿಸಲು ಅಸಾಧ್ಯ. ನಾವು ಕಂಡುಕೊಳ್ಳಬೇಕಿರುವ ಪ್ರಶ್ನೆ ಎಂದರೆ ಸಮಾಜಿಕವಾಗಿ ಏಣಿ ಶ್ರೇಣಿ ವ್ಯವಸ್ಥೆಯನ್ನು ಅಳವಡಿಸಿಕೊಂಡ ನಮ್ಮ ಸಮಾಜದಲ್ಲಿ ಜಾತಿಯಾಧಾರಿತವಲ್ಲದ ರಾಜಕೀಯ ಸಾಧ್ಯವೆ. ಏಕೆಂದರೆ ಬಲಿಷ್ಠವಾದ ಜಾತಿಯೇ ಎಷ್ಟೋ ಸಾರಿ ಪ್ರಭುತ್ವದ ಅಧಿಪತಿಯಾಗಿರುತ್ತದೆ. ನಿಜವಾಗಿಯೂ ಜಾತ್ಯಾತೀತವಾದ ರಾಜಕೀಯ ಎಂದರೆ ವಿಘಟನೆಗೆ ಗುರಿಯಾಗಿರುವ ಎಲ್ಲಾ ಜಾತಿಗಳನ್ನು ಸಮಾನ ನೆಲೆಯಲ್ಲಿ ತರುವಂತಹದ್ದು. ಆಡಳಿತಯಂತ್ರದ ಒಡೆಯನಾಗಿರುವ ಪ್ರಭುತ್ವ ಯಾವಾಗಲೂ ತಳ ಸಮುದಾಯಗಳಿಗೆ ಶೋಷಕನಾಗಿಯೇ ಇರುತ್ತದೆ. ಬಂಡವಾಳಶಾಹಿತನಕ್ಕೂ ಪ್ರಭುತ್ವಕ್ಕೂ ಅತ್ಯಂತ ಸಾಮರಸ್ಯವಿರುವುದರಿಂದಲೆ ಯಜಮಾನ್ಯದ ಪ್ರತೀಕದಂತೆ ಅವು ಸದಾಕಾಲ ಜಾಗೃತವಾಗಿರುತ್ತವೆ. ಹಾಗಾಗಿ ಬಂಡವಾಳಶಾಹಿತನಕ್ಕೂ ಮತ್ತು ರಾಜಕಾರಣಕ್ಕೂ ಅವಿನಾಭಾವ ಸಂಬಂಧ ಸದಾ ಹೊಂದಿರುತ್ತವೆ.

ಪ್ರಸ್ತುತ ಭಾರತದ ಪರಿಸ್ಥಿತಿಯೂ ಇಂತಹ ವೈಪರಿತ್ಯಗಳಿಂದಲೇ ತುಂಬಿದೆ. ಜಾತಿವ್ಯವಸ್ಥೆಯ ಕರಾಳ ಮುಖಗಳು ಬಂಡವಾಳಶಾಹಿಯ ಹಿಡಿತದಲ್ಲಿರುವುದರಿಂದ ಅದು ಸದಾ ಶೋಷಣೆಯನ್ನೆ ತನ್ನ ಮಾನದಂಡವನ್ನಾಗಿ ಮುಂದುವರೆಸುತ್ತಿರುತ್ತವೆ. ಈ ಬಗೆಯ ಎಲ್ಲಾ ಮೇಲ್ ಜಾತಿಗಳು ಸಹ ಈ ಬಗೆಯಲ್ಲಿ ಪ್ರಬಲವಾಗಿ ಸಮಾಜವನ್ನೆ

ನಿಯಂತ್ರಿಸುವಲ್ಲಿ ಯಶಸ್ವಿಯಾಗಿವೆ. ಇವನ್ನು ತಪ್ಪಿಸಲು ಗ್ರಾಮೀಣ ಭಾರತದ ಒಟ್ಟು ಸಾಮಾಜಿಕ ಸಂರಚನೆಯ ಸ್ವರೂಪದಲ್ಲಿ ಬದಲಾವಣೆ ಅತ್ಯಗತ್ಯವಾಗಿದೆ. ಭಾರತದ ಸಂವಿಧಾನ ನಿರ್ಮಾಪಕರು ಚಿಂತಿಸಿದ ಸಾಮಾಜಿಕ ನ್ಯಾಯದ ಸಿದ್ಧಾಂತದಡಿಯಲ್ಲಿ ಮೀಸಲಾತಿ ಎಂಬ ನೀತಿಯೂ ಜಾರಿಗೆ ಬಂದಿತು. ಜಾತಿಯ ವಿನಾಶ, ವರ್ಗ, ಜಾತಿ, ಧರ್ಮನಿರಪೇಕ್ಷವಾದ ಸಮಾಜದ ನಿರ್ಮಾಣಕ್ಕೆ ಇದು ಅಗತ್ಯವೂ ಇತ್ತು. ಸಮಾಜ ಸಭ್ಯ ಸಂಸ್ಕೃತಿಯತ್ತ ಸಾಗುವುದಕ್ಕಾಗಿಯೇ ಶೋಷಿತ ವಂಗಡಗಳನ್ನು ಗುರುತಿಸಿ ಅವರಿಗೆ ಸಮಾಜದ ಮುಖ್ಯವಾಹಿನಿಗೆ ಬರಲು ವಿಶೇಷವಾದ ಸವಲತ್ತುಗಳನ್ನು ಮೀಸಲಾತಿಯಡಿಯಲ್ಲಿ ನೀಡಲಾಯಿತು. ಆದರೆ ನಾವು ಇಂದು ಕಾಣುವಂತೆ ಪಾರಂಪರಿಕವಾದ ಜಾತಿ, ಮತ ಮತ್ತೆ ಮರುಜೀವ ಪಡೆಯುತ್ತಿವೆ. ಬಲಿಷ್ಠವಾಗಿಯೆ ಮುಂದುವರೆಯುತ್ತಿವೆ. ಸಾಮಾಜಿಕ ನ್ಯಾಯ ವಿಚಾರಣೆಯ ಕಾರಣಕ್ಕಾಗಿ ಗುರುತಿಸಲ್ಪಟ್ಟ ಜಾತಿಗಳು ಮತ್ತಷ್ಟು ಸಂಕುಚಿತ ಮನೋಭಾವದಿಂದಲೆ ಪ್ರಭಾವಶಾಲಿಯಾಗುತ್ತಿವೆ. ಇದು ಸಂವಿಧಾನ ಆಶಿಸಿದ ತತ್ವಗಳಿಗೆ ಅಪಾಯಕಾರಿಯಾದ ಸೂಚನೆ ಕೂಡ. ಜಾತಿ, ಧರ್ಮಗಳಡಿಯಲ್ಲಿ ಹಿರಿಯ ಸ್ಥಾನದಲ್ಲಿರುವ ಮಠ, ಮಾನ್ಯಗಳಿಂದಲೆ ಎಲ್ಲಾ ನಿಯಂತ್ರಣಗಳು ಸಾಮಾಜಿಕ ರಂಗದಲ್ಲಿ ನಡೆಯುತ್ತಿವೆ. ಪ್ರತಿಯೊಂದು ಜಾತಿಗೂ ಒಬ್ಬೊಬ್ಬ ಸ್ವಾಮಿಜಿಯನ್ನು ನೇಮಿಸಿ ಅವನ ಮೂಲಕವೆ ಆ ಸಮುದಾಯದ ಎಲ್ಲಾ ಹಕ್ಕೊತ್ತಾಯಗಳು ಸಾಕಾರವಾಗುತ್ತಿವೆ. ನಿಜವಾಗಲೂ ಇಂದು ನಮ್ಮನ್ನು ನಿಯಂತ್ರಿಸುತ್ತಿರುವುದು ಸರಕಾರವಾದರೂ, ಸರಕಾರವನ್ನು ನಿಯಂತ್ರಿಸುತ್ತಿರುವುದು ಮತ್ತು ಹಿಡಿತದಲ್ಲಿಟ್ಟುಕೊಂಡಿರುವುದು ಇಂತಹ ಮಠ ಮಾನ್ಯಗಳೆ. ಮೀಸಲಾತಿಯ ಹಕ್ಕೋತ್ತಾಯಗಳು ಸಾಮಾಜಿಕ ನ್ಯಾಯ ಪಡೆದುಕೊಳ್ಳುವುದಕ್ಕಾಗಿ ಅತ್ಯಂತ ಅಗತ್ಯ ಎಂದು ಪ್ರತಿಪಾದಿಸುತ್ತಲೆ ಜಾತಿ, ಮತ, ಧರ್ಮಗಳ ಬೇಧ ಭಾವವನ್ನು ಅವುಗಳ ಪ್ರತ್ಯೇಕ ಅಸ್ತಿತ್ವವನ್ನು ಬಿಂಗಗೊಳಿಸುವಲ್ಲಿ, ನಿರಂತರಗೊಳಿಸುವಲ್ಲಿ ಸ್ಪರ್ಧಾತುರದಲ್ಲಿ ಸದಾ ನಿರತವಾಗಿವೆ. ಇದಕ್ಕೊಂದು ಉತ್ತಮ ಉದಾಹರಣೆ ಎಂದರೆ ಅಯೋಧ್ಯಯ ಮಂದಿರ ನಾಶದ ನಂತರ ಭಾ.ಜ.ಪ. ಪಕ್ಷವು ಆ ರಾಜ್ಯದಲ್ಲಿ ಅತ್ಯಂತ ಹೆಚ್ಚಿನ ಸೀಟುಗಳನ್ನು ಪಡೆದು ಬಹುಮತದಿಂದ ಸರಕಾರ ರಚಿಸಿತು. ಹಿಂದೆ ಕೇವಲ ೧೦-೨೦ ಸ್ಥಾನಗಳನ್ನೆ ಪಡೆಯುತ್ತಿದ್ದ ಆ ಪಕ್ಷ ಧರ್ಮದ ವಿಷ ಬೀಜವನ್ನೆ ಮುಂದಿಟ್ಟುಕೊಂಡು ಅಧಿಕಾರ ಪಡೆಯಿತು. ಧರ್ಮ ಎಂಬ ಅಫೀಮು ಭಾರತದ ಸಂದರ್ಭದಲ್ಲಿ ತುಂಬ ಪ್ರಭಾವಶಾಲಿಯಾಗಿ ಕಾರ್ಯನಿರ್ವಹಿಸುತ್ತದೆ. ಪರ್ಯಾಯ ರಾಜಕಾರಣಕ್ಕೆ ಸಂಬಂಧಿಸಿದಂತೆ ಮೇಲಿನ ಸೈದ್ಧಾಂತಿಕ ಚರ್ಚೆಯನ್ನು ಗಮನಿಸಿದಾಗ ವರ್ತಮಾನದಲ್ಲಿ ತುರ್ತು ಅಗತ್ಯವಿರುವಂತಹ ಸಾಮಾಜಿಕ ಬದಲಾವಣೆಯನ್ನು ತರುವುದೆ ಆಗಿದೆ. ಪರ್ಯಾಯ ಎಂಬುದನ್ನು ನಾವು ಕೇವಲ ರಾಜಕೀಯದಲ್ಲಿ ನೋಡಲಿಕ್ಕೆ ಸಾಧ್ಯವಿಲ್ಲ. ಅದನ್ನು ಸಾಮಾಜಿಕ ತಳಹದಿಯಲ್ಲಿ ನೋಡಬೇಕು. ಭಾರತದಲ್ಲಿ ಪರ್ಯಾಯ ರಾಜಕಾರಣ ಬೆಳೆದಿರುವಂತಹ ಎಲ್ಲ ನಿಂತಾಗ, ಸಮುದಾಯಗಳು ಪರ್ಯಾಯವಾಗಿ ಯೋಚಿಸಿದಾಗ ಒಂದು ಪರ್ಯಾಯ ರಾಜಕೀಯ ಶಕ್ತಿ ಬೆಳೆಯುವ ಸಾಧ್ಯತೆಗಳಿವೆ." (ಮುಸಾಫರ್ ಅಸಾದಿ, ೫೪, ೨೦೦೫)

ಭಾರತದ ಎಲ್ಲಾ ಸಮುದಾಯಗಳಿಗಿಂತಲೂ ದೊಡ್ಡದಾಗಿರುವ ಮಹಿಳಾ ಸಮುದಾಯ ಜನಸಂಖ್ಯೆಯಲ್ಲಿ ಅತ್ಯಂತ ಹೆಚ್ಚಿನ ಸ್ಥಾನ ಪಡೆದಿದೆ. ಇದು ಜಾತಿ, ಧರ್ಮ, ಮತಗಳಿಗಿಂತಲೂ ತುಂಬ ದೊಡ್ಡ ಸಮುದಾಯವಾಗಿದೆ. ಈ ಬಗೆಯ ಜನಸಂಖ್ಯೆಯನ್ನು ಹೊಂದಿರುವ ಮಹಿಳಾ ಸಮುದಾಯ ರಾಜಕಾರಣದಲ್ಲಿ ತುಂಬ ಪ್ರಭಾವಶಾಲಿಯಾದ

ಕಾರ್ಯಮಾಡಬಹುದು ಎಂದು ಮೇಲ್ ನೋಟಕ್ಕೆ ಅನಿಸಿದರೂ ಆಳದಲ್ಲಿ ಇದು ಸಾಧ್ಯವಾಗುತ್ತಿಲ್ಲ. ಸಾರ್ವಜನಿಕ ಒಗ್ಗಟ್ಟು, ಬೆಂಬಲಗಳ ಕೊರತೆಯಿಂದಾಗಿ ಮಹಿಳಾ ಸಮುದಾಯಕ್ಕೆ ನ್ಯಾಯವಾಗಿ ದಕ್ಕಬೇಕಾಗಿರುವ ನ್ಯಾಯ ಸಿಕ್ಕಿಲ್ಲ. ಮಹಿಳಾ ಸಮುದಾಯದ ಅಸ್ತಿತ್ವವನ್ನು ಧಿಕ್ಕರಿಸಿ ಇಂದಿನ ರಾಜಕಾರಣ, ಪಕ್ಷಗಳು ಸಾಗುತ್ತಿವೆ. ರಾಜಕಾರಣದ ಕೇಂದ್ರ ಬಿಂದುವಾಗಿರುವ ಪಿತೃಪ್ರಧಾನ ಮೌಲ್ಯಗಳು ಎಂದಿಗೂ ಸಮಾನತೆಯಡಿ ಸದೃಡ ಸಮಾಜವನ್ನು ನಿರ್ಮಿಸಲಾರವು. ಇದನ್ನು ಅರಿತಿದ್ದ ಡಾ.ಬಿ.ಆರ್.ಅಂಬೇಡ್ಕರವರು ಮಹಿಳಾ ಉನ್ನತಿ, ಮಹಿಳಾ ಸಶಕ್ತಿಕರಣದ ಸಲುವಾಗಿ ಮೀಸಲಾತಿಯ ಬೇಡಿಕೆಯನ್ನು ಮಂಡಿಸಿದರು. ಅಲ್ಲದೆ ಹಿಂದಿನಿಂದಲೂ ಪರಂಪರಾಗತವಾಗಿ ಬೆಳೆದು ಬಂದಿರುವ ಪುರುಷ ಪ್ರಧಾನ್ಯತೆಯ ಚಿಂತನೆಗಳು ಅವಳಿಗೆ ಸಾಮಾಜಿಕ ರಂಗದಲ್ಲಿ ಸಹಭಾಗಿತ್ವವನ್ನೆ ನಿರಾಕರಿಸುತ್ತಿದೆ. ನಮ್ಮ ಪ್ರಜಾಪ್ರಭುತ್ವವಾದಿ ವ್ಯವಸ್ಥೆಯೂ ಎಷ್ಟೋ ಬಾರಿ ಕಲ್ಪಿತ ನ್ಯಾಯದ ನಾಟಕವನ್ನು ನಡೆಸುತ್ತಿರುತ್ತದೆ. ಮಹಿಳೆಯರನ್ನು ಹೊರತುಪಡಿಸಿದ ರಾಜಕಾರಣವು ಜನಪರ ಇರಲಾರದು. ರಾಜಕಾರಣದಲ್ಲಿ ಮಹಿಳಾ ಸಮುದಾಯದ ಭಾಗವಹಿಸುವಿಕೆಯ ಮಹತ್ವ ಅರಿತಿದ್ದ ಗಾಂಧೀಜಿಯವರು ಮಹಿಳೆಯರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ರಾಜಕೀಯಕ್ಕೆ ಬರಲು ಪ್ರೇರೇಪಿಸಿದರು. ಗಾಂಧೀಯವರ ಇಡೀ ಹೋರಾಟವು ಸ್ತ್ರೀ ಪ್ರಜ್ಞೆಯಲ್ಲಿಯೇ ಸಾಗಿ ನಮಗೆ ಸ್ವಾತಂತ್ರ್ಯವನ್ನು ತಂದು ಕೊಟ್ಟಿವೆ. ಅವರ ಪ್ರತಿಭಟನೆ ಅಹಿಂಸೆ, ಸತ್ಯಾಗ್ರಹ, ಉಪವಾಸ, ಅಸಹಕಾರ, ಸರ್ವೋದಯ ಎಂಬ ಎಲ್ಲಾ ಮೌಲ್ಯಗಳು ಸ್ತ್ರೀಲೋಕದ ಪ್ರತಿಭಟನಾ ಮಾದರಿಗಳು[9] ಸ್ತ್ರೀ ಸಮುದಾಯದ ಸಾಂಸ್ಕೃತಿಕ ಶಕ್ತಿಯನ್ನು ಬಳಸಿಕೊಂಡೆ ಯಶಸ್ಸನ್ನು ಪಡೆದ ಗಾಂಧಿಯವರು ಇಂದಿನ ರಾಜಕೀಯ ನಾಯಕರುಗಳಿಗೆ ಈ ವಿಷಯದಲ್ಲಿ ಏಕೆ ಮಾದರಿಯಾಗುತ್ತಿಲ್ಲ.

ಸಮಾನತೆಯ ತತ್ವ ಅಳವಡಿಸಿಕೊಂಡಿರುವ ನಾವು ಕಾನೂನಿನ ಮುಂದೆ ಎಲ್ಲರೂ ಸಮಾನರು, ಪ್ರತಿಯೊಂದು ರಂಗಗಳಲ್ಲಿ ಪ್ರತಿಯೊಬ್ಬರಿಗೂ ಇಲ್ಲಿ ಸಮಾನ ಅವಕಾಶಗಳಿವೆ. ಜಾತಿ, ಧರ್ಮ, ಲಿಂಗ, ಜನಾಂಗ, ಪ್ರಾದೇಶಿಕತೆ, ಭಾಷೆಗಳ ಬೇಧಭಾವವಿಲ್ಲದೆ ಇಲ್ಲಿ ಎಲ್ಲರೂ ಏಕರೀತಿಯಾದ ಅಧಿಕಾರ ಹಕ್ಕು ಪಡೆದಿರುತ್ತಾರೆ. ವಾಸ್ತವವಾಗಿ ನಾವು ಅವಲೋಕಿಸಿದಾಗ ಸಾಮಾಜಿಕ ವ್ಯವಸ್ಥೆಯಲ್ಲಿ ನಿಜವಾದ ಸಮಾನತೆಯ ತತ್ವ ಪರಿಪಾಲನೆಯಾಗುತ್ತಿವೆಯೇ ಎಂಬುದು ಮುಖ್ಯವಾಗುತ್ತದೆ. ಏಕೆಂದರೆ ಸಾಮಾಜಿಕ ಜೀವನದ ಪ್ರತಿಯೊಂದು ರಂಗಗಳಲ್ಲಿಯೂ ಪುರುಷಾಡಳಿತವೆ ಮೆರೆಯುತ್ತಿರುವುದರಿಂದ ಮಹಿಳಾ ಅಸ್ತಿತ್ವ ಕಳೆಗುಂದುತ್ತಲೆ ಇದೆ. ಸಿದ್ಧ ಮಾದರಿಯ ಪಾತ್ರಗಳನ್ನು ಸೃಷ್ಟಿಸಿ ಹೆಣ್ಣನ್ನು ಗೃಹಸಂಬಂಧಿಕಾರ್ಯಗಳೊಂದಿಗೆ ಸಮೀಕರಿಸಿ ಅವಳನ್ನು ನಿಕೃಷ್ಟ ಸ್ಥಿತಿಗೆ ತಳ್ಳಲಾಯಿತು. ರಾಜಕಾರಣ ಎಂಬ ಪ್ರಭಾವಶಾಲಿಯಾದ ರಂಗದಲ್ಲಿ ಎಲ್ಲಾ ಅಧಿಕಾರಗಳನ್ನು ಪುರುಷನೆ ಪಡೆದು ಮಹಿಳೆಯನ್ನು ಅಲ್ಲಿಗೆ ಪ್ರವೇಶಿಸದಂತೆ ತಡೆಯುತ್ತಿದ್ದಾನೆ. ಸಮಾಜದಲ್ಲಿ ರೂಢಿಗತವಾಗಿ ಬಂದಿರುವಂತಹ ಪಿತೃಪ್ರಧಾನ ಚಿಂತನೆಗಳ ಆಚರಣೆಗಳೆ ಅವಳ ಸಹಭಾಗಿತ್ವಕ್ಕೆ ಅಡಚಣೆಯಾಗಿ ಕುಳಿತಿವೆ. ಅಲ್ಲದೆ ಅವಳಿಗೆ ಏಕೆ ರಾಜಕೀಯ? ರಾಜಕೀಯ ಎಂಬುದು ಮೂರು ಬಿಟ್ಟವರಿಗೆ ಎಂಬಂತಹ ಅವೈಚಾರಿಕ ಚಿಂತನೆಗಳನ್ನು ಸೃಷ್ಟಿಸಿ ಅವಳನ್ನು ಮಾನಸಿಕವಾಗಿಯೇ ಇವುಗಳಿಂದ ದೂರ ಉಳಿಯುವಂತೆ ಮಾಡಲಾಗಿದೆ. ಒಂದು ವೇಳೆ ಅವಳ ಗಂಡ, ತಂದೆ, ಕುಟುಂಬ, ಸಮಾಜದಿಂದ ಒಪ್ಪಿಗೆ ಪಡೆದು ರಾಜಕೀಯ ಪ್ರವೇಶಿಸಿದರೂ ಅದು ಕೇವಲ ತೋರಿಕೆಯದ್ದು. ಏಕೆಂದರೆ ಮಹಿಳೆ ಪಂಚಾಯಿತಿಯ

ಅಧ್ಯಕ್ಷೆಯಾಗಿದ್ದರೂ ಕೂಡ ಅವಳು ಸ್ಥಾನವನ್ನು ಮಾತ್ರವೆ ಪಡೆದಿರುತ್ತಾಳೆ. ಅಧಿಕಾರ ಇನ್ನಾರೋ ಪಡೆದು ಚಲಾಯಿಸುತ್ತಿರುತ್ತಾರೆ. ಅವಳ ಹೆಸರಿನಡಿಯಲ್ಲಿ ತಂದೆ, ಗಂಡ, ಸಹೋದರರೆ ಆಡಳಿತವನ್ನು ನಿಯಂತ್ರಿಸುವವರಾಗಿರುತ್ತಾರೆ.

ಇತಿಹಾಸದ ಪುಟಗಳನ್ನು ನಾವು ಒಮ್ಮೆ ತಿರುವಿ ಹಾಕಿದಾಗ ಅಲ್ಲಿ ರಾಜ ಮಹಾರಾಜ, ಮಂತ್ರಿ, ಗಾವುತ, ಮುಂತಾದ ರಾಜರ ಹೆಂಡಂದಿರೆ ಅಧಿಕಾರ ನಡೆಸಿರುವುದನ್ನು ಕಾಣುತ್ತೇವೆ. ವರ್ತಮಾನದ ರಾಜಕೀಯದಲ್ಲೂ ಕೂಡ ಇದೇ ಸ್ಥಿತಿ ಇದೆ. ಮೇಲ್ವರ್ಗದ ಜಾತಿಯಲ್ಲಿಯ ಮಹಿಳೆಯರು ರಾಜಕಾರಣದಲ್ಲಿ ಅಲ್ಪಮಟ್ಟಿಗಾದರೂ ಸಕ್ರಿಯವಾಗಿದ್ದಾರೆ. ಆದರೆ ಅಂಚಿನ ಸಮುದಾಯಗಳಲ್ಲೊಂದಾದ ದಲಿತ ಸಮುದಾಯದ ಮಹಿಳೆಯರು ರಾಜಕಾರಣದಲ್ಲಿ ಭಾಗವಹಿಸಿದ ಉದಾಹರಣೆಗಳು ನಮ್ಮ ಚರಿತ್ರೆಯಲ್ಲಿ ಎಷ್ಟಿವೆ? ಮೀಸಲಾತಿಯಂತಹ ಉದಾತ್ತ ಚಿಂತನೆಯ ಫಲವಾಗಿ ದಲಿತ ಮಹಿಳೆ ಪಂಚಾಯತಿಯ ಮೆಟ್ಟಿಲನ್ನು ಏರಿದ್ದಾಳಾದರೂ ಅದು ಪರೋಕ್ಷವಾಗಿ ಮೇಲ್ ಜಾತಿಯ ಪುರುಷರೆ ನಿರ್ವಹಿಸುವಂತಹ ಅಧಿಕಾರ. ರಾಜಕೀಯ ಅಧಿಕಾರದಿಂದ ಅತ್ಯಂತ ದೂರವೆ ಇರುವ ದಲಿತ ಮಹಿಳೆ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳನ್ನು ಕಳೆದುಕೊಂಡು ನಿರಂತರವಾಗಿ ಶೋಷಣೆ, ದಬ್ಬಾಳಿಕೆ, ಹಿಂಸೆ, ಕ್ರೌರ್ಯಗಳಿಗೆ ಬಲಿಯಾಗುತ್ತಿದ್ದಾರೆ. ನಿರಂತರವಾಗಿ ಅವಳ ಮೇಲೆ ನಡೆಯುತ್ತಿರುವ ಶೋಷಣೆಯಿಂದ ಬಿಡುಗಡೆ ಹೊಂದಲು ರಾಜಕೀಯ ಅಧಿಕಾರ ಅಲ್ಪಮಟ್ಟಿಗಾದರೂ ಸಹಾಯಕವಾಗಬಲ್ಲದು. ಸಮಾಜದ ಅಂಚಿನಲ್ಲಿರುವ ದಲಿತ ಮಹಿಳೆಗೆ ರಾಜಕೀಯ ಅಧಿಕಾರವನ್ನು ಸ್ವತಂತ್ರವಾಗಿ ಚಲಾಯಿಸಲು ಮುಕ್ತವಾದ ಸಾಮಾಜಿಕ ಪರಿಸರ ನಿರ್ವಹಿಸುವುದು ಪರ್ಯಾಯ ರಾಜಕಾರಣದ ಆಶಯಗಳಲ್ಲಿ ಒಂದಾಗಿದೆ. ಹೀಗಾದಾಗಲೆ ಅವಳು ತನ್ನ ಮೇಲಿನ ಹಿಂಸೆಗಳಿಗೆ, ಶೋಷಣೆಗೆ, ಪ್ರತಿಭಟಿಸಲು, ಗಟ್ಟಿಯಾಗಿ ಮಾತನಾಡಲು ಆ ಮೂಲಕ ತನ್ನಲ್ಲಿಯ ತಾರತಮ್ಯ ಕೀಳರಿಮೆಯನ್ನು ದೂರ ಮಾಡಲು ಪರ್ಯಾಯ ರಾಜಕಾರಣವನ್ನು ಅವಳ ಹಂಬಲಿಸುತ್ತಿದ್ದಾಳೆ.

### ೨.೮. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ: ಒಂದು ಸ್ತ್ರೀವಾದಿ ನಿರ್ವಚನ

ಆರಂಭದಲ್ಲಿ ನಾವು ಕೇಳಿಕೊಳ್ಳಬೇಕಾದ ಪ್ರಶ್ನೆ ಏನೆಂದರೆ ಮಹಿಳೆ ಎಂದರೆ ಯಾರು? ಮಹಿಳೆ ಎಂದರೇನು? ಈ ಬಗೆಯ ಪ್ರಶ್ನೆಗಳು ತುಂಬ ವಿಚಿತ್ರವಾಗಿ ಕಾಣಿಸುತ್ತವೆ ನಿಜ. ಆದರೆ ಮಹಿಳೆಯನ್ನು ಕುರಿತಾದಂತಹ ಅಧ್ಯಯನಗಳಲ್ಲಿ ಕಡ್ಡಾಯವಾಗಿ ಕೇಳಿಕೊಳ್ಳಬೇಕಾದ ಮತ್ತು ಮಹತ್ವದ ಪ್ರಶ್ನೆಗಳು ಇವಾಗಿವೆ. ನಮ್ಮ ಸಮಾಜ, ಸರಕಾರ, ರಾಜಕೀಯ ಸಂಸ್ಥೆ, ಧಾರ್ಮಿಕಸಂಸ್ಥೆಗಳು ಮಹಿಳೆಯನ್ನು ಹೇಗೆ ಪರಿಭಾವಿಸಿಕೊಂಡಿವೆ? ಮಹಿಳೆಯ ಗುರುತು ಚಹರೆ ಏನು? ಆಕೆಯ ಸ್ಥಾನಮಾನವೇನು? ಆಕೆಯ ಸ್ಥಿತಿ ಏನು? ಈ ಬಗೆಯ ಪ್ರಶ್ನೆಗಳಿಗೆ ಉತ್ತರಗಳನ್ನು ನಾವು ಕಂಡುಕೊಂಡು ಬಿಟ್ಟರೆ ನಮಗೆ ಮಹಿಳೆ ಎದುರಿಸುತ್ತಿರುವ ಸಾಮಾಜಿಕ, ರಾಜಕೀಯ ಸವಾಲುಗಳು ಸಮಸ್ಯೆಗಳು, ಸಂದಿಗ್ಧತೆಗಳು, ಸಂಕೀರ್ಣತೆಗಳು ಅರ್ಥವಾಗಿಬಿಡುತ್ತವೆ. ಮಹಿಳೆಯರು ಎದುರಿಸುತ್ತಿರುವ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸವಾಲು ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಮೊದಲು ನಾವು ಅವಳನ್ನು ಸಮಾಜವು ಹೇಗೆ ಪರಿಭಾವಿಸಿಕೊಂಡಿದೆ ಎಂಬುದನ್ನು ಅರಿಯಬೇಕಾಗುತ್ತದೆ." (ಟಿ.ಆರ್. ಚಂದ್ರಶೇಖರ, ೨೦೦೫, ೧೦೨) ಆಗ ಮಾತ್ರ ಮಹಿಳೆಯ ಕುರಿತಾದ ಅಧ್ಯಯನಗಳಲ್ಲಿ ತೊಡಗಿಸಿಕೊಂಡವರಿಗೆ ಸಾಮಾಜಿಕ ವಾಸ್ತವ

ಅರಿವಾಗಬಹುದು. ಸಾಮಾಜಿಕ ಜೀವನದಲ್ಲಿನ ಸ್ಥಾಪಿತ ಪ್ರಭುತ್ವ, ಪಿತೃಪ್ರಧಾನ ಮೌಲ್ಯ ಆಚರಣೆಗಳನ್ನು ಅರಿಯಲು ಇಂತಹ ಅಂಶಗಳನ್ನು ಅರಿಯುವುದು ತುಂಬ ಉಪಯುಕ್ತವೂ, ಅನುಕೂಲಕರವು ಆಗಿರುತ್ತದೆ.

ಸ್ತ್ರೀ ಚಿಂತನೆ, ಸ್ತ್ರೀವಾದ ಅಥವಾ ಮಹಿಳಾವಾದ ಎಂಬುದು ಇಂಗ್ಲೀಷ್ ಭಾಷೆಯ 'Feminism'ನ ಕನ್ನಡನುವಾದವಾಗಿದೆ. ಇಂಗ್ಲೀಷ್ ಶಬ್ದದ ಬಳಕೆ ೧೯ನೇ ಶತಮಾನದಲ್ಲಿ ಇಂಗ್ಲೆಂಡ್‌ನಲ್ಲಿ ಬಳಕೆಗೆ ಬಂದಿತು. 'Femina' ಎಂದರೆ ಲ್ಯಾಟೀನ್ ಭಾಷೆಯಲ್ಲಿ 'Women' ಹೆಂಗಸು ಎಂದರ್ಥ. ಬಾಳಿನಲ್ಲಿ ಸ್ತ್ರೀಯರು ಪುರುಷ ಸ್ತ್ರೀಯರ ಸಮಾನತೆಗಾಗಿ ಮಾಡುವಂತಹ ಹೋರಾಟ ಇದಾಗಿದೆ. Feminism ಎಂಬ ಪದವನ್ನು ಮೊದಲ ಭಾರಿಗೆ ಕಿರಿಯ ಅಲೆಗ್ಸಾಂಡರ್ ಡ್ಯೂಂ ಎಂಬುವವನು ಹದಿನೆಂಟನೆಯ ಶತಮಾನದವಧಿಯಲ್ಲಿ ತನ್ನ ಕಿರುಹೊತ್ತಿಗೆಯಾದ 'Hommefemme' ನಲ್ಲಿ ಬಳಸಿದನು. ನಂತರ ೧೯ನೇಯ ಶತಮಾನದಲ್ಲಿ ಭಾರತದಲ್ಲಿ ಬಳಕೆಗೆ ಬಂದಿತು.

ಬಾರ್ಬರ ಸ್ಮಿತ್‌ರ ಪ್ರಕಾರ ಸ್ತ್ರೀವಾದ ಎಂದರೆ, ''ಸ್ತ್ರೀವಾದ ಒಂದು ರಾಜಕೀಯ ಸಿದ್ಧಾಂತವಾಗಿದ್ದು ಎಲ್ಲಾ ಮಹಿಳೆಯರಿಗೂ ವಿಮೋಚನೆ ತಂದು ಕೊಡುವ ಪ್ರಯತ್ನವಾಗಿದೆ. ಈ ಮಹಿಳೆ ಯಾವುದೆ ವರ್ಣದವಳಾಗಿರಬಹುದು, ಉದ್ಯೋಗಿಯಾಗಿರಬಹುದು, ಬಡವಿಯಾಗಿರಬಹುದು, ಅಂಗವಿಕಲರು, ವೃದ್ಧರು, ಆರ್ಥಿಕ ಸಬಲತೆಯನ್ನು ಪಡೆದುಕೊಂಡವರು ಯಾರೆ ಆಗಿರಬಹುದು. ಆಕೆಯ ಪ್ರಕಾರದಲ್ಲಿ ಸಮಾಜದಲ್ಲಿ ಇಂತಹ ಸಮಸ್ಯೆಗಳು ಯಾವಾಗ ಹುಟ್ಟಿಕೊಳ್ಳುತ್ತವೆಯೋ ಆಗೆಲ್ಲ ಕ್ಷಣದ ತುರ್ತಿಗೂ ಸ್ತ್ರೀವಾದ ಹುಟ್ಟಿಕೊಳ್ಳುತ್ತದೆ.''[೫೦] ಸಾಮಾಜಿಕ ಜೀವನದಲ್ಲಿ ಲಿಂಗಾಧಾರಿತವಾಗಿ ಸ್ತ್ರೀ ಪುರುಷರಿಗೆ ಅವರವರ ಲಿಂಗವನ್ನು ಆಧರಿಸಿ ವಿಭಜಿಸುವ ಕ್ರಮ ಇದ್ದರೆ ಅಲ್ಲಿ ಸ್ತ್ರೀವಾದದ ಅಗತ್ಯವಿರುತ್ತದೆ. ಮುಖ್ಯವಾಗಿ ಸ್ತ್ರೀವಾದ ಸಮಾಜದೊಳಗಿನ ಎಲ್ಲಾ ಬಗೆಯ ಲಿಂಗ ಅಸಮಾನತೆಯನ್ನು ತೊಡೆದು ಹಾಕುತ್ತಲೆ ಸ್ತ್ರೀಪುರುಷರನ್ನು ಆಧರಿಸಿದ ಕಾನೂನು, ಸಂಪ್ರದಾಯಗಳನ್ನು ಮಾನವೀಯ ನೆಲೆಯಲ್ಲಿ ಪರಾಮರ್ಶಿಸಿ, ವಿಮರ್ಶಿಸಿ ನೋಡುತ್ತಲೆ ಅದನ್ನು ವ್ಯಾಖ್ಯಾನಿಸುತ್ತದೆ. ಆದ್ದರಿಂದಲೆ ಸ್ತ್ರೀವಾದವನ್ನು ಸ್ವಯಂ ನಿರ್ಧಾರಿತ ಪೂರ್ಣ ಸ್ವರೂಪದ ಬದುಕನ್ನು ಮಹಿಳೆಗೆ ಸಮಾಜದಲ್ಲಿ ನಿರ್ಮಿಸುವ ಒಂದು ಚಳುವಳಿ ಎಂಬ ಅರ್ಥದಲ್ಲಿ ಬಳಸಲಾಗಿದೆ. ಸ್ತ್ರೀವಾದ ಮಹಿಳೆಯರ ಋಣಾತ್ಮಕ, ಸಾಂಸ್ಕೃತಿಕ, ಪ್ರತಿಮೆಗಳನ್ನು ಅಳಿಸಿ ಹಾಕಿ ಹೊಸ ಬಗೆಯ ಭಾಷ್ಯೆ ಬರೆಯುತ್ತದೆ. ಈ ಹಿನ್ನೆಲೆಯೊಳಗೆ ದಲಿತ ಮಹಿಳೆಯ ರಾಜಕೀಯ ಅಸ್ತಿತ್ವ, ಅನನ್ಯತೆಗಳನ್ನು ಕುರಿತಂತೆ ಸ್ತ್ರೀವಾದದೊಂದಿಗೆ ತುಲನಾತ್ಮಕವಾಗಿ ಅವಲೋಕಿಸುವ ಪ್ರಯತ್ನ ಪ್ರಸ್ತುತ ಅಧ್ಯಯನ ಹೊಂದಿದೆ. ಸಾಮಾಜಿಕ ಜೀವನದುದ್ದಕ್ಕೂ ಮಹಿಳೆಗೆ ಒದಗಿ ಬಂದಿರುವಂತಹ ಸಾಂಪ್ರದಾಯಿಕ ಮತ್ತು ಜೈವಿಕ ಅಂಶಗಳು ಅವಳನ್ನು ಅಭಿವೃದ್ಧಿಯ ಒಂದು ಭಾಗ ಎಂದು ಪರಿಗಣಿಸದೆ ಅನುಭೋಗಿ ಎಂದೆ ಪರಿಭಾವಿಸಿಕೊಂಡಿವೆ. ಅವಳು ಕುಟುಂಬಕ್ಕೆ ಸಂವಾದಿಯಾಗಿ ಗೃಹಕಾರ್ಯಗಳನ್ನೆ ತನ್ನ ಅಂತಿಮ ಕಾರ್ಯ ಎಂದು ಅದರಲ್ಲೆ ಕೊಳೆಯುತ್ತಿದ್ದಾಳೆ. ಆದರೆ ಅವಳಿಗೆ ಒದಗಿಬಂದಿರುವ ಈ ಬಗೆಯ ದ್ವಿ ಕಾರ್ಯಗಳಿಗೆ ಅಂದರೆ ಮನೆ ಒಳಗೆ, ಹೊರಗಿನ ಕಾರ್ಯಗಳನ್ನು ಸಮಾಜ ಅವಳು ಸಹ ಸಾಮಾಜಿಕ ಘಟಕ ಎಂದು ಪರಿಗಣಿಸಿಯೇ ಇಲ್ಲ. ಜೈವಿಕ ನಿಯತಿಯ ಲಿಂಗ ನಿಬಂಧಗಳ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಅವಳು ಗಂಡನಿಗೆ ಮನೆ, ಮಕ್ಕಳು ಮಾತ್ರವೆ ತನ್ನ ಲೋಕ ಎಂದೇ ನಂಬಿಕೊಂಡಿದ್ದಾಳೆ. ಸಾಮಾಜಿಕ ರಂಗದಲ್ಲಿ ಸಾಮಾಜಿಕ ಅಂಶಗಳು ಪುರುಷನಿಗೆ ಅಧಿಕಾರ, ಆಸ್ತಿಗೆ, ಸಂಪತ್ತಿಗೆ, ಸಂಪನ್ಮೂಲಕ್ಕೆ ವಾರಸುದಾರನನ್ನಾಗಿ

ಮಹಿಳೆಯನ್ನು ಅದರತ್ತ ಸುಳಿಯದಂತೆ ವ್ಯವಸ್ಥಿತವಾಗಿ ದೂರವಿಟ್ಟಿವೆ. ಕುಟುಂಬಕ್ಕೆ ಸಂಸಾರಕ್ಕೆ ಸಂವಾದಿಯಾಗಿ ಮಹಿಳೆಯನ್ನು ಪರಿಭಾವಿಸಿಕೊಂಡಿರುವುದಕ್ಕೆ ಕಾರಣವಾಗಿರುವ ಸಂಗತಿಗಳು ಯಾವುವು? ಪುರುಷರನ್ನು ಮಾತ್ರ ಸಮಾಜ ಹೀಗೆ ಪರಿಭಾವಿಸಿಕೊಳ್ಳಲಾರದು. ಇವು ತುಂಬ ಕುತೂಹಲಕಾರಿ ಸಂಗತಿಗಳಾಗಿವೆ. ಲಾಗಾಯ್ತಿನಿಂದಲೂ ಮಹಿಳೆಯನ್ನು ತಾಯಿಯಾಗಿ, ಹೆಂಡತಿಯಾಗಿ, ಪರಿಭಾವಿಸಿಕೊಂಡು ಬರಲಾಗಿದೆ. ಕುಟುಂಬದ, ಸಂಸಾರದ, ಗಂಡನ ಮಕ್ಕಳ ಹಿತಾಸಕ್ತಿಗಳನ್ನು ಕಾಪಾಡುವ ಒಂದು ಸಾಧನವಾಗಿ, ಸಂಪನ್ಮೂಲವಾಗಿ ಮಹಿಳೆಯನ್ನು ಪರಿಭಾವಿಸಿಕೊಳ್ಳಲಾಗಿದೆ. ಒಂದು ವೇಳೆ ಸಮಾಜವು ನಿರೀಕ್ಷಿಸಿದ ಕ್ರಮದಲ್ಲಿ ಮಹಿಳೆ ಬರದಿದ್ದರೆ ಅವಳನ್ನು ಘಾತುಕಶಕ್ತಿಗಳಂತೆ ನೋಡುವುದು ಪ್ರಚಲಿತದಲ್ಲಿದೆ. ಸಮಾಜವು ಹೆಣ್ಣಿನ ಜಾಡನ್ನು ಬಿಟ್ಟು ಹೋಗುವ ಹೆಣ್ಣಿನ ಪರಿಯನ್ನು ಮನ್ನಿಸುವುದಿಲ್ಲ. ಸಮಾಜವು ಹೇಗೆ ನಿರೀಕ್ಷಿಸುತ್ತದೆಯೋ ಹಾಗೆ ಮಹಿಳೆ ಬದುಕಬೇಕು. ಇಲ್ಲದಿದ್ದರೆ ಸಮಾಜದಿಂದ ಅವಳಿಗೆ ಬಹಿಷ್ಕಾರ, ನಿಷೇಧ, ನಿಂದನೆ, ಗಡಿಪಾರಿಗೂ ಒಳಗಾಗಬೇಕಾಗುತ್ತದೆ.[೫೧] ಮಹಿಳೆಯೂ ಸಹ ತನಗೆ ಸಮಾಜದತ್ತವಾಗಿ ಬಂದಿರುವ ಸಿದ್ಧ ಮಾದರಿಯ ಪಾತ್ರಗಳಲ್ಲೆ ನಿಯಂತ್ರಿತ ಬದುಕನ್ನು ಸಾಗಿಸುತ್ತಿರುತ್ತಾಳೆ. ಈ ಬಗೆಯ ಇಬ್ಬಗೆಯ ನೀತಿಯನ್ನು ಸ್ತ್ರೀವಾದ ಪ್ರಶ್ನಿಸುವುದು. ಮಹಿಳೆಗೆ ಒದಗಿರುವ ಇಂತಹ ಅಸಹಜ ಸ್ಥಿತಿಗೆ ಸ್ತ್ರೀ ಪುರುಷರ ನಡುವಿನ ಅಸಮಾನತೆ ಪ್ರಕೃತಿ ಸಹಜವಲ್ಲ, ಜೈವಿಕವೂ ಅಲ್ಲ ಅದು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರೂಪುಗೊಂಡಿರುವುದೆಂದು ಪರಿಭಾವಿಸುತ್ತದೆ.

ಭಾರತೀಯ ಇತಿಹಾಸದುದ್ದಕ್ಕೂ ಹೆಣ್ಣನ್ನು ಅದರಲ್ಲಿಯೂ ದಲಿತ ಹೆಣ್ಣನ್ನು ಧರ್ಮ, ಸಮಾಜ, ಕುಟುಂಬ, ರಾಜಕೀಯ ರಂಗಗಳು ನಡೆಸಿಕೊಂಡಿರುವ ರೀತಿ ಅತ್ಯಂತ ಅಮಾನವೀಯ. ಹುಟ್ಟಿನಿಂದಲೆ ಬರುವ ಮೇಲು ಕೀಳು, ಗಂಡು-ಹೆಣ್ಣು ಬಡವ-ಶ್ರೀಮಂತ, ಬ್ರಾಹ್ಮಣ-ಶೂದ್ರ ಎಂಬ ಸಾಮಾಜಿಕ ವಿಘಟನ ಕ್ರಮಗಳು ಆಂತರ್ಯದಲ್ಲಿ ತಮ್ಮ ಶ್ರೇಷ್ಠತೆಗಾಗಿ, ಅಸ್ತಿತ್ವಕ್ಕಾಗಿ ಹೋರಾಡುತ್ತಲೆ ಇದ್ದರೂ ಸಹ ಹೆಣ್ಣಿನ ವಿಷಯದಲ್ಲಿ ಒಂದಾಗಿ ಬಿಡುತ್ತವೆ. ಇಂತಹ ಶ್ರೇಣೀಕೃತವಾದ ವ್ಯವಸ್ಥೆಯಲ್ಲಿ ಅತಿ ಹೆಚ್ಚು ಶೋಷಣೆಗೆ ಬಲಿಯಾಗುವವಳು ದಲಿತ ಮಹಿಳೆಯೇ ಆಗಿರುತ್ತಾಳೆ. ಇದರ ಹಿನ್ನಲೆಯಲ್ಲಿ ನಾವು ದಲಿತ ಮಹಿಳಾ ರಾಜಕೀಯ ಕುರಿತಾದ ಅಸ್ತಿತ್ವ, ಪರಿಭಾಷೆಯನ್ನು ಪಂಚಾಯತಿರಾಜ್ ಸಂಸ್ಥೆಯ ಮೂಲಕ ಮೇಲಿನ ಅಂಶಗಳನ್ನು ಇನ್ನಷ್ಟು ಸೂಕ್ಷ್ಮವಾಗಿ ಪರೀಕ್ಷಿಸಬಹುದು. ರಾಜಕೀಯವೆಂಬುದೆಲ್ಲವು ಪುರುಷನ ಸ್ವತ್ತಾಗಿರುವುದರಿಂದ ಇಂತಹ ಕಡೆಯಲ್ಲಿ ಹೆಣ್ಣು ಅಪ್ರಧಾನತೆಯನ್ನು, ವಿಧೇಯತೆಯನ್ನು ಪರಾಧೀನತೆಯನ್ನು ಪ್ರಶ್ನಿಸದೆ ಹಿಂದಿನಿಂದಲೂ ನಿರಂತರವಾಗಿ ತನ್ನ ಮೇಲೆ ಸವಾರಿ ಮಾಡುತ್ತಲೆ ಬಂದಿರುವ ಪಿತೃಪ್ರಧಾನ ಮೌಲ್ಯಗಳಿಗೆ ಮುಖಾಮುಖಿಯಾಗಿ ಅವಳೆಂದು ನಿಲ್ಲಲಾರಳು. ದಲಿತ ಮಹಿಳೆಯ ಇಂತಹ ಮನೋಭಾವನೆಗೆ, ಭಾವನಿಷ್ಠತ್ವಕ್ಕೆ ಮೂಲಕಾರಣ ಎಂದರೆ ಪುರುಷ ಕೇಂದ್ರಿತ ಮಾದರಿಗಳಿಂದಲೆ ಮಹಿಳೆಯ ಅನುಭವ, ಸಂವೇದನೆಗಳನ್ನು ನಿರಾಕರಿಸಿ ಅವಳ ಮೇಲೆ ಹಿಡಿತ ಸಾಧಿಸಿ ಆ ಮೂಲಕ ಅವಳ ಸಾರ್ವಜನಿಕ ಸಹಭಾಗಿತ್ವವನ್ನೇ ನಿರಾಕರಿಸುತ್ತಲೆ ಅವಳನ್ನು ಗೃಹಕೃತ್ಯಕ್ಕೆ ದೂಡುತ್ತಿವೆ.

ಆಧುನಿಕ ಕಾಲಘಟ್ಟದಲ್ಲಿ ರೂಪುಗೊಂಡಂತಹ ಉದಾರವಾದಿ, ಗಾಂಧಿವಾದಿ, ಅಂಬೇಡ್ಕರ್‌ವಾದಿ, ಮಾರ್ಕ್ಸ್‌ವಾದಿ ಹಾಗೂ ಲೋಹಿಯಾವಾದಿಗಳಂತ ಚಿಂತನೆಗಳ ಫಲವಾಗಿ ಮಹಿಳೆಗೆ ಗ್ರಾಮೀಣ ವಲಯದೊಳಗೆ

ರಾಜಕೀಯ ಪ್ರವೇಶವಕಾಶ ದೊರೆಯಿತು. ಸ್ವಾತಂತ್ರ್ಯ ನಂತರ ಮಹಿಳೆಗೆ ಏನು ಕುಟುಂಬ, ಸಮಾಜ, ಧರ್ಮ, ರಾಜಕೀಯ, ರಂಗಗಳು ಅವಳನ್ನು ಮುಕ್ತವಾಗಿ ಸೇರಿಸಿಕೊಳ್ಳಲಿಲ್ಲ. ಪುರುಷ ಕೇಂದ್ರಿತ ಚಿಂತನೆಗಳ ವಾಸ್ತವವಾಗಿ ಸಮಾಜವನ್ನು ನಿಯಂತ್ರಿಸುತ್ತಿರುವುದರಿಂದ ಪುರುಷ ಪ್ರಧಾನ ವ್ಯವಸ್ಥೆಯಡಿಯಲ್ಲಿಯೇ ಅವಳು ಇರಬೇಕಾಗಿರುವುದರಿಂದ ರಾಜಕೀಯ ಭಾಗವಹಿಸುವಿಕೆ ಅವಳ ಮಟ್ಟಿಗೆ ಭಾಗಶಃ ಹಿನ್ನಡೆ ಉಂಟಾಯಿತು.

ಶಾಸನಾತ್ಮಕವಾಗಿ ಲಿಂಗ ಸಮಾನತೆಯ ಆಧಾರದಡಿಯಲ್ಲಿ ಭಾರತ ಸರಕಾರವು ಮಹಿಳಾ ಸಮುದಾಯಕ್ಕೆ ರಾಜಕೀಯ ಪ್ರವೇಶವಕಾಶವನ್ನು ಕಾನೂನಾತ್ಮಕ ವಿಧಾನಗಳ ಮೂಲಕ ದೊರಕಿಸಿಕೊಟ್ಟಿತು. ಸ್ಥಳೀಯ ಸಂಸ್ಥೆಗಳಾದ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಎಲ್ಲಾ ಸಮುದಾಯದ ಮಹಿಳೆಯರು ಸಕ್ರಿಯವಾಗಿ ಭಾಗವಹಿಸಿ ತಾವು ಸಹ ಸಬಲರೆಂದು ಸಮಾಜಕ್ಕೆ ತೋರಿಸಲು ಪಂಚಾಯತ್‌ರಾಜ್ ವ್ಯವಸ್ಥೆ ತುಂಬ ಉದಾರನೆಲೆಯಲ್ಲಿ ಲಿಂಗ ಅಸಮಾನತೆಯನ್ನು ತರುವಲ್ಲಿ ಪ್ರಯತ್ನಿಸಿತು. ಹಾಗೆಯೇ ಮೀಸಲಾತಿಯಂತಹ ಉದಾತ್ತ ಚಿಂತನೆಯ ಫಲವಾಗಿ ದಲಿತ ಮಹಿಳಾ ಸಮುದಾಯದ ದಲಿತ ಮಹಿಳೆ ರಾಜಕೀಯದ ಬಾಗಿಲಿಗೆ ಬಂದಳು.

ಪಂಚಾಯತ್‌ರಾಜ್ ವ್ಯವಸ್ಥೆ ಅಂಚಿನ ದಲಿತ ಮಹಿಳಾ ಸ್ಥಿತಿಗತಿಗಳನ್ನು ಉತ್ತಮಗೊಳಿಸುವಿಕೆಯಲ್ಲಿ ಅತ್ಯಂತ ಉಪಯೋಗಕಾರಿಯಾಗಿದೆ. ಇದರಿಂದ ಸಾವಿರಾರು ದಲಿತ ಮಹಿಳೆಯರು ರಾಜಕೀಯ ಸುಪರ್ದಿಗೆ ಬರಲು ಸಾಧ್ಯವಾಯಿತು. ಹಿಂದಿನಿಂದಲೂ ನಿತ್ಯನಿರಂತರವಾಗಿ ತನ್ನ ಮೇಲೆ ದಾಳಿ ಮಾಡುತ್ತಲೆ ಬಂದಿದ್ದ ಪುರೋಹಿತ ಶಾಹಿ, ಊಳಿಗಮಾನ್ಯಶಾಹಿ, ಸಾಮಂತಶಾಹಿಗಳಂತ ಸಾಮಾಜಿಕ ಪ್ರಭುತ್ವಗಳ ಹಿಡಿತದಲ್ಲಿ ಅವಳು ನಲುಗಿ ಹೋಗಿದ್ದಳು. ಅವಳಿಗೆ ಒದಗಿದ್ದ ತೃತೀಯ ದರ್ಜೆಯ ಸ್ಥಾನದಲ್ಲೆ ಅವಳು ಕೊರಗುತ್ತಲೆ ತನ್ನ ಸೃಜನಶೀಲತೆ, ಅನನ್ಯತೆ, ತುಡಿತಗಳನ್ನು ಅದುಮಿಟ್ಟುಕೊಂಡೆ ಬದುಕಿಯೂ ಸತ್ತಂತಿದ್ದಳು. ಆಧುನಿಕ ಕಾಲಘಟ್ಟದಲ್ಲಿ ಅವಳ ಸಾಮಾಜಿಕ ಚಹರೆಯನ್ನು ತೋರಿಸಲು ಪಂಚಾಯತ್‌ರಾಜ್ ತುಂಬ ಸಹಾಯಕವಾಯಿತು. ಪಂಚಾಯತ್‌ರಾಜ್ ವ್ಯವಸ್ಥೆ ದಲಿತ ಮಹಿಳೆಯ ಸಾಮಾಜಿಕ ಚಹರೆಯನ್ನು ವಿಶ್ವಾಸಾತ್ಮಕ ನೆಲೆಗಟ್ಟಿನಲ್ಲಿ ನಿರ್ವಚಿಸಿಕೊಳ್ಳಲು ಅತ್ಯಂತ ಪುರೋಗಾಮಿಯಾಗಿದೆ ಪಂಚಾಯತ್‌ರಾಜ್ ವ್ಯವಸ್ಥೆ ದಲಿತ ಮಹಿಳೆಗೆ ಅವಳ ನಿಜ ವ್ಯಕ್ತಿತ್ವನ್ನು ಪರಿಚಯಿಸಲು, ಅವಳ ಅಸ್ಮಿತ್ವ ಅಸ್ಮಿತೆ, ಅನನ್ಯತೆ, ತುಮುಲಗಳನ್ನು, ಸ್ತ್ರೀದೃಷ್ಟಿಕೋನ, ಸ್ತ್ರೀಅನುಭವಗಳನ್ನು ತೆರೆದಿಡಲು ಅತ್ಯಂತ ಪ್ರಯೋಜನಕಾರಿಯಾಗಿದೆ. ಇಂತಹ ವ್ಯವಸ್ಥೆಯಿಂದ ಅಲಕ್ಷಿತರಲ್ಲೆ ಅಲಕ್ಷಿತವಾಗಿರುವ ದಲಿತ ಮಹಿಳಾ ಬದುಕಿಗೆ ಒಂದು ನೂತನ ತಿರುವು ಸಿಕ್ಕಿದೆ.

### ೨.೯. ದಲಿತ ಮಹಿಳೆ : ಒಂದು ನಿರ್ವಚನ

" Linity is meaningless without the accomhinment of women. Education is the fruites educated women, and agition is in complete without the strerght of women.

ಡಾ. ಬಿ.ಆರ್. ಅಂಬೇಡ್ಕರ್.

ಸ್ತ್ರೀಯರ ಬಗ್ಗೆ ಅಂಬೇಡ್ಕರರಿಗೆ ಇದ್ದ ಕಾಳಜಿಯನ್ನು ಮೇಲಿನ ಅಂಶವು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಹಿಂದಿನಿಂದಲೂ ಸನಾತನಧರ್ಮ ಸ್ತ್ರೀಯರ ವಿರುದ್ಧ ನಡೆಸಿದ ಎಲ್ಲಾ ಬಗೆಯ ಅವೈಚಾರಿಕ ಕೃತ್ಯಗಳಿಗೆ

ಅವಳು ಸಮಾಜದಲ್ಲಿ ಎರಡನೆಯ ದರ್ಜೆಯಲ್ಲಿ ಬದುಕಬೇಕಾದ ವಾತಾವರಣ ನಿರ್ಮಾಣವಾಯಿತು. ಮಹಿಳಾ ಸ್ಥಿತಿಗತಿ ಸುಧಾರಣೆಗೊಳ್ಳಲು ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳಲ್ಲಿ ಅವಳ ಸಕ್ರಿಯ ಭಾಗವಹಿಸುವಿಕೆ, ನಿರ್ಧಾರ ತಗೆದುಕೊಳ್ಳುವಿಕೆ ಸಾಧ್ಯವಾದಾಗ ಮಾತ್ರ ಅವಳ ಸ್ಥಿತಿ ಸುಧಾರಿಸಬಹುದು ಎಂದು ಕಾರ್ಲ್‌ಮಾರ್ಕ್ಸ್ ಅಭಿಪ್ರಾಯ ಪಡುತ್ತಾರೆ. ಅಲ್ಲದೆ ಕಾರ್ಲ್‌ಮಾರ್ಕ್ಸ್ ಮುಂದುವರೆದು'' ಮಹಿಳಾ ವಿಮೋಚನೆ ಹಾಗೂ ಎಲ್ಲಿಯ ವರೆಗೂ ಯಾವುದೆ ಸಮಾಜದಲ್ಲಿ ಮಹಿಳೆಯರು ಕ್ರಿಯಾತ್ಮಕವಾಗಿ ಹಾಗೂ ಆರ್ಥಿಕ, ಸಾಮಾಜಿಕ, ರಾಜಕೀಯ ಮೌಲ್ಯಗಳುಳ್ಳ ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಅವಕಾಶ ಪಡೆಯದೆ ಅವರ ಚಟುವಟಿಕೆಗಳು ಕೇವಲ ಮನೆಯ ಒಳಗೆ ಸೀಮಿತವಾಗಿರುತ್ತವೆಯೋ ಅಲ್ಲಿಯ ವರೆಗೂ ಮಹಿಳಾ ವಿಮೋಚನೆಯಾಗಲಿ ಅಥವಾ ಮಹಿಳೆಗೆ ಪುರುಷನೊಡನೆ ಸಮಾನತೆಯಾಗಲಿ ಸಾಧ್ಯವಿಲ್ಲ. ಭಾರತದ ಗ್ರಾಮೀಣ ಭಾಗಗಳಲ್ಲಿ ದಲಿತ ಮಹಿಳೆಯರಿಗೆ ವಿವಿಧ ಕರ್ಮಗಳನ್ನು ಮೀಸಲಿಟ್ಟಂತಿದೆ. ದ್ರೌಪದಿಯ ಕಾಲದಿಂದಲೂ ನಮ್ಮ ಮಹಿಳೆಯರನ್ನು ಸಾರ್ವಜನಿಕವಾಗಿ ನಿರ್ವಸ್ತ್ರಗೊಳಿಸುವುದು ಮತ್ತು ಅವಮಾನಗೊಳಿಸುವಂತಹ ಜನ್ಮ ವೈರಿಕೃತ್ಯಗಳನ್ನು ಒಳಪಡಿಸಲಾಗುತ್ತಿದೆ. ವೈಯಕ್ತಿಕವಾಗಿ, ಸಾರ್ವಜನಿಕವಾಗಿ ಮತ್ತು ರಾಜಕೀಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ದಲಿತ ಮಹಿಳೆಯರಿಗಿದು ಸಹಜ ಅನುಭವವಾಗಿದೆ. ಆದರೆ ಆಶ್ಚರ್ಯಕರ ಎಂದರೆ ಇದನ್ನು ನಮ್ಮ ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲೂ ವಿನೋಧ ಹಿಂಸೆಯಾಗಿ ವಿಸ್ತರಿಸಿರುವುದನ್ನು ಕಾಣಬಹುದು."[೨] ಕೆ.ಆರ್.ನಾರಾಯಣ್'' (ಡೊಮಿನಿಕ್, ೨೦೦೭)

ಮೇಲಿನ ಇಬ್ಬರೂ ಚಿಂತಕರ ಅಂಶಗಳನ್ನು ಪರಾಮರ್ಶಿಸಿದಾಗ ಮಹಿಳಾ ವಿಮೋಚನೆಗೆ ಪ್ರಮುಖವಾಗಿ ಬೇಕಾಗಿರುವುದು ರಾಜಕೀಯ, ಸಾಮಾಜಿಕ, ಆರ್ಥಿಕ ಸಂಪನ್ಮೂಲಗಳ ಮೇಲಿನ ನಿಯಂತ್ರಣ. ಆಮೂಲಕ ಅವಳ ಎಲ್ಲಾ ಬಗೆಯ ಸಬಲೀಕರಣ ಸಾಧ್ಯ ಎಂಬುದು ಇವರಿಬ್ಬರ ಅಭಿಮತವಾಗಿದೆ.

ಆದರೆ ಭಾರತದ ಸಂದರ್ಭದಲ್ಲಿ ಎಲ್ಲಾ ಮಹಿಳೆಯರ ಸಮಸ್ಯೆಗಳು ಒಂದೇ ತೆರನಾಗಿರದೆ ಬೇರೆ ಬೇರೆಯಾಗಿರುವುದು ವಾಸ್ತವ ಎನ್ನಬಹುದು. ಆದರೂ ಅವರು ಎಲ್ಲಾ ಒಂದೆ. ಮಹಿಳೆಯರನ್ನು ಬೇರೆ ಬೇರೆ ಎನ್ನುವುದನ್ನು ವೈದಿಕ ಸ್ತ್ರೀವಾದಿಗಳು ವಿರೋಧಿಸುತ್ತಾರೆ. ''ಏಕೆಂದರೆ ದಲಿತ ಮಹಿಳೆಯರು ಚಿಂತಿಸುವ ವಿಧಾನಕ್ಕೂ ವೈದಿಕ ಮಹಿಳೆಯರ ಹೋರಾಟಕ್ಕೂ ಇದರಿಂದಲೇ ಭಿನ್ನಾಭಿಪ್ರಾಯಗಳು ಬಂದೊದಗಿವೆ. ಆಳದಲ್ಲಿ ಎಲ್ಲಾ ಮಹಿಳೆಯರ ಸಮಸ್ಯೆಗಳು ಒಂದೇ ಎಂದು ತಾತ್ವಿಕವಾಗಿ ನಾವು ಒಪ್ಪಿಕೊಂಡರೂ ಇದು ಮಾತಿನಲ್ಲಿ ಕಂಡಂತೆ ಬದುಕಿನಲ್ಲಿ ಕಾಣಲಾರದು''.[೩] ಹಾಗೆಂತ ಸ್ತ್ರೀವಾದದಲ್ಲಿ ಒಡಕು ಉಂಟು ಮಾಡುವುದು ನನ್ನ ಉದ್ದೇಶವಲ್ಲ. ಬದಲಿಗೆ ಅಂಚಿನ ಮಹಿಳಾ ಸಮುದಾಯದ ಕುರಿತು ಚಿಂತಿಸುವ ಅಗತ್ಯತೆ ಇಂದಿನ ಅನಿವಾರ್ಯವಾಗಿದೆ. ಏಕೆಂದರೆ ನಗರ ಕೇಂದ್ರಿತವಾಗಿರುವ ಮಹಿಳಾ ಸಮುದಾಯಕ್ಕೂ ಉನ್ನತ ಜಾತಿಯ ನೆರಳಲ್ಲಿ ಬದುಕುತ್ತಿರುವ ಮಹಿಳಾ ಸಮುದಾಯಕ್ಕೂ, ಮಧ್ಯಮ ವರ್ಗದ ಸಮುದಾಯಕ್ಕೂ ಹಾಗೆಯೇ ಗ್ರಾಮೀಣ ವಲಯದಲ್ಲಿ ಬದುಕುತ್ತಿರುವ 'ದಲಿತ ಮಹಿಳಾ ಸಮುದಾಯಕ್ಕೂ' ತುಂಬ ಭಿನ್ನತೆಗಳಿವೆ. ಅಂದರೆ ನಗರ, ಮೇಲ್ವರ್ಗದ ಮಧ್ಯಮ ವರ್ಗದವರ ಜನರನ್ನು, ಶಿಕ್ಷಣ ಸ್ಥಾನಮಾನಗಳಿಗೆ ನಾವು ದಲಿತ ಮಹಿಳಾ ನೆಲೆಯಿಂದ ನೋಡಿದಾಗ ಅಲ್ಲಿ ಹತ್ತು ಹಲವು

ವೈರುಧ್ಯಗಳು ಕಂಡುಬರುತ್ತವೆ. ದಲಿತ ಮಹಿಳೆ ತನ್ನ ಜಾತಿಯ ಕಾರಣದಿಂದ ಅನುಭವಿಸುವಂತಹ ಶೋಷಣೆ, ಯಾತನೆ, ಅವಮಾನ, ಅಪಮಾನ, ದಬ್ಬಾಳಿಕೆಗಳು ಇತರ ಮಹಿಳಾ ಸಮುದಾಯದಲ್ಲಿ ಕಾಣುವುದು ತುಂಬ ಕಡಿಮೆ. ಭಾರತೀಯ ಧಾರ್ಮಿಕ ರಂಗದಲ್ಲಿ ರೂಢಿಸಿಕೊಂಡು ಬಂದಿರುವ ಹಲವಾರು ಕಂದಾಚಾರಗಳು ದಲಿತ ಮಹಿಳೆಯನ್ನು ಸೀಳಿದೆ. ದೇವದಾಸಿ, ಬೆತ್ತಲೆ, ಓಕುಳಿಯಂತಹ ಪೈಶಾಚಿಕ ಕೃತ್ಯಗಳು ಅವಳಿಗೆ ಮಾತ್ರವೇ ಸೀಮಿತವಾಗಿವೆ.

ಇಂತಹ ಅವೈಚಾರಿಕ ನಂಬಿಕೆ, ಆಚರಣೆಗಳು ಇಂದಿಗೂ ಯಾವುದೇ ಬಗೆಯ ಅಂಜಿಕೆ ಅಳುಕಿಲ್ಲದೆ ಮುಂದುವರೆದಿರುವುದನ್ನು ನೋಡಿದರೆ ಸ್ತ್ರೀವಾದ ಎಂಬುದು ಇಂತಹ ಮಹಿಳೆಯರ ಪಾಲಿಗೆ ಎಷ್ಟರ ಮಟ್ಟಿಗೆ ಸಹಾಯ ಸಲ್ಲಿಸಿದೆ ಎಂಬುದನ್ನು ಗಮನಿಸುವುದು ಮುಖ್ಯವಾಗುತ್ತದೆ. ಅಂದರೆ ಅಲ್ಲಿ ಸ್ತ್ರೀವಾದ ದಲಿತ ಮಹಿಳೆಯ ಬಗ್ಗೆ ಗಮನವೇ ಹರಿಸಿಲ್ಲ ಎಂದರ್ಥವಲ್ಲ. ಉನ್ನತ ವರ್ಗ, ಮಧ್ಯಮವರ್ಗದ ಮಹಿಳಾ ಸಮಸ್ಯೆಗಳಿಗೆ ಸ್ಪಂಧಿಸುವಂತೆ ದಲಿತ ಮಹಿಳಾ ಸಮುದಾಯದ ಬಗ್ಗೆ ಕಾಳಜಿ ಹೊಂದಲು ಸಾಧ್ಯವಾಗಿಲ್ಲ. ದಲಿತ ಮಹಿಳಾ ಸ್ಥಿತಿಯನ್ನು ನಾವು ಹಿಂದಿನ ಆಫ್ರಿಕಾದ ಕಪ್ಪು ಮಹಿಳೆಯೊದಿಗೆ ತುಲನೆ ಮಾಡಲು ಉತ್ತಮ ಉದಾಹರಣೆ. ಇಲ್ಲಿ ಹೆಂಗಸಾಗಿ ಎಷ್ಟೇ ತುಳಿತಕ್ಕೆ ಒಳಗಾಗಿದ್ದರೂ ಬಿಳಿಯ ಜನಾಂಗೀಯ ಸಾಮ್ರಾಜ್ಯಶಾಹಿತ್ವವನ್ನು ತಮ್ಮ ಜನಾಂಗದ ಗಂಡಸರೊಂದಿಗೆ ಹಂಚಿಕೊಂಡ ಬಿಳಿಯ ಹೆಂಗಸು ಕಪ್ಪು ಮಹಿಳೆ, ಕಪ್ಪು ಜನರ ವಿಷಯದಲ್ಲಿ ಶೋಷಿತಳಾಗಿಯೇ ಇರುತ್ತಾಳೆ ಎಂಬ ಸಂಶಯ ದೃಷ್ಟಿಯೂ ಕಪ್ಪು ಸ್ತ್ರೀವಾದಿ ವಿಮರ್ಶೆಯಲ್ಲಿದೆ. 'ಸೋದರತ್ವ' ಬಾಂಧವ್ಯದ ಅಲಂಕಾರಿಕ ಮಾತುಗಳೇನೆ ಇದ್ದರೂ ಲೈಂಗಿಕ ದಬ್ಬಾಳಿಕೆಯ ವಿರುದ್ಧ ಹೋರಾಡಲು ಕಪ್ಪು ಮಹಿಳೆಯರೊಂದಿಗಿನ ನಂಟಿಗೆ ಬಿಳಿಯ ಮಹಿಳೆಯರು ಪ್ರಾಮಾಣಿಕವಾಗಿ ಬದ್ಧರಾಗಿಲ್ಲ ಬಿಳಿಯ ಮೇಲು ಅಥವಾ ಮಧ್ಯಮ ವರ್ಗದವರಾಗಿ ಅವರು ಅನುಭವಿಸುವ ತುಳಿತದ ಕಡೆಗೆ ಗಮನಸೆಳೆಯುವುದರಲ್ಲಿ ಮುಖ್ಯವಾಗಿ ಅವರ ಆಸಕ್ತಿ ಇದೆ ಎಂಬ ಜಾಕಿಹಗ್ಗಿನ್ಸ್ ಮಾತುಗಳು ಭಾರತೀಯ ದಲಿತ ಮಹಿಳೆಯ ವಿಚಾರದಲ್ಲಿ ತುಂಬ ಔಚಿತ್ಯಪೂರ್ಣವಾಗಿ ನಿಲ್ಲುತ್ತವೆ. ಸಾಮಾಜಿಕ ಜೀವನದ ಎಲ್ಲಾ ಬಗೆಯ ಮೂಲಭೂತ ಅವಕಾಶಗಳಿಂದ ವಂಚಿತವಾಗಿ ಅವುಗಳಿಂದ ದೂರವೇ ಇಳಿದಿರುವ ದಲಿತ ಮಹಿಳೆಗೆ ಮೂಲಭೂತ ಹಕ್ಕುಗಳು, ಸ್ವಾತಂತ್ರ್ಯಗಳ ಪ್ರಾಥಮಿಕ ಅಕ್ಷರಗಳ ಅರಿವೆ ಅವಳಿಗಿಲ್ಲ. ನಿರಂತರವಾಗಿ ಬಡತನ ಎಂಬ ಕೂಪದಲ್ಲಿ ಜಾತಿಯೆಂಬ ಕಳಂಕ ಹೊತ್ತು ಅಮಾನವೀಯವಾದಂತಹ ಸಾಮಾಜಿಕ ಬದುಕು ಅವಳಪಾಲಿಗಿದೆ. "ವೈದಿಕ ಸಂಸ್ಕೃತಿಯ ಭೂಮಿಕೆಯಲ್ಲಿ ಬೆಳೆದುಬಂದ ಮಧ್ಯಮ ವರ್ಗದ ಮಹಿಳೆಯರು ತಮ್ಮ ಸಂಸ್ಕೃತಿಯ, ಪ್ರಭಾವದಿಂದ ಹೊರಬಂದವರಲ್ಲ. ವೈದಿಕ ಸಂಸ್ಕೃತಿಗೆ ಇರುವ ಬಹುತ್ವದ ಆಯಾಮಗಳನ್ನು ಬದಿಗೆ ಸರಿಸಿ ತಮ್ಮ ಸಂಸ್ಕೃತಿಯನ್ನೆ ಆದೇಶದ ಸಂಸ್ಕೃತಿ ಎನ್ನುವಂತೆ ಚಿತ್ರಿಸಿರುತ್ತಾರೆ. ಮೇಲ್ಜಾತಿಯ, ಮಧ್ಯಮವರ್ಗದ ಸ್ತ್ರೀವಾದಿಗಳು ಅಷ್ಟೆ. ತಮ್ಮ ಸಮಸ್ಯೆಯನ್ನು ಇಡೀ ದೇಶದ ಸಮಸ್ಯೆ ಎನ್ನುವಂತೆ ಚಿತ್ರಿಸುತ್ತಾರೆ. ಸಮಾಜದ ಅಂಚಿನಲ್ಲಿ ಸ್ವತಂತ್ರವಾಗಿ ಬದುಕುತ್ತಿರುವ ದಲಿತ ಮಹಿಳೆಯ ಬಗ್ಗೆ ಅವರಿಗೆ ಅರಿವಿಲ್ಲದಂತೆ ಅವರು ದಲಿತ ಮಹಿಳೆಯನ್ನು ಮರೆತು ಬಿಟ್ಟಿರುತ್ತಾರೆ".[7] ಹಾಗಾದರೆ ದಲಿತ ಮಹಿಳೆ ಎಂದರೆ ಯಾರು? ಹಿಂದೂ ಧರ್ಮದ ನಿಯಮದ ಒಳಗೆ ಬದಲ್ಲಿ ಜಾತಿಯ ಸಮುದಾಯಗಳು ಸಾಮಾನ್ಯವಾಗಿ ಒಂದು ಸಂಸ್ಕೃತಿಯನ್ನು ಹಂಚಿಕೊಳ್ಳುವುದು. ಆಲೋಚನೆ

ನಡುವಳಿಕೆಗಳಲ್ಲಿ ಸಾಂಪ್ರದಾಯಿಕ ವಿನ್ಯಾಸಗಳನ್ನು ಹೊಂದಿರುವ ಜೀವನ ವಿಧಾನವಾಗಿರುತ್ತದೆ. ಇಂತಹ ಚಿಂತನೆಯನ್ನು ಆಧರಿಸಿಯೇ ನಾವು ದಲಿತ ಮಹಿಳೆಯನ್ನು ಅರಿಯಬೇಕಾಗಿದೆ. ಏಕೆಂದರೆ ಭಾರತದಂತ ವ್ಯಾಪ್ತಿಯಲ್ಲಿ ದಲಿತ ಮಹಿಳೆಯ ಪರಿಭಾಷೆಯನ್ನು ಅರಿಯಬೇಕಾಗಿರುವುದು ಇಂದಿನ ಸಾಂಸ್ಕೃತಿಕ ರಾಜಕಾರಣದ ಅನಿವಾರ್ಯತೆಯಾಗಿದೆ. ``ಅಖಂಡವಾದ ಮಹಿಳಾ ನೆಲೆಯಿಂದ ದಲಿತ ಮಹಿಳೆಯನ್ನು ವ್ಯಾಖ್ಯಾನಿಸುವ ಅಗತ್ಯವಿಲ್ಲ''. ಎಂದು ಡಾ.ಮೊಗಳ್ಳಿಯವರು ಅಭಿಪ್ರಾಯ ಪಡುತ್ತಾರೆ. (ಮೊಗಳ್ಳಿ, ೧೧೧, ೨೦೦೬)

ದಲಿತ ಮಹಿಳೆ ಈ ಸಮಾಜದ ಅತ್ಯಂತ ಕೊನೆಯ ವ್ಯಕ್ತಿ ಏಕೆಂದರೆ ಆಯಾ ಸಾಮಾಜಿಕ ಜೀವನದಲ್ಲಿಯ ಪ್ರತಿಯೊಂದು ವ್ಯಕ್ತಿಯೂ ಸಹ ಅವಳ ಮೇಲೆ ನಿಯಂತ್ರಣ ಸಾಧಿಸುತ್ತಿರುತ್ತಾರೆ. ಅವಳಿರುವುದೇ ತಮ್ಮ ಸೇವೆಗಾಗಿ, ದೇವರ ಹೆಸರಿನಲ್ಲಿ ಅವಳನ್ನು ಮೈಲಿಗೆ ಎಂದು ಹಗಲಿನಲ್ಲಿ ಹಂಗಿಸುವ ಸಮರ್ಣಯರು ರಾತ್ರಿಯಲ್ಲಿ ದುರ್ಬಳಕೆ ಮಾಡಿ ಮತ್ತೆ ಏನು ಆಗದಂತೆ ನಟಿಸುವ ನಾಟಕ ಊಳಿಗೆ ಮಾನ್ಯ ವ್ಯವಸ್ಥೆಯಿಂದ ನಿರಂತರವಾಗಿ ನಡೆಯುತ್ತಲೆ ಇದೆ. ದೇವರು ದಿಂಡಿರ ಹೆಸರಿನಲ್ಲಿ ದಿನ ವೇಶ್ಯಾವಾಟಿಕೆಗೆ ನೂಕುತ್ತಿರುವ ಸರಿಸುಮಾರು ದಲಿತ ಮಹಿಳೆಯರ ಸ್ಥಿತಿ ಉನ್ನತ ವರ್ಗದ ಮಹಿಳೆಗೆ ಬರಲು ಸಾಧ್ಯವಿಲ್ಲ. ಏಕೆಂದರೆ ನಾವು ಪೂಜಿಸುವ ದೇವರ ಸೇವೆಗೆ ದಲಿತ ಸ್ತ್ರೀಯೆಬೇಕು. ಹೀಗೆ ಅವಳ ಮೇಲೆ ಊಳಿಗಮಾನ್ಯಶಾಹಿಯ ಬರ್ಬರ ಇರಿತಗಳನ್ನು ಅವಳ ಶತಮಾನದುದ್ದಕ್ಕೂ ಸಹಿಸಿಕೊಂಡೆ ಬಂದಿದ್ದಾಳೆ.

ದಲಿತ ಮಹಿಳೆಯನ್ನು ಅತಿರೇಕ ಹಿಂಸೆಗೂ ಗುರಿಪಡಿಸಲಾಗಿದೆ. ಆಶ್ಚರ್ಯಕರವಾಗಿ ಭಾರತದ ಜಾತಿ ಮತ್ತು ಲಿಂಗ ವಾಣಿಜ್ಯ ಶ್ರೇಣಿಯಲ್ಲಿ ದಲಿತ ಮಹಿಳೆಯರನ್ನು ತಳ ಭಾಗದಲ್ಲಿರಿಸಿರುವುದನ್ನು ಕಾಣಬಹುದು. ದಲಿತ ಮಹಿಳೆಯರ ಜಾತಿ ಮತ್ತು ಲಿಂಗ ಸ್ಥಾನಮಾನ ಅವಳ ಮೇಲಾಗುತ್ತಿರುವ ಹಿಂಸೆಗೆ ಕಾರಣವಾಗುತ್ತವೆ. ದಲಿತ ಮಹಿಳೆಯರ ಮೇಲಿನ ಹಿಂಸೆ, ದೈಹಿಕ, ಲೈಂಗಿಕ ಮತ್ತು ಮಾನಸಿಕ ಸಮಗ್ರತೆಯನ್ನು ನಿರಾಕರಿಸುತ್ತದೆ. ಮತ್ತು ಅವಳ ಮೇಲಾಗುತ್ತಿರುವ ಹಿಂಸೆಗೆ ಮತ್ತು ತಾರತಮ್ಯಕ್ಕೆ ಪುರುಷ ಪ್ರಧಾನ ಸಮಾಜದಲ್ಲಿ ಅವಳು ಶಕ್ತಿಯಲ್ಲಿ ಪುರುಷನಿಗೆ ಅಧೀನ, ಮತ್ತು ಅವಳ ಸಮುದಾಯಕ್ಕೆ ವಿರುದ್ಧ ಎನ್ನುವ ನೀತಿಯಲ್ಲಿ ಅಡಗಿದೆ.

ಬಹುಶಃ ಪ್ರಪಂಚದ ಬೇರಾವ ಭಾಗದಲ್ಲಿಯೂ ಕಾಣಲಾರದಂತಹ ಹೀನ ಬದುಕು ಭಾರತದ ಸಂದರ್ಭದಲ್ಲಿ ದಲಿತ ಮಹಿಳೆ ಕಂಡಿದ್ದಾಳೆ. ಹೀಗೆ ದಲಿತ ಮಹಿಳೆ ತನ್ನ ಮೇಲಿನ ಹಿಂಸೆ ಅಂತಃಕರಣವನ್ನು ನಿತ್ಯ ನಿರಂತರವಾಗಿ ತಾಳಿಕೊಂಡು ಬಂದಿರುವುದು ವಾಸ್ತವವೆ.

ಹೀಗೆ ದಲಿತ ಮಹಿಳಾ ಪರಿಸ್ಥಿತಿಯನ್ನು ಆಳ, ಕಷ್ಟ, ಕಾರ್ಪಣ್ಯಗಳನ್ನು ಒಮ್ಮೆ ಅವಲೋಕಿಸಿದಾಗ ಅವಳಿಗೆ ಒದಗಿದ ಸಾಮಾಜಿಕ, ಧಾರ್ಮಿಕ, ಆಚರಣೆಗಳನ್ನು ಗಮನಿಸಿದಾಗ ದಲಿತ ಮಹಿಳೆಯನ್ನು ಮಧ್ಯಮ, ಉನ್ನತ ಜಾತಿಯ ಮಹಿಳೆಯೊಂದಿಗೆ ಯಾವ ಪ್ರಜ್ಞಾವಂತರು ಹೋಲಿಕೆ ಮಾಡಲಾರರು.

೧೯೭೦ರ ಜಾಗತಿಕ ನೆಲೆಯಲ್ಲಿ ಹುಟ್ಟಿಕೊಂಡ ಕಪ್ಪು ಹಾಗೂ ಮೂರನೆಯಜಗತ್ತಿನ ಸ್ತ್ರೀವಾದವು ಭಾರತದ ಸಂದರ್ಭದಲ್ಲಿ ೧೯೯೦ರ ದಶಕದ ದಲಿತ ಸ್ತ್ರೀವಾದ ಭಿನ್ನಧ್ವನಿಯನ್ನು ರೂಪಿಸಲು ನೆರವಾಯಿತು. ಭಾರತೀಯ ದಲಿತ ಚಿಂತನ ಕ್ರಮದೊಳಗಿನ [illegible] ಪ್ರಧಾನತೆಗಳೆರಡರ ಕುರಿತ ಭಿನ್ನಾಭಿಪ್ರಾಯಗಳೊಂದಿಗೆ ಸಮಾನ ದೂರದಲ್ಲಿ

ನಿಂತು ದಲಿತ ಸ್ತ್ರೀವಾದಿ ಚಿಂತನಾ ಕ್ರಮ ಚಿಂತಿಸತೊಡಗಿತು. ಈ ಕ್ರಮ ಜಾತಿ ಪ್ರಶ್ನೆಯನ್ನು ಪುರುಷರು ಹಾಗೂ ಮೇಲ್ವರ್ಗದ ಮಹಿಳೆಯರು ನೋಡುವುದಕ್ಕಿಂತ ಭಿನ್ನವಾದುದಾಗಿದ್ದು, ಅದು ಜಾತಿ ಹಾಗೂ ಲಿಂಗದ ನೆಲೆಗಳೆರಡರಿಂದಲೂ ಸಮಾನವಾಗಿ ತುಳಿತಕ್ಕೊಳಪಟ್ಟ ದಲಿತ ಸ್ತ್ರೀಯ ಅನುಭವ ಹಾಗೂ ವೈಚಾರಿಕ ಆಕೃತಿಯನ್ನು ಆಧರಿಸಿದ್ದಾಗಿದೆ. ದಲಿತ ಸ್ತ್ರೀವಾದ ಪೂರ್ವದ ಸಂದರ್ಭದಲ್ಲಿ ಜಾತಿ ಹಾಗೂ ಲಿಂಗದ ಪ್ರಶ್ನೆಯನ್ನು ಚಿಂತಕರು ಗ್ರಹಿಸುವಾಗ ಸಾಧಾರಣವಾಗಿ ಅವರು ಒಂದನ್ನು ಅನುಭವವಾಗಿ ಇನ್ನೊಂದನ್ನು ವಿಚಾರವಾಗಿ ಗ್ರಹಿಸುತ್ತಿದ್ದರು. ಅಂದರೆ ಮೇಲ್ವರ್ಗದ ಹೆಣ್ಣಿಗೆ ಜಾತಿಯ ಅಸಮಾನತೆಯ ಅನುಭವವಿರುತ್ತಿರಲಿಲ್ಲ. ಕೆಳಜಾತಿಯ ಪುರುಷನಿಗೆ ಲಿಂಗತಾರತಮ್ಯದ ಅನುಭವ ದಕ್ಕುತ್ತಿರಲಿಲ್ಲ. ಆದರೆ ದಲಿತ ಮಹಿಳೆಗೆ ಮಾತ್ರ ಈ ಎರಡೂ ಪ್ರಶ್ನೆಗಳು ಅನುಭವವಾಗಿಯೇ ದಕ್ಕಿದವು. ಅಂದರೆ ಅವಳು ಹೆಣ್ಣಾಗಿ, ಕೆಳಜಾತಿಯವಳಾಗಿ ಎರಡೂ ನೆಲೆಯಲ್ಲಿ ತಾನು ಹೊಂದುವ ಅಪಮಾನ, ಅವಕಾಶ ವಂಚಿತ ಸ್ಥಿತಿಗಳನ್ನು ಪರಿಭಾವಿಸಬಲ್ಲವಳಾಗಿದ್ದಳು. ಈ ವ್ಯತ್ಯಾಸವೇ ಅವಳ ಭಿನ್ನಧ್ವನಿಯನ್ನು ರೂಪಿಸಿತು ಸಹ.'' ಅಂದರೆ ಪ್ರತ್ಯೇಕವಾಗಿ ದಲಿತ ಮಹಿಳಾ ಅಸ್ತಿತ್ವದ ನೆಲೆಯಲ್ಲಿ ಭಿನ್ನವಾದ ನಿಲುವಿಗೆ ಇಂತಹ ಸಂವಾದದಲ್ಲಿ ಸ್ಪರ್ಧಿಸಲು ಸಾಧ್ಯವಾಗುವುದಿಲ್ಲ. ದಲಿತ ಸ್ತ್ರೀವಾದದ ಪ್ರಮುಖ ನೆಲೆಯಲ್ಲಿ ಲಿಂಗ ಹಾಗೂ ಜಾತಿಯ ಪ್ರಶ್ನೆ ಎರಡೂ ಅತ್ಯಂತ ಪರಿಣಾಮಕಾರಿಯಾಗಿ ಹಾಗೂ ಸಮಾನ ನೆಲೆಯ ಪರಿಕಲ್ಪನೆಗಳಾಗಿ ಕಂಡುಬರುತ್ತವೆ. ಕೇವಲ ಜಾತಿಯ ಕಾರಣದಿಂದಲೇ ದಲಿತ ಮಹಿಳೆಗೆ ಒದಗಿ ಬರುವಂತಹ ಯಾವೊಂದು ಬಗೆಯ ದೌರ್ಜನ್ಯಗಳು ಮೇಲ್‌ವರ್ಗದ ಸ್ತ್ರೀಯರಿಗೆ ಒದಗಿಬರಲಾರವು. ೧೯೯೦ರಲ್ಲಿ ವಾರ್ಷಿಕ ಸರಾಸರಿ ೬೦೦ ರಿಂದ ೮೦೦ ದಲಿತ ಮಹಿಳೆಯರು ಲೈಂಗಿಕ ಹಲ್ಲೆಗೆ ಬಲಿಯಾಗಿದ್ದಾರೆ. ಸಂಸತ್ತಿನಲ್ಲಿ ಇತ್ತೀಚೆಗಷ್ಟೆ ಪ್ರಕಟಿಸಲಾದ ರಾಷ್ಟ್ರೀಯ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ವರದಿಯಂತೆ ೨೦೦೦ನೆ ಸಾಲಿನಲ್ಲಿ ದಲಿತರ ಮೇಲಿನ ದೌರ್ಜನ್ಯದ ಪ್ರಕರಣಗಳ ದಾಖಲಾತಿ ೨೫,೭೪೨ ಇದನ್ನು ೧,೦೩೪ ಅತ್ಯಾಚಾರ ಪ್ರಕರಣಗಳು (ಅಮ್ನೆಸ್ಟಿ ಇಂಡಿಯಾದ ವರದಿಯಂತೆ) ಅದರಲ್ಲಿ ದಲಿತ ಮಹಿಳೆಯರು ಮುಖ್ಯ ಬಲಿಪಶುವಾಗಿದ್ದಾರೆ. ಅವರ ಸಂಖ್ಯೆ ಶೇ.೭೫% ಸಮಾಜಿಕವಾಗಿ ಹಲವಾರು ವಾಗ ಶ್ರೇಣೀಕರಣದಲ್ಲಿ ಅತ್ಯಂತ ಕೆಳಗಿರುವ ಅಲಕ್ಷಿತ ಸಮುದಾಯಗಳ ಮಹಿಳೆಯರು ಮೇಲ್ಜಾತಿಯ ಅಥವಾ ಮೇಲ್‌ವರ್ಗದ ಪುರುಷರಿಂದ ನಿರಂತರವಾಗಿ ಶೋಷಣೆಗೆ, ಕ್ರೌರ್ಯಕ್ಕೆ, ದಬ್ಬಾಳಿಕೆಗೆ, ಅತ್ಯಾಚಾರಗಳಿಗೆ ಒಳಗಾಗಿದ್ದಾರೆ. ಆಗುತ್ತಲೇ ಇದ್ದಾರೆ. ಪಾತರದವರು, ಜೋಗತಿಯರು, ಬಾಲಬಸವಿಯರು ಈ ಮೊದಲಾದ ಶೂದ್ರ ಹಾಗೂ ದಲಿತ ಮಹಿಳೆಯರ ಸಾಂಸ್ಕೃತಿಕ ಕಥೆಗಳು ಇದನ್ನೆ ವಾಚ್ಯಗೊಳಿಸುತ್ತಿವೆ. ಪಾತರ, ಜೋಗತಿ, ಬಸವಿ ಬಿಡುವ ಆಚರಣೆಯ ಹೆಸರಿನಲ್ಲಿ ಪ್ರತಿವರ್ಷ ಏನಿಲ್ಲವೆಂದರೂ ೫೦೦-೧೦೦೦ರ ವರೆಗೆ ದಲಿತ ಹುಡುಗಿಯರು ಲೈಂಗಿಕ ಮಾರುಕಟ್ಟೆಗಳಿಗೆ ತಳ್ಳಲ್ಪಡುತ್ತಿದ್ದಾರೆ. ಇವರ ಮೇಲೆ ಕೆಳಜಾತಿಯಲ್ಲಿ ಹುಟ್ಟಿದ ಕಾರಣಕ್ಕಾಗಿಯೇ ಅನೇಕ ಕನ್ಯೆಯರು, ಮಹಿಳೆಯರು, ಮೇಲ್ಜಾತಿಯ ಮೇಲ್‌ವರ್ಗದ ಪುರುಷರಿಂದ ಅತ್ಯಾಚಾರಗಳಿಗೆ ಬಲಿಯಾಗುತ್ತಿದ್ದಾರೆ. ಬೆತ್ತಲೆಯಾಗಿ ಮೆರವಣಿಗೆ ಯಾಗುತ್ತಿದ್ದಾರೆ. ಈ ಬಗೆಯ ಯಾತನೆಗಳು ದಿನ ನಿತ್ಯ ನಮ್ಮ ಪತ್ರಿಕೆಗಳಲ್ಲಿ ಬರುತ್ತವೆ. ಜಾತಿಯ ಕಾರಣದಿಂದಲೇ ಸುರಕ್ಷಿತವಾಗಿರುವ ಮೇಲ್ಜಾತಿ, ಮೇಲ್ವರ್ಗದ ಮಹಿಳೆಗೆ ದಲಿತ ಮಹಿಳೆಯರು ಅನುಭವಿಸುವ ಅವಮಾನ, ಕಿರುಕುಳ, ಹಿಂಸೆಗಳು ಅರ್ಥವಾಗುವುದಿಲ್ಲ."

ಭಾರತೀಯ ಮಹಿಳೆ ಎಂಬುದೆ ಒಂದು ಅಮೂರ್ತವಾದ ಅಲೌಖಿಕವಾದ ಕಲ್ಪನೆ. ಮಹಿಳೆಯ ಸಮಾಜವು ಜಾತಿಯ ಏಣಿ ಶ್ರೇಣಿಯಲ್ಲಿ ವಿಕಾಸವಾಗಿದೆ. ಧರ್ಮ ಇಲ್ಲೆಲ್ಲ ತನ್ನ ಅವತಾರಗಳನ್ನು ಹೊತ್ತಿದ್ದ ಆಯಾ ಕಾಲದ ರೂಪ ವಿರೂಪಗಳನ್ನು ಅದು ಬಲಪಡಿಸಿದೆ. ಹೀಗೆ ದಲಿತ ಮಹಿಳೆಯ ಸ್ಥಿತಿಯೂ ಕೂಡ ಪಲ್ಲಟವಾಗುತ್ತಲೆ ತನ್ನ ಸೀಮಿತ ವ್ಯಾಪ್ತಿಯ ಒಳಗೆ ಪರ್ಯಾಯಗಳನ್ನು ಹುಡುಕುವಂತಾಗಿದೆ. ದಲಿತ ಮಹಿಳೆಯ ಲೋಕ ವಾಸ್ತವದಲ್ಲಿ ಅತ್ಯಂತ ಕಿರಿದಾದು. ಆದರೆ ಭಾವನಾತ್ಮಕ ಲಹರಿಗಳಲ್ಲಿ ಆಚರಣೆಯ ಸ್ವಭಾವದಲ್ಲಿ ದಲಿತ ಮಹಿಳೆ ವಿಶ್ವಾಸವಾತ್ಮಕವಾದ ನಂಬಿಕೆಗಳನ್ನು ಕಟ್ಟಿಕೊಂಡಿದ್ದಾಳೆ. ಬಹುಪಾಲು ಎಲ್ಲಾ ಮಹಿಳೆಯರು ಇಂತಹ ಕಿರಿದಾದ ಅವಕಾಶದಲ್ಲಿ ಹಿರಿದಾದ ಭಾವ ಲೋಕವನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಅವರವರ ಮೇಲಿನ ಶೋಷಣೆಯ ಸ್ವರೂಪ, ಪ್ರಮಾಣಗಳ ದಾರಿಯಲ್ಲಿ ಅವರ ಅಭಿವ್ಯಕ್ತಿ ಹಾಗೂ ಅಸ್ತಿತ್ವ ಬೇರೆಯೇ ಆಗಿಬಿಡುತ್ತದೆ. ಸುಲಭ ಜಾತಿಯ (ಮೇಲ್ವರ್ಗ)ವು ಮಹಿಳೆಯ ಮತ್ತು ಕಷ್ಟ ಜಾತಿಗಳಿಗೆ ಸಂಬಂಧಿಸಿದ (ಕೆಳವರ್ಗ) ಮಹಿಳೆಯರು ಎದುರಿಸುವ ಸಮಸ್ಯೆಗಳು ಕೆಲವೊಮ್ಮೆ ಒಂದೇ ಆಗಿದ್ದಾಗಲೂ ಅವುಗಳ ಆಳ ಆಗಲಿ ಪರಸ್ಪರ ಭಿನ್ನವಾಗಿರುತ್ತವೆ. ಸುಲಭ ಜಾತಿಗಳ ಮಹಿಳೆಯರು ಕಷ್ಟ ಜಾತಿಯ ಮಹಿಳೆಯರ ಬಗ್ಗೆ ತಿರಸ್ಕಾರ ದೃಷ್ಟಿ, ತಾತ್ಸಾರ ಮನೋಭಾವ, ಕಡೆಗಣ್ಣಿನ ವರ್ತನೆ, ನಿರ್ಲಕ್ಷ್ಯಧೋರಣೆಗಳಗಳಿಂದ ತಮ್ಮ ಅಸ್ತಿತ್ವವನ್ನು ಸದಾಕಾಲ ಉಳಿಸಿಕೊಳ್ಳಲು ಹೆಣಗಾಡುತ್ತಿರುತ್ತಾರೆ. 'ಜಾತಿ' ಎಂಬ ಪರಿಕಲ್ಪನೆಯಿಂದ ಅತೀತವಾಗಿರುವ ಮಹಿಳೆಯರು ಮಾತ್ರ ಇದನ್ನು ಮೀರಲು ಸಾಧ್ಯ'' (ಅರವಿಂದ ಮಾಲಗತ್ತಿ,೫೦೪, ೨೦೦೩) ಧರ್ಮ ಅನಾಧಿಕಾಲದಿಂದಲೂ ತನ್ನ ಅಸ್ತಿತ್ವಕ್ಕೆ, ಉಳಿವಿಗೆ ಅಗತ್ಯವಾಗಿರುವ ಎಲ್ಲಾ ಬಗೆಯ ಧಾರ್ಮಿಕ ಕಟ್ಟಳೆಗಳನ್ನು ಮಾಡಿ ಯಥಾವತ್ತಾಗಿ ಸಮಾಜದಲ್ಲಿ ಜಾರಿಗೆ ತಂದಿತಲ್ಲದೆ ಅವುಗಳ ಕಡ್ಡಾಯ ಪಾಲನೆಗೆ ನಿಯಮಗಳನ್ನು ರೂಪಿಸಿತು. ಭಾರತೀಯ ಸಮಾಜ ತನ್ನ ಧಾರ್ಮಿಕತೆಯಲ್ಲಿ ಅಖಂಡತ್ವವನ್ನು ಪ್ರತಿಪಾದಿಸಬಲ್ಲದು. ಈ ಅಖಂಡತೆಯ ಪ್ರಜ್ಞೆಯನ್ನು ಸದಾ ಮುರಿಯುವಲ್ಲಿ ಜಾತಿಗಳು ಕ್ರಿಯಾಶೀಲವಾಗಿರುತ್ತವೆ. ಲಿಂಗ ಸಂಬಂಧವೂ ಜಾತಿಯ ಕೂಪದಿಂದಲೆ ನಿರೂಪಿಸಲ್ಪಡುತ್ತದೆ. ಇನ್ನು ಲೈಂಗಿಕ ಶೋಷಣೆಯಂತೂ ಜಾತಿಯ ಹಕ್ಕುದಾರಿಕೆಯಿಂದ ಯಾವುದೇ ಬಗೆಯ ಅಡೆತಡೆ ಇಲ್ಲದಂತೆ ಸಾಮಾಜಿಕ, ಧಾರ್ಮಿಕ ಒಪ್ಪಿಗೆಯ ಮೇರೆಗೆ ನಡೆಯುತ್ತಿರುತ್ತದೆ. ಜಾತಿ ಪದ್ಧತಿಯಲ್ಲಿ ಭಾರತೀಯ ಮಹಿಳಾ ಸಮುದಾಯವನ್ನು ಹೇಯವಾಗಿ ಸೀಳಿವೆ. ಮಹಿಳೆಯರ ಸ್ವಾತಂತ್ರ್ಯವನ್ನು ಜಾತಿ ಬಹಳ ಸುಲಭವಾಗಿ ತುಂಡರಿಸಬಲ್ಲದು.

ಧಾರ್ಮಿಕ ಕಟ್ಟಳೆಗಳು, ನೀತಿ ನಿಯಮಗಳ, ಸ್ಮೃತಿಗಳು ದಲಿತ ಮಹಿಳಾ ಶೋಷಣೆಗೆ ಅವಳ ನಿಕೃಷ್ಟತೆಗೆ ಪ್ರಮುಖವಾಗಿ ಕಾರಣವಾಗಿವೆ ಎಂದರೆ ತಪ್ಪಾಗಲಾರದು. ಮೇಲಿನ ಚರ್ಚೆಯಲ್ಲಿ ಇದಕ್ಕೆ ಪುಷ್ಠಿಯನ್ನು ಜೀವನದಲ್ಲಿರುವ ಎಲ್ಲಾ ರಂಗಗಳಲ್ಲಿಯ ವಿಷಯಗಳು ಧಾರ್ಮಿಕತೆಯೊಂದಿಗೆ ತಳುಕುಹಾಕಿಕೊಂಡಿರುತ್ತವೆ. ಆದ್ದರಿಂದ ಇಲ್ಲಿ ನಾವು ಧರ್ಮವನ್ನು ಹೊರತು ಪಡಿಸಿದ ಅಧಿಕಾರವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ.

ದಲಿತ ಮಹಿಳೆ ಸಮಾಜದ ಅಂಚಿನಲ್ಲಿರುವವಳು. ಸಾಮುದಾಯಿಕ ಜೀವನದಿಂದ ದೂಡಲ್ಪಟ್ಟವಳಾಗಿದ್ದಾಳೆ. ಎಲ್ಲಾ ಬಗೆಯ ಸಾಮಾಜಿಕ ನಿರ್ಬಂಧಗಳು ಸದಾಕಾಲವೂ ಅವಳನ್ನು ನಿಯಂತ್ರಿಸುತ್ತಲೆ ಇರುತ್ತವೆ. ದಲಿತಳಾಗಿ ಹುಟ್ಟಿದ್ದು, ಹಾಗಾಗಿ ಜೀವನಪೂರ್ತಿ ಕಷ್ಟ, ನರಕ ಯಾತನೆಯನ್ನು ಅನುಭವಿಸುತ್ತಿದ್ದರೂ ತನ್ನ ಮೇಲೆ ದೌರ್ಜನ್ಯ,

ದಬ್ಬಾಳಿಕೆ ನಡೆಯುತ್ತಿದೆ ಎಂಬುದರ ಪರಿವೆ ಇಲ್ಲದ ಅಮಾಯಕ ಜೀವನ ನಡೆಸುತ್ತಿದ್ದಾಳೆ. ಜೀವಂತ ಶವವಾಗಿರುವ ದಲಿತ ಮಹಿಳಾ ನೋವಿನ ಅಸಹಾಯಕತೆಯ ಒಳಧನಿಯನ್ನು ಎಲ್ಲಾ ಮಹಿಳೆಯರು ಮೊದಲು ಕೇಳಿಸಿಕೊಳ್ಳಬೇಕಾಗಿದೆ. ಭಾರತೀಯ ಸಾಮಾಜಿಕ ರಂಗದಲ್ಲಿ ಅತ್ಯಂತ ಕೆಳಮಟ್ಟದ ಮಹಿಳಾ ಧನಿಯನ್ನು ಆಕ್ರಂದತೆಯನ್ನು ಇಂದು ಪ್ರತಿಯೊಬ್ಬರೂ ಅರಿಯವ ಅಗತ್ಯವಿದೆ. ದಲಿತ ಸ್ತ್ರೀವಾದ ಎಂಬ ಪ್ರತ್ಯೇಕತೆಯ ನಿಲುವಿಗೆ ವಿರೋಧವಿರುವ ಪ್ರತಿಯೊಬ್ಬ ಪ್ರಜ್ಞಾವಂತರು ಈ ಹಿನ್ನೆಲೆಯಲ್ಲಿ ಒಂದಾಗಿ ಸೇರಿ ಪರಾಮರ್ಶಿಸುವುದು ಒಳಿತು.

ಭಾರತೀಯ ಸಾಮಾಜಿಕ ರಂಗದಲ್ಲಿ ಧರ್ಮವು ಅತ್ಯಂತ ಪ್ರಭಾವಶಾಲಿ ಅಂಗವಾಗಿ ಇಂದು ಅದರ ಬೆಂಗಾವಲಾಗಿರುವ ಧರ್ಮಾತೀತವಾದ ವೇದ, ಉಪನಿಷತ್ತು, ಸ್ಮೃತಿಗಳೆ ಕಾರಣ. ತನ್ನ ಅಸ್ತಿತ್ವಕ್ಕೆ ಯಾವುದೆ ಅಡೆತಡೆಬರದ ರೀತಿಯಲ್ಲಿ ವಿವಿಧ ನಮೂನೆಯ ಕರ್ಮಸಿದ್ಧಾಂತಗಳನ್ನು ಸೃಷ್ಟಿಸಿ ಪುರುಷ ಪರಾಕಾಷ್ಟೆಗೆ ಒಂದು ಭದ್ರ ಬುನಾದಿಯನ್ನು ಒದಗಿಸಿಕೊಟ್ಟಿತು. ಇಂತಹ ಸಿದ್ಧಾಂತಗಳ ಮುಖ್ಯ ಉದ್ದೇಶ ಎಂದರೆ ಅಂಚಿನಲ್ಲಿರುವ ಜಾತಿಗಳಿಗೆ ಹಲವು ಬಗೆಯಲ್ಲಿ ಅಧೀನ ಸ್ಥಿತಿ ಮಾಡಿಕೊಂಡು ಆ ಮೂಲಕ ಅವರ ಮೇಲೆ ಪ್ರಭುತ್ವ ಸಾಧಿಸುವುದು. ಕೆಳಸಮುದಾಯಗಳ ಜನರ ಮನಸ್ಸಿನಲ್ಲಿ ದೇವಲೋಕ, ಮೃತ್ಯಲೋಕ, ಸ್ವರ್ಗ, ನರಕ, ದೇವರು, ದೆವ್ವ ಎಂಬ ಹುಸಿ ಸಿದ್ಧಾಂತಗಳನ್ನು ಸೃಷ್ಟಿಸಿ ಮಾನಸಿಕವಾಗಿ ಅವರನ್ನು ತಮ್ಮ ಗುಲಾಮಗಿರಿಗೆ ಒಳಪಡಿಸಿಕೊಳ್ಳುವ ರಾಜಕಾರಣ ಹಿಂದಿನಿಂದಲೂ ವ್ಯವಸ್ಥಿತವಾಗಿ ನಡೆದುಕೊಂಡೆ ಬಂದಿದೆ. ಒಂದು ರೀತಿಯಲ್ಲಿ ಈ ಧರ್ಮ ಮತ್ತು ದೇವರು ಶೋಷಿತರ ಪರವಾಗಿಯೇ ಇವೆ. ಶ್ರೇಷ್ಠ, ಕನಿಷ್ಠ ಎಂಬ ನೆಲೆಗಟ್ಟಿನ ಅಡಿಯಲ್ಲಿ ಆಳುವ ವರ್ಗ, ಆಳಿಸಿಕೊಳ್ಳುವ ವರ್ಗಗಳನ್ನು ಸೃಷ್ಟಿಸಿ ಮಾನಸಿಕವಾಗಿ ಕೆಳಸಮುದಾಯ ತಾನಿರುವುದೇ ಮೇಲ್ಜಾತಿಯವರ ಸೇವೆಗಾಗಿ ಎಂಬ ಸ್ಥಿತಿಗೆ ಬಂದು ನಿಲ್ಲುವಂತೆ ಮಾಡಿವೆ. ಇಂತಹ ತಾತ್ವಿಕ ಚಿಂತನಾ ಲಹರಿಯಲ್ಲಿ ನಾವು ದಲಿತ ಮಹಿಳೆಯ ಸ್ಥಿತಿಯನ್ನು ಅರಿಯುವ ಅಗತ್ಯತೆ ಇದೆ. ಏಕೆಂದರೆ ಊಳಿಗಮಾನ್ಯಶಾಹಿ, ಪುರೋಹಿತಶಾಹಿಯಂತಹ ಸಾಮಾಜಿಕ ನಿಯಂತ್ರಕ ಶಕ್ತಿಗಳು ಧರ್ಮದ ಬೆಂಬಲದಿಂದಲೇ ದಲಿತ ಮಹಿಳೆಯನ್ನು ವಿವಸ್ತ್ರಗೊಳಿಸಿ ಬಸವಿ, ಜೋಗತಿ, ಓಕುಳಿಯಂತಹ ಹೀನ ಕಾರ್ಯಗಳಿಗೆ ಬಳಸಿಕೊಂಡಿರುವುದು ಇವರ ಇಂತಹ ಕಾರ್ಯಗಳಿಗೆ ಮಠ ಮಾನ್ಯಗಳಿಂದ ಮಾತ್ರವೆ ಅಲ್ಲ ಸ್ವತಃ ಆ ದೇವರಿಂದಲೇ ಅನುಮೋದನೆ ಸಿಕ್ಕಿರುತ್ತದೆ.

ದೇವರು ದಲಿತ ಮಹಿಳೆಯರನ್ನೆ ಯಾಕೆ ತನ್ನಸೇವೆಗೆ ಬೇಕೆಂದು ಬಯಸುತ್ತದೆಂಬುದು ಸ್ವತಃ ಅವನಿಗೆ ಗೊತ್ತಿದೆಯೋ ಇಲ್ಲವೋ. ಇದು ದಲಿತ ಪುರುಷರಿಗೂ ಸಹ ಈ ವರೆಗೆ ಹೊಳೆದಿದೆಯೋ ಇಲ್ಲವೋ ತಿಳಿಯದು. ಸ್ತ್ರೀವಾದಿಗಳಲ್ಲಿ ಕೆಲವರು ಪಿತೃಪ್ರಧಾನ ವ್ಯವಸ್ಥೆಯಲ್ಲಿ ದಲಿತ ಮಹಿಳೆಯರಿಗೆ ದೇಹದ ಮೇಲಿನ ನಿಯಂತ್ರಣ ಕಡಿಮೆ. ಮೇಲ್ವರ್ಗದ ಮಹಿಳೆಯರಿಗೆ ಹೆಚ್ಚು ಎಂದು ಗುರುತಿಸುತ್ತ ದಲಿತ ಮಹಿಳೆಯರಿಗೆ ಸ್ವಾತಂತ್ರ್ಯಹೆಚ್ಚು ಎಂದು ವಾದಿಸುವುದು ಕಂಡುಬರುತ್ತದೆ. ಇದು ಸ್ತ್ರೀವಾದದಲ್ಲಿಯ ವೈರುಧ್ಯವೋ ಅಥವಾ ದಲಿತ ಮಹಿಳಾ ಬಗೆಗಿನ ಹುನ್ನಾರವೋ ಅಥವಾ ಪುರುಷ ಪ್ರಧಾನತೆಯ ಕುತಂತ್ರವೋ ತಿಳಿಯುತ್ತಿಲ್ಲ. ಏಕೆಂದರೆ ನಾವು ಮಾಡುವ ಪ್ರತಿಯೊಂದು ಕಾರ್ಯಗಳಲ್ಲಿಯೂ ಧಾರ್ಮಿಕ ಅಂಶಗಳ ಪಾತ್ರ ಅತ್ಯಂತ ವಿಶೇಷವಾಗಿರುತ್ತವೆ. ಇಲ್ಲಿಯೂ ಸಹ ಅದು ಮನುವಿನ ಸಿದ್ಧಾಂತದಡಿಯಲ್ಲಿ ಇರುವುದನ್ನು ಕಾಣಬಹುದು. ದಲಿತ ಮಹಿಳೆಯ ಕುರಿತಾಗಿರುವ ಇಂತಹ ಅಪ್ರಾಸಂಗಿಕವಾದ

ವಿಚಾರಗಳು ನಿಜವಾಗಿಯೂ ಅವೈಚಾರಿಕವಾದವುಗಳೆ. ದಲಿತ ಮಹಿಳೆಯ ದೇಹದ ಮೇಲಿನ ನಿಯಂತ್ರಣ ಕಡಿಮೆ ಎನ್ನುವಲ್ಲಿ ಮನುವಿನ ಪಾತ್ರ ಕಂಡುಬರುತ್ತಿದೆ.

ದಲಿತ ಮಹಿಳೆಯ ದೇಹದ ಕುರಿತಾಗಿರುವ ಇಂತಹ ವಿಚಾರ ಸರಣಿಯ ಉದ್ದಕ್ಕೂ ನಾವು ಇಂತಹ ವೈರುದ್ಯಗಳು ಪೂರ್ವಾಗ್ರಹಗಳನ್ನೇ ಕಾಣುತ್ತೇವೆ. ಮೇಲ್ವರ್ಗದ ಮಹಿಳೆಗೆ ಒದಗಿಬರುವ ಸತಿ ಸಹಗಮನ ಪದ್ಧತಿ, ಕೇಶ ಮುಂಡನೆ, ವಸ್ತ್ರಬದಲಾವಣೆ, ಆಹಾರ ಪತ್ಯ, ಪ್ರವೇಶ ನಿಷಿದ್ಧ, ಮುಟ್ಟು ಮೈಲಿಗೆಯೆಂಬ ಸಂಕೋಲೆಗಳು ಮೇಲ್ವರ್ಗದ ಮಹಿಳೆಯ ಪಾಲಿಗಿವೆಯಾದರೂ ದಲಿತ ಮಹಿಳಾ ಸ್ಥಿತಿಗಿಂತ ಇವು ತುಂಬ ಉದಾರಿಯಾಗಿರುವುದನ್ನು ಆಧುನಿಕ ಸಮುದಾಯದಲ್ಲಿ ನಾವು ಗಮನಿಸಬಹುದು. ದಲಿತ ಮಹಿಳೆಗೆ ಒದಗಿ ಬರುವ ಲೈಂಗಿಕ ಕೃತ್ಯಗಳು ಲೆಕ್ಕಕ್ಕೆ ಬರುವುದೆ ಇಲ್ಲ. ಊರಿನ ಹಿರಿಯರಿಗೆ ಹಗಲಲ್ಲಿ ಅಸ್ಪೃಶ್ಯಗಳಾಗಿದ್ದರೂ ರಾತ್ರಿ ಅವನ ಹಾಸಿಗೆಯಲ್ಲಿ ಸ್ಪೃಶ್ಯಳಾಗಿ ಮತ್ತೆ ಬೆಳಿಗ್ಗೆ ಅಸ್ಪೃಶ್ಯಳಾಗುತ್ತಿದ್ದಾಳೆ. ಮನುಸ್ಮೃತಿಯೂ ದಲಿತ ಮಹಿಳೆಯ ಮೇಲೇರಿದ ನಿಬಂಧನೆಗಳನ್ನು ಈ ಹಿನ್ನೆಲೆಯಲ್ಲಿ ಅರ್ಥೈಸುವ ಅಗತ್ಯವಿದೆ. ಪ್ರಕೃತಿ ಪುರುಷ, ರಾಮ ಎಂದು ಪೌರಾಣಿಕ ನೆಲೆಯಲ್ಲಿ ಮಹಿಳೆಯನ್ನು ವೈಭವೀಕರಿಸಿದ್ದನ್ನು ಮರುಚಿಂತನೆಗೆ ಒಳಪಡಬೇಕಾಗಿದೆ. ಇಲ್ಲವಾದರೆ ಸ್ತ್ರೀವಾದ ದಲಿತೇತರ ಪುರುಷನಿಷ್ಠ ಸಮಾಜದ ಸ್ವೇಚ್ಛಾಚಾರ ಮಾರ್ಗದ ಸಮರ್ಥನೆಗೆ ನಿಂತಂತಾಗುತ್ತದೆ. ಅಷ್ಟೇ ಅಲ್ಲ ಸ್ತ್ರೀವಾದ ಗೊಡ್ಡು ಸಂಪ್ರದಾಯಗಳ ಸಿದ್ಧಾಂತಗಳ ಸಂಪ್ರದಾಯಕ್ಕೆ ಬದ್ಧವಾದಂತಾಗುತ್ತದೆ.

ಹೀಗೆ ಮನುಮುಂದುವರೆದು ಮಹಿಳಾ ವಿವಾಹಕ್ಕೆ ಸಂಬಂಧಿಸಿದಂತೆ ಹೀಗೆ ಉಲ್ಲೇಖಿಸುತ್ತಾನೆ. ''ದ್ವಿಜರ ಪ್ರಥಮ ವಿವಾಹಕ್ಕೆ ಸಂಬಂಧಿಸಿದಂತೆ ಅದೇ ವರ್ಗದ ಹೆಣ್ಣನ್ನು ಶಿಫಾರಸ್ಸು ಮಾಡಲಾಗುತ್ತದೆ. ಮತ್ತೆ ಮದುವೆಯಾಗುವ ಆಸಕ್ತಿ ಇರುವವರು ನಿರ್ದೇಶಿತ ವರ್ಗಗಳಿಂದಲೇ ಆರಿಸಿಕೊಳ್ಳಬೇಕು. ಒಬ್ಬ ಶೂದ್ರನು ಶೂದ್ರ ಹೆಂಗಸನ್ನೆ ಮದುವೆಯಾಗಬೇಕು. ಬ್ರಾಹ್ಮಣನು ಬ್ರಾಹ್ಮಣೆಯನ್ನಲ್ಲದೆ ಕ್ಷತ್ರೀಯ, ವೈಶ್ಯ, ಶೂದ್ರ ಹೆಂಗಸರನ್ನು ಹೊಂದಬಹುದು (ಡಾ.ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು,೨೯) ಮುಖ್ಯವಾಗಿ ಭಾರತೀಯ ಸಾಮಾಜಿಕ ವ್ಯವಸ್ಥೆ ಪುರುಷ ಪ್ರಧಾನತೆಯ ಅಂಕಿತಕ್ಕೆ ಸಿಲುಕಿದೆ. ಇಲ್ಲಿಯ ವೈವಾಹಿಕ ಅಂಶಗಳು ಪುರುಷಾಧಿನವಾಗಿ ಆಗಿರುವಂತಹವು . ಅದರಲ್ಲೂ ಮೇಲು ಕೀಳಿನ ಸಮುದಾಯಗಳಿಗೆ ಸಂಬಂಧಿಸಿದ ಈ ವರ್ಣ ವ್ಯವಸ್ಥೆಯ ಹೊರಗೆ ಇರುವ ಅಂಚಿನ ಅಥವಾ ದಲಿತ ಮಹಿಳೆಯರ ಸ್ಥಿತಿಯೂ ಹಿಂದೂ ಧರ್ಮದಲ್ಲಿ ಅತ್ಯಂತ ಶೋಚನೀಯವಾಗಿದೆ. ಹಿಂದೂ ಧರ್ಮಕ್ಕೆ ವ್ಯವಸ್ಥೆಯ ನಾಲ್ಕು ವರ್ಣಗಳಿಂದಲ್ಲದೆ ತನ್ನ ಪಂಚಮ ವರ್ಣದಿಂದಲೂ ಶೋಷಣೆಗೆ ಒಳಗಾಗಿದ್ದಾಳೆ.

ಆರ್ಥಿಕತೆಗೆ ಸಂಬಂಧಿಸಿದಂತೆ ದಲಿತ ಮಹಿಳೆ ಹತ್ತು ಹಲವು ಬಗೆಯಲ್ಲಿ ತಾರತಮ್ಯಗಳಿಗೆ ಬಲಿಯಾಗಿದ್ದಾಳೆ. ಪುರುಷನೊಂದಿಗೆ ಅವನ ಸರಿಸಮಾನವಾಗಿ ಕಾರ್ಯನಿರ್ವಹಿಸಿದ್ದಾಗ್ಯೂ ಅವನಿಗೆ ಸಿಗುವಂತೆ ಇವಳಿಗೆ ಸರಿಸಮಾನವಾದ ಸಂಬಳ ಸಿಗುತ್ತಿಲ್ಲ. ಹೊಲ, ಗದ್ದೆ, ತೋಟ, ಕಾಮಗಾರಿ, ಗಾರೆಕೆಲಸ ಮುಂತಾದ ಕಡೆ ಅವಳನ್ನು ಅತ್ಯಂತ ನಿಕೃಷ್ಟವಾಗಿ ಲೈಂಗಿಕ ಸ್ವೇಚ್ಛಾರಕ್ಕೆ ಬಳಸಿಯಾಗುವುದನ್ನು ಗಮನಿಸಬಹುದು. ಲೈಂಗಿಕತೆಗೆ ಸಹಕರಿಸದಿದ್ದರೆ ಅವಳಿಗೆ ಉಪವಾಸವೆ ಗತಿ. ಒಂದು ಕಡೆಯಲ್ಲಿ ಆರ್ಥಿಕ ಅಸಮಾನತೆಯಿಂದ ನರಳುತ್ತಿರುವ ಅವಳು ಇನ್ನೊಂದೆಡೆ ತನಗೆ ಅನಿವಾರ್ಯ

ಎಂಬಂತೆ ಲೈಂಗಿಕ ದುರ್ಬಳಕೆಗೆ ಬಲಿಯಾಗುತ್ತಲೆ ಇದ್ದಾಳೆ. ಊಳಿಗಮಾನ್ಯಶಾಹಿಗಳು, ಬಂಡವಾಳಶಾಹಿಗಳು ವ್ಯವಸ್ಥೆಯ ಅಧೀನತೆಯಲ್ಲಿ ಬದುಕುತ್ತಿರುವ ದಲಿತ ಮಹಿಳೆಯರನ್ನು ನೋಡುವ ದೃಷ್ಟಿಕೋನವೆ ಬೇರೆ. ಇತರ ಮೇಲ್ಜಾತಿಯ ಮಹಿಳೆಯರನ್ನು ನೋಡುವ ದೃಷ್ಟಿಕೋನವೇ ಬೇರೆ. ದಲಿತ ಮಹಿಳೆಯ ಇಂತಹ ಹೀನಸ್ಥಿತಿ ಅವಳಿಗೆ ನಿರಂತರವಾಗಿ ಒದಗಿ ಬಂದಿರುವಂತಹ ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಸಮಾನತೆಗಳೆ ಕಾರಣ.

ಸಾಮಾನ್ಯವಾಗಿ ನಾವು ನೋಡುವಂತೆ ಮೇಲ್ವರ್ಗದವರು ದಲಿತರೊಂದಿಗೆ ಸಾಮಾಜಿಕ ಹಾಗೂ ಆರ್ಥಿಕ, ಸಮಾನತೆಗೆ ಕಟ್ಟುಪಾಡುಗಳನ್ನು ಮಡಿ ಮೈಲಿಗೆಯ ರೂಪದಲ್ಲಿ ಪ್ರಕಟಿಸುತ್ತಾರೆ. ದಲಿತ ಮಹಿಳೆಯನ್ನು ಲೈಂಗಿಕವಾಗಿ ದುರ್ಬಳಕೆ ಮಾಡಿಕೊಳ್ಳುವ ಇವರಿಗೆ ಇದೊಂದು ಪ್ರತಿಷ್ಠೆಯ ಅಥವಾ ಅಧಿಕಾರ ಎಂಬ ರೀತಿಯಲ್ಲಿರುತ್ತದೆ. ಭಾರತದಲ್ಲಿ ಜಾತಿ ವ್ಯವಸ್ಥೆ ಎಂಬುದನ್ನು ಧಾರ್ಮಿಕ ಚಿಂತನೆಗಳು ಬೇಕಂತಲೆ ದಲಿತ ಸಮುದಾಯಗಳ ಮೇಲೆ ಶೋಷಣೆ ನಡೆಸಲು ತಮಗೇಗೆ ಬೇಕೂ ಹಾಗೆ ಬಳಸಿಕೊಳ್ಳಲು ಸಹಾಯಕವಾಗಿದೆ. ಇದೆ ಸಮಾನತೆಯನ್ನು ಬಯಸದ ಸಾಮಾಜಿಕ ಜಡಸ್ಥಿತಿ.

ಹೀಗೆ ಹಿಂದಿನಿಂದಲೂ ದಲಿತ ಮಹಿಳಾ ಸಮುದಾಯದ ಮೇಲೆ ಪುರುಷ ಪ್ರಧಾನ ಸಮಾಜ ಸಾಂಪ್ರದಾಯಿಕವಾದ ಶೋಷಣೆಯ ಪಾಪಕೂಪಕ್ಕೆ ತಳ್ಳಿದೆ. ಪ್ರಭುತ್ವವು ಅವಳನ್ನು ನಿರಂತರವಾಗಿ ದೇವರು, ದೆವ್ವ, ಧರ್ಮ, ಸಂಪ್ರದಾಯಗಳ ಹೆಸರಿನಲ್ಲಿ ಹಲವಾರು ನಿರ್ಬಂಧ, ಸಂಕೋಲೆಗಳನ್ನು ವಿಧಿಸಿತು. ತನ್ನ ಮೇಲಿರುವ ಇಂತಹ ಕ್ರೂರ ಸಂಪ್ರದಾಯಗಳ ಅರಿವು ಸ್ವತಃ ದಲಿತ ಮಹಿಳೆಗೆ ಇಲ್ಲದೆ ಹೋಗಿದೆ. ತಾನಿರುವುದೆ ಸೇವೆಗಾಗಿ ಎಂಬುದು ಅವಳಲ್ಲಿ ಮಾನಸಿಕವಾಗಿ ರೂಪುತಾಳಿದೆ. ಭಾರತದಲ್ಲಿ ನಡೆಯುವ ಅನಿಷ್ಟ ಸಂಪ್ರದಾಯಗಳಾದ ಬಸವಿ, ಜೋಗತಿ, ಒಕುಳಿ ಯಂತಹ ಅಮಾನವೀಯ ಕೃತ್ಯಗಳ ವಿರುದ್ಧ ಹಲವಾರು ಕಠೋರ ಕಾನೂನುಗಳಿದ್ದರೂ ಅವು ಉಳ್ಳವರ ಪಾಲಾಗಿರುವುದರಿಂದ ತಳಸಮುದಾಯದ ಪಾಲಿಗೆ ಅದರ ಕಾರ್ಯವೆ ವಿಸ್ತರಿಸಿರುವುದಿಲ್ಲ. ಇದಕ್ಕೆ ಕಾರಣ ಎಂದರೆ ಸಮಾಜದಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ನಿಯಂತ್ರಿಸಿಕೊಂಡು ಬಂದಿರುವ ಸಾಮಾಜಿಕ ವ್ಯವಸ್ಥೆ ಇಂತಹ ಸಂವಿಧಾನಿಕ ಕಾನೂನುಗಳನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಪಟ್ಟಭದ್ರ ಹಿತಾಸಕ್ತಿ ಅಡ್ಡವಾಗಿರುವುದರಿಂದಲೆ ಇಂತಹ ಪದ್ಧತಿಗಳು ಸಮಾಜದಿಂದ ತೊಲಗದೆ ಇಂದಿಗೂ ಮುಂದುವರೆಯುತ್ತಿರುವುದು. ನಿಜವಾಗಿಯೂ ಕಾನೂನನ್ನು ನಿಯಂತ್ರಿಸುವವರು ಸರಕಾರವಲ್ಲ ಬದಲಿಗೆ ಇಂತಹ ಪಟ್ಟಭದ್ರಹಿತಾಸಕ್ತಿಗಳೆ.

ಆಧುನಿಕ ಸಮಾಜದಲ್ಲಿ ದಲಿತ ಮಹಿಳೆ ಹಲವಾರು ಕಡೆಗಳಲ್ಲಿ ಸಾಮಾಜಿಕ ಕ್ಷೇತ್ರಗಳಿಗೆ ಅಲ್ಪ ಪ್ರಮಾಣದಲ್ಲಾದರೂ ಬರುತ್ತಿದ್ದಾಳೆ. ಹಿಂದಿನಿಂದಲೂ ತನ್ನ ಮೇಲಿನ ಎಲಾ ಬಗೆಯ ಶೋಷಣೆ, ಅವಮಾನ, ದೌರ್ಜನ್ಯಗಳಿಂದ ನಲುಗಿ ತನ್ನ ಅಸ್ತಿತ್ವವನ್ನೇ ಮರೆತಿದ್ದ ದಲಿತ ಮಹಿಳಾ ಸಮುದಾಯಕ್ಕೆ ಸಾಂವಿಧಾನಿಕ ಹಕ್ಕುಗಳಿಂದ ಹೊರ ಜಗತ್ತಿನಲ್ಲಿ ಬಾಗಿಲುಗಳು ತೆರೆದುಕೊಳ್ಳುವಂತಾದವು. ಶೈಕ್ಷಣಿಕ ರಂಗದ ಅರಿವೆ ಇಲ್ಲದೆ ದಲಿತ ಮಹಿಳೆ ಇಂದು ಅನೇಕ ಕಡೆಯಲ್ಲಿ ಶಿಕ್ಷಣಕ್ಕೆ ಮುಖಮುಖಿಯಾಗುತ್ತಿದ್ದಾಳೆ. ನಗರದ ನಾಗರಿಕ ಜೀವನಕ್ಕೋಸ್ಕರವಾಗಿ ಅಲ್ಲಿನ ಸಂಸ್ಕೃತಿಯನ್ನು ಅಳವಡಿಸಿಕೊಳ್ಳುತ್ತಿದ್ದಾಳೆ. ತಾಂತ್ರಿಕ, ವೈಮಾನಿಕದಂತಹ ಪ್ರಮುಖ ರಂಗಗಳಲ್ಲಿ ಭಾಗಿಯಾಗುತ್ತಿದ್ದಾಳೆ.

ಸಮಾನತೆಯ ತತ್ವದಡಿಯಲ್ಲಿ ಭಾರತೀಯ ಘನ ಸರಕಾರವು ಸಾಂವಿಧಾನಾತ್ಮಕವಾಗಿ ದಲಿತ ಮಹಿಳೆಗೆ ರಾಜಕೀಯ ಸಬಲೀಕರಣದ ಸಲುವಾಗಿ ಹಲವಾರು ಅವಕಾಶಗಳನ್ನು ಕೊಟ್ಟಿದೆ. ಆದರೆ ಹಕ್ಕುಗಳನ್ನು ಮಾತ್ರ ಕೊಟ್ಟುಬಿಟ್ಟರೆ ಎಲ್ಲಾ ಸರಿಯಾಯಿತು ಎಂದು ಪರಿಭಾವಿಸುವುದು ತಪ್ಪಾಗುತ್ತಿದೆ. ಜೊತೆಗೆ "ಯಾವುದೇ ಜನತೆಯ ಮೂಲಭೂತ ಅಗತ್ಯಗಳನ್ನು ಪೂರೈಸಲಾರದೆ ಕೇವಲ 'ಹಕ್ಕು' ಎಂದು ರಂಗುರಂಗಾಗಿ ಕಾಣುತ್ತದೆಯೋ ಅದು ಉಪಕಾರಕ್ಕಿಂತ ಅಪಕಾರವನ್ನು ಮಾಡುವುದೆ ಹೆಚ್ಚು. ಏಕೆಂದರೆ ಇತ್ತ ಕಡೆಕೊಟ್ಟು ಅತ್ತ ಕಡೆ ಯಾರಿಗೆ ತಲುಪಬೇಕೊ ಅವರಿಗೆ ತಲಪದಂತೆ ಮಾಡುವ ಬುದ್ಧಿ ಜಾಲ ನಮ್ಮ ಭಾರತೀಯ ಸಂವಿಧಾನ ರೂಪಿಸಿದ ರಾಜಕೀಯ ವ್ಯವಸ್ಥೆಯಲ್ಲಿದೆ."

ದಲಿತರಿಗೆ ಆರಂಭದಿಂದಲೂ ಸಂವಿಧಾನ ದತ್ತವಾಗಿ ಬಂದಿರುವಂತಹ ಅಧಿಕಾರ, ಅವಕಾಶಗಳನ್ನು ಹೊಂದಲು ರಾಜಕೀಯ, ಧಾರ್ಮಿಕ, ಸಾಮಾಜಿಕ, ಅಂಶಗಳು ಬಿಟ್ಟಿಲ್ಲ. ಆರಂಭದ ಕಾಲಘಟ್ಟದಿಂದಲೂ ಭಾರತದ ಸಮಸ್ತ ಆಡಳಿತ ರಂಗವನ್ನು ಕೇವಲ ಮೇಲ್ವರ್ಗಗಳೆ ಆಳಿರುವುದರಿಂದ ಅವು ಇಡೀ ಸಾಮಾಜಿಕ ವ್ಯವಸ್ಥೆಯನ್ನು ಅದರ ಆಡಳಿತವನ್ನು, ರಾಜಕಾರಣವನ್ನು ಪ್ರಭುತ್ವ ತನಗೆ ಹೇಗೆ ಬೇಕೊ ಹಾಗೆ ಬಳಸಿಕೊಂಡಿದೆ. ವಾಸ್ತವವಾಗಿ ಇಂದು ಪ್ರಜಾಪ್ರಭುತ್ವ ವ್ಯವಸ್ಥೆ ನಮ್ಮನ್ನು ಆಳುತ್ತಿದ್ದರೂ ಸಹ ಪಾರಂಪರಿಕವಾಗಿ ಬಂದಿರುವ ಪ್ರಭುತ್ವ, ಊಳಿಗಮಾನ್ಯವಾಗಿ, ಬಂಡವಾಳವಾಗಿ, ಪುರೋಹಿತಶಾಹಿಗಳೆ ಇಂದಿಗೂ ತಮ್ಮ ಹಿಡಿತವನ್ನು ಬಿಡದೆ ಪ್ರಜಾ ಪ್ರಭುತ್ವದ ಹೆಸರಿನಡಿಯಲ್ಲಿ ಮತ್ತೆ ಅಧಿಕಾರವನ್ನು ಕೇಂದ್ರಿಕರಿಸಿಕೊಳ್ಳುತ್ತಿವೆ. ನಿಜವಾದ ಮೂಲಭೂತ ಹಕ್ಕುಗಳು ಯಾವುದು ಎಂಬುದನ್ನು ನಮ್ಮ ದೇಶದ ಸಂದರ್ಭದಲ್ಲಿ ಸಂವಿಧಾನ ಕರ್ತೃಗಳು, ನಾಯಕರುಗಳು ಕಂಡುಕೊಳ್ಳಬೇಕಿತ್ತು. ಯಾರು ಅನ್ನ, ವಸತಿ, ಉದ್ಯೋಗದಿಂದ ವಂಚಿತರಾಗಿರುತ್ತಾರೋ ಅಂಥವರು ಸ್ವಾತಂತ್ರ್ಯಾನುಭವದಿಂದಲೂ ವಂಚಿತರಾಗಿರುತ್ತಾರೆ. ಅವರಿಗೆ ಹಕ್ಕುಗಳನ್ನು ಗುರುತಿಸುವ, ಆಲೋಚಿಸುವ, ಅನುಭವಿಸುವ, ಅವಕಾಶವೇ ಇರುವುದಿಲ್ಲ. ಯಾರಿಗೆ ಇಲ್ಲಿ ಗಟ್ಟಿಯಾಗಿ ನಿಲ್ಲುವುದಕ್ಕೆ ಸಾಧ್ಯವೊ ಅಂಥವರು ಹಕ್ಕುಗಳ ಬಗ್ಗೆ ಆಲೋಚಿಸಬಲ್ಲರು, ಅನುಭವಿಸಬಲ್ಲರು. ಆದರೆ ಈ ದೇಶದ ಬಹುಪಾಲು ಜನ ಅಂಥಹ ಸ್ಥಿತಿಯಲ್ಲಿ ಇಲ್ಲ. ಇಲ್ಲಿ ಅಧಿಕಾರವು ಹಸ್ತಾಂತರವಾಗಿದೆಯೇ ಹೊರತು ಪ್ರಜಾಪ್ರಭುತ್ವದ ಅರ್ಥಕ್ಕೆ ಸಮಾಜ ಬದಲಾವಣೆಯಾಗದಿರುವುದು ಖೇದನೀಯ ಅಂದ ಮಾತ್ರಕ್ಕೆ ದಲಿತ ಮಹಿಳೆಗೆ ರಾಜಕೀಯಾಧಿಕಾರವೆ ಸಿಕ್ಕಿಲ್ಲ ಎಂದು ಅರ್ಥವಲ್ಲ. ಸಾಂವಿಧಾನಾತ್ಮಕವಾಗಿ ಅವಳಿಗೆ ರಾಜಕೀಯಾಧಿಕಾರ ಸಿಕ್ಕಿದೆ. ಆದರೂ ಅದು ನೆಪ ಮಾತ್ರ, ತನಗಿರುವ ಅಧಿಕಾರವನ್ನು ಹೇಗೆ ಚಲಾಯಿಸಬೇಕು ಎಂಬ ಗೊಂದಲದಲ್ಲಿ ಅವಳಿದ್ದಾಳೆ. ಗ್ರಾಮ ಪಂಚಾಯಿತಿಯಿಂದು ತಾಲ್ಲೂಕ, ಜಿಲ್ಲಾ ಪಂಚಾಯಿತಿ, ಎಂ.ಪಿ, ಎಂ.ಎಲ್.ಎ. ಮಂತ್ರಿಗಳವರೆಗೂ ದಲಿತ ಮಹಿಳೆಯರು ಕಂಡು ಬರುತ್ತಾರಾದರೂ ಅವಳು ತನ್ನ ಶೋಷಿತ ಸಮುದಾಯಗಳ ಏಳಿಗೆ, ಅವರ ಮೇಲಿನ ದೌರ್ಜನ್ಯಗಳಿಗೆ ನೀಡುವ ಕೊಡುಗೆ ಮಾತ್ರ ಅತ್ಯಂತ ಕಡಿಮೆ. ಕೇವಲ ಅಧಿಕಾರ ಅವಳನ್ನು ಉತ್ಸವ ಮೂರ್ತಿಯಾಗಿಸಿತೆ ವಿನಃ ಇನ್ಯಾವುದೆ ರೀತಿಯಲ್ಲಿ ದಲಿತ ಮಹಿಳಾ ಸ್ಥಿತಿಯ ಸುಧಾರಣೆಯತ್ತ ಗಮನ ನೀಡಲು ವ್ಯವಸ್ಥೆ ಬಿಡುತ್ತಿಲ್ಲ. ಸ್ವತಃ ಮಹಿಳೆಯಾಗಿದ್ದುಕೊಂಡೆ ತನ್ನಂತ ಅಂಚಿನ ಮಹಿಳಾ ಸಮುದಾಯಕ್ಕೆ ಅವಳು ಏನು ಮಾಡದೆ ಸ್ಥಿತಿಯಲ್ಲಿದ್ದಾಳೆ.

ಭಾರತದಲ್ಲಿರುವ ಪ್ರತಿಯೊಂದು ರಾಷ್ಟ್ರೀಯ, ಪ್ರಾದೇಶಿಕ ಪಕ್ಷಗಳಲ್ಲಿಯೂ ಸಹ ಉನ್ನತ ವರ್ಗದ ಜನರೆ ತುಂಬಿರುವರು. ಅವಳು ಪಕ್ಷ, ಧರ್ಮ, ಜಾತಿ ಹೆಸರಿನಡಿಯಲ್ಲಿಯೇ ಅಧಿಕಾರ ಚಲಾಯಿಸುವಂತವರಾಗಿರುತ್ತಾರೆ. ಇವುಗಳಿಗೆ ಚ್ಯುತಿಬರದಂತೆ ಇವರು ಸದಾ ಜಾಗೃತಿವಹಿಸುತ್ತಾರೆ. ಇಂತಹ ಕಡೆಗಳಲ್ಲಿ ದಲಿತ ಮಹಿಳಾ ಸ್ಥಿತಿಯೂ ಆ ಪಕ್ಷಗಳಲ್ಲಿ ನಾಮ ಮಾತ್ರವಾಗಿರುತ್ತದೆಯೇ ಹೊರತು ಪ್ರಭಾವ ಬೀರುವ ಅಥವಾ ವಶೀಲಿ ರಾಜಕೀಯಕ್ಕೆ ಇಲ್ಲಿ ಯಾವುದೇ ರೀತಿಯ ಅವಕಾಶವಿರುವುದಿಲ್ಲ.

ಜಾತ್ಯಾತೀತ ತತ್ವದಡಿಯಲ್ಲಿ ರೂಪುಪಡೆದ ಭಾರತದ ಪ್ರಧಾನ ಮಂತ್ರಿಯ ಸ್ಥಾನವನ್ನು ಯಾರು ಬೇಕಾದರೂ ಅಲಂಕರಿಸಬಹುದು. ಆದರೆ ಸ್ವಾತಂತ್ರ್ಯ ನಂತರ ಇಲ್ಲಿಯವರೆಗೂ ಒಬ್ಬ ದಲಿತರು ಇಂತಹ ಸ್ಥಾನ ಪಡೆಯಲಾಗಲಿಲ್ಲ. ಕೆಲವು ಕಡೆಗಳಲ್ಲಿ ದಲಿತರಿಗೆ ಉನ್ನತ ಸ್ಥಾನ ನೀಡಿ ಇಡೀ ದಲಿತ ಸಮುದಾಯಕ್ಕೆ ನ್ಯಾಯ ಒದಗಿಸಿದ್ದೇವೆ ಎಂದು ಬೀಗುವವರು ಅಧಿಕವಾಗಿದ್ದಾರೆ. ಹೀಗೆ ಉನ್ನತ ಅಧಿಕಾರ ನೀಡುವ ಉದ್ದೇಶ ಎಂದರೆ ಆಯಾ ಸಮುದಾಯಗಳ ಓಟುಗಳು ತಮಗೆ ಸಿಗಲಿ ಎಂಬ ದುರಾಸೆಯಿಂದ ೨೦೧೧ರ ಜನಗಣತಿಯಂತೆ ಭಾರತದಲ್ಲಿ ದಲಿತರ ಜನಸಂಖ್ಯೆಯ ಪಾಲು ೨೪.೦೭ ಆದರೆ ಇಂತಹ ಬೃಹತ್ ಜನಸಂಖ್ಯೆಯ ದಲಿತ ಸಮುದಾಯ ತನಗೆ ವಂಚಿತವಾದ ಸ್ಥಾನಗಳನ್ನು ಪಡೆಯುವಲ್ಲಿ ಮಾತ್ರ ಎಡವಿರುವುದು ನಿಜ.

ಕೇಂದ್ರ ಮಟ್ಟದಲ್ಲಿ ಅಧಿಕಾರದ ಉನ್ನತ ಅಂಗವಾಗಿರುವ ಎಂ.ಪಿ., ಎಂ.ಎಲ್.ಎ-ಸ್ಥಾನಗಳಲ್ಲಿ ದಲಿತ ಮಹಿಳೆಗೂ ಒಳ ಮೀಸಲಾತಿ ಎಂಬ ಹುಸಿ ಸಿದ್ಧಾಂತವನ್ನು ಮುಂದು ಮಾಡಿ ಮಹಿಳಾ ಸಮುದಾಯಕ್ಕೆ ಸಿಗಬೇಕಾದ ನ್ಯಾಯಯುತವಾದ ಅವಕಾಶ ತಪ್ಪಿಸಿದ್ದು ಪಿತೃಪ್ರಧಾನ ಸಂಸ್ಕೃತಿಯ ಮುಂದುವರೆದ ಭಾಗವೆ ಆಗಿದೆ. ಇದು ಏನು ವಿಶೇಷತೆ ಇಲ್ಲದ್ದು. ಕಾರಣ ಎಂದರೆ ಈವರೆಗೂ ದಲಿತ ಪುರುಷರೆ ರಾಜಕೀಯ ಸಬಲೀಕರಣದಲ್ಲಿ ಸಕ್ರೀಯವಾಗಿ ಭಾಗವಹಿಸಲು ಎಷ್ಟರ ಮಟ್ಟಿಗೆ ಸಾಧ್ಯವಾಗಿದೆ. ಮಹಿಳಾ ಮೀಸಲಾತಿಯ ಸಮಯದಲ್ಲಿ ದಲಿತ ನಾಯಕರುಗಳು ಸಹ ತಟಸ್ಥತೆಯನ್ನೇ ಪಾಲಿಸಿದ್ದಾರೆಂದರೆ ತಪ್ಪಾಗಲಾರದು. ಆದ್ದರಿಂದಲೆ ಇಲ್ಲಿ ದಲಿತ ಮಹಿಳೆಯರ ರಾಜಕೀಯ ಮೀಸಲಾತಿಯ ಪ್ರಶ್ನೆಯೂ ಅವರಿಗೆ ಮುಖ್ಯವಾಗಲೆ ಇಲ್ಲ. ಮಹಿಳಾ ಮೀಸಲಾತಿ ಮಸೂದೆ ಎಲ್ಲಾ ರಾಜಕೀಯ ಪಕ್ಷಗಳ ನಾಯಕರುಗಳು ಒಪ್ಪಿಗೆಯನ್ನು ಸೂಚಿಸುತ್ತಾರೆ. ಆದರೆ ಯಾವ ಪಕ್ಷವೂ ಇದರ ಪರವಾಗಿಲ್ಲ. ಇದು ಜಾಗಿಯಾಗದಿರಲು ಕಾರಣವೇನು? ಹಿಂದೆ ಡಾ.ಬಿ.ಆರ್.ಅಂಬೇಡ್ಕರರು ಹಿಂದೂ ಮಹಿಳಾ ಸ್ಥಿತಿ ಸುಧಾರಣೆಗೆ 'ಹಿಂದೂ ಕೋಡ್ ಬಿಲ್' ಮೂಲಕ ಅಂಧಕಾರದ ರೂಪದಲ್ಲಿ ಕೊಳೆಯುತ್ತಿದ್ದ ಮಹಿಳಾ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದರು. ಮನುವಿನ ವಿಚಾರಗಳು ಸಾಕಾರ ಮೂರ್ತಿಯಾಗಿರುವ ಕೆಲವು ಕುತರ್ಕಿಗಳು ಇದನ್ನು ಧ್ವಂಸಗೊಳಿಸಿದರು. ಇದು ಅಸ್ಪೃಶ್ಯ ಮಹಿಳೆಗಂತೂ ಅತ್ಯಂತ ಸಹಾಯಕವಾಗಿಯೇ ಇತ್ತು. ಆದರೆ ಈಗಿನ ಮಹಿಳಾ ಮೀಸಲಾತಿ ಇಡೀ ಮಹಿಳಾ ಸಮುದಾಯಕ್ಕೆ ಸಂಬಂಧಿಸಿರುವುದರಿಂದ ದಲಿತ ಮಹಿಳೆಯ ನೆಪ ಮುಂದೆ ಮಾಡಿ ಇದನ್ನು ತಡೆಹಿಡಿಯಲಾಗುತ್ತಿದೆ. ಮಹಿಳಾ ಉನ್ನತಿಗಾಗಿಯೇ ಇರುವ ಮೀಸಲಾತಿಗೆ ಮಹಿಳೆಯೇ ಅಡ್ಡಿಯಾಗುವಂತೆ ಮಾಡಿದ್ದು ಪಿತೃ ಪ್ರಧಾನತೆಯ ಕರಾಳ ಮುಖವೆ ಸರಿ.

## ೨.೧೦. ದಲಿತರು ಮತ್ತು ಭಾರತೀಯ ಸಮಾಜ

'ದಲಿತರು' ಎಂದರೆ ಯಾರು ಎಂದು ನಿರ್ವಚಿಸಿಕೊಂಡ ನಂತರವೆ ಮುಂದಿನ ಚರ್ಚೆಗೆ ತೊಡಗುವುದು ಸೂಕ್ತವಾಗುತ್ತದೆ. 'ದಲಿತ' ಎಂಬ ಪದವು ಈ ಶತಮಾನದ ೭೦ನೆಯ ದಶಕದಲ್ಲಿ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ಈ ಮೂವತ್ತು ವರ್ಷಗಳಲ್ಲಿ ವಿವಿಧ ಚಿಂತಕರು, ವಿದ್ವಾಂಸರು, 'ದಲಿತ' ಎಂಬ ಪದದ ಬಗ್ಗೆ ಹತ್ತು ಹಲವು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಇಂದಿಗೂ ಈ ಪದದ ಬಗ್ಗೆ ನಿರ್ದಿಷ್ಟವಾದ ವ್ಯಾಖ್ಯಾನ ನೀಡಲು ಸಾಧ್ಯವಾಗಿಲ್ಲ. ಈ ವಿಷಯದಲ್ಲಿ ಹಲವಾರು ಬಗೆಯ ಭಿನ್ನಾಭಿಪ್ರಾಯಗಳು ವಿದ್ವಾಂಸರಲ್ಲಿರುವುದರಿಂದ ಏಕಾಭಿಪ್ರಾಯ ತಾಳಲು ಸಾಧ್ಯವಾಗುತ್ತಿಲ್ಲ. ಹಲವಾರು ಸಭೆ, ಸಮಾರಂಭ, ವಿಚಾರ ಸಂಕಿರಣ, ಗೋಷ್ಠಿಗಳಲ್ಲಿ 'ದಲಿತರು' ಎಂದರೆ ಯಾರು ಎಂದು ಸೂಚಿಸಿ ತಮ್ಮದೇ ಆದಂತಹ ಒಂದು ಐಡಿಯಾಲಜಿಯನ್ನು ಮಂಡಿಸುತ್ತಲೇ ಇದ್ದಾರೆ. ಇದೇ 'ದಲಿತ' ಪದದ ಅರ್ಥಸ್ಪಷ್ಟತೆಯ ಕುರಿತಾದ ಸಮಸ್ಯೆಯನ್ನು ಇದು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ದಲಿತ ಪದದ ಕುರಿತಾಗಿರುವ ಹಲವಾರು ವ್ಯಾಖ್ಯಾನಗಳನ್ನು ನೋಡಿದರೆ ದಲಿತ ಪದದ ಬಗ್ಗೆ ನಮಗೆ ಒಂದು ತಿಳುವಳಿಕೆ ಬರಬಹುದು.

"ತುಳಿತಕ್ಕೊಳಗಾದವರು. ಅಸ್ಪೃಶ್ಯರು, ಕಾರ್ಮಿಕರು, ಭೂಹೀನರು, ಬಡ ರೈತರು, ಅಲೆಮಾರಿಗಳು, ಆದಿವಾಸಿಗಳು, ಬಡಮುಸ್ಲಿಮರು, ಶೋಷಣೆಗೆ ಒಳಗಾದ ಮಹಿಳೆಯರು ಅಲ್ಲದೆ ಶೋಷಿತ ಬ್ರಾಹ್ಮಣ ವರ್ಗದವರು ದಲಿತರೆ, ಇವರೆಲ್ಲರ ಪರವಾಗಿ ನಿಂತ ಸಾಹಿತ್ಯ ದಲಿತ ಸಾಹಿತ್ಯ" - ದಲಿತ ಪ್ಯಾಂಥರ್ಸ್‌ನ ಪ್ರಕಟಿತ ಪ್ರಣಾಳಿಕೆ.[೬೪] ಅನುಪಮ ನಿರಂಜನ ಸಹ ದಲಿತ ಪದವನ್ನು ತಮ್ಮದೆ ಆದ ವಿಸ್ತೃತ ಅರ್ಥದಲ್ಲಿ ನಿರ್ವಹಿಸಿದ್ದಾರೆ. "ದಲಿತರು ಎಂದರೆ ಕ್ರೂರ ಸಮಾಜದಲ್ಲಿ ಅಸ್ಪೃಶ್ಯರು, ಎನಿಸಿಕೊಂಡವರು ಎಂಬ ಭಾವನೆ ಮಾತ್ರ ಇದೆ. ಇದು ಸರಿ ಎನಿಸದು, ಕೆಳಜಾತಿಯೆನಿಸಿಕೊಂಡವರಷ್ಟೆ ಅಲ್ಲದೆ ಎಲ್ಲಾ ಜಾತಿಗಳ ಶೋಷಿತರು ದಲಿತರೆ ಇದಕ್ಕೆ ಲಿಂಗ ಬೇಧವೇ ಇಲ್ಲ."[೬೫] ಅರವಿಂದ ಮಾಲಗತ್ತಿಯವರ ಪ್ರಕಾರ" ಶತಮಾನಗಳಿಂದ ಜನಸಮುದಾಯದಲ್ಲಿ ಸಾಮಾಜಿಕ, ಆರ್ಥಿಕ, ಶೋಷಣೆಗೆ ಒಳಗಾಗದವರು. ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ, ಊರ ಹೊರಗೆ ವಾಸಿಸಿ, ಕೀಳು ವೃತ್ತಿಗೆ ಅವಲಂಬಿತರಾಗಿ ಹೆಸರು ಹೇಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರು ಎನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುವರು.[೬೬]"

"ದಲಿತರೆಂದರೆ ಅಸ್ಪೃಶ್ಯ ಮತ್ತು ಸಣ್ಣ ಪ್ರಮಾಣದಲ್ಲಿ ಅಸ್ಪೃಶ್ಯತೆಯ ಅನುಭವ ಇಲ್ಲದಿದ್ದರೂ ಅತ್ಯಂತ ವೇದನೆಗೊಳಗಾದ. ಚದುರಿ ಹೋದ ಜನಾಂಗದ ಪ್ರತಿನಿಧಿಗಳು ಪ್ರಗತಿ ಪರ ಸಂಘಟನೆಯೊಂದಿಗೆ ತಮ್ಮನ್ನು ಗುರುತಿಸಿಕೊಂಡು ತಮ್ಮ ಸಾಹಿತ್ಯ ಮತ್ತು ಸಂಘಟನೆಗಳ ಮೂಲಕ ಅಸ್ಪೃಶ್ಯತೆ, ಅಸಮಾನತೆಯನ್ನು ತೊಡೆದು ಪ್ರಯತ್ನ ಪಡುವಂತವರೆಲ್ಲರೂ ಆಗಿರುತ್ತಾರೆ. ಅಂದರೆ ತಲೆತಲಾಂತರದಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದ ಜನಾಂಗದವರು ಮಾತ್ರ 'ದಲಿತರು' ಎಂದು ಸ್ಪಷ್ಟವಾಗಿ ತಿಳಿಯಬೇಕು. [೬೭] (ಹರವೆ ದೇವಯ್ಯ ೧೯೯೧)

"ಜನ ಸಮುದಾಯದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಇನ್ನು ಯಾವ ಪಂಗಡ ಮತ್ತು ಜಾತಿಗಳು ಅವಮಾನ ಹಾಗೂ ದಮನಕ್ಕೆ ಒಳಪಟ್ಟಿರುತ್ತವೆಯೋ, ಅಂತಹ ಎಲ್ಲಾ ಜಾತಿ ಪಂಗಡಗಳ ಜನರು, ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಗೌರವಾನ್ವಿತ ನಡೆಸುವವರಗೂ ಅವರೆಲ್ಲ ದಲಿತರೆ ಆಗುವರು." (ಮೋಹನಾಂಗಯ್ಯ ಸ್ವಾಮಿ, ೧೯೮೭)

"ದಲಿತರು ಎಂದರೆ ಮೇಲು ಜಾತಿಗಳಿಂದ ಸಾಮಾಜಿಕ, ಆರ್ಥಿಕ ಶೋಷಣೆಗೆ ಒಳಗಾಗಿ, ಊರ ಬಾವಿಯಿಂದ ನೀರು ಕುಡಿಯಲು ಅವಕಾಶವಿಲ್ಲದ ಅಸ್ಪೃಶ್ಯತೆ ಜಾತಿಗೆ ಸೇರಿದವರು ಮತ್ತು ಸಮಾಜದ ಜಾತಿಗಳ ಮನುಷ್ಯ ಸಂದರ್ಭದಲ್ಲಿ ಬದುಕಲಾಗದೆ ಊರ ಹೊರಗೆ ವಾಸಿಸುವವರು." (ತಿಮ್ಮೇಗೌಡ, ಎನ್. ೧೯೮೫. ೧೬೫)

"ದಲಿತರು ಕೇವಲ ಶೋಷಿತರಷ್ಟೆ ಅಲ್ಲ, ಶೋಷಣೆಯ ಜೊತೆಗೆ ಅಮಾನವೀಯವಾದ ಹಿಂಸೆ, ಕ್ರೌರ್ಯಗಳಿಗೆ ಒಳಗಾದವರು. ಒಂದು ವ್ಯಕ್ತಿತ್ವವೆ ಇಲ್ಲದವರಂತೆ ನಡೆಯಿಸಿಕೊಳ್ಳಲ್ಪಟ್ಟವರು." (ಶಿವರುದ್ರಪ್ಪ. ಜಿ.ಎಸ್. ೧೯೯೦, ೦೩)

"ದಲಿತರು ಎಂದರೆ ಚೂರು ಚೂರಾದ, ಹೋಳು ಹೋಳಾದ, ತುಂಡು ತುಂಡಾದ ತುಳಿತಕ್ಕೊಳಗಾದ ಜನ ಎಂಬ ಅರ್ಥ ಕೊಡುವುದು. ಸಾಮಾನ್ಯವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ,ರಾಜಕೀಯವಾಗಿ ಹಿಂದುಳಿದಿರುವವರನ್ನು ದಲಿತರೆನ್ನಬಹುದು. ವರ್ಣಾಶ್ರಮದಲ್ಲಿ ಬರುವ ಕೊನೆಯದಾದ ಶೂದ್ರರಲ್ಲಿ ಬರುವಂತಹದ್ದು. ಶೂದ್ರರೆಲ್ಲ ಸೇವಕ ವೃತ್ತಿಯವರು ಶೂದ್ರರಲ್ಲಿಯೇ ಅತಿ ಕೀಳಾದವರು-ದಲಿತರು-ಪದ ದಲಿತರು-ಪಂಚಮರು-ಚಾಂಡಾಲರು, ಅಂಬೇಡ್ಕರರು ಇವರನ್ನು Depressed class ಎಂದು ಕರೆದಿದ್ದಾರೆ. ನನ್ನ ಮಟ್ಟಿಗೆ ದಲಿತರೆಂದರೆ ಮೇಲ್ವರ್ಗದವರ ಕಣ್ಣಿಂದ ನೋಡದ, ಕಿವಿಯಿಂದ ಕೇಳದ, ಕೈಯಿಂದ ಮುಟ್ಟದ ಅಸ್ಪೃಶ್ಯರು ಅಥವಾ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದಲ್ಲಿ ಬರುವವರು." [೬೮]

"ದಲಿತರು ಎಂದರೆ ಯಾರು ಎಂಬ ಪ್ರಶ್ನೆಗೆ ಅನೇಕರು ಅನೇಕ ವಿಧವಾದ ಉತ್ತರಗಳನ್ನು ಸೂಚಿಸಲು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಎರಡನ್ನು ಪ್ರಮುಖವಾಗಿ ಗುರುತಿಸಬಹುದು. ಮೊದಲನೆಯದಾಗಿ ಜಾತಿಯಿಂದ ಕೀಳಾಗಿ ಕಂಡ ಯಾರು ಅಂಬೇಡ್ಕರ್‌ರನ್ನು ಸವರ್ಣೀಯರು ದೂರವಿರಿಸಿದರೋ ಅವರೆ ದಲಿತರೆನ್ನಬಹುದು. ಇಂದು ಸಾಮಾಜಿಕವಾಗಿ, ಆರ್ಥಿಕವಾಗಿ ತುಳಿತಕ್ಕೊಳಗಾಗಿರುವವರೆಲ್ಲರೂ ದಲಿತರು ಎನ್ನುವ ವಿವರಣೆ. ಈ ಎರಡೂ ರೀತಿಯ ವಿವರಣೆಗಳು ದಲಿತ ಸಾಹಿತ್ಯ ಚಳುವಳಿಕಾರರಲ್ಲಿಯೇ ಕಂಡು ಬಂದಿರುವುದುಂಟು. ಆದರೆ ಎಲ್ಲಾ ಜಾತಿಗಳಲ್ಲಿಯೂ ತುಳಿತಕ್ಕೊಳಗಾಗಿರುವವರೆಲ್ಲರನ್ನು ದಲಿತರು ಎಂದು ಕರೆದು 'ದಲಿತ' ಪದದ ವ್ಯಾಪ್ತಿಯನ್ನು ವಿಸ್ತರಿಸುವುದಕ್ಕಿಂತ ಈಗ ಅದು ಹುಟ್ಟಿ ಬೆಳೆದಿರುವ ಹಿನ್ನೆಲೆಯಲ್ಲಿ ಅದನ್ನು ಅಸ್ಪೃಶ್ಯ ಜನಾಂಗಕ್ಕೆ ಸೀಮಿತಗೊಳಿಸುವುದು ಚಾರಿತ್ರಿಕ ಅಧ್ಯಯನದ ದೃಷ್ಟಿಯಿಂದ ಸೂಕ್ತ ಎನಿಸುತ್ತದೆ.

'ದಲಿತ' ಎಂಬ ಪದ ನಿಷ್ಪತ್ತಿಯ ಬಗ್ಗೆ ಮೇಲಿನ ಎಲ್ಲಾ ವಿದ್ವಾಂಸರ ವ್ಯಾಖ್ಯಾನಗಳು ಪರಿಶೀಲಿಸಿದಾಗ ನಾವು ಈ ಕೆಳಗಿನಂತೆ ತೀರ್ಮಾನಕ್ಕೆ ಬರಬಹುದು.

* ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವವರೆಲ್ಲ ಅಸ್ಪೃಶ್ಯರು ದಲಿತರೆ.
* ಅಸ್ಪೃಶ್ಯರೂ ಸೇರಿದಂತೆ ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಅಂಬೇಡ್ಕರರ ಹಾಗೆ ಸಾಮಾಜಿಕ ಆರ್ಥಿಕ, ರಾಜಕೀಯ ರಂಗಗಳಲ್ಲಿ ಶೋಷಣೆಗೆ ಒಳಗಾದ ಜನರು ದಲಿತರಾಗುತ್ತಾರೆ.

ಎಲ್ಲಾ ಜಾತಿಗಳಲ್ಲಿಯೂ ಶೋಷಿಸಲ್ಪಟ್ಟವರು, ಬಡವರು ಅಂದರೆ ದಲಿತರು ಇದ್ದಾರೆಂಬ ಮತ್ತೊಂದು ವಾದವು ಸುಸಂಸ್ಕೃತ ವೇದಿಕೆಯಲ್ಲಿ ಆಗಾಗ ಕೇಳಿ ಬರುತ್ತಿದೆ. ಅಂದರೆ ಇಲ್ಲಿ ಶೋಷಣೆಗೆ ಒಳಗಾದವರೆಲ್ಲ ದಲಿತರು, ಎಂದಲ್ಲ. ಉದಾಹರಣೆಗೆ ಬ್ರಾಹ್ಮಣರಲ್ಲಿ ಅಥವಾ ಅದಕ್ಕೆ ಹತ್ತಿರವಾದ ಶೂದ್ರರಲ್ಲಿ ಒಬ್ಬ ಬಡವನಿದ್ದಾನೆ ಎಂಬ ಮಾತ್ರಕ್ಕೆ ಅವನು ದಲಿತನಾಗಲಾರ. ಆದರೆ ಕಾಲಾಂತರದಿಂದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಶೈಕ್ಷಣಿಕ ಶೋಷಣೆಗೆ ಒಳಗಾದ ಪಂಗಡ ಅಥವಾ ಜಾತಿ ಇದೆಯೋ ಅದು ಮಾತ್ರ ದಲಿತ ಎಂಬ ಪಟ್ಟಿಯಡಿಯಲ್ಲಿ ಬರುತ್ತದೆ. ಅಂಥಹವರಲ್ಲಿ ಹೊಲಯ, ಮಾದಿಗ, ಭಂಗೀ, ಮುಕ್ರಿ, ಆಗೇಕೆ, ಕೊರಮ ಮುಂತಾದ ಅಸ್ಪೃಶ್ಯರೆಲ್ಲರೂ ದಲಿತರಾಗಿದ್ದಾರೆ.

ನಿಘಂಟಿನಲ್ಲಿ ದಲಿತ ಪದದ ಕುರಿತು ಈ ರೀತಿಯಾದ ವಿವರಣೆ ಇದೆ.

ದಲ=ದಳ= 1. A part, aportion, a fragment
2. A leaf
3. A clump, alump, aheap, a quantity
4. A detechment, a body of men.
5. An adulterution or alloy

ದಲತ್= Burst, split etc, blown , spsitting etc.

ದಲನ್= Splitting, tearing asunder, breaking a to pieces, rendering etc.

ದಲಿತ= Burst, split etc, opened, unfolded, blown full blown.

(ಕಿಟಲ್‌ರವರ ಕನ್ನಡ-ಇಂಗ್ಲೀಷ್ ನಿಘಂಟು ೧೯೮೮, ೭೭೬

ಮೇಲೆ ವಿವರಿಸಿದಂತೆ ದಲಿತ ಪದದ ಕುರಿತಾಗಿರುವ 'ದಲತ್' 'ದಲನ್' ಮತ್ತು ದಲಿತ ಎಂಬ ಎಂಬ ಪದಗಳೆಲ್ಲವೂ 'ಒಡೆಯುವುದು' 'ಸೀಳುವುದು' 'ಹೋಳಾಗುವುದು' 'ತುಂಡುತುಂಡಾಗುವುದು' ಎಂಬ ಅರ್ಥಗಳನ್ನು ಹೊಂದಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು 'ದಲಿತ' ಪದಕ್ಕೆ ಕಿಟೆಲ್ ನೀಡಿರುವ ಅರ್ಥವನ್ನೇ ನೀಡಲಾಗಿದೆ.

ದಲ (ದಳ)- ೧. ಭಾಗ, ಚೂರು, ಅಂಶ, ಶಕಲ
೨. ಎಸಳು, ರೇಕು, ಪತ್ರ.
೩. ಗುಂಪು, ತಂಡ, ಸಮೂಹ.
೪. ಸೈನ್ಯ, ಪಡೆ

ದಲನ- ‘ಒಡೆಯುವಿಕೆ’ ‘ಸೀಳುವಿಕೆ’

ನಾಶಪಡಿಸುವಿಕೆ, ಹೋಗಲಾಡಿಸುವುದು.

ದಲಿತ (ದಳಿತ)- ೧. ಒಡೆದ, ಸೀಳಿದ

೨. ಅರಳಿದ, ವಿಕಸಿತವಾದ.

೩. ಹಿಂದುಳಿದುದು.

೪. ಹಿಂದುಳಿದವನು, ದಮನಕ್ಕೊಳಗಾದವನು.

ದಲಿತ ಜನ- ತುಳಿತಕ್ಕೊಳಗಾದವರು, ಶೋಷಿತ ಜನ, ದಮನಕ್ಕೆ ಒಳಗಾದವರು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಕೆಳಮಟ್ಟದಲ್ಲಿರುವವರು.

do. p.no 13g

ದಲಿತ ಪದದ ಕುರಿತಂತೆ ಮೇಲಿನ ಎಲ್ಲಾ ಅರ್ಥಗಳನ್ನು ಪರಾಮರ್ಶಿಸಿದಾಗ ಅದಕ್ಕೆ ಒಡೆದ, ಸೀಳಿದ. ಎಂಬ ಅರ್ಥಗಳೆ ಪ್ರಧಾನವಾಗಿ ಕಂಡು ಬರುತ್ತಿರುವುದು ಮೇಲಿನ ಅರ್ಥಗಳಿಂದ ತಿಳಿಯಬಹುದು. ಈ ಮೂಲ ಅರ್ಥವನ್ನೆ ಇಟ್ಟುಕೊಂಡು, ಅನಂತರ ಶೋಷಿತ, ತುಳಿಯಲ್ಪಟ್ಟ, ,ದಮನಕ್ಕೆ ಒಳಗಾದ, ಎಂಬ ವಿಸ್ತೃತ ಅರ್ಥಗಳನ್ನು ದಲಿತ ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ದಲಿತರು ಎಂದರೆ ಯಾರು ಎಂಬಲ್ಲಿ ವಿದ್ವಾಂಸರು ಇಂತಹ ವಿವಿಧ ವಿಸ್ತೃತ ಅರ್ಥಗಳ ಕಡೆಗೆ ಗಮನಹರಿಸಿದ್ದಾರೆ. ಮೇಲಿನ ವಿದ್ವಾಂಸರ ವಿವಿಧ ಅಭಿಪ್ರಾಯಗಳನ್ನು ಗಮನಿಸಿದಾಗ ಭಾರತದಲ್ಲಿ ದಲಿತರು ಸಮಾಜದ ಅತ್ಯಂತ ಕೊನೆಯ ಅಂಚಿನಲ್ಲಿರುವ ಸಮುದಾಯವಾಗಿದ್ದಾರೆ. ಈ ವಿದ್ವಾಂಸರು ಪ್ರಪಂಚದ ಬೇರಾವುದೆ ರಾಷ್ಟ್ರದಲ್ಲಿಯೂ ಕಾಣದಂತಹ ಅಸಮಾನತೆಯನ್ನು ಭಾರತೀಯ ಸಮಾಜದಲ್ಲಿರುವಂತ ಜಾತಿಯಲ್ಲಿ ವ್ಯವಸ್ಥೆಯನ್ನು ಆಧರಿಸಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಇದಕ್ಕೆ ಬೆನ್ನೆಲುಬಾಗಿ ಹಲವಾರು ವೇದ, ಪುರಾಣ, ಮಹಾಕಾವ್ಯ, ಸ್ಮೃತಿಗಳು, ತಾತ್ವಿಕ ನೆಲೆಯನ್ನು ಒದಗಿಸಿವೆ. ಇದಕ್ಕಿರುವ ಬಹುಮುಖ್ಯ ಕಾರಣ ಎಂದರೆ ಸಾವಿರಾರು ವರ್ಷಗಳ ಕಾಲ ಅನಿಯಮಿತವಾಗಿ ಪಾಲಿಸಿಕೊಂಡು ಬಂದಿರುವಂತಹ ಚಾತುರ್ವರ್ಣ ನೀತಿಯೂ ಭಾರತೀಯ ಸಮಾಜದಲ್ಲಿ ಜಾತಿ ವ್ಯವಸ್ಥೆಯೂ ಈ ಚರ್ತುವರ್ಣ ನೀತಿಯ ಆಧಾರದಡಿಯಲ್ಲಿಯೇ ಗಟ್ಟಿಯಾಗಿ ಬೇರೂರಿಕೊಂಡು ಬಂದಿರುವುದು. ಈ ಬಗೆಯ ಚಾತುರ್ವರ್ಣ ವ್ಯವಸ್ಥೆಯ ಮುಖ್ಯ ಗುರಿ ಎಂದರೆ ಮೇಲು-ಕೀಳು, ಉಚ್ಚ-ನೀಚ ಎಂಬ ವರ್ಗ ಸೃಷ್ಟಿಸಿ ನಿರಂತರವಾಗಿ ಶೋಷಣೆಗೆ ಒಳ ಮಾಡುವುದೆ ಆಗಿದೆ. ಈ ಬಗೆಯ ಶೋಷಣೆಯ ಒಂದು ಮುಖವೆ ಜಾತಿ ವ್ಯವಸ್ಥೆ. ಇದು ಆರಂಭದಿಂದಲೂ ತಳ ಸಮುದಾಯಗಳನ್ನು ತುಳಿಯುತ್ತಲೆ, ಶೋಷಿಸುತ್ತಲೆ ನಿರಾತಂಕವಾಗಿ ಬಂದಿದೆ. ತಳ ಸಮುದಾಯಗಳಿಗೆ ಕೆಳಮಟ್ಟದ ಕೀಳು ಕೆಲಸಗಳನ್ನು ನೀಡಿ ಅವರನ್ನು ಅಸ್ಪೃಶ್ಯರಾಗಿಸಲಾಯಿತು. ಊರನ್ನೆ ಸ್ವಚ್ಛಗೊಳಿಸುವ ಇವರಿಗೆ ಊರಿನಲ್ಲಿ ಪ್ರವೇಶವಿಲ್ಲ. ಮಲ ಹೊರುವುದು. ಊರಿನಲ್ಲಿ ಸತ್ತ ದನಗಳನ್ನು ಸಾಗಿಸುವುದು. ಸುದ್ದಿಯನ್ನು ತಿಳಿಸಲು ಹೋಗುವುದು. ಚರ್ಮ ಹದ ಮಾಡುವುದು. ಊರಿನಲ್ಲಿರುವ ಶೌಚ ಗೃಹಗಳನ್ನು ಸ್ವಚ್ಛಗೊಳಿಸುವುದು ಈ ಸಮುದಾಯಕ್ಕೆ ವ್ಯವಸ್ಥಿತವಾಗಿ ಸಿಕ್ಕಿತು. ಇಂತಹ

ಹೀನ ಕಾರ್ಯಗಳಿಗೆ ಒಳಗಾದ ಸಮುದಾಯ ಹತ್ತು ಹಲವು ಬಗೆಯಲ್ಲಿ ಮಾನವ ಸೌಕರ್ಯಗಳಿಂದಲೇ ದೂರ ಉಳಿಯಿತು.

ಜಾತಿ ಪದ್ಧತಿಯ ವಿಷಯ ಕೇವಲ ಆಧುನಿಕ ಸಮಾಜದಲ್ಲಿ ಮಾತ್ರ ಕಾಣದೇ ಹಿಂದಿನ ಭೂತ ಕಾಲದಲ್ಲಿಯೂ ಅದರ ಕರಾಳ ಛಾಯೆಗಳನ್ನು ನಾವು ಕಾಣಬಹುದು. ಹಿಂದೆ ಪೇಶ್ವೆಗಳ ಕಾಲಾವಧಿಯಲ್ಲಿ ದಲಿತನು ಊರಿನಲ್ಲಿ ಬರುವಾಗ ಕೊರಳಲ್ಲಿ ಒಂದು ಡಬ್ಬಿಯನ್ನು ಕಟ್ಟಿಕೊಂಡಿರಬೇಕಾಗಿತ್ತು. ಊರನ್ನು ಪ್ರವೇಶಿಸಿದಾಗ ಹೊಲಿಯ ಬರುತ್ತಿದ್ದಾನೆ ಎಂದು ಅದನ್ನು ಬಾರಿಸುತ್ತ ಬರಬೇಕು. ಹಾಗೇ ತನಗೆ ಉಗಳಲು ಭೂಮಿಯನ್ನು ಆಶ್ರಯಿಸದೆ ಆ ಡಬ್ಬದಲ್ಲಿಯೇ ಉಗಳಬೇಕು. ತನ್ನ ಬೆನ್ನಿನ ಹಿಂದೆ ಒಂದು ಪೊರಕೆಯನ್ನು ಸಹ ಅವನು ಹೊಂದಿರಬೇಕು ಕಾರಣ ಎಂದರೆ ಅವನು ನಡೆದಾಡಿದ ನೆಲ ಸ್ಪರ್ಶಿಸಿದರೆ ಸವರ್ಣೀಯರು ಮೈಲಿಗೆ ಆಗುತ್ತಾರೆಂದು ಸಾರ್ವತ್ರಿಕವಾಗಿ ಅಂದು ನಂಬಲಾಗಿತ್ತು. ದಲಿತರ ಬಗ್ಗೆ ಸಮಾಜ ತಾಳಿದ್ದ ಈ ಬಗೆಯ ನಿಕೃಷ್ಟ ನಿಲುವಿನಿಂದಲೇ ದಲಿತರು ಯಾವುದೇ ಬಗೆಯ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಶೈಕಣಿಕ, ಆರ್ಥಿಕ ಹಕ್ಕುಗಳನ್ನು ಬಯಸದೆ, ಸಾಂಪ್ರದಾಯಿಕವಾಗಿ ಶೋಷಣೆಗೆ ಒಳಗಾಗುತ್ತ, ಮೇಲ್ಜಾತಿಗಳ ವಿಧಿಸಿದ್ದ ನಿರ್ಬಂಧಗಳನ್ನು ಪ್ರಶ್ನಿಸಿದೆ. ಅತ್ಯಂತ ಅಮಾನವೀಯಕರ, ಅಸಹ್ಯಕರವಾದಂತಹ ಜೀವನ ದಲಿತರಿಗೆ ಒದಗಿ ಬಂದಿತು. ಇಂತಹ ವೈಪರಿತ್ಯವೇ ಸಾಮಾಜಿಕ ಜೀವನದಲ್ಲಿರುವ ಏಣಿ ಶ್ರೇಣಿ ವ್ಯವಸ್ಥೆಗೆ ಮೂಲ ಕಾರಣ ಎಂದು ಹಲವಾರು ಚಿಂತಕರ ಅಭಿಪ್ರಾಯವಾಗಿದೆ.

ಮೇಲು ಕೀಳು ಎಂಬ ಶ್ರೇಷ್ಠತೆ ಚಿಂತನೆಯೂ ಧರ್ಮಾಧಾರಿತವಾದ ತಳಹದಿಗೆ ಅತ್ಯಂತ ಪೂರಕವಾಗಿರುವುದು. ಏಕೆಂದರೆ "ಧರ್ಮ ಗ್ರಂಥಗಳೇ ಸಾಮಾಜಿಕ, ರಾಜಕೀಯ ಆಚಾರ ವಿಚಾರಗಳನ್ನು ನಿಯಂತ್ರಿಸುವ ಸಾಧನಗಳಾಗಿರುವುದರಿಂದ ಇತರ ಎಲ್ಲಾ ಸ್ಪೃಶ್ಯ, ಅಸ್ಪೃಶ್ಯ ಜಾತಿ ವರ್ಣಗಳನ್ನು ತಮ್ಮದೇ ಆದ ನಿಯಮಗಳ ಪ್ರಕಾರ ನಡೆಸಿಕೊಳ್ಳುವ ಅಧಿಕಾರ ಮೇಲ್ವರ್ಗದವರ ಕೈಗೆ ಬಂದಿತು. ಹೀಗಾಗಿ ಭಾರತೀಯ ಸಮಾಜ ಕಳೆದ ಎರಡು ಮೂರು ಸಾವಿರ ವರ್ಷಗಳ ಇತಿಹಾಸ ಎಂದರೆ ಉಚ್ಚ ವರ್ಣಿಯರಿಂದ ನಿಮ್ನ ವರ್ಣಿಯರ ಶೋಷಣೆಯ ಇತಿಹಾಸವಾಗಿದೆ." ಎಂದು ಅಂಬೇಡ್ಕರರು ಅಭಿಪ್ರಾಯ ಪಡುತ್ತಾರೆ. ಜಾತೀಯತೆ ಮತ್ತು ಅಸ್ಪೃಶ್ಯತೆ ನಿರಂತರವಾಗಿ ಒಂದನ್ನೊಂದು ಬಿಟ್ಟಿರದೆ ನಿರಂತರವಾಗಿ ಶೋಷಣೆಯನ್ನೆ ತನ್ನ ಕಾರ್ಯ ಸ್ಥಾನವನ್ನಾಗಿ ಮಾಡಿಕೊಂಡಿವೆ. ಅಸ್ಪೃಶ್ಯತೆಯ ಕರಾಳ ಮುಖಗಳು ಒಂದು ಸಮೂಹವನ್ನೇ ಮನುಕುಲದಿಂದ ದೂರ ತಳ್ಳಿದೆ. ಆದ್ದರಿಂದ ಡಾ.ಅಂಬೇಡ್ಕರರು ಇಂತಹ ನಿಲುವನ್ನು ಕಂಡೆ ಜಾತಿ ಪದ್ಧತಿಯ ಎಂಬ ರಾಕ್ಷಸಿ ಮಾತೆಯ ಕುರೂಪಿ ಶಿಶುವೇ ಅಸ್ಪೃಶ್ಯತೆ ಎಂದು ಕರೆದಿದ್ದಾರೆ.

ಜಾತಿಯಾಧಾರಿತವಾದ ಈ ರಾಷ್ಟ್ರದಲ್ಲಿ ತಟ್ಟತಳಜಾತಿಗಳಿಗೆ ಸೇರಿದವರೆಂದರೆ ದಲಿತರು. ಜಾತಿ ಎಂಬ ಕಾರಣದಿಂದಲೇ ಅವರು ಅಸ್ಪೃಶ್ಯತೆ ಎಂಬ ಶೋಷಣೆಯನ್ನು ಅನುಭವಿಸುವಂತಾಗಿದೆ. ಸಮಾಜದ ಮೇಲ್ವರ್ಗದ ಜನರಿಗೆ ಇದೊಂದು ಪಾರಂಪರಿಕ ಆಚರಣೆಯಾಗಿ ಇರಬಹುದು. ಯಾಕೆಂದರೆ ಜಾತಿಯನ್ನು ಆಚರಿಸುವಿಕೆಯಲ್ಲಿ ಅವರ [illegible] ದೊಡ್ಡಸ್ತಿಕೆಯಿಂದಲೇ ಕೂಡಿರುತ್ತವೆ. ಭಾರತದಲ್ಲಿ ಹಲವಾರು ದಾರ್ಶನಿಕರು, ಚಿಂತಕರು, ಬುದ್ಧಿಜೀವಿಗಳು, ಸಮಾಜ ಸುಧಾರಕರು ಜಾತಿಯನ್ನು ಕಿತ್ತೊಗೆದು ಹಾಕಲು ಎಷ್ಟೆ ಪ್ರಯತ್ನಿಸಿದರೂ ಸಾಧ್ಯವಾಗಲೇ ಇಲ್ಲ.

ಎಂಬುದು ಇತಿಹಾಸ. ಮುಸಲ್ಮಾನಿಯರ ಆಡಳಿತವಾಗಲಿ, ಬ್ರಿಟೀಷ್ ಆಡಳಿತವಾಗಲಿ, ಕೈಗಾರಿಕಾ ಕ್ರಾಂತಿ, ಮಾರ್ಕ್ಸ್‌ವಾದಿ ಕ್ರಾಂತಿಯಾಗಲಿ ಇವನ್ನು ತೊಡೆದು ಹಾಕಲು ಸೋತಿರುವುದು ಮಾತ್ರ ದಿಟ. ಏಕೆಂದರೆ ಇವು ಜಾತಿ ಪದ್ಧತಿಯ ನಿರ್ಮೂಲನೆಗೆ ಪ್ರಾಮಾಣಿಕವಾದ ಪ್ರಯತ್ನವನ್ನೇ ಮಾಡಿಲ್ಲ. ಅಲ್ಲದೆ ಆಧುನಿಕ ಜೀವನದಲ್ಲಿ ನಮ್ಮನ್ನು ಆಳುತ್ತಿರುವ ರಾಜಕೀಯ ಪಕ್ಷಗಳು ಇದ್ದರೆ ಇದರ ಶೋಷಣೆಗೆ ಬಲಿಯಾಗುತ್ತಿರುವವರ ಪ್ರಮಾಣ ೨೫ ಕ್ಕಿಂತ ಕಡಿಮೆಯಲ್ಲದ ದಲಿತರು "ಜಾತಿಯತೆಯ ಬೇರನ್ನು ಬಿಡಿಸುವುದು ಅದರ ಬುಡಮೇಲು ಮಾಡುವುದು ಸುಲಭವಾದ ಕಾರ್ಯವಲ್ಲ. ಆದ್ದರಿಂದ ಈಸಮಾಜದಲ್ಲಿಯ ಜನರ ಮಾನಸಿಕ ಬದಲಾವಣೆಯಿಂದ ಮಾತ್ರ ಈಸಮಾಜದಲ್ಲಿಯ ವ್ಯವಸ್ಥೆಯನ್ನು ಮುರಿಯಬಹುದು." [೬೦]

ಹಿಂದಿನಿಂದಲೂ ಜಾತಿಯಲ್ಲಿನ, ಅವರ್ಣಿಯ, ಸವರ್ಣಿಯ ಎಂಬ ಕ್ರಮಗಳನ್ನು ನಿರ್ಮೂಲನೆ ಮಾಡಲು ಹಲವಾರು ಚಿಂತಕರು ಶ್ರಮಿಸಿದ್ದಾರೆ. ಡಾ.ಬಿ.ಆರ್. ಅಂಬೇಡ್ಕರ್, ಲೋಹಿಯಾ, ಗಾಂಧೀಜಿ, ಜ್ಯೋತಿ ಬಾಪುಲೆ, ಶಾಹು ಮಹಾರಾಜ, ಬಸವಣ್ಣ ಹೀಗೆ ಪಟ್ಟಿಯನ್ನು ನಾವು ಮುಂದುವರೆಸಬಹುದಾದರೂ ಪರಿಸ್ಥಿತಿ ಮಾತ್ರ ಸುಧಾರಿಸಲೇ ಇಲ್ಲ. ಇಷ್ಟೆಲ್ಲ ನಡೆದಾಗ್ಯೂ ನಮ್ಮಲ್ಲಿ ಇಂದಿಗೂ ಅಸ್ಪೃಶ್ಯತೆಯೂ ಸಂಪೂರ್ಣವಾಗಿ ಅಳಿದಿಲ್ಲ. ಹಾಗೆಯೇ ದಲಿತರ ಪರಿಸ್ಥಿತಿಯೂ ಸುಧಾರಿಸಿಲ್ಲ. ಆಧುನಿಕ ಕಾಲದಲ್ಲಿ ಪ್ರತಿಭಟನೆಯನ್ನು ಬಿಟ್ಟರೆ ಬೇಕಾದುದು ಸಾಮಾಜಿಕ ಕ್ರಾಂತಿ ನಡೆಯಲಿಲ್ಲ.

"ಪ್ರಾಥಮಿಕ ಹಂತದಲ್ಲಿ ಜಾತಿ ಎಂದರೆ ಆರ್ಥಿಕವಾದ ವರ್ಗವೆ ಆಗಿದೆ." ಎಂದು ಪ್ರಸಿದ್ಧ ಚರಿತ್ರೆ ವಿದ್ವಾಂಸರಾದ ಡಿ.ಡಿ. ಕೋಸಾಂಬಿಯವರು ಅಭಿಪ್ರಾಯ ಪಡುತ್ತಾರೆ. ಚರಿತ್ರೆಯಲ್ಲಿ ಉಂಟಾದ ಯಾವುದೇ ವ್ಯವಸ್ಥೆ ಅಥವಾ ಸಮಾಜದ ಸಂಗತಿಗಳು ನಿರುದ್ದೇಶ, ನಿರರ್ಥಕವಾಗಿ ಉಂಟಾಗುವುದಿಲ್ಲ. ಹೀಗಾದಾಗ ಜಾತಿ ಎಂಬ ಸಂಸ್ಥೆಯೂ ಸಹ ಸಮಾಜದ ಬೆಳವಣಿಗೆಯ ಹಂತದಲ್ಲೇ ಉಂಟಾದವು. ಆದರೆ ಒಂದು ಕಾಲದಲ್ಲಿ ಉಂಟಾದ ಯಾವುದೇ ವ್ಯವಸ್ಥೆಯೂ ಎಲ್ಲಾ ಕಾಲದಲ್ಲೂ ಸಲ್ಲುತ್ತಿದೆ ಎಂದಲ್ಲ. ಆಗ ಅದರ ನಾಶವಾಗುತ್ತಿದೆ. ಅದರ ವಿನಾಶ ಸರಳವಾದ ಸಮಾರಂಭವಲ್ಲ, ಅಥವಾ ಯಾವುದೇ ಒಂದು ಶುಭ ಪ್ರಾತಃ ಕಾಲ ಜಾತಿ ವ್ಯವಸ್ಥೆ ನಾಶವಾಯಿತು ಎಂದು ಸಾರಲಾಗುವುದಿಲ್ಲ. ಹಾಗೇ ನಮ್ಮ ಸಂವಿಧಾನದಲ್ಲಿ ಅಸ್ಪೃಶ್ಯತೆಯನ್ನು ನಾಶಮಾಡಲಾಗಿದೆ ಎಂದು ಘೋಷಿಸಲಾಗಿದೆಯಾದರೂ ಇಂದಿಗೂ ಅದರ ಮೇಲೋತ್ಪಾಟನೆ ಸಾಧ್ಯವಾಗೇ ಇಲ್ಲ. ಜಾತಿ ಪದ್ಧತಿಯ ಕರಾಳ ಮುಖಗಳನ್ನು ಅಳಿಸಲು ಡಾ.ಬಿ.ಆರ್. ಅಂಬೇಡ್ಕರರು ನಿರಂತರವಾಗಿ ಹೋರಾಟ ಮಾಡಿ ಯಶಸ್ವಿಯಾದರೂ. ಆದರೆ ಅವರು ಸಹ ಮೇಲ್ವರ್ಗದ ರಾಜಕೀಯ ಧುರೀಣರ ಕುತಂತ್ರಗಳಿಗೆ ಬಲಿಯಾಗಬೇಕಾಯಿತು.

ಅನ್ಯ ಸಮಾಜಗಳಲ್ಲಿ ಗುಲಾಮಗಿರಿಯ ವಿರುದ್ಧ ಹೋರಾಟಗಳು ನಡೆದಿವೆ. ಆಕಾರಣದಿಂದಲೇ ಅಲ್ಲಿ ಗುಲಾಮಗಿರಿ ನಾಶವಾಗಿರುವುದು. ಬಹುಮಟ್ಟಿಗೆ ಅದು ನಾಶವೆ ಆಗಿದೆ. ಆದರೆ ಭಾರತದಲ್ಲಿ ಜಿವ್ವಾಗಿರುವ ಜಾತಿ ಪದ್ಧತಿಯೂ ನಾಶವಾಗದಿರಲೂ ಕಾರಣ ಎಂದರೆ ಧರ್ಮಗಳ ಬೆಂಬಲ. ಇದಕ್ಕೆ ಅಂಬೇಡ್ಕರರ ವಿವರಣೆ ಹೀಗಿದೆ. "ಜಾತಿ ಪದ್ಧತಿಯನ್ನು ಸಮರ್ಥಿಸುವ ಶಾಸ್ತ್ರಗಳನ್ನು ಜಾತೀಯ ಹಿಂದೂಗಳು ಸದಾ ಆರಾಧಿಸುತ್ತಲೇ ಬಂದಿರುವುದು. ಹಾಗೆಯೇ ಜಾತೀಯ ಹಿಂದೂಗಳು ಜಾತಿ ವ್ಯವಸ್ಥೆಯನ್ನು ಪ್ರತಿಪಾದಿಸುವ ಧೈವಿಕ ಶಾಸ್ತ್ರಗಳನ್ನು

ಪ್ರಶ್ನಾತೀತವಾಗಿ ಆರಾಧಿಸುವುದಕ್ಕೆ ಕಾರಣಗಳೇನು? ಕಾರಣವಿಷ್ಟೆ ಜಾತೀಯ ಹಿಂದೂಗಳಿಗೆ ಜಾತಿಯೇ ಅವರ ಧರ್ಮ, ಅವರ ಆ ಧರ್ಮಕ್ಕೆ ಹಿಂದೂಗಳು ತಮ್ಮ ಜಾತಿಗಳನ್ನು ಮಾತ್ರ ಗೌರವಿಸುವುದಾಗಲಿ, ತಮ್ಮ ಜಾತಿಗಳ ಸಂರಕ್ಷಣೆಯ ಹೋರಾಟಕ್ಕೆ ಅವರು ಸಜ್ಜಾವಾಗಲಿ ಅದು ಆಶ್ಚರ್ಯದ ವಿಷಯ ಎನಿಸುವುದು, ಸಾಧ್ಯವಿರುವಂತಿಲ್ಲ. ತಮ್ಮ ಜಾತಿ ವ್ಯವಸ್ಥೆ ದೈವ ನಿಯಮ. ಎಂದು ಜಾತಿಯ ಹಿಂದೂಗಳು ನಂಬಿರುವುದಕ್ಕೆ ಮೂಲಕಾರಣ ಅವರ ಜಾತಿಗಳನ್ನು ಅವುಗಳನ್ನು ಪ್ರತಿಪಾದಿಸುವ ಅವರ ಧರ್ಮ ಗ್ರಂಥಗಳಿಗೂ ಅವರ ದೇವತೆಗಳ ಮನ್ನಣೆ, ಅನುಮತಿ ಇದೆ ಎಂದು ನಂಬಿದ್ದಾರೆ." [೭೨]

ಆಧುನಿಕ ಭಾರತದಲ್ಲಿ ಸಮಾನತೆಯನ್ನು ಸಾಧಿಸುವ ಸದುದ್ದೇಶದಿಂದ ಸಂವಿಧಾನ ನಿರ್ಮಾತೃಗಳು ದಲಿತರ ಏಳಿಗೆ, ಅಭಿವೃದ್ಧಿ ರಾಜಕೀಯ, ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕವಾಗಿ ಮುಂದುವರೆಯಲು ಹಲವಾರು ಮೀಸಲಾತಿ, ಸೌಲತ್ತುಗಳನ್ನು ಕೊಟ್ಟಿತು. ಇದರ ಮೂಲಭೂತ ಉದ್ದೇಶ ಎಂದರೆ ದಲಿತರು ಸಾಮಾಜಿಕ ಮುಖ್ಯ ನೆಲೆಗೆ ಬರಲು ಸಹಾಯಕವಾಗಲೆಂದು. ಹಿಂದಿನಿಂದಲೂ ಬಡತನ, ಅಸ್ಪೃಶ್ಯತೆ ಜಾತೀಯತೆಯೆಂಬ ಕೂಪದೊಳಗೆ ನರುಳುತ್ತಿದ್ದ ದಲಿತ ಸಮುದಾಯಕ್ಕೆ ಇವರಿಂದ ಒಂದು ರೀತಿಯಲ್ಲಿ ಆಶಾಕಿರಣವೂ ಮೂಡಿತು. ಸರಕಾರ ಮೀಸಲಾತಿ ಎಂಬ ತತ್ವದಡಿಯಲ್ಲಿ ದಲಿತರಿಗೆ ವಿಶೇಷ ಸೌಲಭ್ಯ, ಸೌಕರ್ಯಗಳನ್ನು ನೀಡಿತು. ಆದರೆ ಸರಕಾರ ನೀಡಿದ ಸೌಲತ್ತುಗಳು ನಿರೀಕ್ಷಿತ ಪ್ರಮಾಣದಲ್ಲಿ ದಲಿತರ ಏಳಿಗೆ ಆಗದೆ ಇರಲು ಕಾರಣ ಹತ್ತು ಹಲವು. ಮೀಸಲಾತಿಯ ವಿಷಯದಲ್ಲಿ ಸಂವಿಧಾನ ಆಡಳಿತಾತ್ಮಕ ಕಾನೂನುಗಳನ್ನು ಅಡಕಗೊಳಿಸಿದೆ. ಆದರೆ ನೀಡುವುದಕ್ಕೆ ಮತ್ತು ನಿರ್ದೇಶನ ಮಾಡುವ ಮನಸ್ಸುಗಳು ಎಲ್ಲವೂ ಕಲುಷಿತಗೊಂಡಿವೆ. ಭಾರತದ್ಯಾಂತ ಮೀಸಲಾತಿ ಕೇವಲ ದಲಿತರ ಪರವಾದ ಘೋಷಣೆಯ ಅಸ್ಪಷ್ಟವಾಯಿತು. ಇವರ ನೈಜ ಅಭಿವೃದ್ಧಿ ಮಾತ್ರ ಕುಂಠಿತವಾಗುತ್ತಲೇ ಇದೆ. ಕೇವಲ ಇದೊಂದು ವರ್ಗದ ಕತೆಯಲ್ಲ ದೇಶವಿಂದು ಅನುಭವಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಇದೊಂದು, ದೇಶದ ಜನರು ಇಂದಿಗೂ ಸಾಂಪ್ರದಾಯಿಕ ಮನೋಭಾವನೆಯಿಂದ ಹೊರಗೆ ಬಂದಿಲ್ಲ. ದೇಶದ ಜನರ ಬದುಕಿನ ಆಯಾಮಗಳೆಲ್ಲವೂ ವ್ಯಕ್ತಿ ಮತ್ತು ದೇವರ ಆಧಾರದ ಮೇಲೆ ನಿರ್ಧರಿಸಲ್ಪಡುತ್ತಲೇ ಇದೆ.

ಪ್ರಸ್ತುತ ಅಧ್ಯಯನ ವಿಷಯದ ವ್ಯಾಪ್ತಿಯೂ ಗ್ರಾಮೀಣ ಭಾಗದಲ್ಲಿಯ ದಲಿತರ ಸ್ಥಿತಿಯನ್ನು ಅರಿಯುವ ಚಿಂತನೆಯನ್ನು ಹೊಂದಿರುವುದರಿಂದ ಗ್ರಾಮೀಣ ದಲಿತರ ಬಗ್ಗೆ ಸ್ವಲ್ಪ ಚರ್ಚಿಸುವುದು ಸೂಕ್ತ ಎಂಬುದು ನನ್ನ ಅಭಿಪ್ರಾಯ. ಗ್ರಾಮೀಣ ಭಾಗಗಳಲ್ಲಿ ಜಾತಿಗಳಿಗೆ ಸಂಬಂಧಿಸಿದಂತೆ ವಿಣಿಶ್ರೇಣಿ. ಉಚ್ಚನೀಚ ಎಂಬ ಮಟ್ಟವು ಸ್ಥೂಲವಾಗಿ ಭೂಮಿಗಿಂತ ಹೆಚ್ಚು. ವಿದ್ಯೆ ವ್ಯಾಪಾರಕ್ಕಿಂತ ಹೆಚ್ಚು. ಭೂಮಿಗೆ ಕೈ ಕಸುಬಿಗಿಂತ ಹೆಚ್ಚು ವ್ಯಾಪಾರಕ್ಕೆ, ದೈಹಿಕ ಶ್ರಮಕ್ಕಿಂತ ಹೆಚ್ಚು ಕೈಕಸುಬಿಗೆ ಮತ್ತು ಅಸಹ್ಯಕರವಾದ ಕೆಲಸಕ್ಕಿಂತ ಹೆಚ್ಚು ದೈಹಿಕ ಶ್ರಮಕ್ಕೆ ನೀಡಿರುವ ಆದ್ಯತೆಯೂ ಕ್ರಮಾನುಸಾರವಾಗಿರುತ್ತದೆ. ಎಂದು ನ್ಯಾಯಮೂರ್ತಿ ಶ್ರೀಚನ್ನಬಸಪ್ಪರೆಡ್ಡಿ ಅಭಿಪ್ರಾಯ ಪಟ್ಟಿದ್ದಾರೆ. ಹಿಂದೂ ಜನರ ಶೋಷಣೆಗೆ ತಿಲಾಂಜಲಿ ಹಾಡಲೆಂದು ಅನ್ಯ ಧರ್ಮಗಳಿಗೆ ವಲಸೆ ಹೋದ ದಲಿತರೂ ಅಲ್ಲಿಯೂ ತಾರತಮ್ಯ ಅನುಭವಿಸುತ್ತಿದ್ದಾರೆ. ಎಲ್ಲರಂತೆ ದಲಿತರು ಇಂದಿಗೂ ಸಾಮಾಜಿಕ ಜೀವನದೊಂದಿಗೆ ಬೆರೆಯದೆ ಬೇರೆಯಾಗಿ ಒಂದು ರೀತಿಯ ಅಪ್ರಕಟಿತವಾದ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗಿದ್ದಾರೆ.

## ಟಿಪ್ಪಣಿಗಳು

೧. ವಸಂತದೇವಿ ಹೆಚ್.ಕೆ., ಪುಟ. ೭೬, ೨೦೦೫,

೨. ಲೋಹಿತಾಶ್ವ ಹೆಚ್.ಎಸ್. ಪುಟ. ೪೩, ೨೦೦೩,

೩. ಲೋಹಿತಾಶ್ವ ಹೆಚ್.ಎಸ್. ಪುಟ. ೪೬ ೨೦೦೩,

೪. ವಿಜಯಾದುಬೆ. ಪುಟ. ೭೦, ೧೯೯೯,

೫. ರಾಜಶೇಖರ ವಿ.ಪಿ. ಪುಟ. ೦೫, ೨೦೦೫,

೬. ಎಂ. ಉಷಾ, ಪುಟ. ೨೩, ೨೦೦೫,

೭. ಜ್ಯೋತಿ ಶಿಶಿಕುಮಾರ, ಪುಟ. ೭೫, ೨೦೦೫,

೮. ಹೇಮಲತಾ ಹೆಚ್.ಎಂ., ಪುಟ. ೭೫, ೨೦೦೪,

೯. ಮಂಗಳಾ ಪ್ರಿಯದರ್ಶಿನಿ, ಪುಟ. ೭೫, ೨೦೦೭,

೧೦. ಎಂ. ಉಷಾ. ಪುಟ. ೩೩, ೨೦೦೬

೧೧. ಬರಗೂರು ರಾಮಚಂದ್ರಪ್ಪ, ಪುಟ. ೩೪೯, ೨೦೦೬

೧೨. ನಂಜುಂಡಸ್ವಾಮಿ, ಎಂ. ಪುಟ. ೩೯೩ ೨೦೦೪

೧೩. ಡಾ.ಬಿ.ಆರ್.ಅಂಬೇಡ್ಕರ್ ಬರಹಗಳು ಭಾಷಣಗಳು ಪುಟ. ೯೯

೧೪. ಡಾ.ಬಿ.ಆರ್.ಅಂಬೇಡ್ಕರ್ ಬರಹಗಳು ಭಾಷಣಗಳು ಪುಟ. ೧೦೯

೧೫. ಡಾ.ಬಿ.ಆರ್.ಅಂಬೇಡ್ಕರ್ ಬರಹಗಳು ಭಾಷಣಗಳು ಪುಟ. ೨೦೪

೧೬. ವೀರಯ್ಯ ಡಿ.ಎಸ್. ಪುಟ. ೬೦, ೨೦೦೫

೧೭. ಲೋಹಿತಾಶ್ವ ಹೆಚ್.ಎಸ್. ಪುಟ. ೪೩, ೨೦೦೩

೧೮. ಲೋಹಿತಾಶ್ವ ಹೆಚ್.ಎಸ್. ಪುಟ. ೨೦

೧೯. ವಸಂತ ಪಾಟೀಲ. ಪುಟ. ೨೦, ೧೯೮೦

೨೦. ವಸಂತ ಪಾಟೀಲ. ಪುಟ. ೩೧, ೧೯೮೦

೨೧. ವಸಂತ ಪಾಟೀಲ. ಪುಟ. ೩೧, ೧೯೮೦

೨೨. ವಸಂತ ಪಾಟೀಲ. ಪುಟ ೩೨, ೧೯೮೦

೨೩. ವಸಂತ ಪಾಟೀಲ. ಪುಟ ೩೨, ೧೯೮೦

೨೪. ವಸಂತ ಪಾಟೀಲ. ಪುಟ ೩೪, ೧೯೮೦

೨೫. ಯರ್ರಿಸ್ವಾಮಿ ಎಂ. ಪುಟ ೨೦೦೨

೨೬. ಯರ್ರಿಸ್ವಾಮಿ ಎಂ. ಪುಟ. ೪೦, ೨೦೦

೨೭. ಯರ್ರಿಸ್ವಾಮಿ ಎಂ. ಪುಟ. ೪೦, ೨೦೦೪

೨೮. ಯರ್ರಿಸ್ವಾಮಿ ಎಂ. ಪು. ೪೦, ೨೦೦೪

೨೯. ಯರ್ರಿಸ್ವಾಮಿ ಎಂ. ಪು. ೪೦, ೨೦೦೮

೩೦. ಮುನಿವೆಂಕಟಪ್ಪ. ವಿ. ಪುಟ. ೧೦೧, ೨೦೦೬

೩೧. ಮುನಿವೆಂಕಟಪ್ಪ. ವಿ. ಪುಟ. ೧೦೯, ೨೦೦೬

೩೨. ಗಾಯಿತ್ರಿ ನಾವಡ. ೨೦೦೦

೩೩. ಭಾಸ್ಕರ ಡಿ.ಎಂ. ೨೦೦೬

೩೪. ಶ್ರೀಮತಿ ಎಚ್.ಎಸ್. ಪುಟ. ೨೮೫, ೨೦೦೧

೩೫. ಶ್ರೀಮತಿ ಎಚ್.ಎಸ್. ಪುಟ. ೨೮೫, ೨೦೦೧

೩೬. ಶ್ರೀಮತಿ ಎಚ್.ಎಸ್. ಪುಟ. ೨೮೫, ೨೦೦೧

೩೭. ಎಂ. ಉಷಾ, ಪುಟ. ೩೯, ೨೦೦೪

೩೮. ಎಂ. ಉಷಾ, ಪುಟ. ೪೬, ೨೦೦೪

೩೯. ವಸಂತಮ್ಮ ಎಚ್.ಎಮ್. ಪುಟ. ೧೧ ೨೦೦೫

೪೦. ಗಾಯಿತ್ರಿ ನಾವಡ ಪುಟ. ೪೮, ೨೦೦೦

೪೧. ರತ್ನಮ್ಮ ಕೆ.ಎಸ್. ೨೦೦೫

೪೨. ಭಾ.ಮ. ರಾಜಕುಮಾರಿ, ೨೦೧

೪೩. ಮಹಾದೇವಯ್ಯ (ಸಂ) ೨೦೦೫

೪೪. ಮಹಾದೇವಯ್ಯ (ಸಂ) ೨೦೦೫

೪೫. ಮ.ನ. ಜವರಯ್ಯ, ಪುಟ. ೧೬, ೨೦೦೫

೪೬. ಮ.ನ. ಜವರಯ್ಯ, ಪುಟ. ೨೦, ೨೦೦೫

೪೭. ಮುಸಾಫರ್ ಆಸಾಧಿ, ಪುಟ. ೫೪. ೨೦೦೫

೪೮. ಮೊಗಳ್ಳಿ, ಪುಟ. [illegible]. ೨೦೦೫

೪೯. ಚಂದ್ರಶೇಖರ ಟಿ.ಆರ್. ೧೦೨.೨೦೦೫

೫೦. ಮಂಗಳಾ ಪ್ರಿಯದರ್ಶಿನಿ, ೨೦೦೭

೫೧. ಚಂದ್ರಶೇಖರ ಟಿ.ಆರ್. ೨೦೦[illegible]

೫೨. [illegible]

೫೩. ಮೊಗಳ್ಳಿ, [illegible]

೫೪. ಶೈಲಜ ಹಿರೇಮಠ, ಪುಟ.೨೭, ೨೦೦೩

೫೫. ಡೊಮಿನಿಕ್ ಡಿ. ಪುಟ. ೧೪೭, ೨೦೦೩

೫೬. ಎಂ. ಉಷಾ. ಪುಟ. ೩೦, ೨೦೦೫

೫೭. ಶೈಲಜ ಹಿರೇಮಠ, ಪುಟ. ೩೨, ೨೦೦೩

೫೮. ಶೈಲಜ ಹಿರೇಮಠ, ಪುಟ. ೩೫, ೨೦೦೩

೫೯. ಶೈಲಜ ಹಿರೇಮಠ, ಪುಟ. ೩೬, ೨೦೦೩

೬೦. ಶೈಲಜ ಹಿರೇಮಠ, ಪುಟ ೫೦

೬೧. ಡಾ.ಅಂಬೇಡ್ಕರ್ ಬರಹಗಳು, ಭಾಷಣಗಳು, ೨೯.೧೯೯೯

೬೨. ಬರಗೂರ ರಾಮಚಂದ್ರಪ್ಪ, ಪುಟ. ೩೮೪, ೨೦೦೫

೬೩. ಬರಗೂರ ರಾಮಚಂದ್ರಪ್ಪ, ಪುಟ. ೪೨೯, ೨೦೦೫

೬೪. ವಜ್ರಮೆಟ್ಟಿ ಪಿ.ವಿ. ಪುಟ. ೧೩೩, ೧೯೮೦

೬೫. ವಜ್ರಮೆಟ್ಟಿ ಪಿ.ವಿ. ಪುಟ. ೧೮೧, ೧೯೮೦

೬೬. ವಜ್ರಮೆಟ್ಟಿ ಪಿ.ವಿ. ಪುಟ. ೧೮೧, ೧೯೮೦

೬೭. ಹರವೆ ದೇವಯ್ಯ ೧೯೯೧

೬೮. ಚನ್ನಣ್ಣ ವಾಲಿಕಾರ, ೧೯೯೩

೬೯. ವೀರಣ್ಣ ಸಿ, ೧೯೮೩

೭೦. ವೀರಣ್ಣ ಸಿ, ಪುಟ. ೧೩

೭೧. ವೀರಯ್ಯ ಡಿ.ಎಸ್. ಪುಟ. ೩೪, ೨೦೦೫

೭೨. ಜವರಯ್ಯ ಮ.ನ. ಪುಟ. ೧೭೩, ೧೯೯೯

ಅಧ್ಯಾಯ-ಮೂರು

## ಪಂಚಾಯತ್ ರಾಜ್ ವ್ಯವಸ್ಥೆ ಮತ್ತು ದಲಿತ ಮಹಿಳಾ ಪ್ರತಿನಿಧೀಕರಣ

# ಅಧ್ಯಾಯ-ಮೂರು

## ಪಂಚಾಯತ್ ರಾಜ್ ವ್ಯವಸ್ಥೆ ಮತ್ತು ದಲಿತ ಮಹಿಳಾ ಪ್ರತಿನಿಧೀಕರಣ

### ೩.೧. ಪಂಚಾಯತ್‌ರಾಜ್ ವ್ಯವಸ್ಥೆ

ಪ್ರಪಂಚದಲ್ಲಿಯೆ ಅತ್ಯಂತ ದೊಡ್ಡ ಪ್ರಜಾಪ್ರಭುತ್ವವಾದಿ ರಾಷ್ಟ್ರ ಎಂಬ ಖ್ಯಾತಿಗೆ ಒಳಗಾಗಿರುವ ಭಾರತವು ತನ್ನ ಸಂವಿಧಾನದ ಆಶಯಗಳಲ್ಲಿ ಸಮಾಜವಾದಿ ರಾಷ್ಟ್ರದ ಕನಸನ್ನು ಸಾಕಾರಗೊಳಿಸಿಕೊಳ್ಳಲು ಹಲವಾರು ಬಗೆಯ ಉದ್ದೇಶಗಳನ್ನೊಳಗೊಂಡಿದೆ. ಇವರ ಮೂಲಕ ಪ್ರತಿಯೊಬ್ಬ ಪ್ರಜೆಯ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸುವುದು. ಹಾಗೆಯೇ ಸಮಾಜದ ವಿವಿಧ ವರ್ಗಗಳ ನಡುವಿನ ಕಂದಕಗಳನ್ನು ಮುಚ್ಚಿಸಲು, ಸಮಾನತೆಯ ತತ್ವ ಸಾಕಾರಿಯಾಗಲು ಸಂವಿಧಾನಬದ್ಧವಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಮನ್ನಣೆ ನೀಡಲಾಗಿದೆ. ಭಾರತ ಅಳವಡಿಸಿಕೊಂಡಿರುವ ಪ್ರಜಾಪ್ರಭುತ್ವವಾದಿ ಪದ್ಧತಿಯ ಸರಕಾರದಲ್ಲಿ ತುಂಬ ಉಪಯುಕ್ತಕರವಾದ ಪಾತ್ರವನ್ನು ಈ ಪಂಚಾಯತಿಗಳು ಅಥವಾ ಸ್ಥಳೀಯ ಸಂಸ್ಥೆಗಳು ನಿರ್ವಹಿಸುತ್ತಿವೆ. ಇಲ್ಲಿ ಪ್ರಜೆಗಳ ಗರಿಷ್ಠ ಮಟ್ಟದ ಸಹಭಾಗಿತ್ವವಿಲ್ಲದೆ ಪ್ರಜಾಪ್ರಭುತ್ವ ಯಶಸ್ವಿಯಾಗಲಾರದು. ಆದ್ದರಿಂದಲೇ ಸಮಾಜದ ಅಂಚಿನಲ್ಲಿರುವಂತಹ ಪ್ರತಿಯೊಬ್ಬರು ಸಹ ಅಭಿವೃದ್ಧಿಯ ಪರಿಕಾರರಾಗಲು ಅವರನ್ನು ರಾಜಕೀಯವಾಗಿ ತರಬೇತಿಗೊಳಿಸಿ ದೇಶದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಲು ಪಂಚಾಯತ್‌ರಾಜ್ ಸಂಸ್ಥೆಗಳ ಉಗಮವಾಗಿರುವುದು ಸಮಾಜದಲ್ಲಿ ವಾಸಿಸುವ ಪ್ರತಿಯೊಬ್ಬ ಪ್ರಜೆಯೂ ತಮ್ಮ ತಮ್ಮ ಬೇಕು ಬೇಡಗಳ ಬಗ್ಗೆ ಆಸಕ್ತರಾಗಿದ್ದರೆ ಅವರು ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಕಡ್ಡಾಯವಾಗಿ ಭಾಗವಹಿಸುತ್ತಾರೆ. ಈ ಕಾರಣದಿಂದ ಪಂ.ರಾ. ಸಂಸ್ಥೆ ಅತ್ಯಂತ ಪ್ರಯೋಜನಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವುದು.

ವರ್ತಮಾನದಲ್ಲಿ ಭಾರತವು ಒಂದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ ಎಂಬ ವಿಶ್ವಮಾನ್ಯತೆಗೆ ಒಳಗಾಗಿದೆ. ಇದು ವಿಶ್ವ ಸಮುದಾಯದಲ್ಲಿ ಪಾಲುದಾರರಾಗಲು ಸ್ವಲ್ಪ ಕಾಲಾವಕಾಶ ಹಿಡಿಯಬಹುದು. ಅಭಿವೃದ್ಧಿ ಮತ್ತು ಅಭಿವೃದ್ಧಿ ಇಲ್ಲದೆ ವಿಶ್ವದ ಬಲಿಷ್ಠ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲಲು ಭಾರತಕ್ಕೆ ಸಾಧ್ಯವಾಗಲಾರದು ಪ್ರಗತಿ ಮತ್ತು

ಅಭಿವೃದ್ಧಿಯನ್ನು ಸಮಾಜದ ಪ್ರತಿಯೊಬ್ಬ ಪ್ರಜೆಗಳ ಮತ್ತು ಸಂಸ್ಥೆಗಳ ಸಹಕಾರದಿಂದ ಮಾತ್ರವೆ ಸಾಧಿಸಲು ಸಾಧ್ಯ. ಇದರ ಸಾಫಲ್ಯತೆಯನ್ನು ನಾವು ಪಂ.ರಾ. ಸಂಸ್ಥೆಗಳ ಮೂಲಕ ಸಾಕಾರಗೊಳಿಸಿಕೊಳ್ಳಬಹುದು. ಇವುಗಳ ಮೂಲಕ ಪ್ರತಿಯೊಬ್ಬ ಸ್ತ್ರೀ ಪುರುಷರನ್ನು ಆಡಳಿತದಲ್ಲಿ ಸಮಭಾಗಿಗಳನ್ನಾಗಿ, ಅಭಿವೃದ್ಧಿ ಯೋಜನೆಗಳಲ್ಲಿ ಭಾಗವಹಿಸುವಂತೆ ಮಾಡಲು ಇವುಗಳ ಅವಶ್ಯಕತೆ ಇದೆ. ವಿವಿಧ ವಿದ್ವಾಂಸರು, ಅರ್ಥಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ರಾಜ್ಯಶಾಸ್ತ್ರಜ್ಞರು ಭಾರತವು ಯೋಜನೆಗಳನ್ನು ಸಾಕಾರ, ಸಫಲಗೊಳಿಸಬೇಕಾದರೆ ಆಡಳಿತದಲ್ಲಿ ಪ್ರತಿಯೊಬ್ಬರು ಸಕ್ರಿಯವಾಗಿ ಪಾಲ್ಗೊಳ್ಳಬೇಕಾಗಿದೆ ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಇಂದಿನ ಆಧುನಿಕ ಯುಗದಲ್ಲಿಯೂ ಭಾರತದ ಸಾಂಪ್ರದಾಯಿಕ ಜೀವನದಲ್ಲಿ ಕಂದಾಚಾರಗಳು, ಜಾತಿಪದ್ಧತಿ. ಅಸ್ಪೃಶ್ಯತೆ, ಬಡತನ, ನಿರುದ್ಯೋಗಗಳಂತಹ ಜ್ವಲಂತ ಸಮಸ್ಯೆಗಳು ದೇಶದ ಅಭಿವೃದ್ಧಿಗೆ ಕಂಠಕ ಪ್ರಾಯವಾಗಿ ಪರಿಣಮಿಸಿವೆ. ಇಂತಹ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಲೆಂದೆ ಪಂ.ರಾ. ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ.

ಇತರ ಎಲ್ಲಾ ರಾಷ್ಟ್ರಗಳಿಗಿಂತ ಭಾರತಕ್ಕೆ ವಿಕೇಂದ್ರಿಕರಣದ ಅವಶ್ಯಕತೆ ಇದೆ. ಭಾರತವು ಹಳ್ಳಿಗಳ ನಾಡಾಗಿರುವುದರಿಂದ ಕೇಂದ್ರ ಮಟ್ಟದಿಂದ ಹಳ್ಳಿಗಳಿಗೆ ತುಂಬ ದೂರವಿದೆ. ಹಲವು ದಶಕಗಳಿಂದಲೂ ಗ್ರಾಮೀಣ ವಲಯ ಅಭಿವೃದ್ಧಿಯಿಂದ ದೂರವೆ ಉಳಿಯಿತು. ಅಧಿಕಾರ ವಿಕೇಂದ್ರಿಕರಣದ ತಾತ್ವಿಕ ಚೌಕಟ್ಟೆ ಗ್ರಾಮೀಣ ಜನತೆಯಡೆಗೆ ಅಧಿಕಾರ.

ಭಾರತದಲ್ಲಿ ಅಧಿಕಾರವನ್ನು ಸಮಾಜದ ಅಂಚಿನ ಅಡಿಯಲ್ಲಿ ಅಥವಾ ಬುಡಕ್ಕೆ ಒಯ್ಯುವ ದಿಶೆಯಲ್ಲಿ ೧೯೮೦-೯೦ರ ದಶಕಗಳಲ್ಲಿ ನಡೆದಂತಹ ಕ್ರಾಂತಿಕಾರಕ ಪ್ರಯತ್ನಗಳು ಇಂದು ಇತಿಹಾಸದ ಪುಟದಲ್ಲಿ ಸೇರಿ ಹೋಗಿವೆ. ಈ ಬಗೆಯ ಕ್ರಾಂತಿಕಾರಕ ಬದಲಾವಣೆಗೆ ದಿವಂಗತ ಶ್ರೀರಾಜೀವಗಾಂಧಿ ಮತ್ತು ಕ್ರಾಂಗ್ರೆಸ್ ಪಕ್ಷ ನೀಡಿದ ಕಾಣಿಕೆ ಅಮೂಲ್ಯ. ಆ ಪ್ರಯತ್ನಗಳ ಫಲವಾಗಿ ಸಂವಿಧಾನದ ೭೩,೭೪ನೇಯ ತಿದ್ದುಪಡಿಗಳು ನಡೆದಿರುವುದು. ಪಂ.ರಾ. ಸಂಸ್ಥೆಗಳಿಗೆ ಸಂವಿಧಾನಾತ್ಮಕ ಮನ್ನಣೆ ದೊರೆತಿದ್ದು ಸಾಮಾನ್ಯ ಸಂಗತಿ ಏನಲ್ಲ. ಸಾಮಾಜಿಕವಾಗಿ ಏಣಿಶ್ರೇಣಿ, ಉಚ್ಚ ನೀಚ, ಮೇಲು-ಕೀಳು ಎಂಬ ತಾರತಮ್ಯ ಹಾಗೂ ಅಸೌಷ್ಟವಗಳನ್ನು ಅಂತರ್‌ಗತ ಮಾಡಿಕೊಂಡಿರುವ ನಮ್ಮ ಗ್ರಾಮೀಣ ಸಮುದಾಯದಲ್ಲಿ ಪಂ.ರಾ. ಸಂಸ್ಥೆಗಳು ಜಮೀನ್ದಾರಿ ಪಾಳೆಗಾರಿಕೆಯ ಅಡಿಯಾಳಾಗಿ ಬಿಡುವ ಅಪಾಯವನ್ನು ಕುರಿತಂತೆ ಬಹಳ ಹಿಂದೆಯೇ ಡಾ.ಬಿ.ಆರ್. ಅಂಬೇಡ್ಕರ್ ಅಭಿಪ್ರಾಯ ಪಟ್ಟಿದ್ದರು. ಇಂದು ಪಂ.ರಾ. ಸಂಸ್ಥೆಗಳು ಅಂತಹ ಅಪಾಯದ ಹಂತವನ್ನು ದಾಟಿ ಬಂದಿರುವ ಬಗ್ಗೆ ನಮಗೆ ನಿದರ್ಶನಗಳು ಸಿಗುತ್ತವೆ. ಪಂ.ರಾ. ಸಂಸ್ಥೆಗಳ ಮೂಲಕ ಗ್ರಾಮೀಣ ಮಟ್ಟದಲ್ಲಿ ಜಮೀನ್ದಾರಿ ಪಾಳೆಗಾರಿಕೆಯನ್ನು ಸದೆಬಡಿಯಬಹುದೆಂಬ ಸಂಗತಿಯನ್ನು ಕೇರಳ ಮಾದರಿಯು ನಮಗೆ ತೋರಿಸಿ ಕೊಡುತ್ತದೆ. ಜಮೀನ್ದಾರಿ ಪದ್ಧತಿಯನ್ನು ಬಗ್ಗು ಬಡಿಯುವ ಸಾಧನಗಳಾಗಿ ಪಂ.ರಾ. ಸಂಸ್ಥೆಗಳು ಇಂದು ಒಂದು ಬಗೆಯ ದಲಿತೀಕರಣಕ್ಕೆ ಹಾಗೂ ಮಹಿಳೀಕರಣಕ್ಕೆ ಒಳಗಾಗಿವೆ. ಅಲ್ಲಿ ಹಿಂದುಳಿದ ಸಮುದಾಯಗಳಿಗೆ ತಮ್ಮ ವಾರ್ಷಿಕ ಬಜೆಟ್ಟಿನಲ್ಲಿ ಇಂತಿಷ್ಟು ಹಣ ನೀಡಬೇಕೆಂಬ ನಿಯಮವೂ ಇದೆ. ಈ ಸಂಸ್ಥೆಗಳಲ್ಲಿ ಅಧ್ಯಕ್ಷ ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲಾತಿಯ ಸೂತ್ರ ಅಳವಡಿಸಲಾಗಿದೆ. ಈ ಎಲ್ಲಾ ಬಗೆಯ ಸೌಲಭ್ಯಗಳಿಂದ ಅಂಚಿನ ಸಮುದಾಯಗಳಿಗೆ ಎಷ್ಟರ ಮಟ್ಟಿಗೆ ಅಧಿಕಾರ ದೊರಕಿದೆ. ಅದರ ಫಲಗಳು

ಎಷ್ಟರ ಮಟ್ಟಿಗೆ ಪ್ರಾಪ್ತವಾಗಿವೆ ಎಂಬುದು ಬೇರೆಯೇ ಸಂಗತಿ. (ಟಿ.ಆರ್. ಚಂದ್ರಶೇಖರ, ೨೦೦೩,೪೩) ಹೀಗೆ ಪಂಚಾಯತ್‌ರಾಜ್ ಸಂಸ್ಥೆಗಳ ಹಿರಿಮೆಯ ಜೊತೆಗೆ ಅದರಲ್ಲಿಯ ದಲಿತ ಮಹಿಳಾ ಸಹಭಾಗಿತ್ವದಲ್ಲಿನ ಸಾಫಲ್ಯ, ಅಸಾಫಲ್ಯಗಳನ್ನು ಅರಿಯುವ ಉದ್ದೇಶ ಪ್ರಸ್ತುತ ಅಧ್ಯಯನದ್ದು.

**೩.೨. ದಲಿತ ಮಹಿಳಾ ಪ್ರತಿನಿಧೀಕರಣ**

ಸಮಾನತೆಯ ತತ್ವದಡಿಯಲ್ಲಿ ಪಂಚಾಯತ್ ರಾಜ್ ಸಂಸ್ಥೆಯ ಉಗಮ ತುಂಬ ಉಪಯುಕ್ತವಾಗಿ ಬಳಕೆಯಾಗುತ್ತಿರುವುದು ಸಂತೋಷದಾಯಕವಾಗಿದೆ. ಒಂದು ಕಾಲದಲ್ಲಿ ಕೆಲವೇ ಕೆಲವು ಮೇಲ್ಜಾತಿಯ ಶ್ರೀಮಂತರಿಗೆ ಮೀಸಲಾಗಿದ್ದ ಅಧಿಕಾರವು ಇಂದು ಸಾರ್ವತ್ರಿಕವಾಗಿ ಎಲ್ಲರಿಗೂ ದೊರೆಯುತ್ತಿರುವುದು ಸಂವಿಧಾನಿಕ ವ್ಯವಸ್ಥೆಯ ಹಿರಿಮೆ ಎನ್ನಬೇಕು. ಆದರೆ ಆರಂಭದಿಂದಲೂ ಸಾಮಾಜಿಕ ಜೀವನದಲ್ಲಿ ಅತ್ಯಂತ ಬಿಗಿಯಾದ ಹಿಡಿತ ಹೊಂದಿರುವಂತ ಊಳಿಗಮಾನ್ಯಶಾಹಿ, ಯಾಜಮಾನ್ಯಶಾಹಿ ಹಾಗೂ ಬಂಡವಾಳಶಾಹಿಯಂತಹ ನಿಯಂತ್ರಣ ಶಕ್ತಿಗಳು ಇಂದಿಗೂ ಸಾಮಾಜಿಕ ಜೀವನದಲ್ಲಿ ಪ್ರಭಾವವನ್ನು ಬೀರುತ್ತಿರುವುದರಿಂದ ಸಮಾಜದ ಜನರಿಗೆ ಅದರಲ್ಲಿಯೂ ಮುಖ್ಯವಾಗಿ ತಳ ಸಮುದಾಯ ಅಥವಾ ದಲಿತ ಸಮುದಾಯಕ್ಕಂತೂ ತುಂಬ ಅನಾನುಕೂಲವೆ ಆಗುತ್ತಿದೆ. ಪ್ರಭುತ್ವವನ್ನೆ ತಮ್ಮ ಹಿಡಿತದಲ್ಲಿಟ್ಟು ಕೊಂಡಿರುವ ಇಂತಹ ಶಕ್ತಿಗಳು ದಲಿತ ಸಮುದಾಯಕ್ಕೆ, ಮಹಿಳೆಗೆ ಅಧಿಕಾರವನ್ನು ನಿರಾಕರಿಸುತ್ತಲೆ ಬರುತ್ತವೆ. ಸಾಂಪ್ರದಾಯಿಕ ದಾಸ್ಯದಡಿಯಲ್ಲಿ ಅವರನ್ನು ಇಂದಿಗೂ ತಮ್ಮ ಗುಲಾಮರನ್ನಾಗಿ ಮಾಡಿಕೊಳ್ಳುವಂತ ಕುತಂತ್ರ ಇಂದಿಗೂ ಮುಂದುವರೆಯುತ್ತಿದೆ. ಎಂದರೆ ತಪ್ಪಾಗಲಾರದು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಸಾಮಾಜಿಕ ಜೀವನದಿಂದ ದೂರ ಉಳಿದು ಸದಾ ಶೋಷಣೆ, ದಬ್ಬಾಳಿಕೆ, ಅನ್ಯಾಯ, ಅತ್ಯಾಚಾರಗಳಿಗೆ ಬಲಿಯಾಗಿರುವ ದಲಿತ ಮಹಿಳೆಯ ರಾಜಕೀಯ ಸ್ಥಿತಿಯಂತೂ ಅತ್ಯಂತ ನಿರಾಶದಾಯಕವಾಗಿದೆ. ಜಾತಿ ಹಾಗೂ ಲಿಂಗದ ಕಾರಣದಿಂದ ಅವಳು ತೀರ ನಿರ್ಲಕ್ಷ್ಯಕ್ಕೆ, ತಿರಸ್ಕಾರಕ್ಕೆ, ತಾತ್ಸಾರಕ್ಕೆ ಬಲಿಯಾಗುತ್ತಲೆ ಬಂದಿರುವ ಅವಳ ವರ್ತಮಾನದ ರಾಜಕೀಯ ಸ್ಥಿತಿಯನ್ನು, ರಾಜಕೀಯ ಪರಿಭಾಷೆಯನ್ನು ಅರಿಯುವ ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿದೆ.

ರಾಜಕಾರಣ ಎಂಬ ನಿರ್ವಚನವೆ ಸೂಚಿಸುವಂತೆ ಅದು ಪುರುಷನಿಷ್ಟ ಸಂಕಥನವಾಗಿರುವುದು. ರಾಜಕೀಯದ ಮುಂದುವರೆದ ಭಾಗವಾಗಿರುವ ರಾಜಕಾರಣ ಪುರುಷನಿಗೆ ಒಲಿದರೆ ಮಹಿಳೆಯ ಪಾಲಿಗೆ ಎಂದೂ ಒಲಿಯಲೆ ಇಲ್ಲ, ಅಲ್ಲದೆ ಅವಳು ರಾಜಕೀಯದೊಂದಿಗೆ ರಾಜಕಾರಣವನ್ನು ಮಾಡಲೆ ಇಲ್ಲ. ಅವಳದೇನಿದ್ದರೂ ರಾಜಕೀಯ ಪರದೆಯ ಮುಂದೆ ಕೆಲಸ ನಿರ್ವಹಿಸಿದರೆ ಅವಳ ಹಿಂದೆ ಪುರುಷನೆ ಸೂತ್ರದಾರನಂತೆ ನಡೆಸುತ್ತಿರುತ್ತಾನೆ. ವಾಸ್ತವವಾಗಿ ರಾಜಕೀಯ ಎಂಬುದೆ ಪುರುಷನಿಗೆ ಮಾತ್ರವೆ ಸೀಮಿತ ಎಂಬುದು ಸರ್ವಕಾಲಿಕವಾಗಿ ಎಲ್ಲಾ ಸಮಾಜಗಳಲ್ಲಿಯೂ ಇರುವಂತಹ ಸಾಮಾನ್ಯ ಕಲ್ಪನೆ. ಪುರುಷನ ಹೊರತಾಗಿ ರಾಜಕೀಯದ ಕಲ್ಪನೆಯನ್ನು ಸಮಾಜ, ಧರ್ಮ ಹಾಗೂ ರಾಜಕೀಯ ಸಂಸ್ಥೆ ಎಂದೂ ಬಯಸಲಾರವು.

ಸ್ವಾತಂತ್ರ್ಯ ಪೂರ್ವದಿಂದಲೂ ಮಹಿಳೆ ರಾಜಕಾರಣದ ಒಂದು ಭಾಗವಾಗಿ ಕಾರ್ಯ ನಿರ್ವಹಿಸಿದ್ದರೂ ಅವಳನ್ನು ಒಂದು ರೀತಿಯಲ್ಲಿ ದಾಳವಾಗಿ ಉಪಯೋಗಿಸಲಾಗಿದ್ದೇ ಹೆಚ್ಚು. ಮಹಿಳಾ ರಾಜಕೀಯ ಕುರಿತಾದ ಸಾಮಾನ್ಯೀಕರಿಸಿದ

ಸಾಮಾಜಿಕ ಅಂಶಗಳಲ್ಲಿನ ಪೂರ್ವಾಗ್ರಹಗಳೆ ಅವಳ ಸಕ್ರೀಯ ರಾಜಕೀಯ ಪಾಲ್ಗೊಳ್ಳುವಿಕೆಯಲ್ಲಿ ವಿವಿಧ ಬಗೆಯಲ್ಲಿ ತೊಡಕಾಗಿವೆ. ಅಖಂಡ ಸಾಮಾಜಿಕ ವ್ಯವಸ್ಥೆಯ ಅಧಿಪತಿಯಾಗಿರುವ ಪುರುಷನು ತನ್ನ ಉಳಿವಿಗಾಗಿಯೇ ಧರ್ಮ, ಕಾನೂನು, ಶಾಸ್ತ್ರಗಳನ್ನು ತುಂಬ ಜಾಣತನದಿಂದ ಬಳಸಿಕೊಂಡಿರುವುದನ್ನು ಇತಿಹಾಸದುದ್ದಕ್ಕೂ ನಾವು ಗಮನಿಸಬಹುದಾಗಿದೆ. ಆ ಕಾರಣದಿಂದಲೇ ಮಹಿಳೆ ಗೃಹಬಂಧಿಯಾಗಿರುವುದು. ಗೃಹಕೃತ್ಯವೆ ಅವಳಿಗೆ ಸೂಕ್ತ ಜಾಗ ಅದರಾಚೆ ಅವಳಿಗೆ ಯಾವುದೆ ಲೋಕದ ಕಲ್ಪನೆಯನ್ನು ಅವಳು ಮಾಡಿಕೊಳ್ಳಬಾರದೆಂಬ ನಿಯಮಗಳು ಜಾರಿಯಲ್ಲಿರುವವು. ಹೀಗೆ ಮೂಲೆಗುಂಪಾದ ಮಹಿಳಾ ಸಮುದಾಯದಿಂದ ಮಾನವ ಸಂಪನ್ಮೂಲದಲ್ಲಿ ತುಂಬ ದೊಡ್ಡನಷ್ಟವಾಗಿರುವುದನ್ನು ಅರ್ಥಶಾಸ್ತ್ರಜ್ಞರೆ ಒಪ್ಪಿಕೊಳ್ಳುತ್ತಾರೆ. ಸಾಮಾಜಿಕ, ಆರ್ಥಿಕ, ರಾಜಕೀಯ ಭಾಗವಹಿಸುವಿಕೆಯಲ್ಲಿ ಮಹಿಳೆಯನ್ನು ಹೊರಗಿಟ್ಟು ನೋಡಲು ಸಾಧ್ಯವೆ ಇಲ್ಲ.

ಆದ್ದರಿಂದಲೆ ಅಭಿವೃದ್ಧಿಯ ಗತಿಶೀಲತೆಯನ್ನು ನಾವು ಒಂದು ವಿಮರ್ಶಾತ್ಮಕವಾದ ನೆಲೆಗಟ್ಟಿನಲ್ಲಿ ಲಿಂಗನಿರಾಪೇಕ್ಷೆ, ಲಿಂಗಸಮಾನತೆಯ ತತ್ವದಡಿಯಲ್ಲಿ ಪರಿಭಾವಿಸಿಕೊಳ್ಳಬೇಕಾಗಿದೆ. ಅಭಿವೃದ್ಧಿಯ ಫಲಗಳು ಲಿಂಗಬೇಧವೆನಿಸದೆ ಎಲ್ಲರಿಗೂ ಒದಗುತ್ತವೆ ಎಂಬ ನಂಬಿಕೆಯೂ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ ಗಟ್ಟಿಯಾಗಿ ನೆಲೆಯೂರಿದೆ.[11] ಇಂತಹ ನಂಬಿಕೆ ಹಾಗೂ ಚಿಂತನೆಗಳು ವ್ಯಾಪಕವಾಗಿ ನೆಲೆಯೂರಿರುವುದರಿಂದ ಅಭಿವೃದ್ಧಿಗೆ ಸಂಬಂಧಿಸಿದ ನೀತಿ ನಿರೂಪಣೆಗಳು ಸಹ ಲಿಂಗ ನಿರಪೇಕ್ಷನೆಲೆಯಲ್ಲಿಯೇ ರೂಪುತಾಳುತ್ತಲೆ ಬಂದಿವೆ. ಈ ವಿಶ್ಲೇಷಣೆಯ ಸಾರವೇನೆಂದರೆ ಅಭಿವೃದ್ಧಿಯ ಪ್ರಕ್ರಿಯೆಯೊಳಗೆ ಸ್ತ್ರೀ ಪುರುಷರ ಸಹಭಾಗಿತ್ವ ಅಗತ್ಯವಾಗಿದ್ದರೂ ಸಹ ಅಲ್ಲಿ ಮಹಿಳಾ ಅಸ್ತಿತ್ವ ಕಾಣದಾಗಿದೆ. ಸಮಾಜದ ಒಬ್ಬ ವ್ಯಕ್ತಿಯಾಗಿ, ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯನ್ನು ಅಭಿವೃದ್ಧಿಯ ಹೊರಗಿಟ್ಟು ನೋಡುವುದು ಸಾಧ್ಯವಿಲ್ಲ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದಲಿತ ಮಹಿಳಾ ರಾಜಕೀಯ ಸಹಭಾಗಿತ್ವ ಹಾಗೂ ಸಬಲೀಕರಣದ ನೆಲೆಗಟ್ಟಿನಡಿಯಲ್ಲಿ ಸಮಸ್ತ ದಲಿತ ಮಹಿಳಾ ಸಮುದಾಯದ ಚಟುವಟಿಕೆಯನ್ನು ಅರಿಯುವುದು ಪ್ರಸ್ತುತ ಅಧ್ಯಾಯನದ ಆಶಯವಾಗಿದೆ. ಶೋಷಣೆ, ತಿರಸ್ಕಾರ, ಊರಿನ ಹಿರಿಯರಿಗೆ ಮೈ ಒಪ್ಪಿಸುವ, ಆತ್ಮಸಾಕ್ಷಿಯನ್ನೆ ಅಡವಿಟ್ಟು, ದಲಿತ ಮಹಿಳೆಯ ಸಾಮಾಜಿಕ ಜೀವನದಲ್ಲಿ ಅನುಭವಿಸುತ್ತಿರುವ ಸಂಕಟ ಹಾಗೂ ತಲ್ಲಣಗಳೊಂದಿಗೆ ಅವಳ ರಾಜಕೀಯ ಸಹಭಾಗಿತ್ವವನ್ನು ಅರಿಯುವುದು ಇಂದಿನ ತುರ್ತಾಗಿದೆ. ವೈಚಾರಿಕತೆಯ ನಡುಗೆಯಲ್ಲಿ ದಲಿತ ಮಹಿಳೆಯನ್ನು ಮೂರನೆಯ ದರ್ಜೆಯ ಪ್ರಜೆಯಾಗಿ ತೂಗುವ ಇತರ ಮುಂದುವರೆದ ಮಹಿಳೆಯರು ತಮ್ಮಲ್ಲಿಯ ಹೈರಾರ್ಕಿಯನ್ನು ಅರಿಯುವುದು ಒಳಿತು. ಅತ್ಯಂತ ಕ್ಲಿಷ್ಟಕರವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತ ಸ್ತ್ರೀ ಪ್ರತಿಯೊಂದು ಹಂತಗಳಲ್ಲಿಯೂ ಹಿಂದೆಯೇ ಉಳಿಯುತ್ತಿರುವುದರಿಂದ ಅಭಿವೃದ್ಧಿ ಎಂಬ ನಿರ್ವಚನಕ್ಕೆ ಹಿನ್ನಡೆಯುಂಟಾಗಿದೆ.

ನಾವು ಭಾವಿಸಿದಂತೆ ಭಾರತೀಯ ಸಾಮಾಜಿಕ ರಂಗದ ಬದುಕು ಬರೆದುಬಿಟ್ಟ ಸಂವಿಧಾನಕ್ಕಿಲ್ಲ. ಹಾಗೆಯೇ ಜನರನ್ನು ಮುನ್ನಡೆಸುವ ಶಕ್ತಿಯೂ ಅದಕ್ಕಿಲ್ಲ. ಸಾಮಾಜಿಕ ಮನ್ನಣೆಯನ್ನು ಪಡೆದುಕೊಳ್ಳುತ್ತಲೆ ಧಾರ್ಮಿಕ ಒತ್ತಾಸೆಯ ನೆಲೆಯಲ್ಲಿರುವ ಮನುವಿನ ವಿಚಾರಧಾರೆಯೇ ಇಂದಿಗೂ ಪ್ರಾಬಲ್ಯವಾಗಿ ನಮ್ಮನ್ನು ಆಳುತ್ತಿದೆ. ದಲಿತ

ಮಹಿಳೆಗೆ ಸ್ವಾತಂತ್ರ್ಯ ಮತ್ತು ಸಮಾನವಾದ ಅಧಿಕಾರ, ಅವಕಾಶಗಳನ್ನು ಸಂವಿಧಾನಾತ್ಮಕವಾಗಿ ಕೊಡಲ್ಪಟ್ಟಿವೆ ಎಂಬುದನ್ನೆ ನಾವು ಪ್ರಪಂಚಕ್ಕೆ ತೋರಿಸುತ್ತ ಬಂದಿದ್ದೇವೆ. ವಾಸ್ತವದಲ್ಲಿ ಮನು ನಿರ್ದೇಶಿತ ಸ್ಥಾನದಲ್ಲಿಟ್ಟು ಸುತ್ತಲೂ ಬೇಲಿ ಹಾಕಿ ಒಳಗಡೆ ವರ್ಗಹಿತಾಸಕ್ತಿ, ಸರಕು ಸಂಸ್ಕೃತಿಯ ಹಿತಾಸಕ್ತಿ ಸನಾತನ ಮೌಲ್ಯಗಳ ಕರೆಂಟನ್ನು ಹರಿಯಬಿಟ್ಟಿದ್ದೇವೆ. ಈ ಬಗೆಯ ಬೇಲಿಯನ್ನು ದಾಟುವ ಮಹಿಳೆಯು ಒಂದಿಲ್ಲ ಒಂದು ಕಾರಣದಿಂದ ಆಘಾತಕ್ಕೆ ಒಳಗಾಗುತ್ತಿರುವುದನ್ನು ತಪ್ಪಿಸಲು ಸಾಧ್ಯವಾಗುತ್ತಿಲ್ಲ. ಕಾಗದದ ಮೇಲೆ ಕಾನೂನಿದ್ದರೆ ಸಮಾಜದ ಒಳಗೆ ಮನುವಿನ ಧೋರಣೆ ಜೀವಂತವಾಗಿದೆ.’’ (ಜಾಬುರಾವರ ಮುಡುಬಿ, ೨೦೦೬, ೨೦೦) ಇಂತಹ ವಿಷಮ ಪರಿಸ್ಥಿತಿಯಲ್ಲಿ ದಲಿತ ಮಹಿಳಾ ರಾಜಕಾರಣದ ಕುರಿತಾದ ಇಕ್ಕಟ್ಟುಗಳು ಹಾಗೂ ಸವಾಲುಗಳ ಕುರಿತು ಈ ಅಧ್ಯಯನವು ಬೆಳಕು ಚೆಲ್ಲುತ್ತದೆ. ಸಂವಿಧಾನದತ್ತವಾಗಿ ದಲಿತ ಮಹಿಳೆ ರಾಜಕೀಯ ಅಧಿಕಾರವನ್ನು ಅವಳು ಎಲ್ಲರಂತೆ ಸಮಾನತೆಯ ನೆಲೆಯಲ್ಲಿ ಪಡೆದಿದ್ದರೂ ಸಹ ಅದನ್ನು ಚಲಾಯಿಸುವಿಕೆಯಲ್ಲಿ ಅನುಭವಿಸುತ್ತಿರುವ ತೊಡಕುಗಳನ್ನು ಇಲ್ಲಿ ವಿವೇಚಿಸಲಾಗಿದೆ.

**೩.೩. ಪ್ರತಿನಿಧೀಕರಣದ ಸ್ವರೂಪ**

ಪ್ರತಿನಿಧೀಕರಣ ಎಂಬ ನಿರ್ವಚನವೆ ಸೂಚಿಸುವಂತೆ ಅದು ವ್ಯವಸ್ಥೆಯಲ್ಲಿ ಇರುವುದನ್ನು ಪ್ರತಿಬಿಂಬಿಸುವುದೆ ಆಗಿದೆ. ಸಾಮಾಜಿಕ ಜೀವನದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿರುವ ವ್ಯಕ್ತಿಯ ಸಮಗ್ರ ಬದುಕನ್ನು ಅವರು ನಿರ್ವಹಿಸುವ ಕಾರ್ಯ ಸಮಸ್ಯೆ, ಸವಾಲುಗಳನ್ನು ಪ್ರತಿನೀಧೀಕರಣ ಒಳಗೊಂಡಿರುತ್ತದೆ. ಸಾಮಾಜಿಕ ಜೀವನದಲ್ಲಿ ವ್ಯಕ್ತಿಗಳು ಅಳವಡಿಸಿಕೊಂಡಿರುವಂತ ಹಲವಾರು ಮಹತ್ವದ ಮೌಲ್ಯಗಳು ಇದರ ಮೂಲಕವೆ ಕಾಣಬಹುದಾಗಿದೆ. ಅಲ್ಲದೆ ವ್ಯವಸ್ಥೆಯಲ್ಲಿರುವ ವೈಪರಿತ್ಯಗಳನ್ನು, ಲಿಂಗಸಂಬಂಧಿ ಆಯಾಮುಗಳನ್ನು ಅರಿಯುವುದು ಸಹ ಪ್ರತಿನಿಧೀಕರಣದಡಿಯಲ್ಲಿ ಬರುತ್ತದೆ. ಇಲ್ಲಿ ಸಮುದಾಯಗಳನ್ನು ಅರಿಯುವುದು ಸಹ ಪ್ರತಿನಿಧೀಕರಣ ಒಳಗೊಂಡಿದೆ. ಇಲ್ಲಿ ಸಮುದಾಯಗಳಲ್ಲಿನ ಒಳಿತು ಕೆಡಕುಗಳನ್ನು ಯಥಾವತ್ತಾಗಿ ದಾಖಲಿಸಲಾಗುವುದು. ಒಂದರ್ಥದಲ್ಲಿ ಹೇಳಬೇಕೆಂದರೆ ವ್ಯವಸ್ಥೆಯಲ್ಲಿರುವುದನ್ನೆ ಪ್ರತಿಬಿಂಬಿಸುವುದು.

ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಸಮಾಜದಲ್ಲಿರುವ ವ್ಯಕ್ತಿಗಳ ಸಮಗ್ರ ಬದುಕನ್ನು ಇದು ತೆರೆದಿಡುವುದು. ಪ್ರತಿನಿಧೀಕರಣ ಎಂದರೆ ಯಾವುದೆ ಒಂದು ಯೋಚನೆ, ಲೋಕಾನುಭವ ಇರಬಹುದು. ವ್ಯಕ್ತಿಯನ್ನು ಕುರಿತು, ಸಮುದಾಯವನ್ನು ಕುರಿತು, ಸಂಸ್ಕೃತಿಯನ್ನು ಕುರಿತು ಯಾವುದೇ ವಿಚಾರದ ಬಗ್ಗೆ ಯಾವುದೇ ಮಾಧ್ಯಮದ ಮೂಲಕ ಭಾಷಿಕವಾಗಿ, ಭಾಷಿಕೇತರವಾಗಿ ಸಂಜ್ಞೆಗಳನ್ನು ಬಳಸಿ ನಿರೂಪಿಸುವುದಾಗಿದೆ. ಆದರೆ ಗ್ರಹಿಸಿದ ವ್ಯಕ್ತಿಯ ಪ್ರತಿನಿಧೀಕರಣದಲ್ಲಿ ಆ ವ್ಯಕ್ತಿಯ ಗ್ರಹಿಕೆ, ದೃಷ್ಟಿಕೋನ ಕೆಲಸಮಾಡುತ್ತಿರುತ್ತವೆ.’’ ರಾಜಕೀಯದಲ್ಲಿ ಮಹಿಳಾ ಪ್ರತಿನಿಧೀಕರಣ ಎನ್ನುವಾಗ ರಾಜಕೀಯ ಸಂಸ್ಥೆಯಲ್ಲಿನ ಹಲವು ಮಜಲುಗಳನ್ನು ಗಮನಿಸುವುದೆ ಆಗಿರುತ್ತದೆ.

ರಾಜಕೀಯ ಪ್ರತಿನಿಧೀಕರಣದಲ್ಲಿ ಒಬ್ಬ ಮಹಿಳೆ ದೇಶದ ಪ್ರಧಾನಿಯಾದಳು ಎಂದಾಗ ಅಲ್ಲಿ ಇಡೀ ದೇಶದ ಮಹಿಳಾ ಸಮುದಾಯವೆ ಅಲ್ಲಿರುವದಿಲ್ಲ ಎಂಬುದನ್ನು ಗಮನಿಸಬೇಕು. ಅವಳು ಯಾವ ಜಾತಿ, ವರ್ಗ, ಸಮುದಾಯಕ್ಕೆ ಸೇರಿದವಳು ಪ್ರತಿನಿಧೀಕರಣಗೊಳ್ಳುತ್ತಿದ್ದಾಳೆಂಬುದು ಇಲ್ಲಿ ಮುಖ್ಯವಾಗುತ್ತದೆ. ಇಡೀ ದೇಶವನ್ನೆ

ಪ್ರತಿನಿಧಿಸುವ ಅವಳು ಮಹಿಳಾ ಸಮುದಾಯವನ್ನು ಎಂದೂ ಪ್ರತಿನಿಧಿಸಲಾರಳು. ಈ ಬಗೆಯ ವೈರುದ್ಯಗಳ ನಡುವೆ ರಾಜಕೀಯ ಕ್ಷೇತ್ರದಲ್ಲಿನ ಮಹಿಳೆಯರ ಸಹಭಾಗಿತ್ವದ ಕುರಿತ ಸಾಫಲ್ಯ, ಅಸಾಫಲ್ಯಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಅನಾದಿಕಾಲದಿಂದಲೂ ಮಹಿಳಾ ಸಮುದಾಯದ ಮೇಲೆ ಸವಾರಿ ಮಾಡುತ್ತಲೆ ಬಂದಿರುವ ಧರ್ಮಗ್ರಂಥಗಳು, ಸ್ಮೃತಿಗಳು, ಉಪನಿಷತ್ತುಗಳು ಅವಳ ಅಸ್ತಿತ್ವವನ್ನೆ ಅಲ್ಲಾಡಿಸಿದವು. ಅವಳು ಪಾಪದ ಪ್ರತಿರೂಪ ದಂಡನೆಗೆ ಅರ್ಹಳು, ಅವಳಿಗೆ ಯಾವುದೆ ಬಗೆಯ ಸ್ವಾತಂತ್ರ್ಯ ಬೇಕಾಗಿಲ್ಲ ಅದಕ್ಕೆ ಅವಳು ಅರ್ಹಳೂ ಅಲ್ಲ ಎಂಬಂತಹ ಸನಾತನ ಚಿಂತನೆಯನ್ನು ಕರಗತಮಾಡಿಕೊಂಡಿರುವ ಭಾರತೀಯ ಸಮಾಜ ಇಂದಿಗೂ ಅನಾಧಿಕಾಲದ ಇಂತಹ ಅವೈಚಾರಿಕ ಅಂಶಗಳಿಗೆ ಒತ್ತನ್ನು, ಮಹತ್ವವನ್ನು ನೀಡುತ್ತಿರುವುದು ಪುರುಷಧಿಶಾಹಿಯ ಪ್ರಾಬಲ್ಯವೆ ಸರಿ. ಸನಾತನ ಮೌಲ್ಯಗಳು ಆಧುನಿಕ ಸಮಾಜದಲ್ಲಿಯೂ ಮಹಿಳಾ ರಾಜಕಾರಣದಂತಹ ಮಹತ್ವದ ಸಂಸ್ಥೆಗಳ ಮೇಲೆ ಸವಾರಿ ಮಾಡುತ್ತಿರುವುದರಿಂದ ರಾಜಕೀಯವು ಅವಳಿಗೆ ದೂರವಾಗುತ್ತಿದೆ. ಸಾಮಾಜಿಕ ಕ್ಷೇತ್ರದ ಅತ್ಯುನ್ನತ ಸಂಸ್ಥೆಯಾಗಿರುವ ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ರಾಜಕೀಯ ಪರಿಭಾಷೆಯನ್ನು ಅರಿಯುವ ಪ್ರಯತ್ನ ಸದ್ಯದ ತುರ್ತಾಗಿದೆ. ಮಹಿಳೆಯ ಈ ಬಗೆಯ ಹಿಂದುಳಿಯುವಿಕೆಯ ಹಿಂದೆ ಸಾಮಾಜಿಕ ಜೀವನದಲ್ಲಿ ಬೀಡುಬಿಟ್ಟಿರುವ ಕೆಲವು ಸಾಮಾನ್ಯೀಕರಿಸಿದ ಸಂಗತಿಗಳು ಸದಾ ಅವಳನ್ನು ನಿಯಂತ್ರಿಸುತ್ತಲೆ ಇರುತ್ತವೆ. ವಾಸ್ತವವಾಗಿ ಸಮಾಜ ನಿಂತಿರುವುದೆ ಇಂತಹ ಮೌಲ್ಯಗಳ ಮೇಲೆ ಎಂದರೆ ತಪ್ಪಾಗಲಾರದು. ಇಂತಹ ತಾತ್ವಿಕ ಸಿದ್ಧಾಂತಗಳಡಿಯಲ್ಲಿ ಮಹಿಳಾ ರಾಜಕೀಯ ಪ್ರಶ್ನೆಯನ್ನು ಅರಿಯುವುದು ಪ್ರತಿನಿಧೀಕರಣದಿಂದ ಸಾಧ್ಯ.

ಪ್ರಸ್ತುತ ಅಧ್ಯಯನದಲ್ಲಿ ದಲಿತ ಮಹಿಳಾ ರಾಜಕೀಯ ಪ್ರತಿನಿಧೀಕರಣದ ತಾತ್ವಿಕತೆಯನ್ನು ಅರಿಯಲು ಪ್ರಯತ್ನಿಸಲಾಗಿದೆ. ದಲಿತ ಮಹಿಳೆ ಸಮಾಜದ ಅತ್ಯಂತ ಕಟ್ಟಕಡೆಯ ಮಹಿಳೆ ಅಥವಾ ವ್ಯಕ್ತಿ, ಸಾಮಾಜಿಕ ಜೀವನದಲ್ಲಿ ಪ್ರತಿಯೊಂದು ಬಗೆಯಲ್ಲೂ ಅವಳು ನಿಯಂತ್ರಣ, ತುಳಿತ, ಅಲಕ್ಷ್ಯ, ತಿರಸ್ಕಾರ, ತಾತ್ಸಾರಗಳಿಗೆ ಬಲಿಯಾಗುತ್ತಲೆ ಬಂದಿದ್ದಾಳೆ. ಇಂತಹ ದಲಿತ ಮಹಿಳೆಯ ಸಾಮಾಜಿಕ ಜೀವನದಲ್ಲಿನ ಅಧಿಕಾರ ಸಂರಚನೆಯ ರಾಜಕೀಯ ಪ್ರತಿನಿಧೀಕರಣತ್ವವನ್ನು ಸಮಾಜ, ಕುಟುಂಬ, ಧರ್ಮ, ಸಾಮಾಜಿಕ, ರಾಜಕೀಯ ಸಂಸ್ಥೆಗಳು ಯಾವ ರೀತಿಯಾಗಿ ಪರಿಭಾವಿಸಿವೆ ಎಂಬುದನ್ನು ಅರಿಯಲು ಪ್ರಯತ್ನಿಸಲಾಗುವುದು. ಸಾಮಾಜಿಕ ವ್ಯವಸ್ಥೆಯ ನಿಯಂತ್ರಕ ಶಕ್ತಿಗಳಾಗಿರುವ ಊಳಿಗಮಾನ್ಯಶಾಹಿ, ಪುರೋಹಿತಶಾಹಿ, ಬಂಡವಾಳಶಾಹಿ ಹಾಗೂ ಯಾಜಮಾನ್ಯಶಾಹಿಯಂತಹ ಪ್ರಭುತ್ವಗಳು ಅವಳ ರಾಜಕಾರಣದ ಕುರಿತು ಹೊಂದಿರುವಂತ ಆಲೋಚನೆಯ ಬಗೆ ಯಾವುದು ಎಂಬುದನ್ನು ಇಲ್ಲಿ ಗಮನಿಸಲಾಗುತ್ತದೆ. ಮೇಲ್ವರ್ಗದ ಅಥವಾ ಮೇಲ್ಜಾತಿಯ ಮಹಿಳೆಯ ಪ್ರತಿನಿಧೀಕರಣಕ್ಕಿಂತ ದಲಿತ ಮಹಿಳೆಯ ಪ್ರತಿನಿಧೀಕರಣ ಯಾವ ರೀತಿಯಾಗಿ ಭಿನ್ನ ಎಂಬುದನ್ನು ಇದರಿಂದಲೆ ನಾವು ತಿಳಿಯಬಹುದಾಗಿದೆ. ಸಾಮಾಜಿಕ ಪಾತ್ರಗಳಿಂದ ದಲಿತ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳತ್ತ ಗುಣಾತ್ಮಕ ವಿಧಾನದ ಮೂಲಕ ಅಲ್ಲಿ ಒಬ್ಬ ಮಹಿಳೆಯ ಸ್ಥಿತಿಯನ್ನು ಅರಿಯುವುದು ಹತ್ತು ಜನರ ಸ್ಥಿತಿಯನ್ನು ಅರಿಯುವುದು ಒಂದೆ ಆಗುತ್ತದೆ. ಸಾಮಾಜಿಕ ಜೀವನದಲ್ಲಿ ದಲಿತರು ಮುಖ್ಯವಾಗಿ ಎದುರಿಸುತ್ತಿರುವುದು ಸಾಮಾಜಿಕ ಬಹಿಷ್ಕಾರದಂತಹ ಶಿಕ್ಷೆಗಳು. ಆ ಕಾರಣದಿಂದಲೆ ಅವರು ಸಮಾಜದ ಮುಂದುವರೆದ ಜಾತಿಗಳೊಂದಿಗೆ ಎಂದಿಗೂ ಸಂಘರ್ಷಕ್ಕೆ, ವಿರೋಧಕ್ಕೆ ಸ್ಪರ್ಧೆಗೆ ಇಳಿಯಲಾರರು. ಇಂತಹ ಸ್ಥಾನಗಳು ಯಾವುದೆ ಒಂದು ಭಾಗದಲ್ಲಿ ಒಂದು ತೆಗೆದುಕೊಂಡರೂ ಒಂದೆ.

ಹತ್ತು ತೆಗೆದುಕೊಂಡರೂ ಒಂದೇ ಆಗಿರುತ್ತದೆ ಎಂಬುದನ್ನು ಗಮನಿಸಬೇಕು. ಇದನ್ನೆ ಪ್ರತಿನಿಧೀಕರಣದ ಸೈದ್ಧಾಂತಿಕ ಚರ್ಚೆ ಎನ್ನುವರು. ದಲಿತ ಅನುಭವದ ಮೂಲಕ ಸಾವಿರಾರು ದಲಿತ ಮಹಿಳೆಯರ ಸ್ಥಿತಿಯನ್ನು ಅರಿಯಲು ಪ್ರತಿನಿಧೀಕರಣದಿಂದ ಮಾತ್ರ ಸಾಧ್ಯ. ಈ ಬಗೆಯ ಪ್ರತಿನಿಧಿಕರಣ ಎನ್ನುವಾಗ ಅಲ್ಲಿಯ ನಿಯಂತ್ರಕ ಶಕ್ತಿ (Power struture)ಗಳಲ್ಲಿ ದಲಿತ ಮಹಿಳೆ ಸ್ಥಾನ ಮಾತ್ರವೆ ಅಲಂಕರಿಸಿದ್ದರೂ, ಅವಳು ವಾಸ್ತವವಾಗಿ ಅದನ್ನು ಚಲಾಯಿಸಲಾರಳು. ಮೇಲ್ವರ್ಗದವರ ಆದೇಶಾನುಸಾರವಾಗಿಯೇ ಅವಳು ತನ್ನ ಅಧಿಕಾರವನ್ನು ಚಲಾಯಿಸಬೇಕು.

ದಲಿತ ಮಹಿಳಾ ಪ್ರತಿನಿಧೀಕರಣ ಎನ್ನುವಾಗ ನಾವು ಇಲ್ಲಿ ಒಂದು ಅಲಕ್ಷಿತ ಸಮುದಾಯದ ಅಂಚಿನ ವ್ಯಕ್ತಿಯನ್ನು ಕೇಂದ್ರೀಕರಿಸಿಕೊಳ್ಳಬೇಕು. ದಮನಿತರಲ್ಲೆ ದಮನಿತವಾಗಿರುವ ದಲಿತ ಮಹಿಳೆಯ ಮೇಲಿನ ಅಪಮಾನ, ಅಧಿಕಾರ ಹೀನತೆ, ಯಾತನೆ, ಸಂಕಟ, ತಲ್ಲಣಗಳನ್ನು ಅರಿಯುವಂತಹ ಸೂಕ್ಷ್ಮ ಪ್ರಯತ್ನ ಪ್ರತಿನಿಧೀಕರಣದಲ್ಲಿ ಸಾಧ್ಯವಿದೆ. ಪ್ರತಿನಿಧೀಕರಣದಿಂದ ಸಮಾಜದಲ್ಲಿ ಮಹಿಳೆಯರ ಪರವಾಗುವ ನಂಬಿಕೆಗಳು, ಆದರ್ಶಗಳು, ವಿಧಿಗಳು ಅವಳನ್ನು ಹೇಗೆ ನಡೆಸಿಕೊಂಡಿವೆ ಎಂಬುದನ್ನು ನಿರೂಪಿಸಬಹುದು. ತಮ್ಮ ಕೆಳ ಹಂತದಲ್ಲಿರುವವರನ್ನು ಹತೋಟಿಯಲ್ಲಿಟ್ಟು ಹಾಗೂ ಅವರ ಅಸ್ತಿತ್ವವನ್ನು ನಿರ್ದಿಷ್ಟವಾಗಿ ತಮ್ಮ ಪುರೋಭಿವೃದ್ಧಿಗೆ ಬಳಸಿಕೊಳ್ಳಲು ಧರ್ಮ, ಪರಂಪರೆ, ಜಾತಿಯಾಧಾರಿತ ಅಧಿಕಾರದಂತಹ ಸಲಕರಣೆಗಳನ್ನು ಕಾಲಕ್ಕನುಗುಣವಾಗಿ, ಕರ್ಮಕ್ಕನುಗುಣವಾಗಿ ಪುರುಷಶಾಹಿಯೂ ಬಹಳ ಚಾಲಾಕಿತನದಿಂದಲೆ ಅವಳನ್ನು ಬಳಸಿಕೊಂಡಿರುವ ಸಂಗತಿ ನಮ್ಮ ಇತಿಹಾಸದ ಉದ್ದಕ್ಕೂ ಕಂಡು ಬರುತ್ತದೆ.

ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ಸಹಭಾಗಿತ್ವ ಅಥವಾ ಪ್ರತಿನಿಧೀಕರಣದ ಬಗ್ಗೆ ಅರಿಯುವುದಾದರೆ, ಭಾರತವೂ ಒಂದು ಸಾಂಪ್ರದಾಯಿಕವಾದಿ ಜಾತ್ಯಾತೀತ ತತ್ವದಡಿಯಲ್ಲಿ ಅಚಲ ನಂಬಿಕೆಯೊಂದಿರುವ ರಾಷ್ಟ್ರ. ಇಲ್ಲಿ ಸಮಾನತೆಯ ತತ್ವವನ್ನು ಅತ್ಯಂತ ಔಚಿತ್ಯಪೂರ್ಣವಾಗಿ, ಯೋಜಿತವಾಗಿ ಪಾಲಿಸಬೇಕು ಎಂಬ ಧ್ಯೇಯೋದ್ದೇಶವಿದೆ. ಜಾತಿ, ಧರ್ಮ, ಕುಲ, ಲಿಂಗ, ಪ್ರಾದೇಶಿಕತೆ, ಭಾಷೆಯನ್ನಾಧರಿಸಿ ಯಾವುದೆ ಬಗೆಯ ತಾರತಮ್ಯ ಸಮಾನತೆ ತತ್ವಕ್ಕೆ ವಿರುದ್ಧ. ಆದರೆ ಶೂದ್ರರು, ಮಹಿಳೆಯರು ಸಮಾಜದ ಅಂಚಿನ ಸಮುದಾಯಗಳಿಗೆ ಇದರ ಪ್ರಾಥಮಿಕ ಅಕ್ಷರಗಳೆಗೊತ್ತಿಲ್ಲ. ಅದರಲ್ಲಿಯಂತೂ ದಲಿತ ಮಹಿಳೆಯ ಪಾಡು ಅತ್ಯಂತ ನಿಕೃಷ್ಟವಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪ್ರತಿನಿಧೀಕರಣದ ಬಗ್ಗೆ ಅರಿಯುವಾಗ ಅವಳ ರಾಜಕೀಯ ಸಹಭಾಗಿತ್ವದ ಸ್ವರೂಪ ಯಾವ ಬಗೆಯದಾಗಿದೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ಮಹಿಳೆಗೆ ರಾಜಕೀಯ ಹೊಸದೇನಲ್ಲ. ಅವಳು ಸ್ವಾತಂತ್ರ್ಯ ಪೂರ್ವದಲ್ಲೆ ರಾಜಕೀಯಕ್ಕೆ ಬಂದಿದ್ದಳು. ಸ್ವಾತಂತ್ರ್ಯ ನಂತರ ತನಗೂ ಸಹ ಬಾಹ್ಯಲೋಕದ ಅವಕಾಶ ಸಿಗಬಹುದೆಂಬ ಮಹದಾಸೆಯಿಂದ ಸ್ವಾತಂತ್ರ್ಯ ಚಳವಳಿಯಲ್ಲಿ ಯಶಸ್ವಿಯಾಗಿ ಧುಮುಕಿದಳು. ಮಹಿಳೆಯ ರೂಪದಲ್ಲಿ ದೇಶವನ್ನೆ ಊಹಿಸಿಕೊಂಡು ಅವಳನ್ನು ಸ್ವಾತಂತ್ರ್ಯಳನ್ನಾಗಿ ಮಾಡುವುದೆ ಅಂದಿನ ಚಳುವಳಿಯ ಮುಖ್ಯ ಉದ್ದೇಶವಾಗಿತ್ತು ಎನ್ನುವುದೆ ಬಹಳ ವಿಶಿಷ್ಟ ವಿಚಾರ. ಮೊಟ್ಟ ಮೊದಲ ಬಾರಿಗೆ 'ಮಹಿಳೆಯೂ ಸ್ವಾತಂತ್ರ್ಯಕ್ಕೆ ಅರ್ಹಳು' ಎನ್ನುವ ಆಲೋಚನೆಗೆ ಸ್ವರೂಪವನ್ನು ತಂದುಕೊಟ್ಟಿರುವುದೆ ಈ ಚಳುವಳಿಯ ಮಹತ್ವ. ಆದರೆ ಸ್ವಾತಂತ್ರ್ಯ ನಂತರದಲ್ಲಿ ನಡೆದಂತಹ ಸ್ಥಿತ್ಯಂತರಗಳು. ರಾಜಕೀಯ

ಅನಿಶ್ಚಿತತೆಗಳು, ಸ್ವಾರ್ಥಗಳಿಂದ ಮಹಿಳೆಯನ್ನು ಮತ್ತೆ ಅಡುಗೆ ಮನೆಗೆ ದೂಡಲಾಯಿತು. ತನ್ನ ಸ್ವಾತಂತ್ರ್ಯದ ಕುರಿತು ಅವಳು ಕಂಡಿದ್ದ ಕನಸು ಕನಸಾಗಿಯೇ ಉಳಿಯಿತು. ಸಾಹಿತ್ಯವಾಗಿರಲಿ, ರಾಜಕೀಯವಾಗಿರಲಿ, ಜನಪ್ರಿಯ ಸಂಸ್ಕೃತಿಯೇ ಆಗಿರಲಿ. ಸ್ವಾತಂತ್ರ್ಯ ಸಂಗ್ರಾಮದ ಹತ್ತು ಹಲವು ಮಗ್ಗಲುಗಳನ್ನು ದಾಖಲಿಸುವ ಯಾವುದೆ ಅಭಿವ್ಯಕ್ತಿಯನ್ನು ತೆಗೆದುಕೊಂಡರೂ ಬಹುತೇಕವಾಗಿ ಅದು 'ಸ್ತ್ರೀತ್ವದ' ವಿವಿಧ ಪರಿಕರಗಳನ್ನು ಬಹಳ ಯಶಸ್ವಿಯಾಗಿ ಎನ್‌ಕ್ಯಾಶ್‌ಮಾಡಿಕೊಂಡಿರುವುದೆ ಕಂಡುಬರುತ್ತದೆ."[8] ಹೀಗೆ ರಾಜಕೀಯ ಪ್ರತಿನಿಧೀಕರಣದಲ್ಲಿ ಇದ್ದು ಇಲ್ಲದಂತಿರುವ, ಅದರಿಂದ ದೂರವೆ ಉಳಿಯುತ್ತಿರುವ ಮಹಿಳೆಯ ರಾಜಕೀಯ ಸಹಭಾಗಿತ್ವದಲ್ಲಿನ ತೊಡಕುಗಳನ್ನು ಅರಿಯಲು ಇಂದು ಪ್ರಯತ್ನಿಸಬೇಕಾಗಿದೆ. ಮಹಿಳೆ ಎನ್ನುವ ಸಂರಚನೆ ಸಹಜವಾದದ್ದಲ್ಲ ಇಂತಹ ಅಸಹಜ ಪ್ರತಿನಿಧೀಕರಣವನ್ನು ಪುರುಷನಿಷ್ಠ ಮೌಲ್ಯಗಳು ಕಟ್ಟುತ್ತ ಬಂದ ಹಾಗೆ ಮಹಿಳಾ ಧ್ವನಿಗಳು ಅದನ್ನು ಪ್ರಶ್ನಿಸುತ್ತ ಧಿಕ್ಕರಿಸುತ್ತ, ಒಡೆದುಹಾಕುತ್ತ ತಮ್ಮ ಪ್ರತಿನಿಧೀಕರಣವನ್ನು ಪುನರ್ ಕಟ್ಟಿಸುವ ಪ್ರಯತ್ನವನ್ನು ನಡೆಸಬೇಕಾದ ಜರೂರು ಇದೆ. ರಾಜಕೀಯ ಅವಕಾಶವನ್ನು ಎಲ್ಲರಂತೆಯೇ ಸಮಾನವಾಗಿ ಪಡೆದಿದ್ದರೂ ಅದನ್ನು ಚಲಾಯಿಸುವಿಕೆಯಲ್ಲಿ ತೊಡಕುಗಳನ್ನು ಪ್ರತಿನಿಧೀಕರಣದ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

**೩.೪. ಗ್ರಾಮ ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ**

ವಿಕೇಂದ್ರಿಕರಣದ ತಾತ್ವಿಕ ತಳಹದಿಯಲ್ಲಿ ಸಮಾನತೆಯೆಂಬ ಒಂದು ಆದರ್ಶವೂ ಇದರಲ್ಲಿ ಅಡಕವಾಗಿದೆ. ಪ್ರತಿಯೊಬ್ಬರು ಹುಟ್ಟುತ್ತಲೆ ಸಮಾನರು, ಸಮಾಜದಲ್ಲಿನ ಎಲ್ಲಾ ಚಟುವಟಿಕೆಗಳಿಗೆ ಸ್ತ್ರೀ ಪುರುಷರಿಬ್ಬರ ಪಾಲು ಸಮಸಮವಾಗಿರುವುದರಿಂದ ಇಲ್ಲಿ ತಾರತಮ್ಯ ಸಲ್ಲದು. ಈ ಹಿನ್ನೆಲೆಯಲ್ಲಿ ದಲಿತ ಮಹಿಳಾ ರಾಜಕಾರಣದ ಕುರಿತಾದ ಪ್ರಶ್ನೆಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲಾಗಿದೆ. ಪ್ರತಿಯೊಬ್ಬರು ರಾಜಕೀಯ ಹಕ್ಕುಗಳನ್ನು ಸಮಾನವಾಗಿ ಹೊಂದಿ ಅನುಭವಿಸುವುದು ರಾಜಕೀಯ ಸಮಾನತೆಯಡಿ ಬರುತ್ತದೆ. ಇಲ್ಲಿ ನಾಗರಿಕರಿಗೆ ಅವರು ತಮ್ಮ ಸರಕಾರದಲ್ಲಿ ಹೊಂದುವ ಭಾಗವೂ ಸರಿಸಮವಾಗಿರಬೇಕು. ಪ್ರಜಾಪ್ರಭುತ್ವದ ಆಧಾರ ಸ್ತಂಭವೆ ಸಮಾನತೆ. ಪ್ರಜಾಪ್ರಭುತ್ವದಲ್ಲಿ ಸಮಾನತೆಯ ನಿರಾಕರಣೆ ಎಂದರೆ ಅದು ಕ್ರಾಂತಿಗೆ ಅವಕಾಶ ಮಾಡಿಕೊಡುತ್ತದೆಂಬ ಅರಿಸ್ಟಾಟಲ್‌ರ ಮಾತು ಇಲ್ಲಿ ತುಂಬ ಔಚಿತ್ಯಪೂರ್ಣವಾಗಿದೆ. ಆದ್ದರಿಂದಲೆ ಇಂದಿನ ಎಲ್ಲಾ ಜನತಂತ್ರ ದೇಶಗಳು ಜನರಿಗೆ ರಾಜಕೀಯ ಹಕ್ಕುಗಳನ್ನು ನೀಡಿರುವುದು, ಚುನಾವಣೆಯಲ್ಲಿ ಉಮೇದುವಾರರಾಗಿ ನಿಲ್ಲುವುದು, ಮತ ಚಲಾಯಿಸುವುದು, ಸರಕಾರಿ ಸೇರುವ ಅರ್ಹತೆ, ಆಡಳಿತ ಮತ್ತು ನ್ಯಾಯಾಂಗದ ಸ್ಥಾನಗಳಿಗೆ ನೇಮಕವಾಗಬಹುದಾದ ಹಕ್ಕುಗಳನ್ನು ರಾಜಕೀಯ ಹಕ್ಕುಗಳೆಂದು ನಾವು ಪರಿಭಾವಿಸಬಹುದು. ಜಾತಿ, ಧರ್ಮ, ಕುಲ, ಮತ, ಲಿಂಗ, ವರ್ಗ, ಶ್ರೀಮಂತ ಭಾಷೆ ಹಾಗೂ ಪ್ರಾದೇಶಿಕತೆಗಳ ಆಧಾರದ ಮೇಲೆ ಭೇದಭಾವ ಎಸಿಸದೆ ಎಲ್ಲರಿಗೂ ಸರಿ ಸಮಾನವಾದ ರಾಜಕೀಯ ಹಕ್ಕುಗಳು ಸಂವಿಧಾನ ಬದ್ಧವಾಗಿ ದೊರಕಿವೆ.

ದಲಿತ ಮಹಿಳೆಗೆ ರಾಜಕೀಯ ಸಂಸ್ಕೃತಿಯ ಪರಿಭಾಷೆ ತುಂಬ ಹೊಸದು ಏಕೆಂದರೆ ಸ್ವಾತಂತ್ರ್ಯ ಸಂಗ್ರಾಮದಂತಹ ಚಳುವಳಿಯಲ್ಲಿ ದಲಿತ ಮಹಿಳಾ ಅಸ್ಮಿತ್ವವೆ ಕಾಣಲಾಗಿಲ್ಲ. ಅದೇನಿದ್ದರೂ ಮೇಲ್ವರ್ಗದ ಮಹಿಳೆಯರ ಪಾಲೆ ಅಧಿಕವಾಗಿದೆ. ಇಲ್ಲಿ ಸಂಪೂರ್ಣವಾಗಿ ಮಹಿಳೆಯರೆ ಭಾಗವಹಿಸಿದ್ದರೆಂದಲ್ಲ, ಏಕೆಂದರೆ ಸಾರ್ವಜನಿಕವಾಗಿ ಅವಳ

ಭಾಗವಹಿಸುವಿಕೆಯನ್ನು ಪಿತೃ ಪ್ರಧಾನ ಸಮಾಜ ನಿರಾಕರಿಸುತ್ತದೆ ಹಾಗೆಯೇ ಅಂದಿನ ಹೋರಾಟದ ಪ್ರಮುಖ ನಾಯಕರಾಗಿದ್ದ ಶ್ರೀಯುತ ಗಾಂಧೀಜಿಯವರು ಸಹ ಮಹಿಳೆಯರ ರಾಜಕೀಯ ಭಾಗವಹಿಸುವಿಕೆಯ ಕುರಿತಾಗಿ ಇತ್ಯಾತ್ಮಕವಾದ ಭಾವನೆಯನ್ನೆ ಹೊಂದಿದ್ದರು. ಸ್ವಾತಂತ್ರ್ಯ ಹೋರಾಟದ ತಾತ್ವಿಕತೆಯನ್ನು ಅವರು ರೂಪಿಸಿಕೊಳ್ಳಲು ಮಹಿಳೆಯ ಸ್ತ್ರೀಯಾತ್ಮಕ ಪಾತ್ರದ ಆದರ್ಶವನ್ನೆ ಯಶಸ್ವಿಯಾಗಿ ಬಳಸಿಕೊಂಡರು. ಅಹಿಂಸೆಯೂ ಸತ್ಯಾಗ್ರಹದ ಪ್ರಬಲ ಅಸ್ತ್ರವೆಂದು ವಿವರಿಸಿಕೊಂಡ ಗಾಂಧಿಯವರು, ಅಹಿಂಸೆ ಎಂದರೆ ಕೊನೆ ಇಲ್ಲದ ತ್ಯಾಗ, ಕಷ್ಟ ಸಹಿಷ್ಣುತೆ, ತ್ಯಾಗ, ಪ್ರೇಮ, ಎಂದೆ ಪರಿಭಾವಿಸಿಕೊಂಡಿದ್ದರು.[೧೬] ಈ ಬಗೆಯ ಇತ್ಯಾತ್ಮಕವಾದ ಹೆಣ್ಣಿನ ಕುರಿತಾದ ಪಿತೃ ಪ್ರಧಾನ ಮೌಲ್ಯಗಳು ರಾಷ್ಟ್ರಪಿತನನ್ನು ಆವರಿಸಿಕೊಂಡಿದ್ದವು. ಪರಿಸ್ಥಿತಿ ಹೀಗಿರುವಾಗ ಸ್ವಾತಂತ್ರ್ಯ ಹೋರಾಟದಂತಹ ಗುರುತರವಾದ ಹೋರಾಟಗಳಲ್ಲಿ ದಲಿತ ಮಹಿಳೆಯ ಸಹಭಾಗಿತ್ವವನ್ನು ನಾವು ಯಾವ ಕೋನದಿಂದ ನೋಡಿದರೂ ಅವಳ ಗೈರೆ ಎದ್ದು ಕಾಣುತ್ತದೆ. ಪಿತೃ ಪ್ರಧಾನ ಸಮಾಜವು ಮಹಿಳೆಯ ಬಗೆಗೆ ಹೊಂದಿರುವಂತಹ ಆದರ್ಶಿಕೃತ ಪಾತ್ರದ ಅಭಾವವು ಪುರುಷರಲ್ಲಿದ್ದ ಕಾರಣ, ಇಂತಹ ಪುರುಷರ ಮುಂದಾಳತ್ವದಲ್ಲಿನ ಹೋರಾಟದಲ್ಲಿ ಹೆಣ್ಣಿನ ಸ್ಥಾನ ಪಾಲ್ಗೊಳ್ಳುವಿಕೆ ತುಂಬ ಗೌಣವಾಯಿತು.

ಭಾರತದಲ್ಲಿ ಪ್ರತಿಯೊಂದು ರಾಜಕೀಯ ಪಕ್ಷಗಳು ಮಹಿಳಾ ರಾಜಕಾರಣ, ಮಹಿಳಾ ರಾಜಕೀಯ ಸಮಾನತೆ, ಮೀಸಲಾತಿ ಕುರಿತಂತೆ ತುಂಬ ಘಂಟಾಘೋಷವಾಗಿ ಮಾತಾಡುತ್ತವೆಯಾದರೂ ದಲಿತ ಮಹಿಳೆಯ ರಾಜಕೀಯದ ಕುರಿತು ಯಾವೊಂದು ಪಕ್ಷವು ಚಿಂತಿಸದಿರುವುದು ರಾಜಕೀಯ ಪಕ್ಷಗಳಲ್ಲಿನ ದಲಿತ ಮಹಿಳೆಯ ವಿರುದ್ಧದ ಇಚ್ಛಾಶಕ್ತಿಯನ್ನೆ ಕಾಣಬಹುದು. ಸಮಾನತೆಯ ತತ್ವಸಾರುವ ರಾಷ್ಟ್ರದಲ್ಲಿ ಅಂಚಿನ ಸಮುದಾಯದ ಮಹಿಳೆಗೆ ಒದಗಿಬಂದಿರುವ ದುಸ್ಥಿತಿ ಇದು. ಕೆಲವು ಪಕ್ಷಗಳಲ್ಲಿ ದಲಿತ ಮಹಿಳೆಯ ಪ್ರಾತಿನಿಧ್ಯವಿದೆಯಾದರೂ ಅಲ್ಲಿ ಅವಳನ್ನು ಎನ್‌ಕ್ಯಾಶ್ ಮಾಡಿಕೊಳ್ಳುವ, ದಲಿತ ಸಮುದಾಯದ ಓಟ್‌ಬ್ಯಾಂಕ್ ಪಡೆಯುವ ವ್ಯವಸ್ಥಿತ ರಾಜಕೀಯ ಸಂಚಿದೆ. ಚುನಾವಣೆಯ ಮುಂಚೆ ವಿವಿಧ ರಾಜಕೀಯ ಪಕ್ಷಗಳ ನಾಯಕರುಗಳು ನಿಮ್ಮ ಪರವಿದ್ದೇವೆಂಬ ಹುಸಿ ಸತ್ಯವನ್ನೆ ಅವರಿಗೆ ಹೇಳುತ್ತಲೆ ತುಂಬ ಜಾಣತನದಿಂದ ಮೋಸ ಮಾಡುತ್ತಲೆ ಸಾಗಿವೆ. ಇದನ್ನೆಲ್ಲ ಮುಗ್ಧ ಮನಸ್ಸಿನಿಂದಲೆ ಸ್ವಿಕರಿಸುವ ದಲಿತ ಮಹಿಳೆಯರು ಈ ಬಗೆಯ ಹುಸಿ ವಚನಗಳಿಗೆ ಬಲಿಯಾಗುತ್ತಲೆ ಇದ್ದಾರೆ. ಕೆಲವು ಪಕ್ಷಗಳಲ್ಲಿ ದಲಿತ ಮಹಿಳೆಯರು ಪ್ರಭಾವಯುತ ಅಧಿಕಾರ ಪಡೆದಿದ್ದಾಗ್ಯೂ ಅವರು ತನ್ನ ಸಮುದಾಯದ ಇತರ ದಲಿತ ಮಹಿಳೆಯ ಉನ್ನತಿಗಾಗಿ ಯಾವ ಕೆಲಸವನ್ನು ಮಾಡಲಾಗುತ್ತಿಲ್ಲ. ದಲಿತ ಮಹಿಳೆಯರಲ್ಲಿಯೂ ಸಹ ಇತರ ಮೇಲ್ಜಾತಿಯವರಂತೆ ಧೈರ್ಯ, ಬುದ್ಧಿವಂತಿಕೆ, ಚತುರತನ, ಸೇವಾಮನೋಭಾವ ಎಲ್ಲವೂ ಇದ್ದರೂ ಸಹ ಅವರ ಜಾತಿಯ ಕಾರಣಕ್ಕಾಗಿ ಅದನ್ನು ಪ್ರದರ್ಶಿಸುವಲ್ಲಿ ಸೋಲುತ್ತಿದ್ದಾಳೆ.

ಪಿತೃಪ್ರಧಾನತೆಯ ಪ್ರಮುಖ ಉದ್ದೇಶ ಎಂದರೆ ತನ್ನ ಅಧೀನದಲ್ಲಿರುವ ಅಧಿಕಾರವನ್ನು ನಿರಂತರವಾಗಿ ಸಾಗಿಸುತ್ತ ಅಧಿಕಾರಕ್ಕೆ ಒಳಗಾದವರನ್ನು ನಿರಂತರವಾಗಿ ನಿಯಂತ್ರಿಸುವುದೆ ಆಗಿರುತ್ತದೆ. ಈ ಪಿತೃಪ್ರಧಾನತೆ ಎಂಬುದು ಎಲ್ಲಾ ಕಡೆಯೂ ಒಂದೇ ತೆರನಾಗಿರುವುದಿಲ್ಲ. ಜಾತಿ, ವರ್ಗ, ಪ್ರದೇಶ, ಧರ್ಮ ಮತ್ತು ಜನಾಂಗಗಳ ಮೇಲೆ ಬೇರೆ ಬೇರೆ ರೀತಿಯಾಗಿ ತನ್ನ ನಿಯಂತ್ರಣ ಹೊಂದಿರುತ್ತದೆ. ಕುಟುಂಬ, ಧರ್ಮ ಮತ್ತು ಕಾನೂನುಗಳು ನಿರಂತರವಾಗಿ

ಪುರುಷಾಧಿಕಾರವನ್ನು ಎತ್ತಿ ಹಿಡಿಯುವಲ್ಲಿ ಸಹಕಾರಿಯಾಗಿಯೇ ಕಾರ್ಯನಿರ್ವಹಿಸುತ್ತಿರುತ್ತವೆ. ಪಿತೃ ಪ್ರಧಾನತೆಯಲ್ಲಿ ಪುರುಷರು ಆಳುವವರಾದರೆ ಮಹಿಳೆಯರು ಆಳಿಸಿಕೊಳ್ಳುವವರಾಗಿರುತ್ತಾರೆ. ಪುರುಷ ಪ್ರಧಾನತೆಯೂ ಮಹಿಳಾ ಪ್ರಧಾನತೆಗೆ ಪ್ರಮುಖ ಕಾರಣವಾಗಿದೆ. ಪುರುಷ ಪ್ರಧಾನತೆ ಎಂಬುದು ಜಾತಿ ಯಾವುದೇ ಇರಲಿ ಅಲ್ಲಿ ಮಹಿಳೆಗೆ ಅಧಿಕಾರವನ್ನು ನೀಡಲಾರದು. ಅವಳೇನಾದರೂ ಹಾಗೊಂದು ವೇಳೆ ಅಧಿಕಾರರೂಢಳಾದರೆ ಪುರುಷನ ಏಕಚಕ್ರಾಧಿಪತ್ಯಕ್ಕೆ ಚ್ಯುತಿ ಬರುವುದು ಎಂಬ ಭಯದಿಂದ ಅವಳಿಗೆ ಪುರುಷ ಪ್ರಧಾನತೆಯ ಮೌಲ್ಯಗಳು ಅವಳನ್ನು ಅಧಿಕಾರದತ್ತ ಸುಳಿಯಲು ಬಿಡುತ್ತಿಲ್ಲ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಕಂಡುಬರುವ ಜಾತಿ ವ್ಯವಸ್ಥೆ ಸಮಾಜದ ಅತ್ಯಂತ ಪ್ರಭಾವ ಶಾಲಿಯಾದ ನಿಯಂತ್ರಕ ಸಾಧನವಾಗಿದೆ. ವ್ಯಕ್ತಿಯ ಹುಟ್ಟಿನೊಡನೆ ಅವರ ಜಾತಿಯನ್ನು ಅಳೆದು ಅವರಿಗೆ ಸಾಮಾಜಿಕ ಸ್ಥಾನಮಾನವನ್ನು ಹಂಚಿಕೆ ಮಾಡುತ್ತದೆ. ಉಚ್ಚಕುಲದಲ್ಲಿ ಜನಿಸಿದವರಿಗೆ ನೀಡುವ ಸ್ಥಾನಮಾನವು ಅತ್ಯುನ್ನತವಾಗಿದ್ದರೆ, ನೀಚ ಕುಲದಲ್ಲಿ ಹುಟ್ಟಿದವರ ಸ್ಥಿತಿಯೂ ನಿಕೃಷ್ಟವಾಗಿರುತ್ತದೆ. ಹೀಗೆ ವ್ಯಕ್ತಿಯ ಹುಟ್ಟಿನೊಂದಿಗೆಯೇ ಆರಂಭವಾಗುವ ಜಾತಿ ವ್ಯವಸ್ಥೆಯ ಸಂರಚನೆಗಳು ವ್ಯಕ್ತಿಗಳು ಸಮಾಜದ ಸದಸ್ಯರಾಗಿ ಅವರ ಕಟ್ಟುಪಾಡುಗಳನ್ನು ಯಾವುದೇ ಕಾರಣಕ್ಕೂ ಮೀರುವಂತಿಲ್ಲ, ನಿರಾಕರಿಸುವಂತಿಲ್ಲ. ಇಂತಹ ವ್ಯವಸ್ಥೆಯಲ್ಲಿ ಊಳಿಗಮಾನ್ಯಶಾಹಿ, ಯಾಜಮಾನ್ಯಶಾಹಿ ಹಾಗೂ ಬಂಡವಾಳಶಾಹಿಗಳು ಅಂಚಿನ ಸಮುದಾಯಗಳ ಜನರನ್ನು ತಮ್ಮ ಸಕಲ ಇಷ್ಟಾರ್ಥಗಳಿಗೆ ಬಳಸಿಕೊಳ್ಳುವ ಅವಕಾಶ ಈ ಬಗೆಯ ವರ್ಗವ್ಯವಸ್ಥೆಯಲ್ಲಿದೆ. ಇಂತಹ ವ್ಯವಸ್ಥೆಗಳೆ ವಾಸ್ತವವಾಗಿ ನಮ್ಮನ್ನು ಆಳುತ್ತಿರುವುದು. ರಾಜಕೀಯ ಅಥವಾ ಮೀಸಲಾತಿಯ ಕಾರಣದಿಂದ ಅಧಿಕಾರ ಗ್ರಹಣ ಪಡೆದ ದಲಿತ ಮಹಿಳೆ ತನಗೆ ನೀಡಲ್ಪಟ್ಟಿರುವ ಅಧಿಕಾರವನ್ನು ಯಥಾ ರೀತಿಯಲ್ಲಿ ಊರಿನ ನಿಯಂತ್ರಕ ಶಕ್ತಿಗಳಿಗೆ ಧಾರೆ ಎರೆದು ಕೊಟ್ಟಿದ್ದಾಳೆ. ದಲಿತ ಮಹಿಳೆಗೆ ಅಧಿಕಾರ ಚಲಾವಣೆಯಲ್ಲಿ ಶೋಷಣೆ ಎಂಬ ಭಯ ನಿರಂತರವಾಗಿ ಅವಳನ್ನು ಕಾಡುತ್ತಲೆ ಇದೆ. ಎಲ್ಲಿ ತನಗೆ ಅವಮಾನವಾಗಿ ಬಿಡುವುದೋ ಎಂಬ ಅಂಜಿಕೆಯಿಂದಲೇ ಅವಳನ್ನು ಅಧಿಕಾರದಿಂದ ದೂರ ಸರಿಯುತ್ತಿದ್ದಾಳೆ. ಇಂತಹ ದಲಿತ ಮಹಿಳಾ ಅಧೀನ ಸ್ಥಿತಿಗೆ ಪ್ರಭುತ್ವ ಅವರ ಬೆಂಗಾವಲಾಗಿ ಅವಳಿಗೆ ಶೋಷಿಸುತ್ತಲೆ ಮಹಿಳಾ ಅಸ್ತಿತ್ವ, ಅನನ್ಯತೆ, ಅಂತಃಸತ್ವ, ಸೃಜನಶೀಲತೆಗಳನ್ನು ಮೊಟಕುಗೊಳಿಸುತ್ತಲೆ ಅವಳ ರಾಜಕೀಯಾಧಿಕಾರವನ್ನು ತಿರಸ್ಕರಿಸುತ್ತಿವೆ.

೧೯೮೭ರಲ್ಲಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಜನತಾ ಸರಕಾರ 'ಜನತೆಯೆಡೆಗೆ ಅಧಿಕಾರ' ಎಂಬ ಧ್ಯೇಯದೊಂದಿಗೆ ರಾಜಕೀಯದಲ್ಲಿ ಮಹಿಳೆಯ ಪಾಲಗೊಳ್ಳುವಿಕೆಗೆ ನಾಂದಿ ಹಾಡಿತು. ಈ ಬಗೆಯ ಚಾರಿತ್ರಿಕ ನಿರ್ಣಯದಿಂದ ಮಹಿಳೆ ಮನೆಯ ಆಚೆಗೂ ತನಗೊಂದು ಜವಾಬ್ದಾರಿ ಇದೆ ಎಂಬ ಅರಿವಿನೊಂದಿಗೆ ರಾಜಕೀಯ ಸುಪರ್ದಿಗೆ ಬಂದಳು. ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ನೀಡುವುದರ ಮೂಲಕ ಸರಕಾರ ದಲಿತ ಮಹಿಳಾ ಸಮುದಾಯಕ್ಕೆ ರಾಜಕೀಯ ವೇದಿಕೆಯನ್ನು ನಿರ್ಮಿಸಿಕೊಟ್ಟಿತು. ೧೯೯೩ರ ಕಾಯ್ದೆಯೂ ಇದಕ್ಕೆಲ್ಲ ಮೂಲಕಾರಣವಾಗಿದೆ. ಅಲ್ಲದೆ ಅನಾದಿಕಾಲದಿಂದಲೂ ರಾಜಕೀಯ ಸುಪರ್ದಿಯೊಳಗೆ ಬಾರದಿದ್ದಂತಹ ದಲಿತ ಮಹಿಳಾ ಸಮುದಾಯಕ್ಕೆ ಶೇ ೩೩ರ ಅನುಪಾತದಡಿಯಲ್ಲಿ ಮೀಸಲಾತಿ ನೀಡುವುದರ ಮೂಲಕ ಅವಳಿಗೆ

ರಾಜಕೀಯಾವಕಾಶಗಳನ್ನು ತೆರೆಯಲಾಯಿತು. ಇಂತಹ ಜನೋಪಕಾರಿಯಾದಂತಹ ಮೀಸಲಾತಿಯ ದಿಶೆಯಿಂದ ಸುಮಾರು ದಲಿತ ಮಹಿಳೆಯರು ರಾಜಕೀಯಕ್ಕೆ ಬರುವಂತಾಯಿತು.

ರಾಜಕೀಯದಲ್ಲಿ ದಲಿತ ಮಹಿಳೆಯರ ಭಾಗವಹಿಸುವಿಕೆಯೂ ತುಂಬ ವ್ಯತ್ಯಾಸಾತ್ಮಕವಾದುದು. ಏಕೆಂದರೆ ತಮ್ಮ ರಾಜಕೀಯ ಚಟುವಟಿಕೆ ಅಥವಾ ರಾಜಕೀಯ ಸೃಜನಶೀಲತೆಯನ್ನು ತೋರಿಸಲು ಅವರಿಗೆ ಹಿಂದಿನ ಸನಾತನ ಅಂಶಗಳು ಅಧಿಕಾರ ಪಡೆಯಲು ಚಲಾಯಿಸಲು ಬಿಡಲೆ ಇಲ್ಲ. ಕೆಲವೆ ಕೆಲವು ಮಹಿಳೆಯರು ತಮ್ಮ ಚಾಕಚಕ್ಯತೆಯನ್ನು ತೋರಿದರಾದರೂ ಅವರ ಸಂಖ್ಯೆಯೂ ತುಂಬ ಕಡಿಮೆ. ದಲಿತ ಮಹಿಳೆ ನಿತ್ಯನಿರಂತರವಾಗಿ ತನ್ನ ಬೆನ್ನ ಹಿಂದೆಯೇ ಕಟ್ಟಿಕೊಂಡು ಬಂದಿರುವ ಸಾಂಸ್ಕೃತಿಕ ಜವಾಬ್ದಾರಿಗಳಾದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕ ಅಂಶಗಳು ಅವಳ ಲಿಂಗ ಪಾತ್ರದ ತಾತ್ವಿಕತೆ, ಜಾತೀಯತೆಯ ಕಾರಣದಿಂದ ಅವಳ ಅಧಿಕಾರವನ್ನು, ಚೈತನ್ಯಾತ್ಮಕ ಸ್ತ್ರೀಸತ್ವವನ್ನು, ರಾಜಕೀಯ ಗುರುತನ್ನು, ಸ್ತ್ರೀಮತಾಧಿಕಾರವನ್ನು ನಿರಾಕರಿಸುತ್ತಲೆ ಬಂದವು. ಜಿಲ್ಲಾ ತಾಲ್ಲೂಕ ಹಾಗೂ ಗ್ರಾಮ ಪಂಚಾಯತಿಗಳಲ್ಲಿ ದಲಿತ ಮಹಿಳೆಯರ ಪ್ರಾತಿನಿಧ್ಯ, ಭಾಗವಹಿಸುವಿಕೆಯೂ ವ್ಯಾಪಕವಾಗಿ ಕಂಡುಬರುತ್ತಿಲ್ಲ. ರಾಜ್ಯಗಳಲ್ಲಿಯ ಅಸಂಬ್ಲಿಯಲ್ಲಿಯೂ ಅವಳ ಸಂಖ್ಯೆ ನಗಣ್ಯವಾಗಿದೆ.

**೩.೪.೧. ಗ್ರಾಮಪಂಚಾಯತಿಯಲ್ಲಿ ದಲಿತ ಮಹಿಳಾ ರಾಜಕೀಯ ಪ್ರತಿನಿಧೀಕರಣ, ಸಂವೇದನೆಗಳ ಸ್ವರೂಪ.**

ದಲಿತ ಮಹಿಳೆಗೆ ದಕ್ಕಿರುವ ರಾಜಕೀಯಾಧಿಕಾರವು ಸಂವಿಧಾನದತ್ತವಾಗಿ ಸಿಕ್ಕಿರುವಂತಹದ್ದಾಗಿದೆ. ಸಮಾನತೆಯ ತತ್ವದ ಪರಿಪಾಲನೆಗೆ ಇಂತಹ ಚಿಂತನೆಯ ಅವಶ್ಯಕತೆಯೂ ಇತ್ತು. ಮುಖ್ಯವಾಗಿ ಅಂಚಿನ ಸಮುದಾಯಗಳನ್ನು ಸಮಾಜದ ಮುಖ್ಯವಾಹಿನಿಗೆ ತರುವುದರ ಮೂಲಕ ಅವರ ಸಂಪೂರ್ಣ ಸಬಲೀಕರಣವನ್ನು ಸಾಧಿಸುವ ಹೆಗ್ಗುರಿ ಇದರಲ್ಲಿ ಅಡಗಿದೆ. ಆದರೆ ಭಾರತದ ಸಾಂಪ್ರದಾಯಕ ಜೀವನದಲ್ಲಿ ಕಂಡುಬರುತ್ತಿರುವಂತ ಪರಿಸ್ಥಿತಿ ಅವಳಿಗೆ ವಿರುದ್ಧವಾಗಿದೆ. ಜಾತಿ, ಲಿಂಗಾಧಾರದ ಮೇಲೆ ಇಲ್ಲಿ ಸ್ತ್ರೀ ಪುರುಷರನ್ನು ವಿಭಜಿಸಿನೋಡುವ ಪರಿಪಾಠವಿದೆ. ಲಿಂಗದ ಹಾಗೂ ಜಾತಿಯ ಜೀವಶಾಸ್ತ್ರೀಯ ಸಾರ್ವತ್ರಿಕತೆಯಂತಹ ಅವೈಚಾರಿಕ ಕಟ್ಟಳೆಗಳೆಲ್ಲವೂ ವಾಸ್ತವವಾಗಿ ಸಮಾಜದಲ್ಲಿ ನಿಯಂತ್ರಣ ಘಟಕಗಳಾಗಿವೆ. ದಲಿತ ಮಹಿಳಾ ರಾಜಕೀಯ ಸಂವೇದನೆಯನ್ನು, ಸ್ತ್ರೀಯಾತ್ಮಕ ಗುರುತನ್ನು, ಪ್ರತಿನಿಧೀಕರಣದ ಸ್ವರೂಪವನ್ನು ಅವಳ ಸ್ವಂತ ಸಂವೇದನೆಗಳ ಮೂಲಕ ಅರಿಯಲು ಅವಳ ಮಾತಿನಲ್ಲಿಯೇ ಗಮನಿಸೋಣ.

**೩.೪.೨. ಆಯ್ದ ಸಂದರ್ಶನ ಭಾಗಗಳು**

ಕೊಪ್ಪಳ ಜಿಲ್ಲೆಯಾದ್ಯಾಂತ ಇರುವ ಚುನಾಯಿತ ದಲಿತ ಮಹಿಳೆಯರ ವಾಸ್ತವ ರಾಜಕೀಯ ಸ್ಥಿತಿಗತಿಯನ್ನು ಅರಿಯಲು ಮೌಖಿಕ ಸಂದರ್ಶನ ನಡೆಸಲಾಗಿತ್ತು. ದಲಿತ ಮಹಿಳಾ ರಾಜಕೀಯ ಕುರಿತ ಅವಳ ತೊಳಲಾಟ, ತುಡಿತ ತಿರಸ್ಕಾರ ಮನೋಯಾತನೆಗಳನ್ನು ಅವಳ ಸ್ವಂತ ಮಾತುಗಳಲ್ಲೆ ದಾಖಲಿಸಲಾಗಿದೆ.

''ನಾನ್ಯಾಕಾರ ರಾಜಕೀಗೆ ಬಂದ್ನೆನೋ ಸಾಹೇಬ್ರ, ಎಲೆಕ್ಷನ್ ಮುಂಚೆ ಒಳ್ಳೆ ಒಳ್ಳೆ ಅಂದ್ರುನು ಪಸ್‌ಮಾತ್ ಕೇಳ್, ನಂ ಮನೆಯವರು ನಿಂತ್ರ ಅಂತ ಒತ್ತಾಯ ಮಾಡಿ ನಿಂದ್ರಿಸಿದ್ರು, ಆದ್ರೆ ರೀ ಇದ್ದಾಗ ನಂ ಮನಿಯವರ ತಪ್ಪೇನು

ಇಲ್ರಿ ನಂ ಊರಿನ ಹಿರೇರು ಗೌಡ್ರು ನಮ್ ಮನಿಯಾತನಿಗ ಹೇಳಿದ್ರಂತ ನಿನ್ ಹೆಂಡ್ತಿನ ಎಲೆಕ್ಷನ್ ನಿಲ್ಸು ನಾ ರೊಕ್ಕ ಗಿಕ್ಕ ಕೊಡ್ತಿನಿ ಅಂದ್ರಂತೆ. ದಿನಪೆಳಕಾದ್ರ ಒಂದೊತ್ತಿನ ಊಟುಕ್ಕು ದಿನ ಪೂರ ಹೊಲ ಮನಿಯಾಗ ದುಡಿಯೋ ನಮುಗ ಎಲ್ಲಿಂದ ಚುನಾವನಿ ಕರ್ಚು ನಿಭಾಸಕ್ಕಾಗತ್ತೈತಿರೀ. ಇದ್ದ ಎರಡ್ ಜೊತೆ ಮುತ್ತಿನಂತ ಎತ್ತುಗಳ ಮಾರಿ ಅದ ರೊಕ್ಕದ್ದಿಂದನ ಎಲೆಕ್ಷನ್ ನಿಂತೆ. ನಂಗೇನ್ ಎಲೆಕ್ಷನ್ ಅಂದ್ರನ ಗೊತ್ತಿಲ್ರಿ ರಾಜಕೀಯ ಮಾಡಕ ಹೆಂಗೂ ಗಂಡಸ್ರದಾರಲ್ರಿ. ಅದ್ರುನು ಗೌಡ್ರು ಎಲೆಕ್ಷನ್ ಕರ್ಚು ಅಂತ ಎಷ್ಟು ಸಾವುರ ರೂಪಾಯಿನ ನಂ ಮನಿಯಾತನಿಗೆ ಕೊಟ್ರಿ. ಈಗ್ಲೂನು ಹೇಳ್ತಿನ್ರಿ ಸಾಬ್ರೆ ನಂಗ ರಾಜಕೀನ ಬ್ಯಾಡಾಗೆತ್ರಿ ಊರಿನ ಗೌಡ್ರನ ಎದರ ಹಾಕಂದು ಹೆಂಗ ಬದಕಕ್ಕ ಆಗ್ತೈತಿ ಅಂತ ಸುಮ್ನು ಒಪ್ಪಿಕೆಂದೆ. ನಾನ್ ಎಲೆಕ್ಷನ್‌ನಲ್ಲಿ ಗೆದ್ದ್‌ಮ್ಯಾಲೆ ರೊಕ್ಕಗಳಿಸ್ತಾರ ಅಂತಾರಲ್ರಿ ಆದ್ರ ನಂಗ ಇವತ್ತಿನ್‌ವರಿಗೂ ಅದು ಹೆಂಗೈತಿ ಅಂತನ ಕಂಡಿಲ್ರಿ. ಯಾವಾಗರ ಒಮ್ಮೆ ಪಂಚಾಯಿಗೆ ಕರಿತಾರೀ ಹೊಕ್ಕಿನಿ ಅವುರೆನೆನ ಮಾತಾಡಿ ಕಳಿಸ್ತಾರ ರೀ ಚಾ ಕುಡಿಯಾದು ಸೈ ಮಾಡದೊಂದರೀ ನನ್ ಕೆಲ್ಸ. ಒಂದೊಂದ್ಸಲ ಆಫೀಸನರ ಇಲ್ಲಿಗ ಬಂದ್ ಸೈ ಮಾಡಿಸ್ಗಂಡ್ ಹೊಕ್ಕಾರ ರೀ, ಸಾಹೇಬ್ರು ನನ್ನಂತರಿಗೆ ಯಾಕ್ರಿ ಇಂತ ರಾಜಕೀ, ಗೆದ್ದ್ ಮ್ಯಾಲ ಊರಿನ ಗೌಡ್ರು ಹೆಳ್ಯಾರಂತ ನಂ ಓಣಿಯಾಗ ಬಂಡಿಗಲ್ಲಾ ಹಾಕಿಸ್ಯಾರರೀ ನಾ ಹೇಳಿದ್ರ ಯಾರು ನನ್ ಮಾತ ಕೇಳ್ಳಿಲ್ರಿ, ಇಂತದ್ದ ಮಾಡಿಸ್ರಿ ಅಂತ ಕೇಳಕ್ಕ ನಂಗ ಹೆದಿರ್ಕಿ ಅಕ್ಕೈತ್ರಿ. ದಿನ ಹೊಲಮನಿ ಕೆಲ್ಸ ಮಾಡಿನ ಸಾಕಾಗ್ತೈತಿ ಅಂತಾದ್ರಾಗ ಇದೊಂದು ತೆಲಿಬ್ಯಾನಿ. ನಾನು ಒಲ್ಲೆ ಅಂದ್ರು ಕರಿತಾರಲ್ರಿ. ನಂ ಮನಿಯವ್ರು ಏನು ಹೇಳಂಗಿಲ್ಲ. ನಾವು ಹೊಲೆರವಳು ಊರಾರ ಮುಂದ ನಿಂತ್ ಅದೇಂಗ ರಾಜಕೀನ ಮಾಡ್ಲಿ ಹೇಳ್ರಿ. ನನ್ ಗಂಡನ ಅವುರ ಮುಂದ ಹೋಗಾಕ ಹೆದರತಾನ ಅಂತಾದ್ರಗ ನಾನ್ ಹಂಗ ಹೋಗ್ಲಿರೀ, ಇನ್ ಮುಂದ ಯಾರರ ನೀ ಎಲೆಕ್ಷನ್ ನಿಲ್ಲಾ ಅಂತ ಅಂದ್ರ ಅವ್ರುರಿಗೆ ಸರಿಯಾಗಿನ ಮಂಗಳಾರತಿ ಮಾಡ್ತಿನಿ, ನನ್ನಂತವ್ರಿಗೆ ಯಾಕ್ರಿ ಎಲೆಕ್ಷನ್, ರಾಜಕೀಯ ಅದೇನಿದ್ರು ಊರಿನ ಹಿರೇರು ಅಂತ ಅದಾರಲ್ಲ ಅವ್ರಿಗನ ಕೊಟ್ಟು ಬಿಡ್ರಲ್ಲ.''

''ನಾನೇನು ಕಲಿತಾಕಿನ ರೀ ಪಿ.ಯು.ಸಿ. ತನಕ ಕಲಿತೀನ್ರಿ. ಯಾರ್ದು ಮಾತ್ ಕೇಳಿ ನಂ ಯಜಮಾನ ನನ್ನ ಪಂಚಾಯ್ತಿಗೆ ಬರಂಗ ಮಾಡಿದ್ನರೀ ನಂಗ ಮದುವಿಯಾದ್ಮ್ಯಾಲ ಹೊರಗಿನ ಪ್ರಪಂಚನ ನೋಡಿರ್ಲಿಲ್ಲ ರೀ ನಮ್ಮೊಣಿಯಾಗ ಹಿರೆರೆಲ್ಲ ಸೀರ್ಕಂಡ್ ನಿನ್ನೆಂಡ್ತಿನ ನಿಂದ್ರಿಸು ಅಂತ ಹೇಳಿದ್ರಿ, ಬೇಕಾದ್ರ ನಾವ ಓಡ್ಯಾಡಿ ಆಕಿನ ಗೆಲ್ಲಿಸ್ತಿವಿ ಅಂತನು ಅಂದ್ರು ಅದುಕ ನಾ ಎಲೆಕ್ಷನ್ ನಿಲ್‌ಬೇಕಾಯಿತ್ರಿ, ಚುನಾವಣೆ ಟೈಂನಲ್ಲಿ ನಾ ಮನಿಮನಿಗೆ ಹೋಗಿ ಓಟಾಕ್ರಿ ಓಟಾಕ್ರಿ ಅಂತ ಕೇಳಿ ಹೊತ್ತಿನಾಗ ನಾಚಿಕಿ ಬಂದು ತೆಲೆ ಮ್ಯಾಲೆ ಸೆರಗ ಮುಖಕ್ಕ ಹಾಕ್ಕೆಂತಿದ್ದೆ. ನಂದೇನ ಶ್ರೀಮಂತರ್ ಕುಟುಂಬ ಅಲ್ರಿ ಇದ್ದದ್ರಾಗ ನಾವು ಬದುವ್ರರೀ. ಎಲೆಕ್ಷನ್ ಟೈಂನಾಗ ನಂ ಮನಿಯಾಗ ಎಲ್ಲಾರಿಗೂ ನನ್ನ ಮ್ಯಾಲ ತುಂಬನೆ ಸಿಟ್ಟ್ ಬಂದಿತ್ರಿ, ಯಾಕಂದ್ರ ನಿಂಗ್ಯಾಕೆ ಎಲೆಕ್ಷನ್ ಅಂತ ಅವುರು ನನ್ನ ದಿನಾಲೂ ಬೈಯುಕುಂತಿದ್ರು ರೀ. ಇದ್ರಾಗ ನಂದೇನ್ ತಪ್ಪು. ನಾನು ಕಲತವಳಾದ್ರು ಇದನ್ನೆಲ್ಲ ಹೆಂಗ ನಿಭಾಯಿಸಬೇಕಂತನ ತಿಳಿಲಿಲ್ಲಾ. ಹೆಂಗ ದೇವ್ರದಯದಿಂದ ಗೆದ್ದ್ ಬಂದೆ ಆದ್ರ ನಾನಂದ್ಕಂಡಿದ್ದಂತ ಒಂದ್ ಕೆಲ್ಸನು ನನ್ನಿಂದ ಮಾಡಾಕಾಗ್ಲಿಲ್ರಿ. ಎಲೆಕ್ಷನ್‌ನ್ಯಾಗ ನನ್ನ ಗೆಲ್ಲಿಸಿದೌರನೆ ರೀ ನನ್ ಬದ್ಲಿ ಅಧಿಕಾರ ಮಾಡ್ತಾರರೀ. ಹಿಂಗಾಗಿದ್ರ ನಾ ಯಾಕ ಎಲೆಕ್ಷನ್ ನಿಲ್ ಬೇಕಿತ್ತು. ನಂಗ ಸಿಕ್ಕ ಅಧಿಕಾರನ ನಾ ಬಿಡಸಕ್ಕ ಆಗಲ್ಲಂತುದ್ರ ಏನಾರ್ಗರೀ

ಎಲ್ಲರೂ ಸೇರಿಕೊಂಡ್ ಅಧಿಕಾರ ಹೊಂದಿದ ಅಸ್ಪೃಶ್ಯಳನ್ನಾಗಿ ಮಾಡ್ಯಾರ ರೀ. ನನ್ ಜೀವ ಇರತನ ನಾ ಎಂದುನು ಇಂತ ಎಲೆಕ್ಷನ್ ಪತ್ರನ ಬರಂಗಿಲ್ರಿ.'' ಊಳಿಗಮಾನ್ಯಶಾಹಿ ಜಮೀನ್ದಾರಿ ವ್ಯವಸ್ಥೆಗಳು ಯಾವ ರೀತಿಯಾಗಿ ಸಾಮಾಜಿಕ ಜೀವನದಲ್ಲಿ ದಲಿತ ಮಹಿಳಾ ರಾಜಕೀಯವನ್ನು ತಮ್ಮ ಕೈವಶಮಾಡಿಕೊಂಡು ಅವಳನ್ನ ಹೇಗೆ ಅಧಿಕಾರ ವಂಚಿತಳನ್ನಾಗಿ ಮಾಡಿದ್ದಾರೆಂಬ ಆಘಾತಕಾರಿ ಅಂಶ ಇಲ್ಲಿದೆ.

''ನಾನ್ ತುಂಬ ಸಾರಿ ಯೋಚಿಸ್ತೀನ್ರಿ ಸಾರ್ ನಾನ್ಯಾಕ ರಾಜಿನಾಮವನ್ನ ಕೊಡಬಾರದು ಅಂತ. ಯಾಕಂದ್ರ ನೀವ ಕೇಳಿದ್ರಲ್ಲ ನನ್ನ ಪರಿಸ್ಥಿತಿನ ನನ್ನ ಗಂಡನಿಲ್ಲಂದ್ರೂ ಊರಿನ ಗೌಡನ ಮನಿಗೆ ಕರಿಸಿಕಂದ್ರ ನಾನ್ ಮನಿಯ ಹೊರಗ ನಿಂತ್ಯ, ಹೊರಗೆ ಬಂದವ್ನ ಏನನಾ ಹೆಳ್ದಂಗ ಸೀದಾ ಮನೀಗೆ ಕರಕಂದ್ ಬಂದ್ನ ರೀ. ಮನಿಗೆ ಬಂದವ್ನ ನೀ ಎಲೆಕ್ಷನ್ ನಿಲ್ಲಾ ಅಂತ ಅಂದ್‌ಬಿಟ್ಟ ರೀ. ನಂಗ ಏನ್ ಮಾತಾಡಬೇಕಂತನ ತಿಳಿಲಿಲ್ಲ ನಂ ಗೌಡ್ರಿಗ್ಯಾಕ ಇಂತ ಬುದ್ದಿ ಬಂದೈತಿ ಅಂತನಾ ಮೊದಲಿಗೆ ನೆಕ್ಲಿನ ಮಾಡಕುಂತಾನಂತ ತಿಳಿದಿದ್ದೆ ಆ ಮ್ಯಾಲೆ ತಿಳಿತ್ರಿ ಅದು ಸತ್ಯ ಅಂತ. ನಾನೇನ್ ಓದಿದಾಕಿ ಅಲ್ಲ, ಬರವಾಕಿಯಲ್ಲಾ, ನಾಕಮಂದಿ ಹತ್ರ ಕುಂತಾಕಿ ಅಲ್ಲ. ದಿನಕ್ಕ ೨೦-೩೦ ರೂಪಾಯಿಗೆ ದುಡಿಯಾಕಿನಾ ಧನೇರು ಅಂಗ ಅಂದ ತಕ್ಷಣನ ರೀ ನಾನೇನು ಮಾಡ್ಲಿಲ್ಲರೀ ನಿವೆಂಗತಿರೊ ಅಂಗ ಅಂತ ಸೀದಾ ಮನಿಗೆ ಬಂದ ಬಿಟ್ಟೆ, ಆ ಮ್ಯಾಲ ಕೇಳ್ರಿ ಇವ್ರುರ್ನ ಮನಿ ಮಂದಿ ಕೇರೆನ್ ಮಂದಿ ಎಲ್ಲಾರೂ ಸಿಕ್ಕ್ ಸಿಕ್ಕಂಗ ಬೈಯಕುಂತ್ರು ಬ್ಯಾಡವ್ವ ರಾಜಕೀ ಅದು ಮೂರು ಬಿಟ್ಯಾರಿಗೆನೆ. ಯಾಕ ನಮುಗ ಅದರ ಉಸಾಬರಿ. ನನ್ ಮನೇರಿಗೆ ನಾನು ಸಂಬಾಳಿಸ್ತೀನ್ರಿ ಆದ್ರ ಊರಿನ ಧನಿಗೆ ಹೆಂಗ ಸಂಬಾಳಿಸ್ತಿ ಹೇಳ್ರಿ, ಹೆಂಗ ಮನಿಯಾಗ ಇರಬರರೊಕ್ಕನ್ನೆಲ್ಲ ಸೆರಿಸಿ ಎಲೆಕ್ಷನ್ ನಿಂತ್ ಬಿಟ್ಟೆ ಯಜಮಾನ್ರು ಸಲುಪು ರೊಕ್ಕ ಕೊಟ್ರು, ನಾನ್‌ನನ್ ಗಂಡ ಇಷ್ಟು ದಿವುಸ ಹೊಟ್ಟೆಬಟ್ಟೆ ಕಟ್ಟಿ ದುಡಿದಿದ್ದ ರೊಕ್ಕಾ ಎಲ್ಲಾ ನೀರಾಗ ಉಂಚನ್ನು ತೊಳದಂಗ ಹಾಳಾಗಿ ಹೋತ್ರಿ, ನಂಗ ರಾಜಕೀ ಅಂದ್ರನ ಗೊತ್ತಿರಲಿಲ್ಲಾ ರೀ. ನಂ ಮನಿಯಾಗನು ಯಾರು ಇದರ ಬಗ್ಗೆ ತೆಲಿ ಕೆಡಿಸಿಕೊಂಡಿಲ್ಲ ರೀ. ಆದ್ರ ನಂಗೆನ ದರಿದ್ರನ ಏನ ನಂಗ ಕಾಡಾಕ ಇದು ಬಂತ್ರಿ. ಇಷ್ಟು ದಿವಸ ಆಯಿತ್ರಿಯಪ್ಪ ಇವತ್ತಿನವರೆಗೆ ನಂಗ ಯಾರು ಒಂದ್ ರೂಪಾಯಿಸು ತೋರಿಸಿಲ್ರಿ. ತಾವಾದ್ರ ಅದು ಇದು ಅಂತ ಸಿಕ್ಕ ಸಿಕ್ಕಂಗ ತಿಂತಾರ್ರಿ. ನಾನು ಅಲ್ಲಿ ಇದ್ರು ಇಲ್ಲದಂಗ ರೀ. ಬಾಯಿಗೆ ಸೀರಿನ ಇಷ್ಕಂಡು ದೂರ ಕುಂತಿರುತಿನಿರೀ. ಯಾಕಂದ್ರ ಊರಿನ ಎಲ್ಲಾ ಜಾತಿಯವ್ರು ಇರ್ತಾರಲ್ರಿ. ಅವ್ರುರ ಮಾತಾಡ್ತಾರ ತಮುಗ ಏನ್ ಬೇಕೊ ತಾವ ಹಂಚಿಕಂದು ಎದ್ದು ಬರ್ತಾರ. ನಂಗ ಏನುಯಾಕ ಅಂತ ಯಾರುನು ಕೇಳಂಗಿಲ್ರಿ. ನಂ ಪಂಚಾಯ್ತಿಗ ಕೆಲ್ಸ ಮಾಡ ಪಿವನ್ನ ಕೂಡ ನಂಗ ಮರ್ಯಾದಿನ ಕೊಡಗಿಲ್ಲ ರೀ. ಒಂದೊತ್ತಿನ ಚಾ, ಬಿಸ್ಕತ್ತು ತಿನ್ನಕ ನಾ ಬಂದಂಗಿರ್ತೈತಿರೀ. ನನಗ್ಯಾಕ್ರಿ ಬೇಕು ದುಡಿಯಕ್ಕ ಕುಂತ್ರ ಹೊಟ್ಟೆ ತುಂಬಂಗ ಏನರ ಸಿಗ್ತೈತ್ರಿ. ನಾ ರಾಜಕೀ ಮಾಡಕ ನಂ ಮನಿಯಾಗೆ ಯಾರು ಒಪ್ಪಿಲ್ಲರೀ ಆದ್ರ ಊರಿನ ಹಿರೇರ್ನ ಎದುರು ಹಾಕೊಂದು ಹೆಂಗ ಇರದಂತ ಸುಮ್ನ ಒಪ್ಕಂದೆ. ಮುಂದ ಎಂದು ಪಂಚಾಯತಿ ಎಲೆಕ್ಷನ್‌ಗೆ ನಾ ಬರಂಗಿಲ್ರಿ.''

''ನಮಸ್ಕಾರ ರೀ ಯವ್ವ ನಾನ್ ಯಾವೊತ್ತು ಮನಿಂದ ಹೊರಗ ಬಂದಾಕಿನ ಅಲ್ರಿ, ಮನಿ ಮಕ್ಳು ಮರಿ ಅಂತ ನಾನಾತು ನನ್ ಮನಿ ಆತು. ಆರಾಮಾಗಿ ಇದ್ದಿದ್ದೆ, ಹಿಂದಿನವರು ಯಾರು ನಂ ಮನಿಯಾಗ ರಾಜಕೀ ಬಂದಿಲ್ರಿ ನನ್ ಗಂಡಗೂ ಅದರ್ ಬಗ್ಗೆ ಗೊತ್ತಿಲ್ರಿ, ಹಿಂಗರ ಹೊತ್ತಿನ್ಯಾಗ ಮನಿ ಆಳ್ನ ಕಳಿಸಿ ಗೌಡ್ರ ನನ್ನ ಕರಿಸಿಕಂದ್ರು

ನನ್ಯಾಕ ಕರಿತಾರಂತನಾ ಸತ್ತಗಂತ ಅವ್ರ ಮನಿ ಹತ್ರ ಹೋದ್ಯಾ, 'ನೋಡವೆ ನಿಂಗ ನಾವೆಲ್ಲೂ ಸೇರಿಸಿ ಗೆಲ್ಲಿಸ್ತಿವಿ ನೀ ಎಲೆಕ್ಷನ್‌ಗೆ ಬಾ. ನಿಂದ್ರು ಅದೇನ್ ಬರ್ರೈತೊ ಅದುನ ನಾವ ಮಾಡಿ ಕೊಡ್ತೆವೆ'. ಏನ್ ರಾಜಕೀ ಏನ್ ಎಲೆಕ್ಷನದ ಅಂತ ನನಗೇನು ತಿಳಿಲಿಲ್ರಿ ನನ್ನ ಗಂಡ ಬ್ಯಾರೆ ಇರ್ಲಿಲ್ಲ. ಅವ್ರುರು ಹೇಳಿದ್ದಕ್ಕೆಲ್ಲ ಹ್ಞೂಂ ಅಂದು ಅಲ್ಲಿಂದ ಬಂದ್‌ಬಿಟ್ಟೆ, ನಂಗ ಅವ್ರ ಮಕ ನೋಡಕ್ಕೂ ಧೈರ್ಯ ಇಲ್ಲಲ್ರಿ. ಹೆಂಗ್ಮಾಡ್ಲಿ ನಂ ಮನಿಯಾಗ ನನ್‌ಗಂಡಗ ಇದು ಗೊತ್ತಾದ್ರ ನನ್‌ಗತಿ ಹೆಂಗ ಅಂತ ಅತುಗಂತನ ಮನಿ ಕಡಿಗೆ ಬಂದೆ. ಸುಮ್ನ ಕುಂದ್ರಕ್ಯಾಗ್ಲಿಲ್ಲ ಕುಂತಲ್ಲೆ ಸಿಕ್ಕಾಪಟ್ಟೆ ಅತ್ತು ಬಿಟ್ಟೆ ಏನ್ಮಾಡ್ಲಿರೀ ನಾನೇನ ಮಾನ ಮರ್ಯಾದಿ ಬಿಟ್ಟಾಕಿಯಲ್ಲ. ಕೆಲ್ಸ ಮುಗಿಸಿ ಕಂದೆ ರಾತ್ರಿ ಮನೆರೆಲ್ಲರ ಮುಂದ ನಾ ಎಲೆಕ್ಷನ್ ನಿಲ್ಲದ್ ಹೆಳಿದ ತಕ್ಷಣನ ರೀ ಎಲ್ಲಾರೂ ಸೇರ್ಕಂಡ್ ಸಿಕ್ಕಾಪಟ್ಟೆ ಬೈದಾಡಿದ್ರು. ನನ್ ಗಂಡ ಊರಾವ ರೀ ನಾ ಮನೇಗ ಬಿಟ್ಟಾಕಿ. ದೇವ್ರು ಮಾಡಿದಂಗ ಆಕ್ಕೈತಿ ಅಂತ ಅಂದು ಸಾಲಗೀಲ ಮಾಡಿ ನಿಂತಬಿಟ್ಟೆರೀ, ಧನೆರ ಓಟು ಕೇಳಕ್ಕ ಮನಿಮನಿ ತಿರುವ ಹೋತ್ತಿನ್ಯಾಗ ನಾ ಕಂಡ ಅನುಭವಿಸಿದ್ದು ಹೇಳಬಾರ್ದುರೀ. ಮೊದ್ಲನಾ ಹರಿಜನ್ರಕಿ ಊರಾರ ಮನಿ ಮುಂದೆಂಗ ತಿರುಗಾಡದು, ಗೆದ್ ಮ್ಯಾಲ ಊರಾಗೆಲ್ಲ ನಂಗ ಮೆರವಣ್ಗಿಮಾಡಿದ್ರು. ಅಲ್ಲಿಂದ ಬಂದವಳ ಸೀದಾ ಕುಂತಾಕಿನ ಅಳಿಕ್ಕ ಸುರುಮಾಡಿಬಿಟ್ಟದ್ದೆರೀ. ನಾನೆ ನೊಡಿ ನಂಗೇನ ರಾಜಕೀ ಮಾಡಕ್ಕ ಮನಸಾ ಇಲ್ಲ ಊರಾರ ಮುಂದ ಹೆಂಗಂತ ಎಲ್ಲಾ ಅವುರಿಗ ಬಿಟ್ಟು ಬರ್ತಿನಿ. ತಿಂಗಳಿಗೊಮ್ಮ ಆರು ತಿಂಗೊಮ್ಮೆನಾದ್ರು ಬಾ ಅಂತಾರಿ ನಾ ಹೋಗಂಗಿಲ್ಲ, ಯಾವಾಗರ ಒಮ್ಮ ಪಿವನ್ನ ಬಂದು ಸೈ ಮಾಡಿಸಿಕಂದೆ ಹೊಕ್ಕಾನ್ರಿ, ಒಮ್ಮೊಮ್ಮೆ ನನ್ ಗಂಡನ ಹೋಗಿ ಬರ್‍ತಾನರೀ ನಾನರೀ ಮುಂದ ಎಲೆಕ್ಷನ್ ನಿಲ್ಲಾದ ಸಾಧ್ಯನ ಇಲ್ರಿ. ಯಾವಳಿಗೆ ಬೇಕ್ರಿ ಯಾಪತ್ತರ ಒಂದಕ ನಂದು ಅಂತ ಕೆಲ್ಸ ಮಾಡ್ಯಾರನ ಕೇಳ್ರಿ ತಾವಾತು ತಂ ಓಣಿ ಆತು ನಂ ಮಂದಿ ಎಲ್ಲಾ ಗೆಲ್ಲಿಸಿ ಬಿಟ್ರು ಏನ್ ಕಿಸಿದಿಯವ್ವ ಅಂತ ದಿನಾ ಒಬ್ರು ಬಾಯಿಗೆ ಸಿಕ್ಕಾಂಗ ಅಂತಾರರೀ ತಿನ್ಲಿಲ್ಲ ಉಣ್ಲಿಲ್ಲ ಯಾವಳಿಗೆ ಬೇಕ್ರಿ ಇದು. ನೀವ್ರು ನಿಂ ಸರಕಾರದವ್ರರೆಲ್ಲ ಸೇರ್ಕಂದ ಎಲ್ಲಾ ರಾಜಕೀನ ಈ ಊರಾರ ಹಿರೆರ ಹೆಸರ್ಲೆ ಬರದ್ರ ಬಾಳ ಚೋಲೊ ಆಕ್ಕೈತ್ರಿ. ಅವ್ರುರಿಗೆ ಎಲ್ಲಾ ಶಕ್ತಿ ಇರದ್ರಿಂದ ಅವ್ರ ಮಾಡದು ಸರಿ. ಸಾವಿರಾರು ರೂಪಾಯಿ ಖರ್ಚು ಮಾಡಿ ನಾ ಹಾಳಾಗಿದ್ದು ಅಲ್ಲ ಮಂದಿ ಕೈಯಾಗ ನಗಿಪಾಟಲಿಗೆ ಬಲಿಯಾಗೀನಿ.''

''ಸಾಹೇಬ್ರ ನಾನು ನಾಕನೆ ಕಲಾಸ್ ತನಕ ಕಲಿತೀನ್ರಿ. ಆ ಮ್ಯಾಲ ನಾ ಮನೇಗ ಜಲ್ದಿನ ಮದುವಿ ಮಾಡಿಬಿಟ್ರು. ಅವಾಗ್ಲಿಂದ ನಂಗ ನಂ ಮನಿ ಆತು ನಾನಾತು ಹಿಂಗ ಅದೀನ್ರಿ. ನಾನ್ ಈ ಮನೀಗ ಬಂದಾಗ್ಲಿಂದ ನಂ ಮನೆಯವ್ರು ಬಾಳ ಚೋಲೋನ ನೋಡ್ಕಂಡಾರ ರೀ. ನನ್ ಗಂಡ ಬಾಳ ಒಳ್ಳೆವರೀ. ಯಾರ್ ತಂಟೆಕ್ಕೂ ಹೋಗವಲ್ಲರೀ ಅಂವ. ಅದೇನಾತನ ಒಂದು ದಿನ ಬಂದಾತ್ನ ಲೇ ನಿಂಗ ಎಲೆಕ್ಷನ್ ನಿಲ್ಸ್‌ತಿನಿ ನಿಲ್ತಿಯಾ ಅಂತ ಅಂದ್ನ ರೀ ನಾನೇನ ನೆಕ್ಲಿ ಮಾಡಕುಂತಾನಂತ ತಿಳಕಂದು ಸುಮ್ನ ಹ್ಞೂಂ ಅಂದಿದ್ದೆ. ಒಂದೆರಡ್ ದಿವ್ಸ ಆದ್ಮ್ಯಾಲ ಯಾರ್ಯಾರ್ನ ಮನಿಗ ಕರ್ಕಂಡ್ ಬಂದ್ನರೀ. ನಾನೇನ ನೆಕ್ಲಿಗೆ ಅಂತ ತಿಳಿಕಂದಿದ್ದು ಖರೆನ ಆತ್ರಿ. ನಾ ಒಲ್ಲೆ ಅಂದ್ರು ಬೈದಾಡಿ ಒತ್ತಾಯ ಮಾಡಿ ನಂಗ ನಿಲ್ಸಿಸಿದ್ನ ರೀ. ನಾನೆಷ್ಟು ಬ್ಯಾಡ ಅಂತ ಅಂದ್ರು ಕೇಳ್ದಂಗ ಎಲ್ಲಾ ಮಾಡಿ ಮುಗಿಸಿದ್ನ ಅವ್ನಿಗೇನ ಆಗಿತ್ತೊ ಏನೋ. ಹೇಳ್ದಿಸ್ತಿಯಾಪ ಗಂಡನ್ ಮನಿಗೆ ಬಂದ್ ಇಷ್ಟು ದಿವ್ಸ ಆದ್ರು ನಂಗೆ ಊರಾಗ ಯಾರ್ ಮುಂದನು ತಲಿ ಎತ್ತಿ ನಡದಾಕಿನ ಅಲ್ರಿ. ನಾನ್ ಬ್ಯಾಡ್ರನ್ನು ನಂದುವೇರು ನನ್ ಗಂಡಗ ಯಾರ್ ಮಾಟ

ಮಾಡಿಸ್ಯಾರ ಅಂತ ನಂಗ ಗೋತ್ತಾತ್ರಿ. ಅದುಕ ಅಂವ ನಂಗ ಊರ ಮಂದಿ ಮುಂದ ತಂದು ನಿಲ್ಸಕ್ಕ ತಯಾರಾದ್ನರೀ. ಮನೇಗ ಇದ್ ಹಸು, ಆಸ್ತಿ ಎಲ್ಲಾ ಮಾರಿ ಕಷ್ಟಪಟ್ಟು ಕೂಡಿಟ್ಟ ರೊಕ್ಕನು ಕೂಡ ತಿಳಿದ್ ತಿಳಿದಂಗೆ ಖರ್ಚುಮಾಡಿದ್ನ ರೀ. ಖರೇ ಹೇಳ್ತೀನ್ರಿಯಪ್ಪ ನಾನ್ ಆ ಆಫೀಸಿನ್ಯಾಗ ಇದ್ರು ಇಲ್ಲಂಗ ರೀ. ರಾಜಕೀದಿಂದ ನಂಗತೂ ಒಂದ್ ರೂಪಿಯಿನು ಲಾಭ ಬಂದಿಲ್ರಿ. ಜೋರಾಗಿ ಮಾತ ಆಡಿಲ್ರಿ. ಬ್ಯಾರೆ ಹೆಣ್ಮಕ್ಳು ನಮುಗ ಅದು ಬೇಕು ಇದುಬೇಕು ಅಂತ ಬಾಳ ಜೋರ ಬಾಯಿ ಮಾಡ್ತಾರ ರೀ. ಆದ್ರ ಅವ್ರು ದೊಡ್ಡ ಜಾತೇರು ನಾನೆಂಗ ಅವ್ರರಂಗ ಮಾತಾಡಕ್ಕ ಆಕ್ಕೈತಿ ಏನ್ ಹೇಳ್ರಿ.''

''ನಮುಸ್ಕಾರ ಬರ್ರಿಯಪ್ಪ.. ನಾನ್ ನಿಂ ಹತ್ರ ಏನ್ರಿ ಸುಳ್ಳೇಳೆದು ರೀ. ನಾನಂತು ಸಾಲಿ ಕಲಿತಿಲ್ಲ. ನಂಗ ರಾಜಕೀ ಅಂದ್ರನ ಗೋತ್ತಿರ್ಲಿಲ್ಲ. ನಂ ಓಣಿಯಾಗ ನಂ ಮನಿನ ಸಲುಪು ದೊಡ್ಡದ್ರಿ. ಎಲೆಕ್ಷನ್ ದಿನ ಬಂದೈತಿ ಅಂದ ಕೂಡ್ಲೆ ನಂ ಓಣಿಯಾರು ಸೇರ್ಕಂಡ್ ಊರಿನ ಹಿರೇರ ಹತ್ರ ಹೋಗಿದ್ದಂತ ನಾ ಮನೇಗ ಇದ್ದೆ. ಅಲ್ಲಿಂದ ಬಂದಾರ ಬಾರ್ಲೆ ನಿಂಗ ನಾವೆಲ್ಲರೂ ಸೇರಿ ಮಾತಾಡ್ಕಂದು ಈ ಸಲ ನಿನ್ನ ನಂ ಓಣಿಯಿಂದ ಎಲೆಕ್ಷನ್ ನಿಲ್ಸಾಬೇಕಂತ ನಾವು ಗೌಡ್ರು, ಶಾನಭೋಗರು ತೀರ್ಮಾಣ ಮಾಡೀವಿ. ಅದುಕ ನೀ ತಯಾರಾಗು ಅಂತ ಅಂದ್ರು, ನಾನೇನ ರೊಕ್ಕ ಆಸ್ತಿ ಪಾಸ್ತಿ ಇರಾಕಿಯಲ್ರಿ. ಮನೇಗ ಹಗಲ ಸತ್ರ ಮಣ್ಣಿಗಿಲ್ಲ ರಾತ್ರಿ ಸತ್ರ ಎಣ್ಣಿಗೆ ಇಲ್ಲಂತ ಕುಂತಾರ್ ನಾವು ರೀ. ಒಂದಿವಸ ಗೌಡ್ರ ಕರಿಸಿ ನಿಂದ್ರು ಎಲ್ಲಾ ಚೊಲೋ ಆಕ್ಕೈತಿ ಅಂತ ಅಂದ್ರು ಅವ್ರುಗ ಹೆಂಗ ಎದುರು ಹಾಕ್ಯಾಡದು ಅಂತ ಹ್ಞೂಂ ಅಂದ್ಯಾ, ಕೈಯಾಗ ಬ್ಯಾರೆ ರೊಕ್ಕ ಇರ್ಲಿಲ್ರಿ ಹಿಂಗ್ ಮಾಡದಂತ ಇದ್ ಬದ್ ಹೊಲ ಮಾರಿ ಅಲ್ಲಿ ಇಲ್ಲಿ ಸಾಲ ಮಾಡಿ ರೊಕ್ಕ ಕೂಡಿಸಿದ್ಯಾ, ಅಲ್ಪಸಲುಪ ಗೌಡ್ರ ಕರೆದು ಕೂಡ್ರು ಹೆಂಗ ದೇವ್ರುದಯದಿಂದ ಗೆದ್ ಬಿಟ್ಯಾರೀ. ನಾಗೆದ್ದು ಮೂರು ವರ್ಷ ಆತ್ರಿ ಇಲ್ಲಿ ತನಕ ನಂಗ ರಾಜಕೀ ಅಂದ್ರ ಏನಂತನ ಗೊತ್ತಾಗಿಲ್ರಿ, ದುಡ್ಕನರೇನ ಜಗ್ಗಿ ದುಡಕಂದಾರ ರೀ. ನಂಗ ಮಾತ್ರ ಏನ್ ಸಿಕ್ಕಿಲ್ಲ. ಮೊದಲಿಗೆ ನಂಗ ಬ್ಯಾರೆ ಕಪ್ಪಿನಾಗ ಚಾ ಕೊಡ್ತಿದ್ರು ಈಗ ಸಲುಪು ಪ್ಲಾಸ್ಟಿಕ್ ನಾಗ ಎಲ್ಲರೀಗೂ ಕೊಟ್ಟಾಂಗ ಕೊಡಕುಂತಾರ ರೀ. ಸಾಲಶೂಲ ಮಾಡಿ ಎಲೆಕ್ಷನ್ ನಿಂತ ನಂಗೆ ಏನಾರ ಸಿಗೈತಿ ಅಂತ ಆಶೆ ಪಟ್ಟಿದ್ರಿ. ಆದ್ರ ಇಲ್ಲಿತನಕ ಯಾವ ಉಪಯೋಗನು ಆಗಿಲ್ರಿ. ನಿಂ ಆಫೀಸಿನಿಂದ ಏನಾರ ಉಪಕಾರ ಮಾಡಿದ್ರ ಪುಣ್ಯ ಬರುತ್ರಿ. ಇದ್ ಹೊಲ ಮಾರಿ ದಿಕ್ಕಾಪಾಲಾಗಿನಿ. ಊರಾಗ, ಓಣಿಯಾಗ ಮಂದಿ ಕೆರೆವು ತಗಂಡ್ ಹೋಡಿಯಕುಂತಾರ. ಯಾಕಂದ್ರ ಗೆದ್ ಮ್ಯಾಲ ಅವ್ರುರಿಗೆ ಮಕನ ತೋರ್ಸಿರಕ್ಕಾಗಿಲ್ರಿ. ಏನ್ ಮಾಡ್ಲಿ ನಾ. ಒಂದಾರ ನಂ ಆಫೀಸನಾಗ ನಂಗಂತ ಯಾವದರ ಒಂದ್ ಕೆಲ್ಸ ಮಾಡಿದ್ರ ಹೆಂಗ ಇರಬಹುದಿತ್ತು. ಏನ್ ನಾ ಒಂದು ಸಲ ಗೌಡ್ರಿಗೆ ಇದುನ್ನೆಲ್ಲ ಹೇಳಿದ್ಕ ಅವ್ರುರ ಹೇಳಿ ಊರಿನ ಮಂದಿ ಬಾಯಿ ಮುಚ್ಚಿಸಕ್ಕಂತ ನಂ ಓಣಿಯಾಗ ಬಂಡಿ ಹಾಕಿಸ್ಯಾರ ರೀ. ತಿಳಿದಾಗೊಮ್ಮೆ ಪಂಚಾಯಿತಿಗೆ ಹೊಕ್ಕೀನಿ. ಚಾ ಬಿಸ್ಕತ್ತು ತಿಂದು ಬರ್ತಿನಿ ಇಷ್ಟು ಬಿಟ್ರ ನಂಗ ಗೆದ್ದ ಮ್ಯಾಲ ಮಾಡಿದ್ದೇನು ಇಲ್ರಿ. ಇದ್ಕ ಏನ್ರಿ ಹೆಣ್ಮಕ್ಕಿಗ ರಾಜಕೀ ಬ್ಯಾಡ್ಂತ ಅನ್ನಾದು.''

''ನಾ ದೇವದಾಸಿ ಮಗಳಿದ್ದೀನ್ರಿ ನಂಗ ಸರಕಾರ ಕೊಟ್ಟ ಎರಡ ಎಕ್ರೆ ಹೊಲ ಐತ್ರಿ. ಆದ್ರ ಅದುನ ಬಿತ್ತಿ ಹಾಕೀಲ್ರಿ. ನಂಗೂ ಮದುವಿ ಮಾಡಿ ಆಸೇನು ಆಗಿಲ್ರಿ ಬಸವಿ ಮಗಳು ಬಸವಿನ ಅಲ್ರಿ. ನಂ ಮನ್ಯಾಗ ನಾನು ನಮ್ಮವ್ವ ನಂ ಮಕ್ಳು ನಂ ಕಾಕ ಗಾಮ ಮಂದಿರೀ ಇರದು. ಒಂದ್ ದಿವಸ ನಂ ಕಾಕ ಬಂದ್ ನೋಡ್ಲೆ ನಾನು

ಊರಾರು ಎಲ್ಲಾ ಮಾತಾಡ್ಕಂಡಿವಿ ನೀ ಎಲೆಕ್ಷನ್ ನಿಲ್ಲಾಬೇಕು ಪಂಚಾಯಿತಿಗೆ ನಿನ್ನ ಕರ್ಸ್ಕಂಡ್ ಬರೊ ಜವಾಬ್ದಾರಿ ಊರಾರ್ದು ಅಂತ ಮಾತಾಗ್ಯತಿ. ನಂ ಕಾಕನ್ ಮಾತ್ಕೆಳಿ ನಂಗಂತು ಬಾಳ ಸಿಟ್ಟು ಬಂದಿತ್ರಿ. ನಾನೆಂಗ ರೀ ಈ ಎಲೆಕ್ಷನ್ ನಿಲ್ಲಿ. ಓದಿಲ್ಲ ಬರ್ದಿಲ್ಲ. ಊರಾರ ಜೊತೆಗೆ ಮಾತಾಡಂಗಿಲ್ಲ. ಅಲ್ಲ ನಾ ಬಸವಿ ಮಗಳು ಬಸವಿ, ಹೋಗ್ಲಿ ಕೈಯಾಗ ರೊಕ್ಕನಾದ್ರು ಐತಾ ಅದುನು ಇಲ್ರಿ. ಇದ್ದಿದ್ರಾಗ ತಾಯಿ ಮಗಳು ಇಬ್ರು ಹೊಲಮನಿ ಕೆಲ್ಸ ಮಾಡ್ಕಂತ ಹೆಂಗ ಬದುಕಿದ್ವಿ, ಒಂದೊಂದ್ ಸಲ ಅದುವು ಇಲ್ರಿ, ಅಂತಾದ್ರಾಗ ಇದೇಂತ ಎಲೆಕ್ಷನ್ ರೀ. ನಾನೇನರ ಎಲೆಕ್ಷನ್ ನಿಂತ್ರ ಊರಾಗ  ಮನೀಗ ಮಂದಿ ಏನಂತಾರ ರೀ. ರಾಜಕಿ ಮಾಡಕ್ಕ ಮೂರು ಬಿಟ್ಟಿರಬೇಕ್ರಿ ನಾನು ಬಸುವಿಯಾದ್ರು ಮೂರು ಬಿಟ್ಟಾಕಿ ಅಲ್ರಿ. ನಂಗೂ ಮಾನ ಮರ್ಯಾದಿ ಅಂತ ಐತ್ರಿ. ಊರಾಗ ದೈವನ ನಿಂತ್ಗ ಅಂತ ಅಂದ್ ಮ್ಯಾಲ ನಾ ಏನ್ ಮಾಡಕ್ಕ ಅಕ್ಕೈತಿ ನೀವ ಹೇಳ್ರಿ. ದೈವಕ್ಕ ಎದುರು ಮಾತಾಡಿ ಅವ್ರುರ್ನ ಎದುರು ಹಾಕೆಂದು ಊರಾಗ ಬದುಕಕ್ಕ ಅಕ್ಕೈತೇನ್ರಿ, ಆತು ಅಂತ ಒಪ್ಪಿಕೆಂಡೆ. ಮೊದ್ಲು ಬಾಳ ನಾಚಿಕೆ ಬಂತ್ರಿ, ನಿಂತ ತಪ್ಪಿಗೆ ಹೆಂಗಾರ ಸೈಸಕನ್ ಬೇಕಲ್ಲ ರೀ ಅದುಕ ಹೆಂಗ ಬಂದ್ಯಾ, ಗೆದ್ಮ್ಯಾಲ ಹೊಸದಾಗಿ ಆಫೀಸಿಗೆ ಹೋಗಿದ್ದೆ ರೀ ಯಪ್ಪ ಊರಾನ ಹಿರೇರೆಲ್ಲ ಕುಂತಿದ್ರುರೀ ಬಂದ್ ಮ್ಯಾಲ ಕುಂದ್ರಕ್ಕ ಹೇಳಿದ್ರಿ. ಮೈ ಕೈ ಎಲ್ಲಾ ಸಿಕ್ಕಾಪಟ್ಟೆ ನಡುಗಕುಂತು ಬಿಟ್ಟೈತ್ರಿ. ಆವಾಗ್ಲಿಂದನ ನಾ ಊರಾರ ಮುಂದ ಹೆಂಗ ಕುಂದ್ರಿಲಿ ಅಂತಂದು ಪಂಚಾಯ್ತಿ ಮೀಟಿಂಗ ಹೋಗಂಗಿಲ್ರಿ, ನಂಗ ಹಿಂದಿಲ್ಲ ಮುಂದಿಲ್ಲ ರಾಜಕೀದಿಂದ ನಂಗೇನ ಬರದೈತ್ರಿ ದೈವದಾಗ ಇತ್ತನ ಅಂಗಾಗೈತಿ ಇನ್ಮುಂದ ಮಾತ್ರ ಎಂದುನು ರಾಜಕೀಗೆ ಬರಂಗಿಲ್ರಿ.''

''ನಾನು ಪಂಚಾಯ್ತಿ ಅಧ್ಯಕ್ಷಿ ಆದೀನ್ರಿ, ಒಂದ್ವರ್ಷ ಆಯಿತ್ರಿ ನಂಗ ಅಧ್ಯಕ್ಷಿಗಿರಿ ಬಂದ್. ನನ್ ಗಂಡನ ಹೇಳಿದ್ನರೀ ಎಲೆಕ್ಷನ್ ನಿಲ್ಲೂ ನಾನ್ ಎಲ್ಲಾ ನೋಡ್ಕಂತೀನಿ ಅಂತ ಅದುಕ ನಾನ್ ಎಲೆಕ್ಷನ್ ನಿಂತೆ, ಎಲ್ಲಾರಿಗಿಂತನೂ ನಾನು ಹೆಚ್ಚಿಗೆ ಓಟು ತಗಂಡು ಗೆದ್ದೀನ್ರಿ. ಸಲುಪು ದಿನ ಆದ್ಮ್ಯಾಲೆ ನಂಗ ಅಧ್ಯಕ್ಷಗಿರಿ ಬಂತ್ರಿ. ನೋಡ್ರಿ ಹಿಂಗಂತೀನಿ ಅಂತ ನೀವ್ ಏನು ತಿಳಿಕಬ್ಯಾಡ್ರಿ. ನಂಗ ಅಧಿಕಾರ ಸಿಕ್ಕಿರಬಹುದು ಆದ್ರ ನನ್‌ಗಂಡನ್ ಒಪ್ಪಿಗಿ ಇಲ್ಲದಂಗ ನಾ ಒಂದೆನು ಮಾಡಂಗಿಲ್ರಿ, ಅಲ್ಲ ಯಾರತ್ರನು ಏನು ಮಾತಾಡಂಗಿಲ್ರಿ. ಅದುಕ ನನ್ನ ಗಂಡ ಬರತನಕ ನಿಮುಗ ಕಾಯಿಸಿದ್ದು. ನನ್ನ ಗಂಡ ಸಲುಪ್ರು ಸಾಲಿ ಕಲತಾನ್ರಿ.ಅವುರು ರಾಜಕೀದಾಗ ಅದು ಇದು ಅಂತ ಓಡ್ಯಾಡ್ತಿರುತ್ತಾರ ರೀ. ಅದುಕ ಅವ್ರುರ್ನ ನಾ ಮುಂದ ಬಿಟ್ಟಿರದು. ಹೌದ್ರಿ ನಮುದು ಹಳ್ಳಿಯಲ್ಲನ್ರಿ ಅದುಕ ಇಲ್ಲಿ ಹಿಂದ್ಲಿಂದ ನೆಡ್ಕಂದ ಬಂದ ಎಲ್ಲವ್ನ ಇಗ್ಲೂ ನಾವು ತಪ್ಪಿರಲಾರದಂಗ ಅಂಗ ನೆಡೆಸಿಕಂದ್ ಹೊಂಟಿವಿರೀ. ಊರಾರ ಮುಂದ ತೆಲಿ ಎತ್ತಿ ನಡಿಯಾಗಿಲ್ರಿ. ಊರಾಗೇನರ ಜಾತ್ರಿ ಗಿತ್ರಿ ಬಂದ್ರನಾನ್ ಹೋಗಂಗಿಲ್ಲಾಂತ ಅಲ್ರಿ ಹೋಗ್ತೀನಿ ಆದ್ರ ಎಲ್ಲಾ ದೂರದಿಂದನ ಮಾಡಿ ಬರ್ತಿನಿ. ಯಾಕಂದ್ರ ನಾ ಹರಿಜನ್ರು ನಾವೆಂಗ ದೇವ್ರತ್ರ ಗುಡಿಗೆ ಹೋಗಕ್ಕತ್ತೈತಿ. ಪಂಚಾಯ್ತಿ ಅಧ್ಯಕ್ಷ ಆಗಿದ್ರು ನಂಗ ಊರಾಗ ಮುಂದುವರುದು ಕೆಲ್ಸ ಮಾಡಕ್ಕಾಗಿಲ್ರಿ. ಊರಾರು ನನ್‌ಗಂಡಗ ಏನ್ ಹೇಳ್ಯಾರೋ ಅದ್ನೆಲ್ಲ ಅತ ನಂಗೇಳ್ಯಾನ ನಾ ಮಾಡ್ತಿನಿ. ನಂಗಂತ ಏನೇನ ಮಾಡ್ಕಂಬಿಲ್ರಿ. ಅದ್ನೆಸರು ನೂರಾರು ಅದ್ಕೊಂತಾರ ರೀ. ಹೆಂತಾಕಿ ಹಿಂತಾಕಿ ಬಂತ ನನ್ ಆಫೀಸ್ನಾಗ ಅಂತಾರ್ರಿ. ನನ್ ಗಂಡ ಊರಿನ ಹಿರೇರಿಗೆ ಹೆದರಿಕಂದ ಅವುರೇನೇಳಿದ್ರು ಇಲ್ಲ ಅನ್ನಂಗ ಎಲ್ಲಾ ಮಾಡ್ತ್ಯಾನ ರೀ. ಅಂಗ ಮಾಡಂಗಿದ್ರ ಅವುರ ಎಲೆಕ್ಷನ್ ನಿಂತು ಎಲ್ಲಾ

ತಾವ ಮಾಡ್ಸಿಕಂದಿದ್ರ ಚೊಲ ಇತ್ತಲ್ಲ. ಸುಮ್ನಿ ನಡುಕ ಯಾಕ ನಂ ಮರಿಯಾದಿ ತಗಿಯಾಕ ನಿಂದ್ರಿಸಿದ್ರು. ನಾನಂತೂ ಅವರ ಕೈಯಾಗಿನ ಗೊಂಬಿ ಆಗಿನಿರ್ರಿ. ನಮುಗ್ಯಾಕ ತ್ರಾಸ್ ಕೊಡ್ತಿರಿ ಅಂತ ಕೇಳಬೇಕಂತಿನಿರ್ರಿ ಆದ್ರೆನ್ಮಾಡದು ಹೆದ್ರಿಕಂದ ಸುಮ್ನ ಹೊಟ್ಯಾಗ ಇಟ್ಕಂದ್ ಸುಮ್ನ ಕುಂತಿರ್ತಿನಿ.''

''...ನನ್ ಹೆಸರು ಹುಲಿಗೆಮ್ಮ ಅಂತರೀ ನಾ ವಡ್ರಕಿ. ನಂ ಮನಿಯಾಗ ನಾನು ನನ್ನ ಗಂಡ ಮೂರು ಮಕ್ಳು ಇದ್ವಿವ್ರಿ. ನಾನು ಊರಿನ ದೇವಿ ಗುಡಿಯಾಗ ಕಸಬಳಿಕಂತ ಅವಳ ಸೇವೆ ಮಾಡ್ಕಂತ ಆರಾಮಗದಿನ್ರಿ. ಬೆಳಿಗ್ಗೆಯಿಂದ ಸಾಯಂಕಾಲ ತನಕನೂ ನಾ ಊರಿನ ತಾಯಿ ಹತ್ರನ ಇರ್ತಿನ್ರಿ. ಆದ್ರ ಒಂದ್ ದಿವುಸನು ನಾ ಆ ಗುಡಿಯೊಳಗೆ ಹೋಗಿಲ್ರಿ, ಯಾಕಂದ್ರ ನಾ ವಡ್ರವ್ರುಳು, ಒಳಗೆ ಬರಬ್ಯಾಡಂತ ಊರಾರೇನು ಅಂದಿಲ್ರಿ ನಾನ ಹೆದ್ರಿಕಂದ ಹೋಗಿಲ್ರಿ, ಯಾಕಂದ್ರ ನಂ ಮಂದಿ ಎಲ್ಲಾರೂ ಊರಮ್ಮನ್ನ ದೂರಿಂದನ ಕೈ ಮುಗುದು ಹೊಕ್ಕಾರ ರೀ. ಒಂದಿವುಸ ಪೂಜಾರಪ್ಪ ನನ್ನ ಕರುದು ನೋಡಬೆ ಈ ಸಲ ಎಲೆಕ್ಸನ್ ಬಂದೈತಿ ನಿಂ ಓಣಿಯಿಂದ ನೀ ನಿಂದ್ರು ನಾ ಊರಾರಿಗೆ ನಿಂ ಮನಿಯಾರಿಗೆ ಹೆಳಿ ನಿಂದ್ರಿಸ್ತಿನಿ ಅಂದ ರೀ. ಏನು ದೇವ್ರು ಹೆಳಿದಂಗ ಆತ್ರಿ ನಂಗ, ಪೂಜಾರಪ್ಪನೆ ಹೇಳ್ಯಾನಂತ ಅಂದು ನಾನು ಮನೇರಿಗೆ ಹೇಳಿ ನಿಂತೆ. ನಂ ಊರಿನ ಪೂಜಾರಂದ್ರ ದೇವ್ರಿದಂಗ ಅಲ್ವ, ಅದ್ಕ ನಾನೇನ ಹೆದರ್ಲಿಲ್ಲ ರೀ. ಹೆಂಗ ದೇವ್ರು ಮಾಡಿದಂಗ ಆಕ್ಕೈತಿ ಅಂತ ಧೈರ್ಯ ಮಾಡಿ ನಿಂತಬಿಟ್ಟೆ. ಕೈಯಾಗ ಬ್ಯಾರೆ ರೊಕ್ಕ ಇರ್ಲಿಲ್ಲ. ನನ್ನ ಗಂಡ ಎಲ್ಲಿಂದನ ಸಾಲಗೀಲ ಮಾಡಿ ರೊಕ್ಕ ಜೋಡಿಸಿದ್ನರೀ. ಮನೆಗ ಇದ್‌ಬದ್ ಸಾಮಾನೆಲ್ಲಾನು ಮಾರಿ ಅದರಿಂದ ಸಲುಪು ರೊಕ್ಕ ತಂದರೀ. ಆದೇವಿಯ ಆಸಿರ್ವಾದ ನಾ ಗೆದ್‌ಬಿಟ್ಟೆ. ಆ ಮ್ಯಾಲ ಗೊತ್ತಾಯಿತ್ರಿಯಪ್ಪ ನಂಗೆ ನಾ ಯಾಕಾರ ಎಲೆಕ್ಸನ್ ನಿಂತ್ಕ ಅಂತ. ರಾಜಕೀ ಮಾಡರು ತಮುಗ ಮನಿ, ಮಠ, ರೊಕ್ಕ ಅಂತ ಮಾಡ್ಕಂತಾರ ಉದ್ಧಾರಕ್ಕಾರ ಅಂತ ನಾ ಕೇಳಿದ್ನೆ ರೀ. ನಾನು ಏನರ ಆಫೀಸಗ ಮಾತಾಡಕುಂತ್ರ ಎಲ್ಲರೂ ಬಂದು ಬಾಯಿಗೆ ಸಿಕ್ಕಾಂಗ ಬೈತಾರ ಅಲ್ಲ ನಂಗ ಅಲ್ಲಿ ಮಾತಡಕ್ಕ ಬಿಡಂಗಿಲ್ರಿ. ಯಾವಾಗರ ನೋಡ್ರಿ ತಾವೆ ಸಿಕ್ಕಸಿಕ್ಕಂಗ ತಿಂತಾರ. ಇದ್ಕ ಏನ್ರಿಯಪ್ಪ ಆ ತಾಯಿ ನಂಗ ನಿಂದ್ರಿಸಿ ಗೆಲ್ಸಿದ್ದು, ಮನೆಗ ಇರಬರದ್ನೆಲ್ಲ ಮಾರ್ಕಂದ್ ನಾ ಪರದೇಶಿ ಆಗಿನಿರೀ. ನಂಗ ರಾಜಕೀನ ಬ್ಯಾಡಂತ ಅದುಕ ಕೈ ಮುಗಿದು ಕೈಯಾಗ ಕಸಬರಿಗಿ ಹಿಡ್ಕಂದ್ ನನ್ ಹಳೆ ಕೆಲಸ ಮಾಡಕುಂತಿನಿರೀ, ಅದಕ್ಕಿಂತ ಇದ ವಾಸಿಯಲ್ರಿ''

''ನಮಸ್ಕಾರ ರೀ ಯಪ್ಪ ನಾನ್ ಎರಡ್ನೆತಿ ತನಕ ಕಲಿತಿನಿರೀ, ನಾನು ಜಾತಿಯಿಂದ ಹರಿಜನ್ರವುಳು. ಕೂಲಿನಾಲಿ ಮಾಡಿ ಜೀವನ ಸಾಗಿಸೋ ಮನಿ ನಮುದು. ನಾವೇನ್ ಜಗ್ಗು ಗಳಿಸಿರೂರಲ್ರಿ. ದುಡಿಯಬೇಕು ತಿನ್ನಬೇಕು. ನನ್ ಗಂಡ ಹೇಳಿದಂಗ ಮನ್ಸು ಇಲ್ಲಿದ್ರು ಎಲೆಕ್ಸನ್ ನಿಂತೆ ಇದ್ದ ಎರಡು ಜೊತೆ ಆಕಳ್ನ ಮಾರಿ ಇದುಕಾಕಿದ್ಯಾ, ನಂಗೂ ಏನ ಒಂದೆಸೆ ಇತ್ರಿಯಪ್ಪ ರಾಜಕೀ ಮಾಡರೆಲ್ಲರೂ ದೊಡ್ಡವರಾಗ್ತಾರ ರೊಕ್ಕಗಿಕ್ಕ ಗಳಿಸ್ತಾರಂತ. ಅಂಗಂತನ ನಾನು ಎಲೆಕ್ಸನ್ ನಿಲ್ಲಕ್ಕ ಮನಸ್ಸು ಮಾಡಿದ್ದು. ನಾಕಾರ ಮಂದಿ ಕಾಲ್ಬಿದ್ದು ನಾಚಿಕಿ ಇಲ್ಲದಂಗ ಅವ್ರ ಮನಿಮನಿ ತಿರಿಗಿ ಹೆಂಗ ದೇವ್ರು ದಯದಿಂದ ನಾನು ಗೆದ್ದು ಬಿಟ್ಟೆ. ಮೊದ್ಲೆಲ್ಲ ಬಾಳ ಹುರುಪು ಇತ್ರಿಯಪ್ಪ ಆ ಮ್ಯಾಲೆ ತಿಳಿತ್ರಿ ರಾಜಕೀ ಅನ್ನೋದು ಏನಿದ್ರು ಮ್ಯಾಲಿನವ್ರುಗೆ. ಒಂದಿನಾನಾದ್ರು ಯಾವನರ ಒಬ್ಬ ತಗ ಅಂತ ಒಂದ್ ರೂಪಾಯಿ. ಒಂದ್ ಕಪ್ಪು ಮಾಡಿಕೊಟ್ರು ಅವರಿಗ್ನ ನಕ್ಕಿ ಹುಟ್ಟಿದಂಗರೀ. ಮನೇಗಿದ್ದ ಮುತ್ತಿನಂತ ಎತ್ತುಗಳನ್ನು ಮಾರಿದೆ. ಇಂತ

ರಾಜಕೀ ಮಾಡಕ ಪುಣ್ಯ ಮಾಡಿರಬೇಕು ಅಂಗೆ ಮ್ಯಾಲಿನ ಜಾತಿಯಾಗನ ಹುಟ್ಟಿರಬೇಕು, ನಂಗ ಅವ್ಯಾವು ಇಲ್ಲಲ್ರಿ, ಯಾವಾಗರ ಒಂದು ದಿವುಸ ಆಫೀಸಿಗೆ ಕರಿತಾರರೀ ಹೊಕ್ಕಿನಿ ಸೈ ಮಾಡಂದಲ್ಲೆ ಮಾಡಿ ಸುಮ್ನೆ ಬರ್ತಿನಿ. ಯಾಕೆ ನನ್ನ ಮನಿಯಾಗ ಅಲ್ಲಿ ಸಿಗ ಚಾ ಬಿಸ್ಕಟ್ಟು ಎಲ್ಲಾ ಸಿಗುತ್ರಿ. ಇದರ ಸಲುವಾಗಿನ ನಾನು ಸಾವಿರಾರು ರೂಪಾಯಿ ಖರ್ಚು ಮಾಡಿ ಬರಬೇಕಿರಲಿಲ್ಲ. ಸರಕಾರ ಯಾಕ್ರಿ ನಕ್ಕಂತರಿಗೆ ರಾಜಕೀಗೆ ಕರಿತಾದ. ಹೇಳ್ತಿನ್ರಿ ಇನ್ನೊಂದ್ಸಲ ಯಾರಾರ ನಂಗ ಎಲೆಕ್ಷನ್ ನಿಲ್ಲಂತ ಅಂದ್ರ ಅವುರ ಮುಖಕ್ಕ ಮಂಗಳಾರ್ತಿನ ಮಾಡ್ತಿನಿ. ಮುಂದೆಂದು ನಾ ರಾಜಕೀಗೆ ಬರಂಗಿಲ್ಲ ರೀ. ಯಾ ಜನ್ಮದ ಪಾಪನ ನಂಗೆ ಈ ಜನ್ಮದಾಗ ರಾಜಕೀದಾಗ ಕಾಡಕುಂತೈತಿ. ನಂಗ ನೀವು ಹ್ಞೂಂ ಅಂದ್ರ ಸಾಕು ಈಗ್ಲೆ ರಾಜಿನಾಮ ಕೊಡ್ಲಿಕ್ಕೆ ರೆಡಿ ಅದೀನಿ. ನಮ್ಮನಿಯವ್ರಿಗೂ ಹೇಳಿನ್ರಿ ನಂಗ ಮತ್ತೆ ರಾಜಕಿ ಬ್ಯಾಡಂತ ಅಂಗ ಯಾರಿಗೂ ನಿಂದ್ರದು ಬ್ಯಾಡಂತ ನಮ್ಮಂದಿಗೆ ಹೇಳಿನಿ."

"ರಾಜಕೀಗ ಯಾಕಬಂದೆ ಅಂತ ಕೇಳ್ತಿರಲ್ಲ ಅದ್ನ ನನ್ನ ಗಂಡನ್ನ ಕೇಳ್ತಿರ್ರಿ ಆತನ ನಿಮುಗೆಲ್ಲಿ ಹೆಳ್ತಾನ. ರಾಜಕೀನ ಯಾರೀಯಪ್ಪ ಹುಟ್ಟಿಸಿದ್ದು ಅವುರ್ ಏನರ ನನ್ನ ಕೈಗ ಸಿಕ್ರ ನೋಡ್ರಿ... ಯಾಕಂದ್ರ ನನ್ ಗಂಡ ಯಾರ್ದ ಮಾತ್ಕೇಳಿಕಂಡ್ ಬಂದ ನನಗ ಮೋಸ ಮಾಡಿದ್ನರೀ. ಇದ್ರಿಂದ ಅವುನಿಗೂ ಏನ್ ಉಪಯೋಗ ಆಗ್ಲಿಲ್ಲ. ತಿನ್ಲಿಲ್ಲ ಉನ್ಲಿಲ್ಲ ಇದ್ ಬದ್ದಿದ್ದನೆಲ್ಲ ಮಾರಿ ಹುಚ್ಮಂಗ್ಯಾ ಆಗಿ ನಾವ್ ಕುಂತೀವಿ. ನಾನ್ ರಾಜಕೀ ಮಾಡ್ಬೇಕಂತ ನಮ್ಮನಿಯಾಗ ಯಾರು ಹೇಳಿಲ್ರಿ ಅವವರಿಗ ಇಷ್ಟನೂ ಇರ್ಲಿಲ್ಲ ನಂಗ್ಯಾಕ ರಾಜಕೀ ರೀ ತಿಂದುಂಡು ಆರಾಮಾಗಿದ್ವಿ. ಆದ್ರೇನ್ ಮಾಡದು ಯಾರ ಹಿರೇರ ಮಾತಿಗೆ ಬಲಿಯಾಗಿ ನನ್ನ ರೆಡಿ ಮಾಡಿಸಿದ್ನ ಅವ ನನ್ ಗಂಡ. ಮನೇಗ ಇರಬರ ರೊಕ್ಕನ್ನೆಲ್ಲ ಹಾಕಿದಿವಿ. ಊರಿಗಿನ ದೈವನಿಂಗ ನಾವ್ ಗೆಲ್ಲಿಸ್ತಿವಿ ಅಂತನು ಹೆಳಿದ್ರಿ. ನಂಗೂ ಧೈರ್ಯ ಬಂತ್ರಿ ಹೆಂಗೂ ನಿಂತೇ ಗೆದ್ದಬಿಟ್ಟ್ಯಾ. ನಾನ್ ಗೆದ್‌ಮ್ಯಾಲ ನಂ ಮನಿಯಾಗ ಹಬ್ಬನ ಮಾಡಿದಿವಿರಿ. ನನ್ನ ಗಂಡ, ಮನಿ, ಮಕ್ಳು ಉದ್ಧಾರಾದ್ರು ಅಂತ ನಾ ನೂರಾರು ಕನಸ ಕಂಡೆ. ಆದ್ರ ಆದದ್ದ ಬ್ಯಾರೆ ರೀ. ನಾನ್ ಮೊದಲ ದಿನ ಗಂಡನ ಜೊತೆ ಪಂಚಾಯತಿಗೆ ಹೋದಾಗ ರೀ ನನಗ ಸಿಕ್ಕ ಮರ್‍ಯಾದಿ ಅಂದ್ರ ಚಾ ಕುಡಿ ಅಂತ ಇಬ್ರಿಗೂ ಬ್ಯಾರೆ ಕಪ್ಪಿನಾಗ ಕೊಟ್ಟು ದೂರ ಕುಂದ್ರಿಸಿದ್ರು. ನಾನ್ ಮೆಂಬರ್ ಆದ್ರು ನಂಗ ಎಲ್ಲರಿಂದನು ಹೊರಗ ಕುಂದ್ರಸದು ಮಾತ್ರ ಅಲ್ಲಿನು ಇತ್ರಿ. ಮೊದ್ಲು ಚಾ ಕುಡುದ ಮ್ಯಾಲ ಆ ಕಪ್‌ಗಳನ್ನ ನಾನ ತೊಳದ ಬಂದೀನಿರೀ. ನಾನ್ ಗೆದ್ಮ್ಯಾಲ ಅದು ಮಾಡ್ಬೇಕು ಇದು ಮಾಡ್ಬೇಕು ಅಂತ ನೂರಾರು ಕನಸ ಕಂಡಿದ್ನೆರೀ ನಿದ್ರ ಅದೆಲ್ಲ ನೀರಾಗ ಉಂಚನ್ನು ತೊಳದಾಗ ಅತ್ರಿ. ಊರಾಗಿನ ಎಲ್ಲಾರು ಸೇರ್ಕಂಡು ನಂಗ ಒಂಟಿಯಾಗಿ ಪರದೇಶಿ ಮಾಡಿದ್ರು. ಸೈ ಹಾಕತನಕ ಚೂಲ ಮಾತಾಡ್ತಾರ ಆ ಮ್ಯಾಲ ಅವ್ರಾರೋ ನಾನ್ಯಾರೋ ರೀ. ನಂಗ ಯಾ ಕೆಲ್ಸನು ಮಾಡಿಕೊಟ್ಟಿಲ್ಲರೀ ಕೇಳಿದ್ರ ಹೆದ್ರಸ್ತಾರಿ. ಅಂಗಾಗಿನ ನಾ ಪಂಚಾಯತಿಗೆ ಹೋಗದ್ನ ಬಿಟ್ಟೇನಿ ಇನ್ಮ್ಯಾಲ ಎಲೆಕ್ಷನ್ ಬೇಡ್ರಿ ಯಾವಳಿಗೆ ಬೇಕಿದು."

"ಯಾಕ್ಕೇಳ್ತೀರಿ ಈ ರಾಜಕೀಗ ಯಾಕ ಬಂದಿ ಅಂತ ಯಾರಿಗೂ ಹೇಳದಂಗೆ ಆಗ್ಯಾತ್ರಿ ನನ್ ಪರಿಸ್ಥಿತಿ. ನನ್ ಗಂಡ, ಅಪ್ಪ, ಏನನ ಆಶೆ ತೋರಿಸಿದ್ರು ನಿಂದ್ರು ಗೆಲ್ತಿ ಮಸಿ. ನಾವು ಉದ್ಧಾರಿಗ್ತಿವಿ ಅಂತ ರೊಕ್ಕ ರೂಪಾಯಿ ಇಲ್ಲ ಹೆಂಗ ನಿಂದ್ರಕ್ಕ ಅಕ್ಕೆತ್ರಿಯಪ್ಪ ಸಾಲ ಕೊಡ್ಯಾದು ನಿಂತೆ. ಮೊದ್ಲಿಂದ ಗೌಡ್ರಗೆ ನಂಮ್ಯಾಲ ಬಾಳ ಪ್ರೀತಿ ರೀ ಅವುರ ಐದು ಸಾವಿರ ರೂಪಾಯಿಕೊಟ್ರು. ಅವ್ರಳೇದ್ರಕ್ಕ ನನ ಗಂಡ ನನ್ನ ನಿಂದ್ರಿಸಿದ್ರು. ನೀವೆದಂಗ ನಾ ಮೊದಲು ಬಾಳ

ಹೆದಿರಿಕೊಂಡಿದ್ವೆರೀ. ಆಮ್ಯಾಲ ನಂಗೂ ನಿಲ್ಲಕ್ಕ ಧೈರ್ಯ ಬಂತು. ಗೆದ್ದ್ ಮ್ಯಾಲಿ ನಂಗಂತೂ ಬಾಳ ಖುಷಿ ಆತ್ರಿ. ಸಿದಾ ಗುಡಿಗೆ ಹೋಗಿ ಪೂಜಾ ಮಾಡಿಕಂಡೆ ಬಂದ್ವಿ. ಅಲ್ಲಿಂದ ಬಂದಾಕಿನ ಗೌಡರ ಕಾಲಿಗೆ ಬಿದ್ದೆ ಯಾಕಂದ್ರ ಅವುರಿಲ್ಲಂತ ಅಂದ್ರ ನಾ ಹೆಂಗೆ ಗೆಲ್ಲಕ್ಕ ಆಕ್ಕತ್ರಿ. ಮೊದಲ್ ದಿವುಸನಾ ಪಂಚಾಯತಿಗೆ ಗಂಡನ್ ಜೊತಿಗೆನೆ ಬಂದೆ. ಅವತ್ತು ಹೆದಿರಿಕೆ ಅಂತೂ ಇತ್ತು ಬಿಡ್ರಿ ಏನ್ ಮಾಡದು ಗೌಡ್ರುಬ್ಯಾರೆ ಅಲ್ಲೆ ಇದ್ರು ನನ್ ಗಂಡನ್ನು ಮುಂದಕಳಿಸಿ ನಾ ಹೊರಗೆ ಉಳಿದ್ಯಾ. ಆಮ್ಯಾಲ ಎಲ್ಲರೂ ಕರೆದಾಗ ಹೋದ್ರ ಊರಿನ ಮಂದಿಯೆಲ್ಲ ಅಲ್ಲೆ ಕುಂತ್ರಿದ್ರು ಹೋದಾಕಿನ ತೆಲಿತಗ್ಗಿಸಿಕಂಡೆ ಕುಂತ್ಯ. ಮೈಯಾಗ ನೀರಿಳಿಯಕುಂತಿತ್ತು. ಅದಾದ್ಮೇಲ ನಾ ತೀರಾ ಹೆದಿರಿ ಮನಿಗ ಬಂದಾಕಿನ ಹೆದಿರಿಕಿಲಿಂದನ ಚಿಂತಿ ಮಾಡಕ್ಕುಂತೆ ರೀ ಯಪ್ಪ ಎಂತೆಂತರ ಮುಂದು ಕುಂದ್ರಬೇಕಾತಲ್ಲಂತ ಬಾಳ ಚಿಂತಿ ಮಾಡಿದ್ನೆ. ಎಲೆಕ್ಷನ್ ಗಂತ ಊರ ತುಂಬ ಸಾಲಮಾಡಿಕಂದ್ ನಾ ಕುಂತಿನಿ ರೀ ಪಂಚಾಯ್ತಿಯಿಂದ ನಂಗ್ ಒಂದಾದ್ರು ಕೆಲ್ಸ ಮಾಡಿಸಿಲ್ರಿ. ಯಾರ ಹೇಳಿದ್ರಂತ ಬಂಡಿ ಹಾಕಿಸಿದ್ರು, ಗುಡಿ ಹತ್ರ ಕಟ್ಟಿ ಕಟ್ಟಿಸಿದ್ರು. ಎರಡು ವರ್ಷದಾಗಗೆ ನನ್ನಿಂದ ಮಾಡಕ್ಕಾಗಿದ್ದಷ್ಟೆ. ಪ್ರತಿಯೊಂದ್ ಕೆಲ್ಸಕ್ಕೂನು ಗೌಡರ ಒಪ್ಪಿಗೆ ಬೇಕ್ರಿ ಅಲ್ಲದ ನಂಮನಿಯಾತನು ಒಪ್ಪಬೇಕು. ಗೌಡರ ಒಪ್ಪಿದ ಮ್ಯಾಲ ಈತ ಒಪ್ಪತ್ತಾನ ರೀ. ಹಿಂಗೈತಿ ನೋಡ್ರಿ ನನ್ ರಾಜಕೀ ಬದುಕು ಹೆಂಗಾರ ಮಾಡಿ ಇದ್ರಿಂದ ಪಾರ್ ಮಾಡು ಅಂತ ದಿನಾ ನಾ ಆದೇವ್ರಗೆ ಕೇಳ್ಕಂತಿನಿ ರೀ.''

ನಾನ್ ಎರಡ್ನೆ ಸಾರಿ ರೀ ಎಲೆಕ್ಷನ್ ನಿಂತಿರದು, ಮೊದಲ್ನೆ ಸಲ ಮನೇಲು ಹೇಳಿದ್ರಂತ ನಿಂತಿದ್ದೆ, ಐದು ವರ್ಷದಾಗ ಸಣ್ಣ ಪುಟ್ಟ ಕೆಲ್ಸ ಮಾಡ್ಸೀನಿರೀ, ಅದಿಷ್ಟನ್ನು ಬಿಟ್ರ ನನ್ನಿಂದ ಮತ್ತ್ಯಾವ ಕೆಲ್ಸನು ಆಗಿಲ್ಲ ರೀ. ಒಂದ್ ಸಾರಿನಾ ಅಧ್ಯಕ್ಷನು ಆಗಿನಿರೀ, ಅವಾಗುನು ನಂಗ ಏನು ಮಾಡಕ್ಕ ಆಗಿಲ್ರಿ, ನನ್ನ ಗಂಡ ಊರಿನ ಹಿರೇರೆಲ್ಲರಿಗೂ ಬಾಳ ಬೇಕಾದವ, ನಂ ಊರಿನ ಹಿರೇದು ಏನ್ ಹೇಳ್ತಾರ ನಂಮನಿಯಾತ ಅದುನ ನನ್ನ್ ಕೈಯಿಂದ ಮಾಡಿಸ್ತಾನ ರೀ, ಯಾಕಂದ್ರ ನಂಗ ಎಲೆಕ್ಷನ್ ನಿಲ್ಸಿದ್ದು, ಎಲ್ಲಾರತ್ರ ಓಟ್ಟು ಹಾಕಿಸಿದ್ದು ಊರಿನ ಹಿರೇರ ರೀ, ಪಾಪ ಅವುರ್ ನಂ ಸಲುವಾಗಿ ಇಷ್ಟು ಉಪಕಾರ ಮಾಡ್ಯಾರಂತ ಅಂದ್ರ ಅವುರ್ ಸಲುವಾಗಿ ನಾ ಇಷ್ಟು ಕೆಲ್ಸನು ಮಾಡಿಕ್ಕಂಗಿಲ್ಲಂತ ಅಂದ್ರ ಹೆಂಗ ರೀ, ಹೌದ್ರಿ ನಾ ಹರಿಜನ್ರಕಿನ ರೀ, ಅದುಕ ನಾ ಪಂಚಾಯಿತಿಯಾಗ ಮಾಡಕ್ಕಂತ ಕುಂತ್ರ ಬಾಳ ಹೆದಿರಿಕಿ ಬರುತ್ರಿ, ಎಂದೂ ಊರಿನ ಹಿರೇರ ಮುಂದೆ ತೆಲಿ ಎತ್ತಿ ಮಾತಾಡಿಲ್ಲರಿ. ನಾನ್ ಮೊದಲ ಸಲ ಗೆದ್ದಾಗ ರೀ ಯಪ್ಪ ಮೈ ಕೈ ಎಲ್ಲಾ ಥರಥರ ನಡುಗಕುಂತಿದ್ದು ರೀ. ಪಂಚಾಯ್ತಿಯಾಗ ಎಲ್ಲಾ ಗೆದ್ದ್ ನಂಬರುಗಳು ಬಂದು ಕುಂತ್ರು ನಾ ಅವುರ ಸರಿಸಮ ಹೆಂಗ ಕುಂದ್ರಲಿ ಅಂತ ಎದ್ದ್ ನಿಂತ್ರ ಅವುರ್ ಇಲ್ಲಿ ಕುಂತ್ಗ ಅಂದ್ರಿ, ನಮುದು ತುಂಬ ಹಿಂದುಳಿದಿದ್ದ ಹಳ್ಳಿ ಅದುಕ ರೀ ಈಗಲೂ ನಾ ಪಂಚಾಯಿತಿ ಅಧ್ಯಕ್ಷ ಆದ್ರುನು ನಾ ಹೋಟಲ್ ಹೊರಗೆ ಕುಂತು ಚಾ ಕುಡಿಯದು ತಪ್ಪಿಲ್ಲ. ಈಗೇನ ಅಂಗಿಲ್ರಿ ತುಂಬನೇ ಸುಧಾರಿಸ್ಯೆತಿ. ಊರಾಗ ಹಬ್ಬ ಹರಿದಿನಕ್ಕೆಲ್ಲ ಹೊಕ್ಕಿಸಿ ಬಿಡ್ರಿ ಅದ್ರ ದೂರಿಂದನ ಎಲ್ಲಾ. ನಾನು ಸಾಲಿ ಮುಖನ ನೋಡಿಲ್ರಿ. ನಂ ಅಪ್ಪ ಅವ್ವ ಕಲಿ ಕಲಿ ಅಂದ್ರು ನಾ ಎರಡ್ನೆತ್ತ ಕಲಿತೆ ಅದ್ಕರೀ ನಂಗ ಆಫೀಸನಾಗ ಎಲ್ಲರೂ ಓದಿದಂಗ ಬರಿದಂಗ ಓದಕ್ಕಾಗಲಿ ಬರೆಯಕ್ಕಾಗಿಲ್ಲ ಬರಂಗಿಲ್ಲ. ಎರಡ್ನೆ ಸಲ ಎಲೆಕ್ಷನ್ ಒಲ್ಲೆ ಅಂತ ಕುಂತಿದ್ದೆ ಆದ್ರ ಊರಾರೆಲ್ಲ ಮನಿಗೆ ಬಂದು ನಿಂದ್ರಬೇಕು ಅಂದ್ ಮ್ಯಾಲಿ ಏನ್ ಮಾಡ್ಲಿ ನೀವೆ. ಮನಿಯಾಗ, ನಂಗ ರಾಜಕೀಮಾಡಕ ಒಪ್ಪಿಗೆನೆ ಇಲ್ರಿ.

"....ನಮುಸ್ಕರ ರೀಯಪ್ಪ ದಿನಾಲೂ ಯಾರ್‍ಯಾರ ಬಂದು ನನ್ನ ಹತ್ರ ಅದುನ ಇದುನ ಬರಕಂಡ್ ಹೋಕ್ಕಿದ್ರು ಆದ್ರ ನೀವ್ ಬಂದ್ ನನ್ ರಾಜಕೀ ಬಗ್ಗೆ ಕೇಳಕ್ಕೆ ಬಂದಿರಲ್ಲ ಬರ್‍ರಿ. ನಾನು ನಾಲ್ಕನೆಯ ತನಕ ಸಾಲಿ ಕಲಿತಿನಿ ರೀ ನನ್ನ ಗಂಡನು ಸಲ್ಪ ಕಲತಾನ್ರಿ. ನಮ್ಮೂರಾಗ ವಡ್ಡರಿಗೂ ನಮುಗು ಬಾಳ ವೈಕರೀ, ಅದುಕ ಅವುರ ಹೆಣ್ಮಕ್ಳನ್ನ ಸೋಲಿಸಕ್ಕಂತನ ನನ್ನ ಊರಿನ ಜನ ಎಲ್ಲಾ ಸೇರಿಕೊಂಡ ಎಲೆಕ್ಷನ್‌ಗೆ ತಯಾರ್ ಮಾಡಿದ್ರು. ದಿನಾವೊಂದ್ನು ನಾನ್ ಊರಾರ ಹೊಲ ಮನಿಯಾಗ ಕೆಲ್ಸ ಮಾಡಿಕಂಡ್ ಹೆಂಗೂ ಇದ್ದೆರೀ. ಅಂತಾದ್ರಗ ಎಲ್ಲಿಂದನ ಎಲೆಕ್ಷನ್ ಬಂತ್ರಿ. ನಾ ಎಲೆಕ್ಷನ್ ನಿಲ್ಲಪತ್ತಿನಾಗ ನಂ ಅಪ್ಪ ಅವ್ವ ಬಾಳ ಜೈದಾಡಿದ್ರಿ, ಆದ್ರೆನ್ ಮಾಡದ್ ಊರಾರ ಮಾತಿಗೆ ಹೆಂಗ ಎದುರು ಮಾತಡಕ್ಕ ಆಗ್ತೈತಿ ಅಂತ ಸುಮ್ನನ ಆದ್ರಿ, ಸ್ವಾಮೇರಿಗೆ ಮತ್ತು ವಡ್ಡರಿಗೆ ಯಾವಾಗ ಜಗಳ ಆಗಿತ್ತಂತೆ ಅದ್ಕ ಸ್ವಾಮೇರೆಲಲ ಸೇರಿಕಂಡ್ ವಡ್ಡರ ಸೊಕ್ಕು ಮುರಿಯಕ್ಕಂತ ನನ್ನ ತಯಾರ್ ಮಾಡಿದ್ರು, ಅವುರ ಎಲ್ಲಾ ಖರ್ಚುಗಿರ್ಚುಮಾಡಿದ್ರು ಬಿಡ್ರಿ, ಅದಾದ್ಮೇಲೆ ನಂ ಜನರಿಗೂ ಅವುರಿಗೂ ಬಾಳ ದೊಡ್ಡ ಜಗಳನ ಆತ್ರಿ, ಎಲೆಕ್ಷನ್ ಮುಂಚೆ ಎರಡು ಜಾತೆರು ಬಾಳ ಚಂದ ಇದ್ವಿರೀ. ಇಷ್ಟೆಲ್ಲ ಆದ್ಮಾಲೇ ಊರಿನ ಪಂಚಾಯಿತಿ ಅವುರಿಗ ದಂಡ ಹಾಕಿತ್ರಿ. ಹೆಂಗ ಗೆದ್ಮ್ಯಾಲಿ ನಂ ಹಿರಿಯನ ಜೋತಿಗೆ ಮೊದಲ್ ದಿವುಸ ಪಂಚಾಯಿತಿಗ ಬಂದಾಗ ಎಲ್ಲರೂ ಬಾಳ ಖುಷಿಯಿಂದನ ನನ್ನ ಕರುದ್ರು, ಎಲ್ಲರೂ ಏನೇನ ಮಾತಾಡಿದ್ರು ಆ ಮ್ಯಾಲ ನಾ ಚಾ ಕುಡುದ್ ಎದ್ದ್ ಬಂದ್ಯಾ, ಎಲ್ಲರೂ ಸೇಕ್ಕಂಡ್ ಗೆಲ್ಲಿಸದ್ರು ಆದ್ರ ನನ್ನ ನಾಯಿಂಗಿತ ಕಡಿ ಮಾಡಿ ದೂರ ಮಾಡ್ಯಾರ, ನನಗ ಏನು ಕೇಳಂಗಿಲ್ಲ, ಹೇಳಂಗಿಲ್ಲ ಎಲ್ಲದು ಅವುರ ಮಾಡ್ಕಂತಾರೆ. ಅದುಕ ಅವತ್ತ ಅಂದ್ಕಂಡ್ಯಾ ರೀ ನಾ ಯಾವತ್ತುನು ಪಂಚಾಯತಿಗೆ ಬರ್‍ಲ ಬಾರದಂತ, ನನ್ನಂತರಿಗ್ಯಾಕ್ರಿಯಪ್ಪ ಹೊಲಸ ರಾಜಕೀಯ ಯಾರ್ ಮೇಲಿನ ಸಿಟ್ಟಿನ ಸಲುವಾಗಿ ನನ್ನ ಬಳಸ್ಕಂದ್ರಿಯಪ್ಪ, ಪಂಚಾಯ್ತಿಯೊಳಗೆ ಹೆಣ್ಮಕ್ಳು ಮಾತಾಡ್ತಿರ್‍ತಾರ ಅವುರತ್ತನು ನಾ ಒಂದಿನಸು ಮಾತಾಡಿಲ್ರಿ, ಅವತ್ತಿನಿಂದನ ಪಂಚಾಯ್ತಿ ಮುಖನಗಿನೋಡಿಲ್ರಿ, ನಾನೇನರ ಮ್ಯಾಲೀನ ಜಾತಿಯೊಳಗೆ ಹುಟ್ಟಿದ್ರೆ ಆಮ್ಯಾಲೆ ತೋರಿಸ್ತಿದ್ದೆ ರೀ, ಮುಂದೆಂದು ಯಪ್ಪ ಎಲೆಕ್ಷನ್ ಸುದ್ದಿನ ಎತ್ತಂಗಿಲ್ರಿ."

....ನಮುಸ್ಕಾರರೀಯಪ್ಪ ನಾನು ಗಂಡಿಲ್ಲ ವಿಧವಿರೀ ನನ್ ಗಂಡ ಸತ್ತ ಒಂದೆರಡು ತಿಂಗಳಾಗ ಎಲೆಕ್ಷನ್ ಬಂತ್ರಿ, ಗಂಡ ಸತ್ತ ಚಿಂತ್ಯಾಗ ನಾನಿದ್ದೆರೀ ಇದೆಲ್ಲ ನಂಗ್ಯಾಕ ಅಂತ. ಹೆಂಗ ನನ್ ಮುಂದಿನ್ ಬದುಕು ಮಕ್ಳುಮರಿನ ಹೆಂಗ ಸಾಕದಂತ ದೊಡ್ಡ ಚಿಂತನ ಮಾಡಕುಂತಿದ್ದೆ ರೀ. ಆದ್ರೆ ವಿಧಿಯಪ್ಪ ರೀ ಓಣಿ ಹಿರೇರೆಲ್ಲ ಬಂದು ನೋಡಬೆ ನಾವೆಲ್ಲ ಸೇರಿ ನಿನ್ನ ಈ ಸಲ ಎಲೆಕ್ಷನ್ ನಿಲ್ಸಿ ಗೆಲ್ಸಬೇಕಂತ ಅಂದ್ಕಂಡಿವಿ, ಅದ್ಕನೀ ನಿಂತ್‌ಬಿಡು ಹೆಂಗೂ ಗಂಡ ಸತ್ತ ಚಿಂತಿ ಬ್ಯಾರೆ, ಅಲ್ಲ ನಿನ್ ಮನಿನು ನಡಿಬೇಕಿಲ್ಲ ಅಂತ ಹೇಳಿದ್ರು ನಂಗೂ ಏನ ಧೈರ್ಯ ಬಂದು ಹೂಂ ಅಂದೆ ರೀ, ನನ್ ಗಂಡ ಕೂಡಿಸಿ ಇಟ್ಟಿದ್ದ ಎಲ್ಲಾ ರೊಕ್ಕನ್ನ ತಂದು ಇದ್ಕಸುರಿದೆ. ನಿನ್ನ ಗಂಡನ ಸಾಲ ಕೊಡು ಅಂತ ದಿನಾ ಒಬ್ಬೊಬ್ರು ಬರಕುಂತ್ರು ನೋಡ್ರೆನಿಂಗ ಎಲೆಕ್ಷನ್ ಖರ್ಚಗಂತ ನಾ ಆರು ಸಾವಿರ ರೂಪಾಯಿ ಖರ್ಚು ಮಾಡೀನಿ ಅದುನ ವಾಪಿಸ್ ಕೂಡ ಅಂದ, ಗೆದ್ದ್ ಮ್ಯಾಲ ಜನ ಹೆಂಗೆ ಬೆನ್ನತ್ತರಂತ ನೋಡ್ರಿ ಅದೇ ತಾನ ಗೆದ್ದಿನಿ ರೊಕ್ಕ ರೊಕ್ಕಂತ ಎಲ್ಲಾ ಬಂದು ಕಾಟ ಕೊಡಕುಂತ್ರು, ಗಂಡ ಸತ್ತ ಚಿಂತಿ, ಮಕ್ಳಗೆ ಏನ ಒಳ್ಳೆದಾಗುತ್ತಂತ ನಾ ನಿಂತ್ರ ಇದು ಹಿಂಗಾಯಿತ್ರಿ, ಯಾವಾಗ ಯಾರ್ ಸಾಲ ಕೊಟ್ಟಿದ್ರ ಏನ ದಿನಾ ಬಂದು ಅದು ಇದು ಅಂತ ಸುಂಸುಮ್ನ

ನನಗ ಕಾಡ ಕೊಡಕುಂತ್ರಿ, ಪಂಚಾಯಿತಿಗೆ ಬಂದಾಗಿನಿಂದ ಇವತ್ತಿನ ತನಕ ನಂ ಗೌಡರಿಗೆ ನಾ ಕೊಟ್ಟ ರೊಕ್ಕ ಮುಟ್ತೈ ಇಲ್ಲ ರೀ. ಅಲ್ಲಿ ಸೈ ಮಾಡು ಇಲ್ಲಿ ಸೈ ಮಾಡಂತ ಮಾಡಿಸಿಕೆಂತಾರ ರೀ. ಅಲ್ರಿ ಪಂಚಾಯಿತಿಯೊಳಗೆ ಗೌಡರಿಗೇನ್ರಿ ಕೆಲ್ಸ, ಇನ್ನೊಂದ್ ಮಾತ್ನನಾ ಹೇಳ್ತಿನ್ರಿ ನಂಗ ಅಧಿಕಾರ ಏನ ಸಿಕ್ಕಿತು ಆದ್ರ ಅದು ಯಾರದೂ ಪಾಲಾಯಿತು. ಎಲ್ಲರೂ ಸೇರ್ಕಂಡ್ ನನ್ನ ಬಾಳನ್ನ ಹಾಳ ಮಾಡ್ಯಾರ ರೀ. ಗಂಡ್ಸತ್ತಾಕಿನ ಊರಾರು ಹಿಂಗನ್ರಿ ದುಡಿಸಿಕನ್ನದು. ನೀವು ಸರಕಾರದವ್ರು ಅಲ್ರಿ ವುರಿಗೇನರ ಮಾಡ್ರಿ ಪುಣ್ಯ ಬರ್ತೈತಿ. ಮುಂದನ್ ರೀ ನಾ ಎಂದ್ ರಾಜಕೀಗೆ ಬರಂಗಿಲ್ರಿ ಇಲ್ಲಿತನಕ ಆದದ್ದ ಸಾಕಾಯ್ತು. ಕೈ ಮುಗಿದ್ ಬಿಟ್ಟೆ ರೀ ಯಪ್ಪ ನಿಂ ಸರಕಾರಕ್ಕೆ ಬಪಂಚಾಯ್ತಿ ರಾಜಕೀಗೆ.”

“ನಮುಸ್ಕಾರ ರೀ ಯಪ್ಪ ನಂಯಜಮಾನ ಕಲ್‌ತಾವದನ್ರಿ, ನಂ ಯಜಮಾನ ರಾಜಕೀ ಜೊತೆಗೆ ಬಾಳ ಹೊಂದಿಕೊಂದಾವ್ನದನ್ರಿ, ಅಲ್ದ ರಾಜಕೀ ಬಗ್ಗೆ ಅವ್ನಂಗ ಬಾಳ ಹುಚ್ಚು, ಅದುಕ ಅವ ಅವುರತ್ರ, ಇವುರತ್ರ ಕಾಡಬೇಡಿ ಸಾಲ ಸೋಲ ಮಾಡಿ ನಂಗ ಎಲೆಕ್ಷನ್ ತಯಾರ್ ಮಾಡಿದ್ನರೀ, ಎಲೆಕ್ಷನ್ ನಿಲ್ಲಾಕ ಅವುಗೂ ಇಷ್ಟ ಇತ್ರಿ ಆದ್ರ ನಂ ಓಣಿಯೊಳಗೆ ಹೆಣ್ಮಕ್ಳ ನಿಂದ್ರಬೇಕಂತ ಅಂದಿದ್ರಿಂದ ನಂಗ ನಿಲ್ಸಿದ, ಎಲ್ಲಾ ಆತ್ನ ನೋಡ್ಕಂತಾನ ರೀ ನಾ ಯಾವಾಗರ ಒಮ್ಮೆ ಪಂಚಾಯತ್ತಿಗೆ ಹೋಗಿ ಬರ್ತಿನಿ. ಆತೆಲ್ಲಿ ಸೈ ಮಾಡಂತಾನ ಅಲ್ಲಿ ಸೈ ಮಾಡ್ತಿನಿ, ಒಂದೆ ನಂದ್ರ ನನ್ ಗಂಡ ಯಾವಾಗ್ಲೂ ತನ್ ಮನಿಯಾರಿಗೆ ಏನ್ ಮಾಡ್ಲಿಲ್ಲರೀ, ಎಲ್ಲಾ ಊರು ಮಂದಿಗೆ ಮೂಲ ಮಾಡ್ಯಾನ, ಊರಾರಂದ್ರ ಹೆದರಿ ಸಾಯ್ತನಾ, ಊರಾರಿಗೆ ಎದುರು ಮಾತಡಕ್ಕ ಆತಗ, ನಂಗ ಇಬ್ರಿಗೂ ಧೈರ್ಯ ಇಲ್ಲರೀ, ಹೆಸರಿಗಷ್ಟೆ ನಾ ಗೆದ್ದಿನಿ ನಾ ಮೆಂಬರ್ ಇದ್ರು ಉಳಿದಿದ್ನೆಲ್ಲ ನನ್ ಗಂಡಂದ ಕಾರುಬಾರು ರೀ. ಏನಾರ ಅರ್ಜೆಂಟ್ ಕೆಲ್ಸ ಇದ್ರ ಆತ್ನ ಬಂದು ಕರೆದು ಕೊಂಡು ಹೊಕ್ಯಾನ. ನಾ ಅಲ್ಲೇನು ಮಾತಾಡಂಗಿಲ್ರಿ ಎಲ್ಲಾ ಅವುರ್ ಅವುರ ಎಲ್ಲಾ ಮಾತಾಡ್ಕಂತಿ ತಮುಗೇನ್ ಬೇಕ ಅದುನ ಯಾರ್ ಮುಲಾಜಿನು ಇಲ್ದಂಗ ತಾವ ತಗಂತಾರಿ, ನನ್ನ ಗಂಡ ದುಡಿಬೇಕಂದ್ರ ಬಾಳ ಕೆಲ್ಸ ಐತ್ರಿ ಆದ್ರ ಅವುಗ ರಾಜಕೀ ಹುಚ್ಚು ಬಾಳ ಐತ್ರಿ. ತನಿಗಿರ ಹುಚ್ಚಿಗೆ ನನ್ನ ಬಲಿಕೊಟ್ಟ ಊರಾರು ನೂರು ಇನ್ನೂರು ಕೊಟ್ರೆ ಸಾಕು ಎಲ್ಲಂದ್ರಲ್ಲಿ ಸೈ ಮಾಡಿಸಿಕೆಂತಾನ, ಅವುರಂತೂ ನನ್ನ ಗಂಡನ್ನ ಹೆಂಗ ಬೇಕೂ ಅಂಗ ಬಳಸಿಕೆಂತಾರ ರೀ, ಹಿಂಗೈತಿ ನೋಡ್ರಿ ನನ್ನ್ ರಾಜಕೀ, ಇಂತದ್ನ ನೀವು ಎಲ್ಲಾರ ನೋಡಿರ್ಯಾ ಕೇಳಿರ್ಯಾ, ಯಾವಾಳ್ಗಿ ಬೇಕ್ರಿ ಈ ಹಾಳಾದ ರಾಜಕೀ, ನಂರೊಕ್ಕ ಕರ್ಚು ಮಾಡಿ ನಾವು ಗೆದ್ದ್ ಬಂದ್ ಇನ್ನೊಬ್ಬರಿಗೆ ಅದುನ ಯಾಕ ಧಾನ ಮಾಡಿಕೊಡಬೇಕ್ರಿ. ಪ್ರಂಪಚದಾಗ ಎಲ್ಲಿ ಇಲ್ದ ರಾಜಕೀ ನಾ ಮಾಡಕುಂತಿನಿ. ಇನ್ನೂ ಮುಂದರೀ ಆ ಸುದ್ದಿನ ಎತ್ತ್ ಬ್ಯಾಡ್ರಿ ರಾಜಕೀ ಅಂದ್ರನ ನಂಗ ಸಾಕ್ ಸಾಕಾಗಿ ಹೋಗೈತಿ ಯಾವತ್ತು ಅದುರ ತಂಟೆಕ್ಕ ಹೋಗಂಗಿಲ್ರಿ.

“ನಂಸ್ಕಾರ ರೀ ನನ್ನ ರಾಜಕೀ ಬಗ್ಗೆ ಕೇಳಕ್ಕೆ ಬಂದಿರಂತ ಅಂದ್ರ ನಾನು ನಿಮುಗ ಅದರ ಬಗ್ಗೆ ಹೇಳಬೇಕ್ರಿ, ನಾನು ಜಾತಿಯಿಂದ ಮಾದ್ಯಾನ್ನಳು. ನಂ ಮನಿಯಾಗ ನಾನು ನನ್ನ ಗಂಡ, ಅಷ್ಟ ಮೂರು ಜನ ಮಕ್ಳು. ನನ್ನ ಗಂಡ ಹೊಲಮನಿಯಾಗ ಕೆಲ್ಸ ಮಾಡ್ತಾರ ರೀ. ನಾನು ಊರಾರ ಮನಿಯಾಗ ಕಸ್ಗ, ಮುಸ್ರಿ ಕೆಲ್ಸ ಮಾಡ್ಕಂತನ ಹೆಂಗೂ ಬದುಕಿವಿ, ನಂ ಊರಾಗ ಯಾರ ರಾಜಕೀ ಮಾಡ್ತಾರ ಅವುದ್ನರೀ ಗೌಡರೇ, ಎಲ್ಲಾ ಅವುರೆಳಿದಂಗನ

ನಡೀತೈತಿ, ನಂಮ್ಮಂತವರಿಗಲ್ರಿ ಅದು. ಊರ್ ಪಂಚಾಯ್ತಿ ಮುಂದೆ ಎಲ್ಲಾರೂ ಸೇರ್ಕಂಡ್ ಬಂದ್ ದಿನ ಯಾರ್‍ಯಾರು ಎಲೆಕ್ಷನ್ ನಿಲ್‌ಬೇಕಂತ ಮಾತಾಡಿದ್ರಂತ ರೀ ಹಿರೇರೆಲ್ಲರೂ ನನ್ನ ಹೆಸರ ಹೇಳಿದ್ರಂತ, ನನ್ನ ಗಂಡ, ಅಪ್ಪ ಇಬ್ರು ಅಲ್ಲೇ ಇದ್ರಂತ ಅದುಕಿನ ಕೇಳಿದರ ಸೀದಾ ಮನೀಗ ಬಂದು ಹಿಂಗ ಅಂತ ಅಂದ್ರು ನಾ ನೀವು ಬೈಯಕ್ಕೆ, ಬ್ಯಾಡನ್ನಕ್ಕ ಬರಂಗಿಲ್ಲನ ಅಂದೆ, ಅದುಕ ಅವುರು ಊರಾರ್‍ನ ಎದುರಾಕಿಕೊಂಡು ಹೆಂಗರೇ ಬದುಕುತಿ, ನನ್ನ ಗಂಡ ನಿಂಗ ಅದೃಷ್ಟ ಬಂದೈತಿ ಹೂಂ ಅನ್ನು ಅಂದ, ನನ್ನ ಗಂಡನ್ನ ಮುಕ ಬಿಟ್ರ ಊರಾಗ ಬ್ಯಾರೆ ಯಾರ್ ಮುಕನು ನಾ ನೋಡಿದಾಕಿನ ಅಲ್ರಿ, ಅಂತಾದ್ರಾಗ ಇದೆನಪ್ಪ ಅಂತ ಚಿಂತಿನ ಹತ್ತಿತು. ಹಿರೇರೆಲ್ಲ ಮಾತಾಡ್ಕಂಡ್ ಸಲುಪುವು ರೊಕ್ಕನು ಕೊಟ್ಟರ, ಎಲೆಕ್ಷನ್‌ನಲ್ಲಿ ಗೆದ್ದ್ ಮ್ಯಾಲ ಊರಿನ ಹಿರೇ ಗೌಡ್ರು ನಂಗ ಶಹಬ್ಬಾಶಗಿರಿ ಮಾಡಿದ್ರಿ, ನನ್ ಮರ್‍ಯಾದಿ ಉಳಿಸಿದಿ ಅಂತ ಅವುರು ನಂಗ ಬಾಳನ ಹೋಗಳಿದ್ರು, ಅದೇ ರೀ ಯಪ್ಪ ನಾ ಹೇಳ್ಬೇಕಂದಿರದು ಯಾರೇರ ಹಣೆ ಬರದಾಗ ಏನೇನ ಬರದಿರುತ್ತ ಅಂಗ ಅಕೈತಿ ಬಿಡ್ರಿ, ಆದ್ರ ನಂದು ಅದಕ್ಕಿಂತ ಬಾಳ ಕರಾಬ ಹೈತ್ರಿ, ನೆಟ್ಟಗೆ ಯಾರು ನನ್ ಜೊತೆಗೆ ಮಾತಡಂಗಿಲ್ರಿ, ವೈರಿ ನೋಡಿದಂಗ ನನ್ನ ಪಂಚಾಯ್ತಿಯೊಳಗೆ ನಂಬರೆಲ್ಲರೂ ನೋಡ್ತಾರರೀ, ನನ್ನಂಗ ಅವುರು ಗೆದ್ದ್ ಬಂದಾರಲ್ಲನ್ರಿ ಅವುರ್‍ನಾಕ ಅಂಗ ನನಗೆ ಮಾಡ್ತಾರಂದ್ರ ನಾನು ಮಾದ್ರ ಜಾತಿಯಾಗ ಹುಟ್ಟಿರುದಿಂದ, ಅಂಗಿದ್ರ ನಂಗ್ಯಾಕ್ರಿ ಅವುರ್ ಎಲೆಕ್ಷನ್ ನಿಂದ್ರಿಸಬೇಕಿತ್ತು. ಎಲ್ಲಾ ಕೆಲ್ಸ ತಾವು ಮಾಡ್ಕಂತಾರ ನಂ ಬೇರೆ ಕೆಲ್ಸ ಅವುರ ಮುಂದ ನಿಂತ್ ಮಾಡಿಸ್ತಾರ ರೀ. ಕಂಟ್ರಕ್ಟರು ಕಡೆ ಬರ ಎಲ್ಲಾ ರೊಕ್ಕ ತಾವ ತಿಂದು ತೇಗ್ತಾರರೀ, ಊರಾಗ ಹಿರೇರೆನಿಸಿಕಂಡಾರೆಲ್ಲರೂ ನಮ್ಮನ್ನ ಹಿಂಡಿ ಹಿಪ್ಪಿ ಮಾಡುಕುಂತಾರ ರೀ, ಮುಂದಿನ ಜನುಮದಾಗನು ನಾನು ರಾಜಕೀ ಸಾವಸಕ್ಕೆ ಬರಂಗಿಲ್ಲ ರೀ.''

..... ನಮುಸ್ಕಾರ ರೀ ನಾ ರಾಜಕೀನಾ ಬರ್‍ರಿ ಕುಂದ್ರಿರ್‍ರಿ ಹೇಳ್ತಿನಿ, ನಾನು ಐದನೆ ಕ್ಲಾಸ್ ತನಕ ಕಲಿತಿನಿರೀ, ಅಲ್ಪ ಸ್ವಲ್ಪ ಓದಕ್ಕೆ ಬರಿಯಕ್ಕನು ಬರ್‍ತೈತಿ. ಉಣ್ಣಕ್ಕ ತಿನ್ನಕ್ಕ ನಂ ಹತ್ರ ಏನು ಕಡಿಮೆ ಇಲ್ರಿ, ಆದ್ರ ನಂಗ ಇದ್ದ ಸಮಸ್ಯೆ ಅಂದ್ರ ಮನ್ಯಾಗ ಬೆಳದ್ ನಿಂತ್ ಮಗಳ ಮದುವೆ ಮಾಡದು. ಹಿಂಗಿರವಾಗ ದೀಡೀರ್‍ನ ನನ್ನ ಗಂಡ ರಾಜಕೀ ಮಾಡ್ತಿಏನ್ ಅಂದ, ನಾನ್ಯಾಕ ನೀನ ಬೇಕಾದ್ರ ಮಾಡು ಅಂತ ಅಂದೆ, ಆದ್ರ ಆತ ನೀನ ಮಾಡುನಾ ಬೇಕಾದ್ರ ನಿನ್ನಿಂದಿರ್‍ತಿನಿ ಅಂತ ಅಂದ. ನಿಂಗೇನರ ತೆಲಿಗಿಲಿ ಕೆಟ್ಟತನ ಅಂತ ಅಂದು ನಾನು ಬೈದೆ ಆದ್ರ ಆತ ತನ್ನ ಹಠನ ಸಾಧಿಸಿದ್ನರೀ, ಮಕ್ಳ ಮದುವೆ ಖರ್ಚಿಗಂತ ಇದ್ದ ಬದ್ದ್ ರೊಕ್ಕನ್ನೆಲ್ಲ ರಾಜಕೀ ರಾಜಕೀ ಅಂತ ಸುರುದ್ನರೀ, ನಾನು ಯಾರತ್ರನು ಮಾತಾಡಾಕಿಯಲ್ಲರೀ ಯಪ್ಪ, ಎಲೆಕ್ಷನ್ ನಾಗ ನಂ ನಂ ಜಾತಿಯಾಗ ನಾ ನಿಂದ್ರಿತೀನಿ ನಿಂದ್ರಂತನ ದೊಡ್ಡ ಜಗಳಿನ ಆದ್ಮು ಹೆಂಗ ಮಾಡಿ ನಾ ದೆವ್ರದಯದಿಂದ ಗೆದ್ದೆ, ಪಂಚಾಯ್ತಿನ ಮುಕನ ಮ್ಯಾಕ ಎಲ್ಲಿಲ್ಲ ರೀ. ಯಾವಾಗರ ಮೀಟಿಂಗ್ ಮುಗಿತೈತಿ ಅಂತನಾ ಕಾದ ಕುಂತ್ಗಂಡೆ, ಮನಿಗೆ ಬಂದಾಕಿನ ನನ್ನ ಗಂಡಗ ಸಿಕ್ಕಾಪಟ್ಟೆ ತ್ರೀವ್ ತೀಳದಂಗ ಬೈದಿನಿರೀ. ಏನೇನ ಕೆಲ್ಸ ಅಂತ ಯಾರ್‍ಯಾರ ಬಂದ್ ನಂ ಮನಿಯಾತಗ ಕರಿತಾರ ರೀ ನಾ ಮೆಂಬರಲ್ಲರೀ ಅತ್ನ ನಂ ಮನಿಯಾಗ ಮೆಂಬರ್, ಯಾರ್ ಮಾಡಿದ್ರೆನ್ರಿ ಇಬ್ಬರೂ ಬ್ಯಾರೆ ಏನಲ್ಲಲ್ಲ ಹೋಗಲಿ ಬಿಡು ಅಂತ ನಾನು ಸುಮ್ನ ಆಗೀನಿ, ಯಾವ್ಯವರ ಕೆಲ್ಸ ಬಂದ್ರ ತಾಮುಂದು ನಾ ಮುಂದ ಅಂತ ಹಾಪ್‌ತಾವ ಜಗಳ

ಆಡಿಕಂದ ಎಲ್ಲ ಹಂಚಿಕೆಂತಾರ ರೀ. ನನ್ನ ಗಂಡನ ತಿನ್ನಕ್ಕ ಕುಡಿಯಕ್ಕ ಕೊಟ್ರೆ ಸಾಕು ಬಂದಾತ್ನ ನನ್ನ ಕೈಯಾಗ ಸೈ ಹಾಕಿಸಿಕಂತಾನ ಹೋಕ್ಕಾನ್ರಿ. ರಾಜಕೀನ ಮಾಡಾರೆಲ್ಲರೂ ಉದ್ಧಾರಕ್ಕಂತ ಅಂತಾರ ರೀ ಆದ್ರ ನಾನ್ ಬಾಳೇವ್ನ ನೋಡ್ರಿ ಯಾವುದಕ್ಕೂ ಬರಲಾದಂಗ ಆಗ್ಯೆತಿ, ಇವತ್ತಿನವರೆಗೂ ನಂಗ ನನ್ನ ಅಧಿಕಾರಂದ್ರೆನು ಅಂತನ ತಿಳಿದಿಲ್ಲ ರಾಜಕೀನು ಗೊತ್ತಿಲ್ಲಂದ್ರ ಅಧಿಕಾರ ಎಲ್ಲಿಂದ ಬರಬೇಕ್ರಿ.

.....ನಂಸ್ಕಾರ ರೀ ಯಪ್ಪ ರಾಜಕೀ ಬಗ್ಗೆ ಮಾತಡಕ್ಕ ಬಂದಿರ ಬರ್ರಿ, ರಾಜಕೀ ಬಗ್ಗೆ ನನ್ನ ಕಲೆ ಪ್ರಪಂಚದಾಗ ಯಾರಿಗೂ ಬರಲಾರದಂಗ ಬಂದೈತಿ, ಇವ ನನ್ ಗಂಡರಿ, ಇತ್ನು ಸಾಲಿ ಕಲಿತಿಲ್ಲ ನಾನು ಕಲಿತಿಲ್ಲ, ನಂಮಕ್ಳ ಮಾತ್ರ ಕಲಿತಿದ್ದಾರಲೀ. ಊರಾರ ಹೊಲ ಮನಿಯಾಗ ದುಡಿತಿವೆ ನಮುದ ಒಂದೆ ಸಲುಪು ಜಮೀನ್ ಐತಿ ಅದುನ ಒತ್ತಿ ಹಾಕಿವಿರೀ, ಇವತ್ತಿನ ಹೊರೆಗೂ ನಂ ಮನೀಗ ಕರೆಂಟ್ ಬಂದಿಲ್ರಿ, ನಂ ಓಣಿ ಹೆಣ್ಮಕ್ಳಿಗೆ ಎಲೆಕ್ಷನ್ ನಿಲ್ಲಕ್ಕಂತ ಒಂದು ದಿನ ರಾತ್ರಿ ಗುಡಿಯಾಗ ಎಲ್ಲಾರು ಸೇರ್ಕಂದು ಕುಂತ ಗಂಡ್ರು ಅಲ್ಲಿ ನಂ ಊರಿನ ಹಿರೇರು ಬಂದಿದ್ರಿ. ರಾತ್ರಿ ನಂಗ ಯಾಕರ ಅಲ್ಲಿಗೆ ಹೋದ್ನೆ ಅಂತ ಅನಿಸಿ ಬಿಟ್ಟಿತು. ಎಲ್ಲಾರೂ ಸೇರ್ಕಂದು ನನ್ನ ಈ ಸಲ ಎಲೆಕ್ಷನ್‌ಗೆ ತಯಾರ್ ಮಾಡಿದ್ರು ರೀ. ಅವುರು ನೀ ನಿಂದ್ರಿತಿದೆನ್ಬೆ ಅಂತ ಕೇಳಿದ ತಕ್ಷಣನ ನಾನು ಅಲ್ಲಿಂದ ಓಡಿ ಬಂದ್‌ಬಿಟ್ಟೆ ರೀ, ನನ್ನ ಗಂಡನ ಅವುರಿಗೆ ಮಾತು ಕೊಟ್ಟು ಬಂದ್ನಂತ ನಾನು ಅವುಳ್ನ ನಿಂದ್ರಿಸ್ತಿನಿ ಅಂತ, ಎಲೆಕ್ಷನ್ ಕರ್ಚಿಗಂತ ಅವುರ್ ಇವುರು ಸೇರಿ ಅಷ್ಟಿಷ್ಟು ರೊಕ್ಕನು ಕೊಟ್ರು ರೀ. ನಂ ಮನಿಯಾಗ ಇನ್ನೂ ಎಲೆಕ್ಷನೆ ದೂರ ಇತ್ತಿ ಆವಾಗ್ನೆನ ಸಾರಾಯಿ ಅಂಗಡಿ ಮಾಡಿದ್ರು, ನಂ ಮನಿಯಿಂದನ ಊರಾರ ಮನಿಗೆಲ್ಲ ಸಾರಾಯಿ ಹಂಚಿದ್ರು, ಸತ್ತ ನಾವಲಿ, ಸಾಯದು ಅವುರಿಗೇನ್, ನಮುನ್ನ ಮನೇಕ ಕರಕನ್ನಾರ್ಲರಿಗೆ ನಂ ಮನಿ ಸಾರಾಯಿ ಬೇಕಾಗಿತ್ರಿ, ಹರಿಜನ್ರಂದ್ರೆ ಈ ಊರಾಗ ಕಾಲ ಕಸನ ಅಲ್ರಿ, ಅದುಕ ನಂ ಮ್ಯಾಲ ಹಿಂಗ ಬೆಂಕಿ ಕಾರ್ತಾರ, ನಂ ಎಲೆಕ್ಷನ್ ಗೆದ್ದ ಮ್ಯಾಲ ಊರಾಗ ಎಲ್ಲಾರ್ನೂಮೆರಿಸಿದ್ರು ನಾ ಮಾತ್ರ ಅವುರಿಂದೆ ಅವುರು ಮುಂದೆ ಇದ್ರು, ತಾವೇ ಬಂದ್ ಬಂಧ್ ನಂಸ್ಕಾರ ಮಾಡಿ ಹೋದ್ರು, ಮನಿ ಮಂದಿ ಮಕ ಎಲ್ಲಾನಾ ಮನಿ ಬಿಟ್ಟು ರಾಜಕೀಗೆ ಬಂದ್ಮ್ಯಾಲನ ರೀ ಗೊತ್ತಾಗಿದ್ದು, ಇರ್ಲಿ ಒಳ್ಳೆಯದ ಆತು ಅಂತ ಸುಮ್ನ ಅದ್ನೆರೀ. ಆದ್ರ ಬರ್ತಾ ಬರ್ತಾ ನಂಗ ತಿಳಿತ್ರಿ ನನ್ನ್‌ಒಂದು ಗಾಳ ಮಾಡಿಕಂದು ಊರಾರೆಲ್ಲ ಹೆಂಗ ಬೇಕ್ ಅಂಗ ಆದ್ನಕುಂತಾರಂತ. ನಿಂ ಸರಕಾರ ನಂಗ ಕೊಟ್ಟ ಅಧಿಕಾರ ನಂ ಜೊತೆಗೆ ಊರಾನ್ ಮಂದಿಗೂ ಹಂಚಿನಿ ರೀ.

..... ನಂಸ್ಕಾರ ರೀಯಪ್ಪ ನನ್ ರಾಜಕೀ ಪಸ್ರಿ ಬರ್ಕರೀ. ಜಾತಿಯಿಂದ ನಾನು ಹರಿಜನ್ರಾಕಿ ಅದೀನಿ ರೀ. ಮನಿಯಾಗ ಗನಮಕ್ಕಿಲ್ಲಂತ ಅಪ್ಪ ಅವ್ವ ನಂಗ ಮನಿಯಾಗ ಬಿಟ್ಟಾರ ರೀ. ನಾ ಮನಿ ಹಿರೇ ಮಗ ಮೆರದಂಗ ಮೆರದೀನಿ ರೀ. ಆದ್ರ ನಾ ಮನಿ ಮರಿಯಾದಿ ಹೋಗಂತ ಕೆಲ್ಸನ ಯಾವತ್ತು ಮಾಡಿಲ್ಲರೀ. ನಮ್ಮಪ್ಪ ಕುರುಬ್ರವ ನಂ ಅವ್ವನು ಹರಿಜನ್ರಾಕಿ. ಆಕಿಗೂ ಮದುವೆ ಆಗಿಲ್ಲರೀ. ಆಕಿನು ಮನಿಯಾಗ ಬಿಟ್ಟಿದ್ದಾರಲೀ. ನಂಗ ನಾಕ್ ಮಂದಿ ಮಕ್ಳು ಅವುರ್ ಸಾಲಿಗೆ ಹೋಕ್ಕಾರ ರೀ. ನಾನ ರೀ ಹೆಂಗ ರಾಜಕೀಗೆ ಬಂದ್ನೆಂದ್ರ ನಂ ಅಪ್ಪ ಧನೇರ ಹೊಲದಾಗ ಬಾಳ ವರುಷದಿಂದನ ದುಡಿತಿದ್ದಾನ್ರಿ. ನಾನು ಅತನ ಜೊತೆಗಿನ ದುಡಿತೀನಿ. ನಂ ಊರಾಗ ಎಲೆಕ್ಷನ್

ಅಂದ್ರ ಅದು ಜಾತ್ರಿಗಿಂತ ದೊಡ್ಡ ಹಬ್ಬದ ಅಕ್ಕೈತಿರೀ. ದಿನಾ ದುಡಿದೇಕು ತಿನ್ನೇಕು ನಮುಗ್ಯಾಕ ಬಿಡು ಅಂತ ನಂ ಪಾಡಿಗ ನಾವಿದ್ವಿ, ಹಿಂಗ ಇರವೊತ್ತಿನಾಗ ವಿರುಪಾಕ್ಷ ಗೌಡರು ಮನಿಯತ್ರ ಬಂದು ನನ್ ಅಪ್ಪನ್ನ ಕರುದು ನಿಂ ಮಗಳಿಗೆ ಎಲೆಕ್ಷನ್ ನಿಲ್ಸು ಅದುಕ ಕರ್ಚು ಎಲ್ಲಾ ನಾ ಕೊಡ್ತಿನಿ ಅಂದ್ರಂತ. ನಂ ಅಪ್ಪ ಒಂದ್ಮಾತುನು ಹೇಳಲಾರದಂಗ ಹೂಂ ಅಂದ್ರಂತ. ಆಗ ನೋಡ್ರಿ ಊರಾಗಿನ ಮಂದಿ ಎಲ್ಲಾ ನಂ ಮನಿಯತ್ರ ಸೇರಕುಂತ್ರು, ಹಗಲ್ ಸತ್ರ ಮಣ್ಣಿಗಿಲ್ಲ ರಾತ್ರಿ ಸತ್ತ ಎಣ್ಣಿಗಿಲ್ಲಂತ ನಾ ಕುಂತಿವಿರಿ, ದಿನಾ ಊರಾರಿಗೆ ಎಲೆಕ್ಷನ್ ಅಂತ ತಿನ್ನಕ್ಕ ಕುಡಿಯಕ್ಕ ಕೊಟ್ಟು, ಕೊಟ್ಟು ಸಾಲ ಮ್ಯಾಲ ಹೇರಿಕೆಂದಿವಿ ರೀ. ಮೊದಲು ಗೌಡ್ರ ಮಗ ಮೂರು ಸಾವ್ರನ ಕೊಟ್ಟಿದ್ನ ರೀ. ದೇವ್ರದಯದಿಂದ ನಾನ ಎಲ್ಲರಿಗಿಂತ ಹೆಚ್ಚಿಗೆ ಓಟುನ ತಗಂದ ಗೆದ್ಬಿ ಬಿಟ್ಟೆ, ರಾಜಕೀ ನಂಗ ಹೊಸದಾಗಿ ಬಾಳ ಚೊಲ ಕಂಡಿತ್ರಿ. ನಾ ಗೆಲ್ಲಿ ಅಂತ ರೊಕ್ಕ ಕರ್ಚು ಮಾಡಿದ್ದ ವಿರುಪಾಕ್ಷಪ್ಪರು ಬಂದ್ ಅಲ್ಲಿ ಸೈ ಮಾಡು ಇಲ್ಲಿ ಸೈ ಮಾಡು ಅಂತ ಮಾಡಿಸಿಕೆಂದ್ ಹೋಕ್ಕಾರ ರೀ. ಏನು ಯಾಕ ಅಂತ ನಾನು ಈವರೆಗೂನು ಕೇಳಿಲ್ರಿ, ಎಲ್ಲಾರು ಅಂತಾರ ಆತ ನನ್ನ ಹೆಸರಿನ ಮ್ಯಾಲ ಬಾಳ ರೊಕ್ಕ ತಿಂತಾನಂತ ಆದ್ರ ಆತಗ ಹೆಂಗ ರೀ ಕೇಳ್ಲಿನಾ, ಊರಿನ ಗೌಡನ ಮಗ ಬ್ಯಾರೆ, ಹೋಗ್ಲಿನಾ ಮಾಡಿಕೆಂದಿದ್ದ ಸಾಲನು ಆತ ಸಲುಪರ ತಿರಿಸಿದ್ರ ಚೊಲ ಅಂತ ಕೇಳಿದ್ರ ನಿಂಗ ಕೊಟ್ಟಿದ್ದ ಇನ್ನು ಕೆಲ್ಸ ಇದ್ರ ನನ್ ಗಂಡ ಕರಕಂದ್ ಹೋಗಿ ಕೆಲ್ಸ ಮಾಡಿಸಿಕೆಂತಾನ."

''...ನಮುಸ್ಕಾರರೀಯಪ್ಪ ಬಾಳದಿನದಿಂದ ನಾನು ಯಾರತ್ರನು ರಾಜಕೀಯ ಬಗ್ಗೆ ಮಾತಾಡಿರಲಿಲ್ಲ ಆದ್ರೆ ನೀ ಬಂದ ನೆನಪ ಮಾಡಿಕೊಟ್ಟರೆ ನಾ ಅದ್ನೆಲ್ಲ ಹೇಳಬೇಕಾಗೈತಿ. ನಾ ಏನ ಬಾಳ ಸಾಲಿ ಕಲಿತಾವ್ಳಲ್ರಿ. ನಂ ಅಪ್ಪನಂಗ ಸಣ್ಣ ಏಳಿರುವಣ್ಣೆಗೆ ಮದುವೆ ಮಾಡಿ ಕೈತೊಳಕಂದ, ನನ್ನ ಗಂಡ ಬಾಳ ಒಳ್ಳೆಯವನದಾನ್ರಿ, ನನ್ ಗಂಡನೆ ಮನಿಯಾರ್ಗೂ ಬಾಳ ಒಳ್ಳೆಯವ ಅದ ಅವುತ್ರನಾ ಎಂದೂ ತೆಲೆ ಎತ್ತಿ ಮಾತಾಡಿಲ್ಲರೀ, ವದ್ರ ಹನುಮವ್ವ ಎಲೆಕ್ಷನ್ ನಿಲ್ಲಾಕುಂತಾಳಂತ ಒಂದಿನ ಆತ್ನ ಬಂದ್ ಹೇಳಿದ್ನರೀ, ಆಮ್ಯಾಲ ದಿಡೀರ್ನ ನಂಗ ತಯಾರಮಾಡಿದ್ನ, ನಮಗೆ ಅದೃಷ್ಟ ಬಂದೈತ್ಲೆ ಅಂತೆಲ್ಲ ಹೇಳಿದ್ನ. ಯಾರ್ಯಾರ ಸೇರ್ಕಂಡ್ ನನ್ನ ಗಂಡನ್ನ ಪ್ಯಾಟಿಗೆ ಕರ್ಕಂಡೋಗಿ ಚೊಲ ಕುಡಿಸಿ ಅವುನ್ ತೆಲಿ ಕೆಡಿಸಿದ್ರು, ಅವ್ರಂಗ ಅವುರ್ ದೋಸ್ತ್ರಲ್ಲ ಏನ್ ಹೇಳಿದ್ರ್ರಿಂದರೀ ನಂಗ ಪಂಚಾಯಿತಿ ಎಲೆಕ್ಷನ್‌ನಿಂದ್ರಕ ಟೈಂ ಬಂತ್ರಿ, ನಾ ಸಾಲಿ ಏನ್ ಕಲಿತಿಲ್ಲ ಯಾರ್ ಜೊತೆನು ಚಂದಾಗಿ ಮಾತಾಡಂಗಿಲ್ಲ. ನಂಗ್ಯಾಕ ಎಲೆಕ್ಷನ್ ಅಂದದಕ್ಕ ನನ್ ಗಂಡ ರಾತ್ರಿ ಕುಡುದ್ ಬಂದ್ ಮೈಮುರಿಯಂಗ ಹೊಡುದ್ನರೀ. ನಿರ್ವಾ ಇಲ್ದ ನಾ ನಿಂತ್‌ಬಿಟ್ಟೆ, ರಾಜಕೀ ಮಾಡಕ್ಕ ತೆಲಿ ರೊಕ್ಕ ಇರಬೇಕಂತಾರರೀ ಆದ್ರ ನನ್ನತ್ರ ಅವ್ಯಾವು ಇಲ್ಲಿಲ್ಲ. ಅಲ್ದೆ ನನ್ನ ಗಂಡನು ಕರಿತಾತ್ನೆನಲ್ಲರೀ. ಬಾಳ ಹುಂಬ ರೀ ಅಂವ, ದುಡಿವಿತ್ತಿದ್ನೆಲ್ಲ ಹಾಳ್ಮಾಡಿದಲ್ದೆ ನನ್ ತೌರ್‌ಮನಿಯಿಂದ ಬ್ಯಾರೆ ರೊಕ್ಕ ತಂದಿನರೀ. ಏನ್ಮಾಡ್ಲಿ ರೀ ಇಂತಾವ ನಂಗ ಗಂಟು ಬಿದ್ದಾನ. ಪಂಚಾಯಿತಿಯೂ ಗೇನ್ರಿ ಅಲ್ಲಂತೂ ಹೇಳ್ತನ್ರಿಯಪ್ಪ, ನಾ ಪರದೇಶಿ ಇದ್ದಂಗ. ನನ್ನ ಊರಿಗೆಯವ್ರು ಊರಾನ ಹೆಣ್ಮಕ್ಳು ಇರ್ತ್ಯಾರ ಅವುರ್ ಅಷ್ಟಿತಷ್ಟೇನಾರ ಮಾತಾಡ್ತ್ಯಾರ ರೀ ನಾಂ ಮೂಕ ಬಸವಣ್ಣನಂಗ ಕುಂತಿರ್‍ತ್ತೀನಿ. ಊರಗಿನ ಹೆಣ್ಮಕ್ಳು ನನ್ ಜೊತೆಗೆ ಗೆದ್ದರು ಎಲ್ಲಾ ರಾತ್ರಿ ಮಾತಾಡ್ತ್ಯಾರ ಬಾಯಿ ಮಾಡ್ತ್ಯಾರ ನಾಲವಕ್ಕ ರೊಕ್ಕ ರುಪಾಯಿ ಮಾಡ್ಕಂಡಾರ. ನನ್ನ ಅವುರ್ ಬಳಿಗ ಕರಕಂದಿರದ

ಹೆಚ್ಚು ಅಂತದ್ಕ್ಯಾರಾಗ ಅಪ್ಪರತ್ರ ಹೆಂಗ ರೀ ನಾ ಕೆಲ್ಸಮಾಡ್ತೀಪ್ರಿ ಅಂತ ಕೇಳಿದು. ನನ್ನ ಹಣೆ ಬರದಾಗ ಆಗ್ತೈತಿ ಅಂತ ಸುಮ್ಮ ಕುಂತಿನಿ, ಮುಂದ ರೀ ಯಾವತ್ತುನು ನಾ ರಾಜಕೀಗೆ ಬರಂಗಿಲ್ಲರೀ.

ನಮಸ್ಕಾರ ಬರ್ರಿ ರಾಜಕೀ ಬಗ್ಗೆ ಮಾತಡಕ್ಕೆ ಬಂದಿರಂತ ಬರೀ. ನಂಗ ರಾಜಕೀ ಪಂಚಾಯ್ತಿ ವಿಷಯಾನ ಎತ್ತಿದ್ರುನ ಸಂಕಟ ಬಿಳ್ತೈತ್ರಿ. ಯಾರತ್ರ ರೊಕ್ಕ, ಜಾತಿ, ನಂಬರ್ ಇರ್ತಾರೋ ಅಂತಾರಿಗೆನೆ ರೀ ಪಂಚಾಯ್ತಿ ನನ್ನಂತರಿಗಲ್ಲ. ಸಾಲಗಿಲ ಮಾಡಿ ನಾ ಎಲೆಕ್ಷನ್ ನಿಂತ್ರ ಊರಾನ ಮಂದಿ ಎಲ್ಲರೂ ನಿಂಗ್ಯಾಕ ಎಲೆಕ್ಷನ್ ಅಂತ ಬಾಯಿಗೆ ಸಿಕ್ಕಸಿಕ್ಕಂಗ ಆಡ್ಕಂತಿದ್ರು, ನಾ ಏನ ಮೂರು ಬಿಟ್ಟು ನಿಂತಿಲ್ರಿ, ನಂಗೂ ಮಾನ ಮರ್ಯಾದಿ ಅಂತ ಐತಿ, ಇರಬರ ಆಸ್ತಿ ಎಲ್ಲಾ ಬತ್ತಿ ಹಾಕಿ ಏನ ನಾನು ನನ್ನ ಮನಿ ಸಲುಪು ಉದ್ದಾರ ಕ್ರೈತಿ ಅಂತ ನಿಂತೆರೀ, ಊರಾನ್ ಮಂದಿ ಹತ್ರ ಓಟ್ ಕೇಳಕ್ಕೊದ್ರ ನನ್ನ ನೋಡಿ ನಕ್ಕರು ಆದಾರರೀ, ನಾನೇನ್ ಪಾಪುದ್ ಕಿಲ್ಸ ಏನ್ ಮಾಡ್ತಿರಲ್ಲಿಲ್ಲರೀ. ಸುಮ್ಮ ನನ್ನ ಪಾಡಿಗೆ ನಾ ಓಡಾಡಿ ಮಾಡಿ ಹೆಂಗ ದೇವ್ರುದಯುದಿಂದ ಗೆದ್ನೆರೀ, ಪಂಚಾಯಿತಿಯಾಗ ಗೆದ್ದರೆಲ್ಲರಿಗೂನು ಊರ್ ತುಂಬ ಟ್ರ್ಯಾಕ್ಟರ್‌ನಾಗ ಮೆರವಣಿಗೆ ಮಾಡಿದ್ರು, ನಾ ಅದರ್ ಮ್ಯಾಲ ಹತ್ತಿಕ್ಕ ಜಗಳ ಆಡಿನಿರೀ, ಆದ್ರ ಎಲ್ಲಾ ಹಾರ ತುರಾಯಿ ಊರಾರಿಗೆ ಹಾಕಿ ಅಪ್ಪರ್ನ ಮೆರವಣಿಗೆ ಮಾಡಕುಂತಿದ್ನ ನೋಡಿ ಟ್ರ್ಯಾಕ್ಟರಿ ಮ್ಯಾಲ ಹಿಂದೋಗಿ ಅಳಕುಂತ್‌ಬಿಟ್ಟೆರೀ, ನಾ ಹರಿಜನ್ರುವಳಂತ ಯಾರು ನಂಗ ಹತ್ರನ ಸೇರಿಸಿಕೆನ್ಲಿಲ್ಲರೀ, ಊರ್ ಮಂದಿ ಅವ್ರನ್ನೆಲ್ಲ ಬಾಳ ಚೊಲ ಮೆರಿಸಿದ್ರ ನಂಗ ನಾಯಿ ಕುಂದ್ರಿಸಿದಂಗ ಹಿಂದ ಕುಂದ್ರಿಸಿದ್ರು, ಮಾರನೆ ದಿನ ಪಂಚಾಯಿತಿಗೆ ಬಂದ್ರ ಎಲ್ಲರು ಸೇರಿ ಮಾಡಿದ ಮರ್ಯಾದಿನ ಬ್ಯಾರೆರೀ, ಆಫೀಸಿನ್ಯಾಗ ಯಾರು ನಂಗ ಕುಂದ್ರು ಅಂತ ಅನ್ಲಿಲ್ಲರೀ, ಯಾಕನಾ ಮನುಷಳಲ್ಲೇನ್ರಿ, ನಾನು ಅವ್ರುರೇಳತನಕ ಸುಮ್ನ ನಿಂತಾ, ಆಮ್ಯಾಲ್ಯ ಅವುರ ಕುರ್ಚಿ ಮ್ಯಾಲ ಕುಂದ್ರಕ ಹೇಳಿದ್ಮ್ಯಾಲ ಕುಂತ್ಯ, ಇಷ್ಟೆಲ್ಲ ಆದ್ರು ಸುಮ್ನ ಹೆಂಗ ಇದ್ದೆರೀ ಆಮ್ಯಾಲ್ಯ ಊರಾರು ನನ್ನ ನೆಡಿಸಿಕೆಂದಿದ್ನ ನೋಡಿದ್ಮ್ಯಾಲ ನಾನು ಅವತ್ನಿಂದನ ಪಂಚಾಯಿತಿಗೆ ಹೋಗದ್ನ ಬಿಟ್ಟೆನಿ. ಆದ್ರ ಊರಾಗ ಹೋದ್ರೆ ಗೆಲ್ಸಿಧಾರ ಸುಮ್ನ ಬಿಡ್ತಾರೇನ್ರಿ ಮನಿ ಮುಂದ ತಿರಗಾಡಿದ್ರ ಸಾಕು ಸಿಕ್ಕ್ ಸಿಕ್ಕಂಗ ಬೈತಾರರೀ, ಸಾಲದಕ್ಕ ನಂಗ ರಾಜಕೀನಾಮೆ ಕೊಡ ಅಂತನು ಅಂದ್ರು, ನಾ ಮಾಡಿದ್ದ್ ದೊಡ್ಡ ತಪ್ಪಂದ್ರ ನಾ ಎಲ್ಲರೂ ಬ್ಯಾಡ ಬ್ಯಾಡ ಅಂತ ಅಂದ್ರು ಎಲೆಕ್ಷನ್ ನಿಂತಿದ್ದು.

ಬರ್ರಿ ಯಾರ್ಯಾರ ಬರ್ತಾರ ಏನನ್ ಬರ್ಕಂಡ್ ಹೊಕ್ಕಾರ ಏನ್ ಬರ್ಕಂತಿರೊ ಬರ್ಕರ್ರಿ. ನನ್ನ ಗಂಡ ಇಲ್ಲೆ ಕುಂತಾನ್ರಿ ಅವ್ರುನಿದ್ರೆಗೆನೆ ಹೇಳ್ತಿನಿ ಬರ್ಕರ್ರಿ, ಆಮ್ಯಾಲ ನಿಂ ಸರಕಾರದರಿಗೆ ಹೇಳ್ರಿ. ಒಂದಪ್ಪು ಅಂತ ಅವರಿಗೂನು ತಿಳಿಲಿ. ನಾನ್ ಚಲುವಾದಿರೀ ನಾನ್ ಊರಾಗ ತಿರುಗಾಡದ ಬಾಳ ಅಪರೂಪರೀ, ನಾವು ಊರಾಗಿರೂ ದೇವ್ರಿಗೆ ಬಾಳ ವರ್ಷದಿಂದ ನೆಡ್ಕಂತ ಬಂದಿವಿರೀ, ಅದುಕ ಬ್ಯಾಟಿನಂ ಮಾಡ್ತಿವಿರೀ, ಅದುನು ಊರ ತಾಯಿ ಗುರಿ ಬಿಟ್ಟು ಬಾಳ ದೂರ. ಪೂಜಾರಪ್ಪ ನನ್ನಗಂಡ ಬಾಳ ದೋಸ್ತರೀ, ಲೇ ಭೈರ ಯಾಕೆ ನಿನ್ ಹೆಂಡ್ತಿನ ಈ ಸಲ ಎಲೆಕ್ಷನ್‌ಗೆ ನಿಲ್ಲಬಾರದು ನೀನು. ಮನಿ ಎರಡೂ ಉದ್ಧಾರಾಗಂಗಿಲ್ಲನಲ್ಲೆ ಅಂತ ಅಂದ್ರುರೀ. ನಿಂಗ ಬೇಕಾದ್ರ ಹೇಳು ನಾ ನಿಂಗೆಲ್ಲಾ ವ್ಯವಸ್ಥೆ ಮಾಡಿಸ್ತೀನಿ ಅಂತ ಅಂದರೀ. ದೇವ್ರುಗಂತ ಹೋದಾರಿಗೆ ಆಯುಷ್ಯ ಎಂತ ಮಾತೇಳಿದ್ನಲ್ಲರೀ.

ನನ್ನ ಗಂಡ ನಂಗೂ ಕೇಳಲಾರದಂಗ ಎಲ್ಲಾರ ಮುಂದನು ಹೇಳಿಕೆಂತ ತಿರುಗಾಡಿದ್ನರೀ, ನಾ ಒಲ್ಲೆ ಒಲ್ಲೆ ಅಂತ ಎಷ್ಟು ಹೇಳಿದ್ರುನು ನನ್ ಮಾತ ಕೇಳ್ಲಿಲ್ಲಿರೀ. ರಾತ್ರೋರಾತ್ರಿ ಬಂದು ಯಾರ್‍ಯಾರ ಇತ್ನ ಕೈಯಾಗ ರೊಕ್ಕ, ಬಾಟ್ಲಿ, ಸೀರೆ, ಕೊಡ್ರಿ, ನಾನೇನು ಬಯಸಿರಲಿಲ್ಲರೀ ಆದ್ರು ಇಲ್ಲಿ ಅಂತ ಇಟ್ಟಕುಂದಿವಿ, ನನ್ ಗಂಡ ಬಂದ್ ಮಾತ್ನು ನೀ ನಿಂದ್ರಿತಿಯಾ ಬಿಡ್ತಿಯಾ ಅಂತ ಬಂದ್ ಮಾತ್ನು ಸ ಕೇಳ್ಲಿಲ್ಲ. ತನಗೆ ತಿಳಿದಂಗ ಮಾಡಿಬಿಟ್ನರೀ, ಊರಾಗ ಪ್ರಚಾರ ಅವ್ನ ಯಾರ್‍ಯಾರ್ನ ಕರಕಂಡೆ ಮಾಡಿದ್ನ ರೀ, ನಾನು ಒಂದೆರಡು ಸಾರಿ ಹೋಗಿನಿ ರೀ. ನಾ ಗೆದ್ಮ್ಯಾಲ ಎಲ್ಲರೂ ನನ್ ಬಿಟ್ಟು ನನ್ ಗಂಡನ್ನ ಮೆರವಣಿಗೆ ಮಾಡಿದ್ರು, ನಂಗೂ ಯಾರಿಗೆ ಮಾಡಿದ್ರೆನಂತ ಸುಮ್ನ ಆದೇರೀ, ಕೇಳ್ರಿ ಇವ್ರರ್ನ ಇಲ್ಲೆ ಕುಂತಾರ ರೀ ಒಂದಿಸನಕ ನಂಗ ಪಂಚಾಯಿತಿಗೆ ಕರತಂದ್ ಹೋಗಿದಾರಂತ, ಒಂದ್ಸಲನೊ, ಎರಡ್ ಸಲನೊ ಹೋಗಿದ್ದೆ ರೀ, ಪೂಜಾರಪ್ಪ ಆತನ್ ಗೆಳಯರೆಲ್ಲರೂ ನಂ ಮನಿಯಾಗ ಬಂದು ಕುಡುದು ತಿಂದು ಹೊಕ್ಕರರೀ, ಮೆಂಬರ್ ನಾನಾದ್ರು ನನ್ ಜೊತೆಗೆ ಅವ್ರುರ್ನಾರು ಒಂದ್ ಮಾತಾಡಂಗಿಲ್ರಿ, ಎಲ್ಲಾ ನನ್ನ ಗಂಡನ ಮಾತಾಡಿ ಮುಗಿಸ್ತಾನರೀ, ನಂಗೂ ಅದರ್ ಮ್ಯಾಲ ಮನಸ ಹೋಗ್ಯೆತ್ರಿ, ಅವ್ರನು ಏನರ ಸಲುವು ಗಳಿಸಿನ್ಯಾ ಅಂದ್ರ ಅದುನು ಏನಿಲ್ಲ, ಎಲ್ಲಾ ಬ್ಯಾರೆರ ಬಾಯಿಗ ಇಟ್ಟು ಕುಂತಾನ ರೀ.

ನಂಸ್ಕಾರ ರೀ, ಬರ್‍ರಿ ಹೇಳ್ತಿನಿ ಹೆಂಗ ನಿಂತೆನಂತ, ನಾ ಐದನೆತ್ತತನಕ ಸಾಲಿ ಕಂಡಿನಿ, ನನ್ನ ಗಂಡನು ಕಲ್‌ತಾವ್ನ, ಮಕ್ಳು ಸಾಲಿಗೆ ಹೊಕ್ಕಾರ ರೀ. ನಾನು ನನ್ನ ಗಂಡ ನಂ ಹೊಲದಾಗ ದುಡಿತೀವಿರೀ. ಉನ್ನಕ್ಕ ತಿನ್ನಕ್ಕ ದೇವ್ರು ನಮುಗೇನು ಕಡಿಮೆ ಮಾಡಿಲ್ರಿ, ಅಷ್ಟು ಇಷ್ಟು ಅಂತ ನಂ ಮನಿಯಾರು ಗಳಿಸಿಟ್ಟಾರ ರೀ. ಇಷ್ಟೆಲ್ಲಾ ಆರಾಮಾಗಿದ್ವ ನಂ ಮ್ಯಾಲ ಆದ್ಯಾರ ಕೆಟ್ಟ್ ಕಣ್ ಬಿತ್ತನ ರೀ ನನ್ನ ಗಂಡನ ಮನಿಯವರ್‍ರ ನಂಗ ಎಲೆಕ್ಷನ್ ನಿಲ್ಲಕಂತ ತಯಾರ್ ಮಾಡಿದ್ರು. ನಂ ಓಣಿ ಹಿರಿಯನು ಇದುನ ಒಪ್ಪಿದ್ನರೀ, ನಂ ಹತ್ರ ಇಷ್ಟು ರೊಕ್ಕ ಇದ್ರು ನನ್ನ ಗಂಡಗ ಮಾತ್ರ ಬಾಳ ಆಶೆರೀ. ನನ್ನ ಗಂಡು ತಾನು ನಿಂತು ನನ್ನ ಗೆಲ್ಲಿಸಿದ್ನರೀ. ದಿನಾ ಮನಿಯಿಂದ ಲೆಕ್ಕಿಲ್ಲದಂಗ ರೊಕ್ಕ ಕರ್ಚಾಗಕುಂತ್ತು ರೀ. ಏನ್ಮಾಡ್ತಿರಿ ಯಾರರ ಒಬ್ರು ನಿಂತಿದ್ರ ಸಾಕಾಗಿತ್ತು ಅಂತಾದ್ರಾಗ ನಾವ್ ಇಬ್ರು ಇಂತ್ವಿ. ಊರ ಮಂದಿಯಲ್ಲರೂ ಇವ್ರರೇನ್ ಬಂಡ್‌ಗೆಟ್ಟಾರಂತ ನಮ್ಮನ್ನ ನೋಡಿ ನಗಕುಂತ್ರಿ, ಸಾವಿರಾರು ರೂಪಾಯಿ ಕರ್ಚು ಮಾಡಿ ನಿಂತ್ನ ನನ್ನ ಗಂಡ ಸಲುಪ್ರಗ ಸೋತ್ನ ರೀ ನಾ ಗೆದ್‌ಬಿಟ್ಟೆ. ಸೋತಿದ್ದಕ್ಕೆ ಆತ ಏನು ಸಂಕಟ ಪಡಲಿಲ್ಲ ರೀ. ಆದ್ರು ಆತ್ನ ಗೆಲ್‌ಬೇಕಾಗಿತ್ರಿ. ಇಷ್ಟೆಲ್ಲ ಆದ್ಮ್ಯಾಲ ನನ್ನ ಗಂಡ ತನಗೆ ತಿಳಿಯುತನಕ ಪಂಚಾಯಿತಿಗೆ ನನ್ ಜೊತೆಗೆ ಬಂದ್ನರೀ, ಆಮ್ಯಾಲ ನನ್ನ ಹೊಲ ಮನಿಗೆ ಹಚ್ಚಿತಾನ ಪಂಚಾಯ್ತಿಯಾಗ ನನ್ನ ಬದ್ಲಿ ಕೆಲ್ಸ ಮಾಡಕುಂತ ರೀ. ಆತಗ ಮನಿ ಮಕ್ಳುದು ಕಬುರು ಇಲ್ಲಂಗ ರಾಜಕೀ ಹುಚ್ಚು ಹಿಡಿದ್ಯೆತಿರೀ. ಯಾವಾಗಾ ಬರ್‍ತಾನ ಯಾವಾಗರ ಹೊಕ್ಕಾನ. ನಾ ಪಂಚಾಯ್ತಿಗೆ ಬರ್‍ತಿನಿ ಅಂತ ನಾನು ಆತನ್ನ ಕೇಳಿ ಇಲ್ರಿ. ಒಂದ್ಸಲ ಪಂಚಾಯಿತಿಗೆ ಹೆಣ್ಮಕ್ಳು ಗಂಡ್ರು ಬರಂಗಿಲ್ಲಂತ ಅಂದಿದ್ದಕ ನಾ ಅವ್ರರತ್ರ ಜಗಳ ಮಾಡಿ ನನ್ನ ಗಂಡನ್ನ ಪಂಚಾಯಿತಿಗೆ ಹೋಗಂಗ ಮಾಡೀನಿ ರೀ. ನಂಗೇನ ಪಂಚಾಯಿತಿಗೆ ಹೋಗ ಬೇಕಂತ ಅನ್ನಿಸಲ್ಲರೀ. ಅಲ್ಲಿ ಹೋಗೇರ ನಾ ಏನ್ ಮಾಡಬೇಕ್ರಿ. ಸುಮ್ನಾ ಗೆದ್ದು ಅಧಿಕಾರ ಅವ್ರುಗ ಕೊಟ್ಟೆನಿ. ಇಷ್ಟೆಲ್ಲಾ ಆದ್ಮ್ಯಾಲ ನನ್ ಮನಿ ಹಾಳ ಮಾಡ್ತ್ಯಾನ ರೀ, ಅಂದ".

### ೩.೪.೩. ಕ್ಷೇತ್ರಕಾರ್ಯಾಧಾರಿತ ವಾಸ್ತವಾಂಶಗಳ ವಿಶ್ಲೇಷಣೆ.

ಗ್ರಾಮ ಪಂಚಾಯಿತಿಯಲ್ಲಿ ದಲಿತ ಮಹಿಳೆ ರಾಜಕೀಯ ಕುರಿತಂತೆ ಮೇಲಿನ ಮಹತ್ವ ಪೂರ್ಣ ಕ್ಷೇತ್ರಾಧಾರಿತವಾದ ದಲಿತ ಮಹಿಳೆಯರ ಸಂವೇದನೆಗಳು ಅವಳ ನೈಜ ರಾಜಕಾರಣಕ್ಕೆ ಹಿಡಿದ ಕನ್ನಡಿಯಾಗಿವೆ. ದಲಿತ ಮಹಿಳೆಗೆ ರಾಜಕೀಯ ಸುಪರ್ದಿಗೆ ಬರಲು ಅವಳ ಅಥವಾ ಅವಳ ಕುಟುಂಬ ವರ್ಗದ ಆಸಕ್ತಿ ಇಲ್ಲದಿದ್ದರೂ ಮೀಸಲಾತಿಯನ್ನು ಒಂದು ಅಸ್ತ್ರ ಮಾಡಿಕೊಂಡ ಮೇಲ್ಜಾತಿಗಳು ತಮ್ಮ ಹಿಡಿತವನ್ನು ಸಾಧಿಸಲು ತುಂಬ ಜಾಣತನದಿಂದ ಅವಳನ್ನು ತಮ್ಮ ಸೂತ್ರದ ಗಾಳಿಪಟದಂತೆ ಆಡಿಸುತ್ತಿವೆ. ಕೆಲವು ಮೇಲ್ವರ್ಗಗಳಲ್ಲಿನ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಸ್ವಹಿತ ಸಾಧನೆಗಾಗಿ ಹೀಗೆ ಮೀಸಲಾತಿಯನ್ನು ದುರುಪಯೋಗ ಮಾಡಿಕೊಳ್ಳುತ್ತಿವೆ. ಜಾತಿ ಹಾಗೂ ಲಿಂಗದ ಕಾರಣದಿಂದ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವ ಅಂಚಿನ ದಲಿತ ಮಹಿಳೆ ತನ್ನ ರಾಜಕೀಯ ಕತೃತ್ವ ಶಕ್ತಿಯನ್ನು ನಿಯಮಾನುಸಾರವಾಗಿ ಪಾಲಿಸಲು ಇವು ಬಿಡುತ್ತಿಲ್ಲ. ದಲಿತ ಸಮುದಾಯದ ಜಾತಿ ಮತ್ತು ಅವರ ಆರ್ಥಿಕತೆಯನ್ನು ಬಂಡವಾಳವಾಗಿ ಮಾಡಿಕೊಂಡ ಮೇಲ್ಜಾತಿಗಳು ಅವರನ್ನು ಸಾಂಪ್ರದಾಯಿಕ ನೆಲೆಯಲ್ಲಿಯೇ ಅತ್ಯಂತ ವ್ಯವಸ್ಥಿತವಾಗಿ ಶೋಷಿಸುತ್ತಿವೆ. ದಲಿತ ಮಹಿಳೇ ರಾಜಕೀಯಕ್ಕೆ ಬರಲೂ ಸುತರಾಂ ಒಪ್ಪಿಗೆಯಿಲ್ಲ ಯಾಕೆಂದರೆ ಅವಳ ಮೇಲಿರು ಸಾಮಾಜಿಕ ಒತ್ತಡಗಳೆ ಅವಳಿಗೆ ಮುಳ್ಳಾಗಿವೆ. ಸ್ವಂತ ಇಚ್ಛೆಯಿಂದ ರಾಜಕೀಯಕ್ಕೆ ಬರಲು ಕೆಲವೇ ಕೆಲವು ಜನ ಮಹಿಳೆಯರಿಗೆ ಸಾಧ್ಯವಾಗಿರಬಹುದಾದರೂ ಅದರ ಸಂಖ್ಯೆಯೂ ಸಹ ತುಂಬ ಕಡಿಮೆ. ಪಂಚಾಯಿತಿಯ ಒಬ್ಬ ಚುನಾಯಿತ ಸದಸ್ಯರಾಗಿದ್ದರೂ ಹಲವಾರು ದಲಿತ ಮಹಿಳೆಯರು ಇಂದಿಗೂ ಜೀತ, ಕೃಷಿ ಕೂಲಿ, ತರಕಾರಿ ವ್ಯಾಪಾರದಂತ ಕಾರ್ಯಗಳಲ್ಲಿಯೇ ತೊಡಗಿಕೊಂಡಿದ್ದಾರೆ. ದಲಿತ ಮಹಿಳೆಯನ್ನು ಸಂದರ್ಶಸಲು ನಾನು ಬೆಳಗಿನ ಜಾವದಲ್ಲೇ ಹೋಗಬೇಕಾಯ್ತು ಕಾರಣ ಎಂದರೆ ಎಂಟರಿಂದ ಹತ್ತರೊಳಗೆ ಅವರು ತಮ್ಮ ಕೆಲಸಕ್ಕೆ ಹೋಗುತ್ತಿದ್ದರಿಂದ. ಅಲ್ಲದೆ ಸಾಯಂಕಾಲದಿಂದ ರಾತ್ರಿಯವರೆಗೂ ನಾನು ಹಲವಾರು ದಣಿದ ದಲಿತ ಮಹಿಳೆಯರ ಅಳಲನ್ನೂ ಯಥಾವತ್ತಾಗಿ ಪಡೆದಿದ್ದೇನೆ.

ದಲಿತ ಮಹಿಳೆ ತನ್ನ ರಾಜಕೀಯಾಧಿಕಾರವನ್ನು ಕುರಿತಂತೆ ತುಂಬ ತಾತ್ಸಾರದ ಮಾತುಗಳನ್ನಾಡಿದ್ದಾರೆ. ಮೇಲ್‌ವರ್ಗಗಳ ಹಿತಸಾಧನೆಗಾಗಿಯೇ ತನ್ನ ರಾಜಕೀಯ ಅಧಿಕಾರ ಬಳಕೆಯಾಗುತ್ತಿದೆ ಎಂಬ ಅರಿವೂ ಅವಳಿಗಿದೆ. ಜಾತಿ ಹಾಗೂ ಲಿಂಗದ ಕಾರಣದಿಂದ ಅವಳನ್ನು ರಾಜಕೀಯ ಹಾಡಿಯ ಹತ್ತಿರ ಸುಳಿದಂತೆ ಮಾಡಲಾಗುತ್ತಿದೆ. ಅಲ್ಲದೆ ಇಂದಿಗೂ ದಲಿತ ಮಹಿಳೆಗೆ ಅವರ ಬಯವೂ ಅತಿಯಾಗಿ ಕಾಡುತ್ತಿದೆ. ತನ್ನ ಜಾತಿಯ ಕಾರಣದಿಂದಲೆ ಅವಳು ಸಾರ್ವಜನಿಕ ಸ್ಥಳಗಳಿಗೆ ಇಂದಿಗೂ ಮುಕ್ತವಾಗಿ ಪ್ರವೇಶಿಸಲು ಹಿಂದೇಟು ಹಾಕುತ್ತಿದ್ದಾರೆ. ಸಭೆ ಸಮಾರಂಭಗಳಲ್ಲಿ ಅವಳ ಹಾಜರಾತಿಯೂ ಕೇವಲ ಸಾಂಕೇತಿಕ ಹಾಗೂ ಅಲಂಕಾರಿಕ ಉತ್ಸವ ಮೂರ್ತಿಯಂತೆ ಕಂಡುಬರುತ್ತಿದೆ. ಅನಕ್ಷರತೆಯ ಜೊತೆಗೆ ದಲಿತ ಜಾತಿಯಲ್ಲಿ ಹುಟ್ಟಿದವಳಾಗಿರುವುದರಿಂದ ಅಭಿವೃದ್ಧಿ ಕಾರ್ಯಗಳಲ್ಲಿ ಪರಿಕಾರಣಗಳು ಅವಳಿಗೆ ಸಾಧ್ಯವಾಗುತ್ತಿಲ್ಲ. ಅಲ್ಲದೆ ತನಗೆ ಬರಬೇಕಾದ ಯೋಜನೆ ಕಾರ್ಯಗಳ ಪ್ರಾಥಮಿಕ ಮಾಹಿತಿ, ಅರಿವು ಅವಳಿಗಿಲ್ಲವಾಗಿದೆ.

ಅಧಿಕಾರ ಕೇಂದ್ರದ ಅತ್ಯಂತ ಕೆಳಮಟ್ಟದ ಅಂಗವಾಗಿರುವ ಗ್ರಾಮ ಪಂಚಾಯಿತಿಯಲ್ಲಿ ದಲಿತ ಮಹಿಳಾ ರಾಜಕೀಯ ಅಸ್ತಿತ್ವವನ್ನೇ ಅಲುಗಾಡಿಸುವಂತ ಕಾರ್ಯಗಳು ನಿರಂತರವಾಗಿ ನಡೆಯುತ್ತಿವೆ. ದಲಿತ ಮಹಿಳೆಗೆ ಏನಾದರೂ ಅಧಿಕಾರ ಎಂಬುದು ಸಿಕ್ಕಿದೆ ಎಂದರೆ ಅದು ಮೇಲ್ಜಾತಿಯ, ಊರಿನ ಗೌಡನ ಅನುಕಂಪದ ಆಧಾರದ ಮೇಲೆ ಮಾತ್ರ, ಎಂದರೆ ಪ್ರಾಯಶಃ ತಪ್ಪಾಗಲಾರದು. ಏಕೆಂದರೆ ಇಂದು ದಲಿತ ಮಹಿಳೆ ಜಾತಿಯನ್ನು ಜಾತಿಯ ಹಿಡಿತದಿಂದಲೇ ರಾಜಕೀಯಕ್ಕೆ ತರಲು ಹಾಗೆಯೇ ತಮ್ಮ ಹಿಡಿತವನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು ಮೇಲ್ ವರ್ಗಗಳಿಗೆ ಅವಳು ಒಂದು ಧಾಳವಾಗಿಯೇ ಬಳಕೆಯಾಗುತ್ತಿದ್ದಾಳೆ. ಎಂಬ ಅಂಶ ಕ್ಷೇತ್ರಕಾರ್ಯದುದ್ದಕ್ಕೂ ಗಮನಿಸಲಾಗಿದೆ. ದಲಿತ ಮಹಿಳೆ ತನಗೆ ರಾಜಕೀಯ ಅಧಿಕಾರ ಸ್ವಂತ ಆಯ್ಕೆ, ಅಥವಾ ಬೇಕು ಎಂದು ಬಯಸಿ ಬಂದಿಲ್ಲದಿರುವ ಅಂಶಗಳನ್ನು ನೋಡಿದರೆ ಅವಳಿಗಿರುವ ರಾಜಕೀಯ ಇಚ್ಛಾಶಕ್ತಿಯ ಅರಿವು ನಮಗಾಗಬಹುದು. ದಲಿತ ಮಹಿಳೆಗೆ ಯಾವ ರೀತಿಯಾಗಿ ಸಾಮಾಜಿಕ ನಿರ್ಬಂಧಗಳಿವೆಯೋ ಹಾಗೆಯೇ ಕೌಟುಂಬಿಕವಾಗಿಯೂ ನಿಯಂತ್ರಣಗಳಿವೆ. ಹೀಗಿದ್ದಾಗೂ ಅವಳು ಕುಟುಂಬದ ವಿರೋದದ ನಡುವೆಯೂ ಹಿರಿಯರ ಮಾತಿನ ಅಣತಿಯಂತೆ ರಾಜಕೀಯಕ್ಕೆ ಬಂದಿರುವುದೆ ಹೆಚ್ಚು. ಮೇಲ್‌ವರ್ಗದ ಮಹಿಳೆಯಾದರೆ ಪಂಚಾಯಿತಿಯಲ್ಲಿ ಅವಳ ಬದಲಿಗೆ ಅವಳ ಗಂಡ ಅಥವಾ ಅಪ್ಪ, ಅಣ್ಣ ಯಾರೋ ಒಬ್ಬರ ಅಧಿಕಾರ ಚಲಾವಣೆಯಿರುತ್ತದೆಯೋ ಅವರ ದಲಿತ ಮಹಳಾ ವಿಷಯದಲ್ಲಿ ಇದಕ್ಕೆ ವ್ಯತಿರಿಕ್ತವಾದ ವಾತವರಣ ಕಂಡು ಬರುತ್ತಿದೆ. ಅವಳ ಗಂಡ, ತಂದೆ, ಸಹೋದರ ಯಾರು ಸಹ ಜಾತಿಯ ಸಂರಚನೆಯನ್ನು ಮೀರಿ ವರ್ತಿಸಲಾರರು. ಜಾತಿಯ ನಿರ್ಬಂಧಗಳು ಸದಾ ಅವರನ್ನು ನಿಯಂತ್ರಿಸುತ್ತಲೇ ಇರುತ್ತವೆ. ಜಾತಿಯ ಗೆರೆಯನ್ನು ದಾಟಿ ಬರುವವರಿಗೆ ಬಹಿಷ್ಕಾರದಂತ ಅನಿಷ್ಟಕರವಾದ ಸಾಮಾಜಿಕ ವಿರೋಧಗಳು ಕಾದುಕೊಂಡು ಕುಳಿತಿರುತ್ತವೆ.

ಮೇಲಿನ ಮಾಹಿತಿದಾರರ ಅನಿಸಿಕೆಗಳನ್ನು ಗಮನಿಸಿದಾಗ ನಮಗರಿವಾಗುವುದೇನೆಂದರೆ ಪಂಚಾಯಿತಿಯಲ್ಲಿ ನೀಡಲಾಗುವ ಮೀಸಲಾತಿಯಂತಹ ವಿಚಾರ ಎಷ್ಟರ ಮಟ್ಟಿಗೆ ಫಲಕಾರಿಯಾಗಿದೆ. ಹಾಗೆಯೇ ಮೀಸಲಾಯಡಿಯಲ್ಲಿ ದಲಿತ ಮಹಿಳೆ ಬರಲು ಯಾವ ರೀತಿಯ ವಾತವರಣವಿದೆ. ಆದರೆ ಇಲ್ಲಿ ಇವೆರಡಕ್ಕೂ ಅವಕಾಶ ವಿಲ್ಲ. ಏಕೆಂದರೆ ಮೀಸಲಾತಿಯನ್ನು ಮೇಲ್ ವರ್ಗಗಳು ತಮ್ಮ ಸ್ವಹಿತ ಸಾಧನೆಯ ಸಲುವಾಗಿ ದಲಿತ ಮಹಿಳಾ ರಾಜಕೀಯ ಹಕ್ಕನ್ನು ವ್ಯವಸ್ಥಿತವಾಗಿ ಬಳಸುತ್ತಿರುವುದನ್ನು ಇದು ತೋರಿಸುತ್ತದೆ. ರಾಜಕೀಯ ಸುಪರ್ದಿಯೊಳಗೆ ಬರದ ದಲಿತ ಮಹಿಳಾ ಸಮುದಾಯಕ್ಕೆ ಜಾತಿಯ ನಿಯಂತ್ರಕಗಳು ಅತ್ಯಂತ ಯೋಜನಾಬದ್ಧವಾಗಿಯೇ ಮೀಸಲಾತಿಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿವೆ. ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಹಾಗೂ ಶೈಕ್ಷಣಕವಾಗಿ ಅತ್ಯಂತ ಹೀನ ಬದುಕನ್ನು ಸಾಗಿಸುತ್ತಿರುವ ದಲಿತ ಮಹಿಳೆಗೆ ರಾಜಕೀಯ ಏಟುಕದ ನಕ್ಷತ್ರವಾಗಿರುವುದರಿಂದಲೇ ಸ್ಥಿತಿವಂತರು ಅದನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ.

### ೩.೪.೪. ಗ್ರಾಮ ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ ಆಧರಿಸಿದ ಪೂರಕ ಕೋಷ್ಟಕಗಳು

ದಲಿತ ಮಹಿಳಾ ರಾಜಕಾರಣಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಅಂಶಗಳನ್ನು ಕೋಷ್ಟಕಗಳ ಮೂಲಕ ದಾಖಲಿಸಲಾಗಿದೆ. ಈ ಕೆಳಗಿನ ಕೋಷ್ಟಗಳಿಂದ ವಾಸ್ತವಾಂಶಗಳನ್ನು ಯಥಾವತ್ತಾಗಿ, ಸ್ಥೂಲವಾಗಿ ತಿಳಿಯಲು ಸಹಾಯಕವಾಗುತ್ತವೆ.

## ಚುನಾಯಿತ ದಲಿತ ಮಹಿಳೆಯರ ವಯೋಮಾನದ ವಿವರ



ಮೇಲಿನ ಕೋಷ್ಟಕದಲ್ಲಿರುವಂತೆ ರಾಜಕೀಯಕ್ಕೆ ಧಾವಿಸಿ ಬರುತ್ತಿರುವ ದಲಿತ ಮಹಿಳೆಯರಲ್ಲಿ ೩೫-೫೫ ರ ವಯಸ್ಸಿನವರೆ ಅಧಿಕವಿದ್ದಾರೆ. ಸಾಮಾನ್ಯವಾಗಿರುವಂತ ನಂಬಿಕೆಯಂತೆ ರಾಜಕೀಯ ಅತ್ಯಂತ ಕಲುಷಿತ ವಾದದ್ದು, ಅದೇನಿದ್ದರೂ ಮೂರು ಬಿಟ್ಟವರಿಗೆ ಎಂಬಂತಹ ನಂಬಿಕೆಗಳ ಆಧಾರದ ಮೇಲೆಯೇ ರಾಜಕೀಯಕ್ಕೆ ಮಹಿಳೆ ಬರಬೇಕೇ ಬೇಡ ಎಂಬ ಆಲೋಚನೆ ಅವಳ ವಯಸ್ಸಿನ ಅನುಗುಣವಾಗಿಯೇ ನಡೆಯುತ್ತಿದೆ. ಆದರೆ ರಾಜಕೀಯಕ್ಕೆ ಬರುವಲ್ಲಿ ಮಹಿಳೆಯರಿಗೆ ಕೌಟುಂಬಿಕವಾಗಿ, ಸಾಮಾಜಿಕವಾಗಿಯೇ ಕೆಲವು ಅಲಿಖಿತ ನಿಯಮಗಳು ಅವರ ಭಾಗವಹಿಸುವಿಕೆಯನ್ನು ನಿರ್ಧರಿಸುತ್ತಿವೆ. ಚಿಕ್ಕ ವಯಸ್ಸು ನಿಂಗ್ಯಾಕೆ ರಾಜಕೀ ಎಂಬಂತೆ ಗ್ರಾಮೀಣ ವಲಯಗಳಲ್ಲಿ ತುಂಬ ಪ್ರಚಲಿತದಲ್ಲಿದೆ. ಆ ಕಾರಣದಿಂದಲೇ ಗ್ರಾಮೀಣ ವಲಯದೊಳಗಿನ ದಲಿತ ಮಹಿಳೆಯರು ಇದರಿಂದ ಹೊರತಾಗಿರದೆ ಚಿಕ್ಕ ವಯಸ್ಸಿನಲ್ಲಿ ರಾಜಕೀಯಕ್ಕೆ ಬರಲು ತುಂಬ ಹಿಂದೇಟು ಹಾಕುತ್ತಿದ್ದಾರೆ. ಮೇಲಿನ ಕೋಷ್ಟಕ ಇದನ್ನು ಇನ್ನಷ್ಟು ಪುಷ್ಟಿಕರಿಸುತ್ತದೆ. ೨೧-೨೫ ರ ವಯಸ್ಸಿನ ಒಳಗಿನ ಮಹಿಳೆಯರ ಪ್ರಮಾಣ ಕೇವಲ ೦೮.೦೯ ರಷ್ಟು ಇದೆ. ಇದರಿಂದಲೇ ನಾವು ಅರಿಯಬಹುದು. ಹಾಗೆಯೇ ೨೬-೩೦ ವಯಸ್ಸಿನೊಳಗಿರುವವರ ಪ್ರಮಾಣ ಶೇ.೧೦.೬೦ ರಷ್ಟು ೩೦-೩೫ ರ ವಯಸ್ಸಿನಲ್ಲಿರುವವರ ಪ್ರಮಾಣ ಶೇ ೧೯.೪೦ ರಷ್ಟು, ೩೫-೪೫ ವಯಸ್ಸಿನ ದಲಿತ ಮಹಿಳೆಯರ ಪ್ರಮಾಣ ಶೇ ೨೨.೩೯ ರಷ್ಟು ೪೫-೫೫ ರ ವಯಸ್ಸಿನವರ ಪ್ರಮಾಣ ಶೇ ೪೦.೬೦ ರಷ್ಟು, ಹಾಗೆಯೇ ಶೇ ೫೫.೬೫ ರಷ್ಟರ ಆಸುಪಾಸಿನಲ್ಲಿರುವವರ ಪ್ರಮಾಣ ಶೇ ೨೦.೧೧ ರಷ್ಟು ಆಗಿದೆ. ಮೇಲಿನ ಕೋಷ್ಟಕದಲ್ಲಿರುವಂತೆ ೪೫-೫೫ ರ ಒಳಗೆ ಇರುವ ಮಹಿಳೆಯರೆ ಅಧಿಕವಾಗಿ ರಾಜಕೀಯಕ್ಕೆ ಬರುತ್ತಿದ್ದಾರೆ. ಇಂತಹ ಸಂಕುಚಿತ ಮನೋಭಾವದ ಹಿಂದೆ ವ್ಯಕ್ತಿಗತವಾಗಿ ಬಂದಿರುವಂತಹ ಅವಳ ಪಾವಿತ್ರ್ಯತೆಯನ್ನು ಪ್ರಶ್ನಿಸುವ, ಸಂಶಯಿಸುವ ಸಂಭವವೇ ಹೆಚ್ಚು, ಆ ಕಾರಣದಿಂದಲೇ ಅವರು ಮಧ್ಯ ವಯಸ್ಸಿಗೆ ಬಂದ ನಂತರವೇ ಅವರಿಗೆ ರಾಜಕೀಯ ವೇದಿಕೆಯನ್ನು ಸೃಷ್ಟಿಸಲಾಗುತ್ತಿದೆ.

### ಚುನಾಯಿತ ದಲಿತ ಮಹಿಳೆಯರ ಶೈಕ್ಷಣಿಕ ಮಟ್ಟದ ವಿವರ (ಕೋಷ್ಟಕ-೧)




ಮೇಲಿನ ಕೋಷ್ಟಕ ಒಂದರಲ್ಲಿರುವಂತೆ ಚುನಾಯಿತ ದಲಿತ ಮಹಿಳೆಯರ ಶೈಕ್ಷಣಿಕ ಮಟ್ಟವು ಅತ್ಯಂತ ಕಡಿಮೆ ಇರುವುದನ್ನು ಗಮನಿಸಬಹುದು. ರಾಜಕೀಯ ನೀತಿ ನಿರ್ಧಾರಗಳನ್ನು ತಗೆದುಕೊಳ್ಳಲು ಹಾಗೂ ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿಮರ್ಶಿಸಲು, ಪರಿಶೀಲಿಸಲು ಶೈಕ್ಷಣಿಕ ಮಟ್ಟ ಅತ್ಯಂತ ಅಗತ್ಯ. ಆದರೆ ದಲಿತ ಮಹಿಳಾ ವಿಷಯದಲ್ಲಿ ಇದು ತುಂಬ ವ್ಯತಿರಿಕ್ತವಾದ ರೂಪದಲ್ಲಿದೆ. ದಲಿತ ಪುರುಷರ ಶೈಕ್ಷಣಿಕ ಮಟ್ಟ ಸ್ವಲ್ಪ ಉತ್ತಮವಾಗಿಯೋ ಇದೆ. ಗಂಗಾವತಿ ತಾಲ್ಲೂಕಿನಲ್ಲಿ ಒಟ್ಟು ಶೇ ೩೩.೪೦ ರಷ್ಟು ಸಾಕ್ಷರರು ಇದ್ದಾರೆ, ಹಾಗೆ ಕೊಪ್ಪಳದಲ್ಲಿ ಶೇ.೨೮.೬೧, ಯಲಬುರ್ಗದಲ್ಲಿ ಶೇ ೩೦.೪೧ ಇದ್ದರೆ ಕುಷ್ಟಗಿ ತಾಲ್ಲೂಕಿನಲ್ಲಿ ಅತ್ಯಂತ ಕನಿಷ್ಟ ಮಟ್ಟದ ಸಾಕ್ಷರರ ಸಂಖ್ಯೆ ಇದೆ. ಜಿಲ್ಲೆಯಲ್ಲಿ ಅತ್ಯಂತ ಹೆಚ್ಚಿನ ಅನಕ್ಷರಸ್ಥ ದಲಿತ ಸದಸ್ಯರು ಕುಷ್ಟಗಿ ಹಾಗೂ ಕೊಪ್ಪಳ ತಾಲ್ಲೂಕಿನಲ್ಲಿ ಕಂಡು ಬರುತ್ತದೆ. ಸಮಾಜದಲ್ಲಿ ಶಿಕ್ಷಣ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿರುವುದರಿಂದ ಎಲ್ಲಾ ಬಗೆಯ ನೀತಿ, ನಿರೂಪಣೆ, ಅಭಿವೃದ್ಧಿ ಕಾರ್ಯಗಳು ಎಲ್ಲವೂ ಶಿಕ್ಷಣದಿಂದಲೇ ನಿರ್ಧರಿತವಾಗುತ್ತವೆಂದರೆ ತಪ್ಪಾಗಲಾರದು ಏಕೆಂದರೆ ಅನಕ್ಷರಸ್ಥರಿಂದ ಅಭಿವೃದ್ಧಿ ಕಾರ್ಯಗಳನ್ನು ನಿರೀಕ್ಷಿಸುವಂತಿಲ್ಲ. ಶಿಕ್ಷಣದ ಅರಿವು ಇರುವ ಯಾವ ವ್ಯಕ್ತಿಯೇ ಆಗಲಿ ಸ್ವಂತಸ್ಥಾಯಿಯಿಂದ ಎಲ್ಲವನ್ನು ಪ್ರಶ್ನಿಸುವ, ವಿಮರ್ಶಿಸುವ, ತಿರಸ್ಕರಿಸುವ ಅವಕಾಶ ಪಡೆದಿರುತ್ತಾರೆ. ಆದರೆ ದಲಿತ ಮಹಿಳೆ ಇವುಗಳಿಂದ ದೂರವೆ ಉಳಿದಿದ್ದಾಳೆ.

## ಜಾತಿಯ ಕಾರಣದಿಂದ ಪಂಚಾಯತಿಯಿಂದ ದೂರ ಉಳಿಯುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೨)




ಮೇಲಿನ ಕೋಷ್ಟಕ ೨ ರಲ್ಲಿರುವಂತೆ ಭಾರತೀಯ ಸಾಮಾಜಿಕ ಜೀವನದ ಸ್ವಾಸ್ಥ್ಯವನ್ನೇ ಕೆಡಿಸಿರುವ ಜಾತಿ ವ್ಯವಸ್ಥೆಯಿಂದಾಗಿ ದಲಿತ ಮಹಿಳೇ ಹಿಂಜರಿಯುತ್ತಿದ್ದಾಳೆ. ಹಿಂದಿನಿಂದಲೂ ನಿರಂತರವಾಗಿ ತನ್ನ ಮೇಲೆ ಸವಾರಿ ಮಾಡಿಕೊಂಡು ಬಂದಿರುವಂತಹ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳೆ ವಾಸ್ತವವಾಗಿ ಅವಳನ್ನು ಜಾತಿಯ ಮೂಲಕ ನಿಯಂತ್ರಿಸುತ್ತಿವೆ. ಅಭಿವೃದ್ಧಿಯ ಹರಿಕಾರರಾಗಲೂ ಪ್ರತಿಯೊಬ್ಬರು ಪಾಲುದಾರರಾಗಲೂ ಮುಕ್ತ ಅವಕಾಶಗಳಿವೆಯಾದರೂ ಸಾಮಾಜಿಕ ಜೀವನದಲ್ಲಿ ಕೆಲವು ಸ್ಥಾಪಿತ ಜಾತೀಯ ಅಂಶಗಳ ಸಂಕುಚಿತತೆಯಿಂದ ಅವು ನಿರ್ಲಿಪ್ತವಾಗುತ್ತಿವೆ. ಶಾಸನಾತ್ಮಕವಾಗಿ ದಲಿತ ಮಹಿಳೆಗೆ ರಾಜಕೀಯಾಧಿಕಾರವು ಸಿಕ್ಕಿದೆಯಾದರೂ ಅದನ್ನು ಸಮರ್ಥವಾಗಿ ನಿರ್ವಹಿಸುವಲ್ಲಿ, ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಭಾಗಿದಾರಳಾಗುವಲ್ಲಿ ತೀವ್ರ ಹಿಂಜರಿಯುತ್ತಿರುವುದಕ್ಕೆ ಕಾರಣ ಎಂದರೆ ಈ ಬಗೆಯ ಸಂಕುಚಿತ ಜಾತಿಯ ನಿಯಂತ್ರಣಗಳೆ, ಪಂಚಾಯಿತಿಯಲ್ಲಿ ಎಲ್ಲರಂತೆ ದಲಿತ ಮಹಿಳೆ ಸಮರ್ಥವಾಗಿ ತನ್ನ ಅಧಿಕಾರ ಚಲಾಯಿಸಲು ಸಾಧ್ಯವಾಗುತ್ತಿಲ್ಲ. ಎಲ್ಲಿ ತನ್ನ ಮೇಲೆ ಮೇಲ್ಜಾತಿಗಳ ಬಹಿಷ್ಕಾರ ಬೀಳುವುದೋ, ಎಲ್ಲಿ ತನಗೆ ಅಪಹಾಸ್ಯವಾಗುತ್ತಿದೆಯೋ ಎಂಬ ಕಾರಣಗಳಿಂದಲೇ ಅವಳು ಸಂವಿಧಾನದತ್ತವಾಗಿ ಸಿಕ್ಕ ರಾಜಕೀಯಾಧಿಕಾರವನ್ನು ಚಲಾಯಿಸುವಿಕೆಯಿಂದ ಹಿಂದೆ ಬೀಳುತ್ತಿದ್ದಾಳೆ.

**ಹೆಂಡತಿಯ ಬದಲಿಗೆ ಅಧಿಕಾರ ಚಲಾಯಿಸುತ್ತಿರುವ ಪುರುಷರ ಪ್ರಮಾಣ (ಕೋಷ್ಟಕ-೩)**




ಮೇಲಿನ ಕೋಷ್ಟಕ ೦೩ ರಲ್ಲಿರುವಂತೆ ಮಹಿಳೆಯರ ಬದಲಾಗಿ ಇಲ್ಲಿ ಅವರ ಗಂಡ, ತಂದೆ ಅಥವಾ ಸಹೋದರರ ಭಾಗವಹಿಸುವಿಕೆ, ಅಧಿಕಾರ ಚಲಾಯಿಸುವಿಕೆಯೇ ಅಧಿಕವಾಗಿ ಕಂಡು ಬರುತ್ತಿದೆ. ಮಹಿಳೆಯ ಆಲೋಚನಾ ಶಕ್ತಿ ಕಡಿಮೆ, ರಾಜಕೀಯದ ಬಗ್ಗೆ ಅವಳಿಗೆ ಅರಿವಿಲ್ಲ. ತರ್ಕ, ಚತುರತನಗಳು ಅವಳಿಗೆ ನೈಸರ್ಗಿಕವಾಗಿ ಸಿಕ್ಕಿಲ್ಲ ಎಂಬ ಹುಸಿ ಮಿಥ್ ಇಟ್ಟುಕೊಂಡು ವ್ಯವಸ್ಥಿತವಾಗಿ ಅವಳ ರಾಜಕೀಯವನ್ನು ತುಳಿಯುವ, ನಿಯಂತ್ರಿಸುವ ಅಂಶಗಳು ಇಲ್ಲಿವೆ. ಸಾಮಾನ್ಯವಾಗಿ ಕ್ಷೇತ್ರ ಕಾರ್ಯದ ಸಮಯದಲ್ಲಿ ನಾನು ಗಮನಿಸಿದಂತೆ ಈ ಬಗೆಯಲ್ಲಿ ಹೆಂಡತಿಯ ಬದಲಿ ಅಧಿಕಾರ ಚಲಾಯಿಸುವ ಗಂಡಂದಿರೆ ಈ ಮೇಲಿನ ವ್ಯಾಖ್ಯಾನ ನೀಡಿದ್ದಾರೆ. ಹೀಗೆ ಅವಳಿಗೆ ರಾಜಕೀಯ ಕುರಿತಾದ ಪುರುಷನಿಷ್ಠ ಚಿಂತನೆಗಳಿಂದಲೇ ಆವರ್ತದಲ್ಲಿ ಪುರುಷ ಮಹಿಳೆಗೆ ಅವಕಾಶ ಕೊಡದೆ ಅವಳ ಅಧಿಕಾರವನ್ನು ತಾನೇ ಕಸಿದುಕೊಂಡಿದ್ದಾನೆ. ಪಂಚಾಯಿತಿಯ ಚುನಾಯಿತ ಮಹಿಳೆಯರ ಗಂಡಂದಿರಿಗೆ ಅವಕಾಶವಿಲ್ಲ ಎಂದು ಸ್ಥಳೀಯ ಕಾರ್ಯದರ್ಶಿಗಳು ಪ್ರಕಟಿಸಿದಾಗ ಸ್ವತಃ ಮಹಿಳೆಯರೆಲ್ಲರೂ ಸೇರಿ ಕಾರ್ಯದರ್ಶಿಯ ಮೇಲೆ ಹಕ್ಕು ಚ್ಯುತಿಯ ಮಂಡಿಸಿದ್ದು ಕಾರಟಗಿಯಲ್ಲಿ ನಡೆದಿದೆ. ಅಂದರೆ ಮಹಿಳೆಯರು ಸಹ ತಮ್ಮಷ್ಟಕ್ಕೆ ತಾವೇ ಅಧಿಕಾರ ಚಲಾಯಿಸುವಾಗಲೂ ಪುರುಷನ ನೆರವು ಬೇಕೆ ಬೇಕು ಎಂಬ ಪೂರ್ವಾಗ್ರಹಕ್ಕೆ ಒಳಗಾಗಿದ್ದಾರೆ.

## ಪಂಚಾಯಿತಿಯ ಅಧಿಕಾರಗಳು, ಕಾರ್ಯಗಳ ಬಗ್ಗೆ ಅರಿವಿರದ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೪)




ಕೋಷ್ಟಕ-೦೪ ರಲ್ಲಿರುವಂತೆ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ದಲಿತ ಮಹಿಳೆಯರಿಗೆ ಶಾಸನ ಬದ್ಧವಾಗಿ ಅವರಿಸಿರುವ ಅಧಿಕಾರ, ಕರ್ತವ್ಯಗಳ ಅರಿವೆ ಅವರಿಗಿಲ್ಲದಿರುವುದನ್ನು ಗಮನಿಸಬಹುದು. ಮೀಸಲಾತಿ ಸಿಗುತ್ತಿದೆ ಎಂಬ ಕಾರಣಕ್ಕೆ ಅಧಿಕಾರ ಗ್ರಹಣ ಮಾಡುತ್ತಿರುವ ದಲಿತ ಮಹಿಳೆ ಗ್ರಾಮೀಣ ಅಭಿವೃದ್ಧಿಯ ಕಾರ್ಯಗಳಲ್ಲಿ ಸಕ್ರಿಯವಾಗಿ ತನ್ನ ಪಾಲನ್ನು ಯಶಸ್ವಿಯಾಗಿ ನೀಡಲು ಅವಳಿಗೆ ತನ್ನ ಅಧಿಕಾರದ ವ್ಯಾಪ್ತಿ, ಕಾರ್ಯಗಳ ಬಗ್ಗೆ ಸಾಮಾನ್ಯ ಅರಿವೆ ಇಲ್ಲದಿರುವುದರಿಂದ ಸಾಮಾನ್ಯವಾಗಿಯೇ ಅವಳು ಅಭಿವೃದ್ಧಿ ಕಾರ್ಯಗಳಲ್ಲಿ ಭಾಗಿಯಾಗಲು ಆಗುತ್ತಿಲ್ಲ. ನಾಮ ಮಾತ್ರಕ್ಕೆ ಪಂಚಾಯಿತಿಯ ಅಧ್ಯಕ್ಷೆ, ಉಪಾಧ್ಯಕ್ಷೆಯಂತಹ ಸ್ಥಾನಗಳಿರುವವರಿಗೂ ಅದರ ಅರಿವಿಲ್ಲದಿರುವುದು ಸುಮಾರು ಉದಾಹರಣೆಗಳಿವೆ. ದಲಿತ ಮಹಿಳೆಯರ ಈ ಬಗೆಯ ಸಮಸ್ಯೆಯಿಂದ ನಾವು ಏನನ್ನು ನಿರೀಕ್ಷಿಸಲು ಸಾಧ್ಯವೆ ಇಲ್ಲ. ಇದರ ಹಿಂದೆ ಆಂತರಿಕವಾಗಿ ಕಾರಣಗಳೂ ಇವೆ. ಆದರೆ ದಲಿತ ಮಹಿಳೆಯೂ ಅಭಿವೃದ್ಧಿಯ ಒಂದು ಘಟಕ ಎಂದು ಪರಿಭಾವಿಸಲು ಅವಳಿಗೆ ಇಂತಹ ಅಂಶಗಳ ಅರಿವಿರಲೇ ಬೇಕು. ಆದ್ದರಿಂದ ಸರಕಾರ, ಕುಟುಂಬ, ಸ್ಥಳೀಯ ಸಂಸ್ಥೆಗಳು ಅವಳ ರಾಜಕೀಯ ಮುಂದುವರೆಕೆಯ ಯತ್ನವಾಗಿ ಸ್ವಲ್ಪ ಕಾಳಜಿಯನ್ನು ವಹಿಸುವುದು ಅತ್ಯಗತ್ಯವಾಗಿದೆ.

### ಗ್ರಾಮ ಸಭೆಗಳ ಅರಿವೇ ಇಲ್ಲದಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೫)




ಮೇಲಿನ ಕೋಷ್ಟಕ-೦೫ ರಲ್ಲಿರುವಂತೆ ಗ್ರಾಮ ಪಂಚಾಯಿತಿಯ ಅತ್ಯಂತ ಪ್ರಮುಖ ಹಾಗೂ ಮಹತ್ವದ ಅಂಗವಾಗಿರುವ ಗ್ರಾಮಸಭೆ ಯಂತಹ ವಿಚಾರಗಳ ಬಗ್ಗೆ ಅವಳಿಗೆ ಅರಿವಿನ ಪ್ರಮಾಣ ತಕ್ಕಮಟ್ಟಿಗೆ ಸುಧಾರಣವಾಗಿಯೇ ಇದೆ. ತನಗೆ ನೀಡಲಾಗಿರುವಂತ ಪ್ರತಿಯೊಂದು ಅಧಿಕಾರ ಹಂಚಿಕೆಯನ್ನು ಯಥಾವತ್ತಾಗಿ ಮಂಡಿಸಲು ಗ್ರಾಮಸಭೆ ಅವಳಿಗೆ ಒಂದು ಉತ್ತಮ ವೇದಿಕೆಯಾಗಿದೆ. ಗ್ರಾಮ ಸಭೆಗಳಿಗೆ ಇವಳು ಗೈರು ಹಾಜರಾಗುತ್ತಿರುವುದು ಅಧಿಕವಾಗಿದೆ. ಅಲ್ಲದೆ ದಲಿತ ಮಹಿಳಾ ಸದಸ್ಯರಿಗೆ ಗ್ರಾಮಸಭೆಯಂತಹ ಮಹತ್ವದ ಚರ್ಚೆಯಲ್ಲಿ ಭಾಗವಹಿಸುವಿಕೆಯ ಜೊತೆ ಜೊತೆಗೆನೆ ಗ್ರಾಮಸಭೆಯ ಕುರಿತಾದ ಸಾಮಾನ್ಯ ತಿಳುವಳಿಕೆ ಇಲ್ಲದಿರುವುದನ್ನು ಮೇಲಿನ ಕೋಷ್ಟಕವು ಎತ್ತಿ ತೋರಿಸುತ್ತದೆ. ಕುಷ್ಟಗಿ ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚಿನ ದಲಿತ ಮಹಿಳಾ ಸದಸ್ಯರು ಇವರಲ್ಲಿ ಸಿಂಹಪಾಲನ್ನು ಪಡೆದುಕೊಂಡಿದ್ದರೆ ಗಂಗಾವತಿಯಲ್ಲಿ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತಾರೆ. ತನ್ನ ಬೇಕು ಬೇಡಗಳನ್ನು ಚುನಾಯಿತ ಸದಸ್ಯರು ಪೂರೈಸಿಕೊಳ್ಳಲು ಹಾಗೂ ತಮ್ಮ ಅಧಿಕಾರ ಚಲಾಯಿಸಲು ಅತ್ಯಂತ ಮಹತ್ವದ ಅಂಗವಾಗಿರುವ ಗ್ರಾಮಸಭೆಯಲ್ಲೇ ಅವಳು ಅರಿವಿನ ಕೊರತೆಯಿಂದ ದೂರ ಉಳಿಯುತ್ತಿದ್ದಾಳೆ. ಕೆಲವು ದಲಿತ ಸದಸ್ಯರು ಹೇಳುವಂತೆ ಅಲ್ಲಿ ತಮ್ಮ ಮಾತು ನಡೆಯುವುದಿಲ್ಲ. ಮಾತಾಡಲು ಅಸ್ಪದ ಕೊಡುವುದಿಲ್ಲ. ಎಂಬ ಕಾರಣಕ್ಕೆ ಅತ್ತ ಸುಳಿಯುತ್ತಿಲ್ಲ ಎಂದಿದ್ದಾರೆ. ಎಲ್ಲಾ ಕಡೆಯೂ ಇರುವಂತೆ ಇಲ್ಲಿಯೂ ಕೂಡ ಗಂಡ, ತಂದೆ, ಸಹೋದರರೆ ಅವಳ ಬದಲಿ ಪ್ರತಿನಿಧಿಯಾಗಿ ಪಡೆಯುತ್ತಿದ್ದಾರೆಂದರೆ ಪ್ರಾಯಶಃ ತಪ್ಪಾಗಲಾರದು.

## ಪಂಚಾಯಿತಿಯಲ್ಲಿ ಜಾತಿಯ ಕೀಳರಿಮೆಯಿಂದ ಸ್ವತಂತ್ರವಾಗಿ ಅಧಿಕಾರ ಚಲಾಯಿಸಲು ಹಿಂಜರಿಯುತ್ತಿರುವವರ ಪ್ರಮಾಣ (ಕೋಷ್ಠಕ-೬)




ಕೋಷ್ಠಕ-೬ ರಲ್ಲಿರುವಂತ ಸ್ಥಳೀಯ ಸಂಸ್ಥೆಗಳಾಗಿರುವ ಪಂಚಾಯಿತಿಯಲ್ಲಿ ಇಂದಿಗೂ ಸಾಮಾಜಿಕ ಜೀವನದಲ್ಲಿ ಜೀವಂತವಾಗುವ ಜಾತಿ ಪದ್ಧತಿಯ ಕಾರಣದಿಂದ ದಲಿತ ಮಹಿಳೆಯ ಆಡಳಿತ ಚುನಾವಣೆಯಲ್ಲಿ ತುಂಬ ಅಡೆತಡೆಯಾಗುತ್ತಿರುವುದನ್ನು ಮೇಲಿನ ಕೋಷ್ಠಕದಲ್ಲಿ ಗಮನಿಸಬಹುದು. ಜಾತಿಯ ಕೀಳರಿಮೆಯನ್ನು ತೊಡೆದು ಹಾಕಲು ಎಷ್ಟೋ ಪ್ರಯತ್ನಗಳು ನಡೆದರೂ ಸಹ ಜಾತಿ ಪದ್ಧತಿ ಮಾತ್ರ ಬದಲಾಗಲಿಲ್ಲ. ತನ್ನ ಅಧಿಕಾರ ಮೀರಿ ಅಹಂನಿಂದ ವರ್ತಿಸಲು ಮೇಲ್ವರ್ಗಗಳಿಗೆ ಸಾರ್ವಜನಿಕವಾಗಿಲ್ಲದಿದ್ದರೂ ಜಾತಿಯ ಕಾರಣದಿಂದ ಅವಕಾಶ ವಿದೆಯಾದರೂ ದಲಿತ ಸಮುದಾಯದಲ್ಲಿನ ಮಹಿಳೆಗೆ ಇಂದು ಕಲ್ಪನೆಗೂ ಸಿಗಲಾರದ್ದಾಗಿದೆ. ದಲಿತ ಮಹಿಳೆ ತಾನು ನಿರಂತರವಾಗಿ ಹತ್ತು ಹಲವು ಶೋಷಣೆ, ದೌರ್ಜನ್ಯ, ದಬ್ಬಾಳಿಕೆಗಳಿಂದ ಜರ್ಜಿತವಾಗಿರುವ ಅವಳಿಗೆ ಸಹಜವಾಗಿಯೇ ಸಾಮಾಜಿಕ ಜೀವನದೊಂದಿಗೆ ಬೆರೆಯದೆ ಜಾತಿಯ ಕೀಳರಿಮೆಯಿಂದಲೇ ಅಧಿಕಾರದಿಂದ ದೂರ ಉಳಿಯುತ್ತಿರುವುದು ಕಂಡು ಬರುತ್ತಿದೆ. ಎಲ್ಲಿ ತನ್ನ ಮೇಲೆ ಅಪಹಾಸ್ಯ, ಬಹಿಷ್ಕಾರ, ಅವಮಾನವಾಗುವುದೊ ಎಂಬ ಸನಾತನ ಚಿಂತೆ ಇಂದಿಗೂ ಅವಳಲ್ಲಿ ಕಾಡುತ್ತಿದೆ. ಸಾಮಾಜಿಕ ಜೀವನದಲ್ಲಿ ಅತ್ಯಂತ ಕೆಳ ಮಟ್ಟದ ಸ್ಥಾನದಲ್ಲಿರುವ ದಲಿತ ಮಹಿಳೆಗೆ ಜಾತಿ ಎಂಬ ಸಂಕುಚಿತ ಭಾವನೆಯಿಂದಲೇ ಅಧಿಕಾರವನ್ನು ನಿರ್ವಹಿಸಲಾಗುತ್ತಿಲ್ಲ ಎಂಬ ಅಂಶ ಮೇಲಿನ ಕೋಷ್ಟಕದಲ್ಲಿದೆ. ಕುಷ್ಟಗಿ ತಾಲೂಕಿನಲ್ಲಿ ಪ್ರತಿಶತ ಶೇ ೩೮.೦೩ ರಷ್ಟು ಜನ ದಲಿತ ಮಹಿಳಾ ಸದಸ್ಯರು ಜಾತಿಯ ಕಾರಣದಿಂದ ಕೀಳರಿಮೆಯನ್ನು ಅನುಭವಿಸುತ್ತಿದ್ದಾರೆ. ಕೊಪ್ಪಳ ತಾಲೂಕಿನಲ್ಲಿ ಶೇ.೩೪.೬೧ ರಷ್ಟು ಯಲಬುರ್ಗಾ ತಾಲೂಕಿನಲ್ಲಿ ಶೇ ೨೬.೪೩ ರಷ್ಟು ಮತ್ತು ಗಂಗಾವತಿಯಲ್ಲಿ ಶೇ ೨೨.೦೬ ರಷ್ಟು ಜನ ದಲಿತ ಮಹಿಳೆಯರು ತಾವು ಕೆಳಜಾತಿಯವರಾಗಿರುವುದರಿಂದಲೇ ಅವರಿಗೆ ಸಿಕ್ಕಿರುವ ಅಧಿಕಾರವನ್ನು ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸಲು ಸಾಧ್ಯವಾಗುತ್ತಿಲ್ಲ ಎಂದಿದ್ದಾರೆ.

**ಪಂಚಾಯಿತಿಯಲ್ಲಿ ಅಧ್ಯಕ್ಷತೆ, ಉಪಾಧ್ಯಕ್ಷೆ, ಸದಸ್ಯೆಯಾಗಿದ್ದರೂ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾಗಿ ಭಾಗವಹಿಸದೆ ಇರುವವರ ಪ್ರಮಾಣ (ಕೋಷ್ಟಕ-೭)**




ಕೋಷ್ಟಕ ೦೭ ರಲ್ಲಿರುವಂತೆ ಸ್ಥಳೀಯ ಆಡಳಿತ ಕೇಂದ್ರಗಳಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ದಲಿತ ಮಹಿಳಾ ಸದಸ್ಯರು ತಾವು ಪಂಚಾಯಿತಿಯಲ್ಲಿ ಒಂದು ಜವಾಬ್ದಾರಿಯುತ ಸ್ಥಾನದಲ್ಲಿದ್ದಾಗ್ಯೂ ಕೂಡ ಅವರು ಸಾರ್ವಜನಿಕ ಜೀವನದಿಂದ ತುಂಬ ದೂರವೆ ಉಳಿಯುತ್ತಿದ್ದಾರೆ. ಕೆಲವು ಕಡೆಯಲ್ಲಂತೂ ಇಂದಿಗೂ ದಲಿತ ಮಹಿಳೆಯರಿಗೆ ಸಾರ್ವಜನಿಕ ಕೆರೆ, ಭಾವಿಗಳ ಹತ್ತಿರ ಪ್ರವೇಶ ನಿಷಿದ್ಧವೆ ಇದೆ. ಇದು ಸಾಮಾನ್ಯ ದಲಿತ ಮಹಿಳಾ ವರ್ಗದ ಕತೆಯಾದರೆ, ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಚುನಾಯಿತ ದಲಿತ ಮಹಿಳೆಯರು ಇದರಿಂದ ಹೊರತಾಗಿಲ್ಲ. ಬಾಹ್ಯವಾಗಿ ಅವರು ಅಧಿಕಾರವನ್ನು ಹೊಂದಿರಬಹುದಾದರೂ ಅಂತರ್ಯದಲ್ಲಿ ಅವರು ದಲಿತರೆ, ಎಂಬ ಸನಾತನ ಭಾವನೆ ಇಂದಿಗೂ ಸಾಮಾಜಿಕ ಜೀವನದಲ್ಲಿ ಜೀವಂತವಾಗಿರುವುದರಿಂದ ಸಮಾನತೆ ತತ್ವವನ್ನು ಸಾಕಾರಗೊಳಿಸಲು ಸಾಧ್ಯವಾಗುತ್ತಿಲ್ಲ. ಕ್ಷೇತ್ರ ಕಾರ್ಯದ ಸಮಯದಲ್ಲಿ ನಾವು ಕಂಡಂತೆ ಹಲವು ಕಡೆಯಲ್ಲಿ ಪಂಚಾಯಿತಿಯಲ್ಲಿ ಅಧ್ಯಕ್ಷೆ, ಉಪಾಧ್ಯಕ್ಷೆಯಂತಹ ಉನ್ನತ ಹುದ್ದೆಯನ್ನು ದಲಿತ ಮಹಿಳೆಯರು ಹೊಂದಿದ್ದಾಗ್ಯೂ, ಅವರಿಗೆ ಸಾರ್ವಜನಿಕ ರಂಗಕ್ಕೆ ಅವಕಾಶವೆ ಇಲ್ಲ. ಅಸ್ಪೃಶ್ಯತೆ ಎಂಬ ಅನಿಷ್ಟ ಪದ್ಧತಿ ಅವರಿಗೆ ಈಗಲೂ ಕಾಡುತ್ತಿದೆ. ಕೆಲವು ಕಡೆಗಳಲ್ಲಿ ಇದು ಸ್ವತಃ ಪಂಚಾಯಿತಿಯಲ್ಲಿಯೂ ಆಚರಣೆಯಲ್ಲಿರುವುದನ್ನು ನಾವು ಗಮನಿಸಿದ್ದೇವೆ.

**ಜಾತಿಯ ಕಾರಣದಿಂದಲೆ ತನ್ನ ಅಧಿಕಾರವನ್ನು ಮೊಟಕುಗೊಳಿಸಲಾಗುತ್ತಿದೆ ಎಂದು ನಂಬುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೮)**




ಕೋಷ್ಟಕ ೦೮ ರಲ್ಲಿರುವಂತೆ ಪಂಚಾಯಿತಿಯಲ್ಲಿ ದಲಿತ ಮಹಿಳಾ ಸಮುದಾಕ್ಕೆ ಸಂವಿಧಾನಬದ್ಧವಾಗಿ ಬಂದಿರುವ ಅಧಿಕಾರ ಯಶಸ್ವಿಯಾಗದಿರಲು ಜಾತಿ ಮುಖ್ಯ ಅಡಚಣೆಯಾಗಿರುವ ಅಂಶವನ್ನು ನಾವು ಕಾಣಬಹುದು. ಅತಿ ಹೆಚ್ಚು ಅಂದರೆ ಪ್ರತಿಶತ. ೫೬.೬೦ ರಷ್ಟು ಕುಷ್ಟಗಿ ತಾಲೂಕಿನಲ್ಲಿನ ಗ್ರಾಮ ಪಂಚಾಯಿತಿಯ ಚುನಾಯಿತ ಮಹಿಳೆಯನ್ನು ಮೊಟಕುಗೊಳಿಸಲಾಗುತ್ತಿದೆ ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಅದೇ ರೀತಿಯಾಗಿ ಜಿಲ್ಲಾ ಕೇಂದ್ರವಾಗಿರುವ ಕೊಪ್ಪಳದಲ್ಲಿ ಪ್ರತಿಶತ ೫೨.೧೬ ರಷ್ಟು ಗಂಗಾವತಿ ತಾಲೂಕಿನಲ್ಲಿ ಶೇ ೩೩.೦೧ ರಷ್ಟು ಮತ್ತು ಯಲಬುರ್ಗ ತಾಲೂಕಿನಲ್ಲಿ ಶೇ ೩೨.೧೬ ರಷ್ಟು ದಲಿತ ಮಹಿಳಾ ಸದಸ್ಯರು ಇದನ್ನು ಪುಷ್ಟಿಕರಿಸಿದ್ದಾರೆ. ಸಮಾಜದಲ್ಲಿರುವ ಜಾತಿಯ ಕುರಿತಾದ ನಿಯಂತ್ರಕ ಸಾಧನಗಳು ಅವಳ ಅಧಿಕಾರಕ್ಕೆ ಸಂಚಕಾರ ತಂದಿವೆ. ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಪುರೋಹಿತಶಾಗಿ ಹಾಗೂ ಯಜಮಾನ್ಯಶಾಹಿಯಂತಹ ಪ್ರಭುತ್ವದ ನಿಯಂತ್ರಕಗಳೆ ದಲಿತ ಮಹಿಳೆಯ ಅಧಿಕಾರವನ್ನು ಪ್ರಶ್ನಿಸುತ್ತಲೇ ಅವಳ ಅಧಿಕಾರವನ್ನು ಅವಳಿಂದಲೇ ತಮ್ಮತ್ತ ಸೆಳೆಯುತ್ತಲೇ ಅವಳಿಗೆ ಅಧಿಕಾರ ನಿರಾಕರಿಸುತ್ತಿದ್ದಾರೆ. ಇದಕ್ಕೆಲ್ಲ ಪ್ರಮುಖ ಕಾರಣ ಎಂದರೆ ಸಾಮಾಜಿಕ ಜೀವನದಲ್ಲಿರುವ ಜಾತಿ ಎಂಬ ಪೆಡಂಭೂತ.

## ರಾಜಕೀಯ ಮೀಸಲಾತಿ ಬೇಕು ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೯)




ಕೋಷ್ಟಕ ೦೯ ರಲ್ಲಿರುವಂತೆ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ದಲಿತ ಮಹಿಳೆಯರು ಮೀಸಲಾತಿಯಡಿಯಲ್ಲಿಯೇ ಚುನಾಯಿತರಾಗಿರುವುದರಿಂದ ತಮ್ಮ ಮುಂದಿನ ರಾಜಕೀಯ ಭವಿಷ್ಯತ್ತಿಗಾಗಿ, ಅಸ್ತಿತ್ವಕ್ಕಾಗಿ ರಾಜಕೀಯದ ಅಗತ್ಯ ಮನಗಂಡಿದ್ದಾರೆ. ಇಂತಹ ಭವಿಷ್ಯತ್ತಿನಲ್ಲಿ ರಾಜಕೀಯ ಆಶಾಭಾವನೆ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ ಗಂಗಾವತಿ ಹಾಗೂ ಯಲಬುರ್ಗ ತಾಲೂಕುಗಳಲ್ಲಿ ಕ್ರಮವಾಗಿ ೩೭.೦೪ ಮತ್ತು ೩೭.೦೯ ರಷ್ಟು ಪ್ರತಿಶತ ಮಹಿಳೆಯರು ಹೊಂದಿದ್ದಾರೆ. ಕೊಪ್ಪಳ ತಾಲೂಕಿನಲ್ಲಿ ಪ್ರತಿಶತ ೩೦.೩೧ ರಷ್ಟು ಇದ್ದರೆ ಕುಷ್ಟಗಿಯಲ್ಲಿ ಅತಿ ಕಡಿಮೆ ಅಂದರೆ ೨೮.೬೩ ರಷ್ಟು ಪ್ರತಿಶತ ದಲಿತ ಮಹಿಳೆಯರು ಮೀಸಲಾತಿಯ ಪರವಾಗಿದ್ದಾರೆ. ಮೀಸಲಾತಿಯು ಜಾತಿಯನ್ನು ನಾಶ ಮಾಡಲು ಒಂದು ಅಸ್ತ್ರ ಎಂಬುದನ್ನು ಇವರು ಮನಗಂಡಿರಲೂ ಬಹುದು.

## ರಾಜಕೀಯ ಮೀಸಲಾತಿ ಬೇಡ ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೧೦)




ಕೋಷ್ಟಕ ೧೦ ರಲ್ಲಿರುವಂತೆ ಮೀಸಲಾತಿಯನ್ನು ಬೇಡವೆನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ ಅಧಿಕವಾಗಿರುವುದನ್ನು ಗಮನಿಸಬಹುದು. ಸಾಮಾಜಿಕ ಜೀವನದಲ್ಲಿನ ಸಂಕುಚಿತ ಮನೋಭಾವಗಳಿಂದ ತುಂಬ ಜರ್ಜಿತವಾಗಿರುವ ದಲಿತ ಮಹಿಳೆಯರು ತಮಗೆ ಸಿಕ್ಕಿರುವ ರಾಜಕೀಯಾಧಿಕಾರವನ್ನು ಸ್ವತಂತ್ರವಾಗಿ, ನಿರ್ಭಯವಾಗಿ ಪಾಲಿಸಲು ಸಾಧ್ಯವಾಗುತ್ತಿಲ್ಲ. ಅಲ್ಲದೆ, ಮೇಲ್ಜಾತಿ ಮೇಲ್ವರ್ಗಗಳ ಪುರೋಭಿವೃದ್ಧಿಗಾಗಿ ಇವರನ್ನು ಮೀಸಲಾತಿಯಡಿಯಲ್ಲಿ ನಿಲ್ಲಿಸಿ, ಗೆಲ್ಲಿಸಿ ತಮ್ಮ ಹಿತಸಾಧನೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಪಂಚಾಯಿತಿಯಲ್ಲಿ ದಲಿತ ಮಹಿಳಾ ಸದಸ್ಯರು ಅನುಭವಿಸುತ್ತಿರುವ ಅಧಿಕಾರ ಹೀನ ಸ್ಥಿತಿಯಿಂದ ನೊಂದು ಮೀಸಲಾತಿಯನ್ನು ನಿರಾಕರಿಸಿದವರೆ ಹೆಚ್ಚು, ಇವರ ಪ್ರಮಾಣ ಕುಷ್ಟಗಿ ತಾಲೂಕಿನಲ್ಲಿ ಪ್ರತಿಶತ ೫೯.೩೦, ಯಲಬುರ್ಗ ತಾಲೂಕಿನಲ್ಲಿ ೪೩.೫೫ ರಷ್ಟು ಮತ್ತು ಗಂಗಾವತಿ ತಾಲೂಕಿನಲ್ಲಿ ಪ್ರತಿಶತ ೪೧.೩೨ ರಷ್ಟು ಇದೆ. ಪಂಚಾಯತಿಯಲ್ಲಿ ದಲಿತ ಮಹಿಳೆಯರ ಅಧಿಕಾರವನ್ನು ತಿರಸ್ಕರಿಸುವ, ಅವರಿಗೆ ಮನ್ನಣೆ ನೀಡದಿರುವ, ಅವರ ಮಾತನ್ನು ತಳ್ಳಿಹಾಕುವಂತಹ ಕಾರ್ಯಗಳಿಂದ ಹಾಗೆಯೇ ಜಾತಿಯ ಹಂತದಿಂದಲೇ ತಾವು ಇಂತಹ ನಿಕೃಷ್ಟತೆಗಳಿಗೆ ಬಲಿಯಾಗುತ್ತಿದ್ದೇವೆಂಬ ಭಾವನೆಯಿಂದಲೇ ಇಂದು ದಲಿತ ಮಹಿಳಾ ಮೀಸಲಾತಿಯಿಂದ ತನ್ನ ಬಾಳಿ ಬೆಳಗದಿದ್ದರೆ ಅದು ಇದ್ದರೆಷ್ಟು, ಇಲ್ಲದಿದ್ದರೆಷ್ಟು, ಎಂಬ ತೀರ್ಮಾನವನ್ನು ವ್ಯಕ್ತಪಡಿಸಿದ್ದಾಳೆ.

**ಮುಂದಿನ ಬಾರಿ ಚುನಾವಣೆಗೆ ನಿಲ್ಲಲು ಒಲವಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಟಕ-೧೧)**




ಕೋಷ್ಟಕ ೧೧ ರಲ್ಲಿರುವಂತೆ ಮೀಸಲಾತಿಯಡಿಯಲ್ಲಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ದಲಿತ ಮಹಿಳೆಯರು ಮುಂದಿನ ಸಾರಿಯೂ ಸಹ ತಾವು ಚುನಾವಣೆಗೆ ನಿಲ್ಲಲು ಒಲವು ತೋರಿಸಿದರು. ಮೀಸಲಾತಿಯಿಂದಲೆ ತಮಗೆ ರಾಜಕೀಯ ಪ್ರವೇಶ ಸಿಕ್ಕಿದೆ ಎಂಬ ಮಾತನ್ನು ಕೆಲವು ಮಹಿಳಾ ಸದಸ್ಯರು ಹೇಳಿದ್ದಾರೆ. ಇವರ ಪ್ರಮಾಣ ಗಂಗಾವತಿ ತಾಲೂಕಿನಲ್ಲಿ ಪ್ರತಿಶತ ೨೮.೪೦ ಕೊಪ್ಪಳ ತಾಲೂಕಿನಲ್ಲಿ ೨೭.೧೬ ರಷ್ಟು ಯಲಬುರ್ಗಾ ತಾಲೂಕಿನಲ್ಲಿ ೨೫.೫೭ ಹಾಗೆಯೇ ಕುಷ್ಟಗಿ ತಾಲೂಕಿನಲ್ಲಿ ೨೦.೧೩ ರಷ್ಟು ಇದೆ. ಸಾಮಾನ್ಯವಾಗಿ ನಾನು ಗಮನಿಸಿರುವಂತೆ ಮುಂದಿನ ಸಾರಿ ಚುನಾವಣೆಗೆ ಬರುತ್ತೇವೆ ಎನ್ನುವವರಿಗೆ ಜಾತಿಯ ಅಂಶಗಳು ತಡೆಯೊಡ್ಡಿದ್ದವು. ಆದರೂ ಅದನ್ನು ಮೀರಿ ಅವರು ತಯಾರಾಗಿದ್ದಾರೆ. ಇವರ ಹಿಂದೆ ಸ್ಥಿತಿವಂತಿಕೆ, ರಾಜಕೀಯ ಚಟುವಟಿಯಲ್ಲಿ ಸಕ್ರಿಯವಾಗಿರುವವರ ಹೆಂಡತಿಯೂ ಆಗಿರುವುದು ಗಮನೀಯ. ಬಡತನ ಹಾಗೂ ಜಾತಿಯ ಕಠೋರತೆ ಇವರಿಗೆ ಅಷ್ಟಾಗಿ ಪ್ರಭಾವ ಬೀರಿಲ್ಲಬಹುದು.

## ರಾಜಕೀಯದ ಸಹವಾಸವೇ ಬೇಡ ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೧೨)




ಕೋಷ್ಟಕ ೧೨ ರಲ್ಲಿರುವಂತೆ ಪಂಚಾಯತಿಗೆ ಮೊದಲನೆ ಸಲಕ್ಕೆ ಬಂದಿರುವ ದಲಿತ ಮಹಿಳಾ ಸದಸ್ಯರು ತಾವು ಪಂಚಾಯತಿಯಲ್ಲಿ ಕಂಡುಂಡ ಎಲ್ಲಾ ಬಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳಿಂದ ರಾಜಕೀಯದ ಸಹವಾಸವೇ ಬೇಡ ಎನ್ನುತ್ತಿದ್ದಾಳೆ. ಏಕೆಂದರೆ ದಲಿತ ಮಹಿಳೆಗೆ ರಾಜಕೀಯಾಧಿಕಾರ ಸಿಕ್ಕಿರಬಹುದಾದರೂ ಅವಳ ಬದಲಿ ಊರಿನ ಹಿರಿಯರು ಚಲಾಯಿಸುತ್ತಿರುವುದರಿಂದ ಹಾಗೆಯೇ ಅವಳಿಗೆ ರಾಜಕೀಯದಲ್ಲಿ ಇರಲು ತುಂಬ ಮುಜುಗರದ ಪ್ರಸಂಗಗಳು ಘಟಿಸುತ್ತಿರುವುದರಿಂದ ಅವಳು ಪಂಚಾಯತಿಯ ಸಹಸವಾಸವೇ ಸಾಕು. ಮುಂದೆಂದು ನಾ ರಾಜಕೀಗೆ ಬರಂಗಿಲ್ಲ, ಎಲೆಕ್ಷನ್ ನಿಂದ್ರಂಗಿಲ್ಲ ಎಂಬ ನೋವಿನ ಮಾತನ್ನಾಡುತ್ತಿದ್ದಾಳೆ. ಮೇಲಿನ ಕೋಷ್ಟಕದಲ್ಲಿರುವಂತೆ ಪ್ರತಿಶತ ೫೨.೦೬ ರಷ್ಟು ದಲಿತ ಮಹಿಳೆಯರು ಕುಷ್ಟಗಿ ತಾಲೂಕಿನಲ್ಲಿ ಇದರ ಪರವಾಗಿದ್ದರೆ ಯಲಬುರ್ಗದಲ್ಲಿ ೪೯.೦೬ ರಷ್ಟು, ಗಂಗಾವತಿಯಲ್ಲಿ ೪೪.೬೦ ರಷ್ಟು ಮತ್ತು ಕೊಪ್ಪಳದಲ್ಲಿ ೪೩.೬೧ ರಷ್ಟು ದಲಿತ ಮಹಿಳೆಯರು ರಾಜಕೀಯಾಧಿಕಾರವೇ ಬೇಡ ಎನ್ನುತ್ತಿದ್ದಾರೆ. ಸದಾ ಒಂದಿಲ್ಲ ಒಂದು ರೀತಿಯಲ್ಲಿ ಒಬ್ಬೊಬ್ಬರ ಹಿಡಿತದಲ್ಲೇ ತನ್ನ ರಾಜಕೀಯ ಅಸ್ತಿತ್ವವನ್ನು ಮರೆಯುತ್ತಿರುವ ಅವಳು ಸೂತ್ರದ ಗೊಂಬೆಯಾಗಿ ನಟಿಸಿರುವುದರ ಬದಲು ಅದರತ್ತ ಸುಳಿಯಲೇ ಬಾರದೆಂಬಂತೆ ನಿಲುವಿಗೆ ಬಂದು ನಿಂತಿದ್ದಾಳೆ.

### ೩.೪.೫. ಗ್ರಾಮ ಪಂಚಾಯಿತಿಯಲ್ಲಿನ ದಲಿತ ಮಹಿಳಾ ರಾಜಕಾರಣದ ಕುರಿತು ಕಂಡುಕೊಂಡ ವಾಸ್ತವ ಅಂಶಗಳು

* ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಚುನಾಯಿತ ದಲಿತ ಮಹಿಳೆಯರಿಗೆ ಪಂಚಾಯಿತಿಗೆ ಸಂಬಂಧಿಸಿದಂತೆ ಅವರ ಅಧಿಕಾರ, ಕಾರ್ಯಗಳ ಬಗ್ಗೆ ಅರಿವಿರದ ದಲಿತ ಮಹಿಳೆಯರ ಸಂಖ್ಯೆ ಅಧಿಕವಾಗಿದೆ. ಇವರ ಪ್ರಮಾಣ ಕ್ರಮವಾಗಿ ಕುಷ್ಟಗಿಯಲ್ಲಿ ಶೇ ೫೧.೦೮ರಷ್ಟು, ಯಲಬುರ್ಗ ಶೇ ೪೭.೬೧ರಷ್ಟು, ಕೊಪ್ಪಳ ಶೇ ೪೪.೦೭ರಷ್ಟು, ಗಂಗಾವತಿಯಲ್ಲಿ ಶೇ ೩೭.೧೬ ರಷ್ಟು ಪ್ರಮಾಣ ಅವರದಾಗಿದೆ.

* ಪಂಚಾಯಿತಿಯಲ್ಲಿ ಚುನಾಯಿತ ದಲಿತ ಮಹಿಳೆಯರಿಗೆ ಅಕ್ಷರಜ್ಞಾನದ ಅರಿವೆ ಇಲ್ಲವಾಗಿದೆ. ಹೀಗಿರುವುದರಿಂದ ಅವರು ಅಭಿವೃದ್ಧಿಯ ಹರಿಕಾರರಾಗಲೂ ಸಾಧ್ಯವೆ ಇಲ್ಲ.

* ಜಾತಿಯ ಕಾರಣದಿಂದಲೇ ಇಲ್ಲಿ ತನಗೆ ಅಪಮಾನ, ಅವಮಾನ, ಅಪಹಾಸ್ಯ, ಕಟುಟೀಕೆಗಳು ಎದುರಾಗುತ್ತವೆಯೋ ಎಂಬ ಭಯದಿಂದ ಪಂಚಾಯಿತಿಗೆ ಬರದೆ ದೂರವೇ ಉಳಿಯುತ್ತಲಿದ್ದಾರೆ. ಹೀಗೆ ಅಧಿಕಾರದಿಂದ ದೂರ ಉಳಿಯುತ್ತಿರುವ ದಲಿತ ಮಹಿಳಾ ಸದಸ್ಯರ ಸಂಖ್ಯೆ ಕ್ರಮವಾಗಿ ಕುಷ್ಟಗಿಯಲ್ಲಿ ಶೇ.೪೨.೧೭, ಕೊಪ್ಪಳ ಶೇ ೩೯.೩೭ ರಷ್ಟು, ಗಂಗಾವತಿ ಶೇ ೨೬.೪೦ ರಷ್ಟು ಮತ್ತು ಯಲಬುರ್ಗದಲ್ಲಿ ಶೇ.೩೨.೧೬ ರಷ್ಟಿದೆ.

* ಇತರ ಸಮುದಾಯಗಳಲ್ಲಿನ ಮಹಿಳೆಯರು ಎದುರಿಸುವಂತೆ ದಲಿತ ಸಮುದಾಯದಲ್ಲಿನ ಮಹಿಳೆಯ ಬದಲಿಗೆ ಅವಳ ಗಂಡ, ತಂದೆ ಸಹೋದರರು ಅಧಿಕಾರ ಚಲಾಯಿಸುವುದು ಸಹ ಇದೆ. ಇಂತಹ ಬದಲಿ ಅಧಿಕಾರ ಚಲಾಯಿಸುವಿಕೆಯಿಂದಲೇ ಮಹಿಳೆಯನ್ನು ಸ್ವಾಭಾವಿಕವಾಗಿಯೇ ಅಧಿಕಾರದತ್ತ ಸುಳಿಯದಂತೆ ಮಾಡುವ ಕುತಂತ್ರವೂ ಅಡಗಿರುತ್ತದೆ. ಇಂತಹ ಬದಲಿ ಅಧಿಕಾರ ಚಲಾಯಿಸುತ್ತಿರುವವರ ಪ್ರಮಾಣ ಕ್ರಮವಾಗಿ ಗಂಗಾವತಿಯಲ್ಲಿ ಶೇ ೪೪.೭೦ ರಷ್ಟು, ಕೊಪ್ಪಳ ಶೇ ೪೦.೦೬ ರಷ್ಟು, ಯಲಬುರ್ಗದಲ್ಲಿ ಶೇ.೪೦.೦೬ ರಷ್ಟು ಹಾಗೂ ಕುಷ್ಟಗಿಯಲ್ಲಿ ಶೇ ೩೭.೦೦ ರಷ್ಟಿದೆ.

* ಗ್ರಾಮಸಭೆಯಂತಹ ಸಾರ್ವಜನಿಕ ಸಂಪರ್ಕಸಭೆಗಳಲ್ಲಿ ಮಹಿಳೆಯರಿಗೆ ಶೇ ೩೦ ರಷ್ಟು ಮೀಸಲು ಕಡ್ಡಾಯವಾಗಿದೆ. ಹೀಗಿದ್ದರೂ ಸಹ ಗ್ರಾಮಸಭೆಗಳ ಅರಿವಿರದ ದಲಿತ ಮಹಿಳೆಯರ ಪ್ರಮಾಣ ಅಧಿಕವಾಗಿದೆ. ಇಂತಹ ಗ್ರಾಮಸಭೆಗಳಲ್ಲಿ ಊರಿನವರೆಲ್ಲಾರ ಉಪಸ್ಥಿತಿ ಇರುತ್ತಿರುವುದರಿಂದ ಅವರೆದುರಿಗೆ ಅಹವಾಲು ಸ್ವೀಕರಿಸಲು, ತೊಡಿಕೊಳ್ಳಲು ದಲಿತ ಮಹಿಳೆ ಹೆದರುತ್ತಲೇ ಗ್ರಾಮಸಭೆಗಳಿಗೆ ಗೈರು ಹಾಜರಾಗುತ್ತಿದ್ದಾರೆ. ಇಂತಹ ದಲಿತ ಮಹಿಳೆಯರ ಪ್ರಮಾಣ ಕ್ರಮವಾಗಿ ಕುಷ್ಟಗಿಯಲ್ಲಿ ಶೇ ೫೨.೦೪ ರಷ್ಟು, ಯಲಬುರ್ಗದಲ್ಲಿ ಶೇ ೫೦.೧೧ ರಷ್ಟು, ಶೇ ಕೊಪ್ಪಳ ೪೪.೮೦ ರಷ್ಟು ಹಾಗೂ ಗಂಗಾವತಿಯಲ್ಲಿ ಶೇ ೩೬.೦೭ ರಷ್ಟಿದೆ.

* ಪಂಚಾಯತಿಯಲ್ಲಿ ಸಂವಿಧಾನ ಬದ್ಧವಾಗಿ ತಮಗೆ ದಕ್ಕಿರುವಂತಹ ಅಧಿಕಾರವನ್ನು ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸಲು ಹಿಂಜರಿಯುತ್ತಿರುವ, ಹೆದರುತ್ತಿರುವ ಮಹಿಳೆಯರು ಹೆಚ್ಚಿದ್ದಾರೆ. ಕುಷ್ಟಗಿಯಲ್ಲಿ ಶೇ ೩೯.೦೩ ರಷ್ಟು, ಕೊಪ್ಪಳ ಶೇ ೩೪.೬ ರಷ್ಟು, ಯಲಬುರ್ಗ, ಶೇ ೨೬.೪೩ ಹಾಗೆಯೇ ಗಂಗಾವತಿಯಲ್ಲಿ ಶೇ ೨೨.೦೭ ರಷ್ಟಿದೆ.

* ಪಂಚಾಯಿತಿಯಂತಹ ಶಾಸನಬದ್ಧ ಸಂಸ್ಥೆಯಲ್ಲಿ ಅಧ್ಯಕ್ಷೆ, ಉಪಾಧ್ಯಕ್ಷೆ ಎಂಬಂತಹ ಉನ್ನತ ಹುದ್ದೆಗಳನ್ನು ಹೊಂದಿದ್ದಾಗ್ಯೂ ದಲಿತ ಮಹಿಳೆ ಸಾರ್ವಜನಿಕ ಸ್ಥಳಗಳಿಗೆ ಪ್ರವೇಶಿಸುತ್ತಿರುವುದು ತುಂಬ ಕಡಿಮೆ ತಳ ಸಮುದಾಯದಿಂದ ಬಂದಿರುವುದು, ಜಾತೀಯ ಕಾರಣಗಳು ಅವಳನ್ನು ಸಾರ್ವಜನಿಕ ಪ್ರವೇಶವನ್ನು ನಿರಾಕರಿಸುತ್ತಿವೆ. ಇಂತಹ ಮಹಿಳೆಯರ ಸಂಖ್ಯೆ ಕೊಪ್ಪಳದಲ್ಲಿ ಶೇ ೪೮.೩೧ ರಷ್ಟು, ಯಲಬುರ್ಗದಲ್ಲಿ ಶೇ.೩೮.೩೭ರಷ್ಟು, ಕುಷ್ಟಗಿಯಲ್ಲಿ ಶೇ ೩೪.೪೪ ರಷ್ಟು ಹಾಗೂ ಗಂಗಾವತಿಯಲ್ಲಿ ಶೇ ೨೯.೦೭ ರಷ್ಟಿದೆ.

* ಜಾತಿಯ ಕಾರಣದಿಂದಲೇ ತಮ್ಮ ಅಧಿಕಾರವನ್ನು ಮೊಟಕುಗೊಳಿಸಲಾಗುತ್ತಿದೆ ಎಂಬ ಅಂಶವನ್ನು ದಲಿತ ಮಹಿಳೆಯರು ಒಪ್ಪುತ್ತಾರೆ. ಅಂತಹವರ ಪ್ರಮಾಣ, ಕೊಪ್ಪಳ ತಾಲೂಕಿನಲ್ಲಿ ಶೇ ೫೨.೧೬ ರಷ್ಟು, ಕುಷ್ಟಗಿಯಲ್ಲಿ ಶೇ ೫೬.೬೦ ರಷ್ಟು, ಗಂಗಾವತಿಯಲ್ಲಿ ಶೇ ೩೩.೦೧ ರಷ್ಟು ಹಾಗೂ ಯಲಬುರ್ಗದಲ್ಲಿ ಶೇ ೩೨.೧೬ ರಷ್ಟಿದೆ.

* ಪಂಚಾಯಿತಿಯಲ್ಲಿನ ರಾಜಕೀಯ ಸಬಲೀಕರಣ, ಅಧಿಕಾರ ಧ್ರುವೀಕರಣಕ್ಕಾಗಿ ಮೀಸಲಾತಿಯ ಅವಶ್ಯಕತೆಯನ್ನು ಬೇಕು ಎನ್ನುತ್ತಿರುವ, ಅದರಿಂದ ಮಹಿಳೆಯೂ ಮನೆಯಿಂದ ಹೊರ ಬಂದು ರಾಜಕೀಯದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವುದು ಸುಲಭವಾಗುತ್ತದೆ ಎಂಬುದು ಹಲವರ ಅಭಿಪ್ರಾಯವಾಗಿದೆ. ಇಂತಹವರ ಪ್ರಮಾಣ ಯಲಬುರ್ಗಾದಲ್ಲಿ ಶೇ ೩೭.೦೯ ರಷ್ಟು, ಗಂಗಾವತಿಯಲ್ಲಿ ಶೇ ೩೭.೦೪ ರಷ್ಟು, ಕೊಪ್ಪಳ ಶೇ ೩೦.೧೩ ರಷ್ಟು ಹಾಗೂ ಕುಷ್ಟಗಿಯಲ್ಲಿ ಶೇ ೨೮.೬೩ ರಷ್ಟಿದೆ.

* ಜಾತಿ, ಲಿಂಗಗಳ ಕಾರಣದಿಂದ ಅಧಿಕಾರದಿಂದಲೇ ವಂಚಿತವಾಗಿರುವ ದಲಿತ ಮಹಿಳೆಯರು ತಮ್ಮ ಅಧಿಕಾರವು ನಿರುಪಯುಕ್ತವಾಗುತ್ತಿರುವುದರಿಂದ, ಮೇಲ್ವರ್ಗಗಳ ಆದೇಶಾನುಸಾರವೆ ನಡೆಯುತ್ತಿರುವುದರಿಂದ ಅಂತಹ ಮೀಸಲಾತಿಯೇ ಬೇಡ ಎನ್ನುವ ಅಳಲನ್ನು ತೋಡಿಕೊಂಡಿದ್ದಾರೆ. ಅಂತಹ ಮಹಿಳೆಯರು ಕ್ರಮವಾಗಿ ಕುಷ್ಟಗಿಯಲ್ಲಿ ಶೇ ೫೯.೬೦ ರಷ್ಟು, ಕೊಪ್ಪಳ ಶೇ ೫೪.೩೦ ರಷ್ಟು, ಯಲಬುರ್ಗ ಶೇ ೪೩.೫೫ ರಷ್ಟು, ಹಾಗೂ ಗಂಗಾವತಿ ಶೇ ೪೪.೩೨ ರಷ್ಟಿದೆ.

* ಮಹಿಳಾ ರಾಜಕೀಯ ಸಬಲೀಕರಣದಲ್ಲಿ ಪಾಲುದಾರರಾಗಿ ಈಗಾಗಲೇ ಅಧಿಕಾರ ಚಲಾಯಿಸುತ್ತಿರುವ ದಲಿತ ಮಹಿಳೆಯರು ಮುಂದಿನ ಬಾರಿ ಮತ್ತೆ ಸ್ಪರ್ಧಿಸುತ್ತಿರಾ ಎಂದಾಗ ತುಂಬ ನಿರಾಶದಾಯಕವಾದ ಉತ್ತರ ಬರುತ್ತಿತ್ತು. ಪ್ರಸ್ತುತ ರಾಜಕೀಯದಲ್ಲಿ ತುಂಬ ನಿರಾಶದಾಯಕವಾದ ಮನಸ್ಸನ್ನು ಹೊಂದಿರುವುದರಿಂದಲೇ ಅವಳು ಮುಂದಿನ ಸಾರಿ ಚುನಾವಣೆಯೇ ಬೇಡ ಎನ್ನುತ್ತಿದ್ದಾಳೆ. ಅಂತಹ ಮಹಿಳೆಯರ ಪ್ರಮಾಣ ಕ್ರಮವಾಗಿ ಕುಷ್ಟಗಿಯಲ್ಲಿ ಶೇ ೫೨.೧೬ ರಷ್ಟು, ಯಲಬುರ್ಗ ಶೇ ೪೯.೦೭ ರಷ್ಟು, ಕೊಪ್ಪಳ ಶೇ ೪೩.೧೬ ರಷ್ಟು ಹಾಗೂ ಗಂಗಾವತಿ ಶೇ ೪೪.೬೦ ರಷ್ಟಿದೆ.

* ಹೀಗೆಯೇ ರಾಜಕೀಯದಲ್ಲಿ ಮುನ್ನಡೆಯುತ್ತಿರುವ ಚುನಾಯಿತ ದಲಿತ ಮಹಿಳೆಯರು ತಮ್ಮ ರಾಜಕೀಯ ಭವಿಷ್ಯಕ್ಕಾಗಿ ಮುಂದಿನ ಬಾರಿಯೂ ಚುನಾವಣೆಗೆ ನಿಲ್ಲುತ್ತೇವೆ ಎನ್ನುತ್ತಿದ್ದಾರೆ. ಅಂತಹವರ ಪ್ರಮಾಣ, ಗಂಗಾವತಿಯಲ್ಲಿ ಶೇ ೨೮.೪೦ ರಷ್ಟು, ಕೊಪ್ಪಳದಲ್ಲಿ ಶೇ ೨೭.೧೬ ರಷ್ಟು, ಯಲಬುರ್ಗಾ ಶೇ ೨೫.೫೭ ರಷ್ಟು ಹಾಗೂ ಕುಷ್ಟಗಿ ಶೇ ೨೦.೧೩ ರಷ್ಟಿದೆ.

* ಇದೆಲ್ಲ ಸರಿ ಆದರೆ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುವಂತ ದಲಿತ ಮಹಿಳೆಯರ ಅಧಿಕಾರ ಗ್ರಹಣದ ಸ್ವರೂಪವನ್ನು ಅರಿಯುವುದು ಒಳಿತು. ಜಾತಿಯ ಕಾರಣದಿಂದಲೇ ಸವರ್ಣೀಯ ಪ್ರಭಾವಿಗಳ ಒತ್ತಡಕ್ಕೆ ಮಣಿದು ರಾಜಕೀಯಕ್ಕೆ ಬಂದಿರುವ ದಲಿತ ಮಹಿಳೆ ಯಾವುದೇ ಕೆಲಸವನ್ನು ತನ್ನ ಸ್ವಂತ ಇಚ್ಛೆಯಿಂದ ಚಲಾಯಿಸುತ್ತಿಲ್ಲ. ಒತ್ತಡದ ಗುಂಪುಗಳು ನಿತ್ಯ ನಿರಂತರವಾಗಿ ಅವಳಿಗೆ ನಿಯಂತ್ರಿಸುತ್ತಿವೆ.

ರಾಜಕೀಯ ಭಾಗವಹಿಸುವಿಕೆಯನ್ನು ಮೈರನ್ ವೆನರ್ ಹೀಗೆ ವಿಶ್ಲೇಷಿಸುತ್ತಾರೆ. ಸಾರ್ವಜನಿಕ ನೀತಿ, ಸಾರ್ವಜನಿಕ ಆಡಳಿತ, ಸ್ಥಳೀಯ ಅಥವಾ ರಾಷ್ಟ್ರಮಟ್ಟದಲ್ಲಿ ಮುಖಂಡರನ್ನು ಆಯ್ಕೆ ಮಾಡುವುದು ಮುಂತಾದ ಕಾರ್ಯಗಳ ಮೇಲೆ ಪ್ರಭಾವ ಬೀರಲು ಅನುಸರಿಸುವ ಯಶಸ್ವಿ ಅಥವಾ ಅಯಶಸ್ವಿ, ಸಂಘಟಿತ ಅಥವಾ ಅಸಂಘಟಿತ, ನಿರಂತರ ಅಥವಾ ಅನಿರಂತರ, ಕಾನೂನು ಪರ ಅಥವಾ ಕಾನೂನು ಬಾಹಿರ ವಿಧಾನಗಳು. ರಾಜಕೀಯ ಭಾಗವಹಿಸುವ ಸುಪರ್ದಿಯಲ್ಲಿ ಬರುತ್ತವೆ. ಈ ಸೂತ್ರ ರಾಜಕೀಯ ಭಾಗವಹಿಸುವಿಕೆಗೆ ಅತ್ಯಂತ ಉತ್ತಮ ಮಾರ್ಗದರ್ಶಿ ಸೂತ್ರವೂ ಹೌದು. ಆದರೆ ದಲಿತ ಮಹಿಳಾ ರಾಜಕೀಯ ಸಹಭಾಗಿತ್ವದಲ್ಲಿ ಅಥವಾ ಭಾಗವಹಿಸುವಿಕೆಯಲ್ಲಿ ತುಂಬ ತದ್ವಿರುದ್ಧ. ದಲಿತ ಮಹಿಳೆ ರಾಜಕೀಯ ಸಹಭಾಗಿತ್ವದಲ್ಲಿ ಕಂಡು ಬಂದರೂ ಅದು ಸರಕಾರಿ ಅಂಕಿ ಅಂಶಗಳಿಗೆ ಮತ್ತು ಮೀಸಲಾತಿ ಇದೆ ಎಂಬ ಕಾರಣಕ್ಕಾಗಿ, ಆದರೆ ವಾಸ್ತವದಲ್ಲಿ ಅವಳಿಗೆ ನೀಡಿರುವ ಅಧಿಕಾರ ಕೇವಲ ತೋರಿಕೆಯದ್ದೆ ಆಗಿರುತ್ತದೆ. ಏಕೆಂದರೆ ದಲಿತ ಮಹಿಳೆ ಇಂದಿಗೂ ಔಪಚಾರಿಕವಾಗಿ ರಾಜಕೀಯ ನೀತಿ ನಿರ್ಧಾರಗಳನ್ನು ತಗೆದುಕೊಳ್ಳದೆ, ತನ್ನಲ್ಲಿಯ ಕರ್ತವ್ಯಶಕ್ತಿಯನ್ನು ಹೊರಹಾಕದೆ ಕುಳಿತಿದ್ದಾಳೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಸು ಹೊಕ್ಕಾಗಿರುವ ಕೆಲವು ಸಾಮಾನ್ಯಕರಿಸಿದ ಸಂಗತಿಗಳು ನಿರಂತರವಾಗಿ ಅವಳನ್ನು ನಿಯಂತ್ರಿಸುತ್ತಲೇ ಬಂದಿವೆ. ಆದ್ದರಿಂದಲೇ ದಲಿತ ಮಹಿಳೆ ರಾಜಕೀಯದಲ್ಲಿ ಕೇವಲ ಅನೌಪಚಾರಿಕವಾಗಿ ಮಾತ್ರವೇ ಕಾಣಿಸುತ್ತಿದ್ದಾಳೆ.

ಭಾರತದಲ್ಲಿ ಜಾತಿ ಒಂದು ಶ್ರೇಣೀಕೃತವಾದ ವ್ಯವಸ್ಥೆಯಾಗಿರುವುದರಿಂದ ವಿವಿಧ ಜಾತಿಗೆ ಸೇರಿದ ಮಹಿಳೆಯರನ್ನು ಆಯಾ ಶ್ರೇಣಿಯಲ್ಲಿ ಬೇರೆ ಬೇರೆಯಾಗಿ ವಿಂಗಡಿಸಲ್ಪಟ್ಟಿರುತ್ತಾರೆ. ಜಾತಿಯ ಶ್ರೇಣಿ ವ್ಯವಸ್ಥೆಯಡಿಯಲ್ಲಿ ಬರುವ ಕೆಳಹಂತ ಅಥವಾ ಕೆಳ ಸ್ತರದಲ್ಲಿರಿಸಲಾಗಿರುವ ಜಾತಿಗಳ ಸದಸ್ಯರಾಗಿರುವ ಮಹಿಳೆಯರು ಒಂದು ರೀತಿಯಲ್ಲಿ ದ್ವಂದ್ವ ಅಸಮಾನತೆಯನ್ನು ಎದುರಿಸುತ್ತಿರುತ್ತಾರೆ. ಜಾತಿ ಆಧಾರಿತ ಸಮಾನತೆ, ಲಿಂಗಾಧಾರಿತ ಅಸಮಾನತೆಯನ್ನು ಪುಷ್ಟೀಕರಿಸುತ್ತದೆ.[೨] ಆ ಕಾರಣದಿಂದಲೇ ಮೇಲಿನ ಹಂತದಲ್ಲಿನ ಉನ್ನತ ವರ್ಗದ ಮಹಿಳಾ ಸಮುದಾಯಕ್ಕೆ ದಲಿತ ಮಹಿಳೆ ನಿರ್ಲಕ್ಷಿತ ವ್ಯಕ್ತಿಯಾಗಿಯೇ ಕಾಣಿಸುತ್ತಾಳೆ. ಏಕೆಂದರೆ ಮಹಿಳೆಯರಲ್ಲಿಯೇ ಈ ತೆರನಾಗಿರುವ ದ್ವಂದ್ವ ನಿಲುವುಗಳು, ಭಿನ್ನತೆಗಳು ಮತ್ತು ಜಾತಿ ಭ್ರಮೆಗಳಿಂದ ದೂರವಾಗಿಲ್ಲದರ ಕಾರಣ ಮಹಿಳೆ ಮಹಿಳೆಯರಲ್ಲಿಯೇ ಬಿರುಕು ಉಂಟಾಗಿದೆ.

ರಾಜಕೀಯಾಧಿಕಾರ ಎಂಬುದು ಕೇವಲ ಪುರುಷ ಮಾತ್ರವೆ ಹೊಂದಿರುವಂತಹ ಒಂದು ಸಾಂಸ್ಕೃತಿಕ ಹಕ್ಕುದಾರಿಕೆಯಾಗಿದೆ. ಅವನ ಹೊರತು ಇಲ್ಲಿ ಬೇರಾರಿಗೂ ಅವಕಾಶ ನಿಷಿದ್ಧ. ಇಂತಹ ಸ್ಥಿತಿಯೊಳಗೆ ಶ್ರೀಮಂತಾಧಿಕಾರ, ಸ್ತ್ರೀರಾಜಕೀಯ ಎಂಬುದು ಕೇವಲ ಪ್ರತೀಕಾತ್ಮಕವಾಗಿ ಕಾಣಿಸುತ್ತದೆ. ಇದಕ್ಕೆಲ್ಲ ಮುಖ್ಯ ಕಾರಣವೇನೆಂದರೆ ಹೆಣ್ಣಿನ ಕುರಿತಾದ ಜೀವಶಾಸ್ತ್ರೀಯ ಸಾರ್ವತ್ರಿಕತೆ, ಲಿಂಗಭೇಧ, ಜಾತಿ ಧರ್ಮ ಭೇಧಗಳ ಮೆಟ್ಟಿನಿಂತ ಒಂದು ಸಾರ್ವತ್ರಿಕವಾದಂತಹ ಸಾಮಾಜಿಕವಾದ ಪುರುಷಶಾಹಿ ವ್ಯವಸ್ಥೆ.

ಮಹಿಳಾ ರಾಜಕೀಯ ಸಬಲೀಕರಣ ಎಂದರೆ ಕೇವಲ ನಿರ್ಧಾರ ಕೈಗೊಳ್ಳವಿಕೆ ಹಕ್ಕನ್ನು ಪಡೆಯುವುದಷ್ಟೆ ಅಲ್ಲ. ಮಹಿಳೆಯರು ತಮ್ಮನ್ನು ತಾವು ಸಬಲರು, ನಿರ್ಧಾರಕ ಶಕ್ತಿ ಇರುವವರು ಎಂಬುದನ್ನು, ಸಮಾಜ, ಕುಟುಂಬಗಳಿಗೆ ತಿಳಿಸಿಕೊಡುವಿಕೆಯಲ್ಲಿ ಅವಕಾಶವಿರಬೇಕು.

ಸ್ವಾವಲಂಬನೆ, ಸ್ವಅರಿವು, ಸಾಮುದಾಯಿಕತೆ ಮತ್ತು ಸಂಘಟನೆ, ಕೌಶಲ್ಯ ಮತ್ತು ಸಾಮರ್ಥ್ಯ ಬಳಸುವಿಕೆ, ಹೊರ ಜಗತ್ತಿನೊಂದಿಗೆ ಸಂಪರ್ಕಗಳೆಲ್ಲವೂ ಸಬಲೀಕರಣದ ಅಡಿಯಲ್ಲಿ ಬರುತ್ತವೆ. ಆದರೆ ಪುರುಷ ವಲಯವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಇವೆಲ್ಲವೂ ಗೌಣವಾಗಿಯೇ ಮಹಿಳೆಯನ್ನು ಇವುಗಳಿಂದಾಚೆಗೆ ನೂಕಿವೆ. ಅಲ್ಲದೆ ಅವಳನ್ನು ಈ ಸಬಲೀಕರಣದ ಹತ್ತಿರವೆ ಸುಳಿಯದಂತೆ ತಡೆಯೊಡ್ಡಿವೆ. ಆತ್ಮ ವಿಶ್ವಾಸ, ಆತ್ಮಗೌರವ, ಸ್ವಅರಿವು, ಇತ್ಯಾತ್ಮಕ ಪ್ರತೀಕ ಬೆಳಸಿಕೊಳ್ಳುವಿಕೆ ಹಾಗೂ ರಾಜಕೀಯ ಭಾಗವಹಿಸುವಿಕೆಯ ವಿಚಾರಗಳೆಲ್ಲವೂ ದಲಿತ ಮಹಿಳೆಯ ವಿಚಾರದಲ್ಲಿ ನಿರ್ಲಿಪ್ತವಾಗಿ, ನಿಷ್ಕ್ರೀಯವಾಗಿ ಉಳಿಯುತ್ತಲಿವೆ. ಹೀಗಾಗಿರುವುದರಿಂದಲೇ ದಲಿತ ಮಹಿಳಾ ರಾಜಕೀಯದ ವಿಷಯದಲ್ಲಿ ಸಬಲೀಕರಣದ ಅರ್ಥ ಕುಂದುತ್ತಿರುವುದು.

ದಲಿತ ಮಹಿಳೆಯ ಗ್ರಾಮೀಣ ಬದುಕಿನುದ್ದಕ್ಕೂ ಅಲ್ಲಿಯ ಸ್ಥಾಪಿತ ಅಥವಾ ಅಘೋಷಿತ ನಿಯಂತ್ರಣ ಪಟ್ಟ ಭದ್ರ ಹಿತಾಸಕ್ತಿಗಳು ತಮ್ಮ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಲು, ಬಲ ಪಡಿಸಿಕೊಳ್ಳಲು ಹಾಗೆ ತಮ್ಮ ಹಿತವನ್ನು ಇನ್ನಷ್ಟು ವಿಸ್ತರಿಸಲು ದಲಿತ ಮಹಿಳೆಯನ್ನು ಬಲವಂತವಾಗಿ ಬಳಸಿಕೊಳ್ಳುತ್ತಿವೆ. ಜಾತಿಯಾಧಾರಿತವಾಗಿರುವ ಈ ಬಗೆಯ ವಿರಾಟ ಸ್ವರೂಪವು ಉಳ್ಳವರಿಗೆ ಒಂದು ಸುಲಭ ಸಾಧನವಾಗಿದೆ. ಈ ಬಗೆಯ ಕುತಂತ್ರ ನೀತಿಯೂ ರಾಜಕೀಯ ಪ್ರಜಾಸತ್ತಾತ್ಮೆಯು ಆರ್ಥಿಕ, ಸಾಮಾಜಿಕ ಅಂಶಗಳನ್ನು ಹಾಳುಮಾಡುತ್ತಿವೆ. ಹಿಂದಿನಿಂದಲೂ ಯಾಜಮಾನ್ಯಶಾಹಿಯ ಕಪಿಮುಷ್ಠಿಯಲ್ಲಿ, ಅವರ ಅಡಿಯಾಳಾಗಿದ್ದಂತಹ ತಳಸಮುದಾಯಗಳಿಗೆ ನೀಡಿರುವ ರಾಜಕೀಯಾಧಿಕಾರವು ಪರೋಕ್ಷವಾಗಿ ಇಲ್ಲಿ ಊರಿನ ಹಿರಿಯರ ಅಥವಾ ಮೇಲ್ಜಾತಿಯವರ ಕೈಯನ್ನು ಬಲಪಡಿಸಲು ತುಂಬ ಸುಲಭಸಾಧನಗಳಾಗುತ್ತಿದೆ. ಇಂತಹ ಅವೈಚಾರಿಕ ದಬ್ಬಾಳಿಕೆ, ಶೋಷಣೆ, ಆಚರಣೆಗಳು ಬಗೆಗೆ ಸರಕಾರಕ್ಕೂ ಅರಿವಿದ್ದರೂ ಅದು ತುಂಬ ಜಾಣ ಮೌನವಹಿಸಿ ಕುಳಿತಿರುವುದನ್ನು ನೋಡಿದರೆ ದಲಿತ ಮಹಿಳೆಯ ರಾಜಕೀಯ ಸಬಲೀಕರಣಕ್ಕೆ ಸರಕಾರಕ್ಕಿರುವ ಬದ್ಧತೆ ತಿಳಿಯುತ್ತಿದೆ.

ಸಾಮಾನ್ಯವಾಗಿ ನಾವು ಗಮನಿಸಿರುವಂತೆ ಅಂತರಾಷ್ಟ್ರೀಯ, ರಾಷ್ಟ್ರೀಯ, ರಾಜ್ಯ ರಾಜಕೀಯಕ್ಕಿಂತಲೂ ಗ್ರಾಮೀಣ ರಾಜಕೀಯದಲ್ಲಿ ಆರ್ಥಿಕ ಸಾಮಾಜಿಕ ಶಕ್ತಿಯು ನಿಯಂತ್ರಣವು ಅತಿಯಾಗಿರುವುದನ್ನು ನಾವು ಕಾಣಬಹುದು. [ಅದಕ್ಕಿಂತ ಮಿಗಿಲಾಗಿ ಜಾತಿಯ ಗಟ್ಟಿಯಾದ ಸಂರಚನೆಗಳು ಸಹ ಇಲ್ಲಿಯೇ ಅತಿಯಾಗಿ ಕಂಡುಬರುತ್ತಿವೆ.] ಇದಕ್ಕೆ ಕಾರಣವೇನೆಂದರೆ ಗ್ರಾಮೀಣ ಸಮುದಾಯದ ಮೇಲೆ ಅನಾದಿಕಾಲದಿಂದಲೂ ತನ್ನ ನಿಯಂತ್ರಣವನ್ನು ಸಾಧಿಸಿಕೊಂಡು ಬಂದಿರುವ ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಪುರೋಹಿತಶಾಹಿ ಹಾಗೂ ಯಾಜಮಾನ್ಯಶಾಹಿಗಳಂತಹ ಪ್ರಭುತ್ವದ ಶಕ್ತಿಗಳು ಇಡೀ ಗ್ರಾಮೀಣ ಸಮುದಾಯದ ನಿಯಂತ್ರಣ ತಮ್ಮಲ್ಲಿಯೇ ಇರಲಿ ಎಂಬ ಆಲೋಚನೆಯಿಂದಲೇ ಈ ಬಗೆಯ ನಿಯಂತ್ರಣವನ್ನು ಅವು ಗ್ರಾಮೀಣ ಸಮುದಾಯದ ಮೇಲೆ ಹೇರುತ್ತಲೇ ಬಂದಿವೆ. ಹೀಗೆ ನಿಯಂತ್ರಣ ಸಾಧಿಸುವಿಕೆಯ ಹಿಂದೆ ಪ್ರಭುತ್ವ ತಮ್ಮಲ್ಲೇ ಇರಲಿ ಎಂಬ ರಾಜಕಾರಣವೂ ಅಲ್ಲಿರುತ್ತವೆ. ಇದಕ್ಕೆ ಕಾರಣವಿಷ್ಟೆ. ಗ್ರಾಮೀಣ ಸಮುದಾಯದಲ್ಲಿ ಭೂಮಿ ಒಬ್ಬ ಅಥವಾ ಕೆಲವೇ ಕೆಲವು ಶ್ರೀಮಂತರು ಹಿಡಿತದಲ್ಲಿ ಕೇಂದ್ರಿಕೃತವಾಗಿರುವುದು. ಗ್ರಾಮೀಣ ಜನರಲ್ಲಿ ಅತಿಹೆಚ್ಚು ಜನರು ದುಡಿದು ತಿನ್ನುವವರಾಗಿದ್ದರೆ, ಉಳಿದಂತಹ ತಳಸಮುದಾಯದ ಜನ ಬಿಟ್ಟಿ ಚಾಕರಿಯಂತಹ ಕೆಲಸಗಳಲ್ಲಿ ತೊಡಗಿರುತ್ತಾರೆ. ಹೀಗಾಗಿಯೇ

ಮೇಲ್ಜಾತಿಯ ಜನರು ಕೆಳಸಮುದಾಯದ ಜನರನ್ನು ಸದಾ ಭೀತಿಯ ಹೆಸರಿನಲ್ಲಿ ನಿಯಂತ್ರಿಸುತ್ತಿರುವುದು. ಶಾಸನ ಬದ್ಧವಾಗಿ ದಲಿತ ಮಹಿಳೆಗೆ ಅಧಿಕಾರ ಸಿಕ್ಕರೂ ಸಹ ಅವಳು ಅದರ ಚಲಾವಣೆಯಲ್ಲಿ ಎಡುವುತ್ತಿರುವುದು ಈ ಕಾರಣದಿಂದಲೇ, ಗ್ರಾಮೀಣ ಸಮುದಾಯದಲ್ಲಿ ಯಾಜಮಾನ್ಯಶಾಹಿಯೂ ಯಾರು ತಮ್ಮ ಹಿಡಿತದಲ್ಲಿರುತ್ತಾರೋ ಅಥವಾ ತಮ್ಮ ಗುಲಾಮಗಿರಿಗೆ ಒಳಗಾಗಿರುತ್ತಾರೋ ಅಂತಹ ಜನರನ್ನೇ ಮುಂದಿಟ್ಟುಕೊಂಡು ಅವರನ್ನು ರಾಜಕೀಯದ ಧಾಳವಾಗಿ ಆಡಿಸುತ್ತಿರುತ್ತಾರೆ. ಇದರಿಂದ ಅವರಿಗೆ ಎರಡು ಪ್ರಯೋಜನಗಳಿವೆ. ಒಂದು ತಮ್ಮ ಪ್ರಭುತ್ವವನ್ನು ಇನ್ನಷ್ಟು ವಿಸ್ತರಿಸುವುದು, ಹಾಗೂ ಸಮಾಜವನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವುದು.

ಗ್ರಾಮೀಣ ರಾಜಕೀಯ ಶಕ್ತಿಯ ರಾಜಕಾರಣವಾಗಿದ್ದು ಈ ಶಕ್ತಿ ಅತ್ಯಂತ ಪ್ರಭಾವಶಾಲಿಯಾದ, ಹಿಡಿತ ಹೊಂದಿರುವಂತಹ ಶಕ್ತಿಯಾಗಿ ಕಾರ್ಯನಿರ್ವಹಿಸುತ್ತದೆ. ಗ್ರಾಮೀಣ ವಲಯಗಳಲ್ಲಿನ ಪ್ರಭಾವಿ ಜನರು ಇದರ ಮೂಲ ನಿರ್ದೇಶಕರು, ನಿರೂಪಕರೂ ಆಗಿರುತ್ತಾರೆ. ಕೇಂದ್ರ, ರಾಜ್ಯ, ಹಾಗೂ ಪ್ರಾದೇಶಿಕ ಮಟ್ಟಗಳಲ್ಲಿ ಹಿರಿಯ ರಾಜಕಾರಣಿಗಳ ಪ್ರಭಾವವನ್ನು ಬಳಸಿಕೊಂಡು ಇವರು ಶಕ್ತಿ ರಾಜಕಾರಣಕ್ಕೆ ಮುಂದಾಗಿರುತ್ತಾರೆ. ಈ ಬಗೆಯ ಗ್ರಾಮೀಣವಲಯದ ರಾಜಕೀಯ ಶಕ್ತಿಗೆ ನ್ಯಾಯತೆಯ ಲೇಪವು ಇಲ್ಲದಿರುವುದರಿಂದಲೇ ದಲಿತ ಮಹಿಳಾ ರಾಜಕಾರಣದ ಶಕ್ತಿಯೂ ದುರ್ಬಳಕೆಯಾಗುವುದೆಂದರೆ ಅದು ನಮ್ಮ ಸಾಂವಿಧಾನ ವ್ಯವಸ್ಥೆಗೆ ಅಣಕ ಮಾಡಿದಂತೆ.

ಪಂಚಾಯಿತಿಯಲ್ಲಿ ಶಾಸನ ಬದ್ಧವಾಗಿ ಚುನಾಯಿತವಾಗಿರುವ ದಲಿತ ಮಹಿಳಾ ಸದಸ್ಯರು ಯಾವುದೋ ಒಂದು ಸಮುದಾಯದ ಪ್ರತಿಬಿಂಬಗಳಂತೆ ಕಾರ್ಯನಿರ್ವಹಿಸಬೇಕಾಗಿದೆ. ಶೋಷಿತ ಸಮುದಾಯದ ಕಾಳಜಿ ಅವರ ಅಂತಿಮ ಆಯ್ಕೆಯಾಗಿರಬೇಕು. ಅಲ್ಲದೆ ಸ್ವಾವಲಂಬನೆ ಸ್ವಅರಿವು, ಸಾಮುದಾಯಿಕತೆ ಮತ್ತು ಸಂಘಟನೆ ಹಾಗೂ ಹೊರ ಜಗತ್ತಿನೊಂದಿಗೆ ಸಂಪರ್ಕದ ಅರಿವೆ ಇರದೆ ಅವಳು ಪ್ರತಿಯೊಂದು ಕಡೆಯಲ್ಲಿಯೂ ಸೋಲುತ್ತಿದ್ದಾಳೆ. ಸರಕಾರದಿಂದ ಬರುವ ಯೋಜನೆಗಳ ಬಗ್ಗೆಯಾಗಲಿ, ಅಥವಾ ತನಗೆ ದತ್ತವಾಗಿ ಬಂದಿರುವ ಅಧಿಕಾರದ ಬಗ್ಗೆ ಅವಳಿಗೆ ಪ್ರಾಥಮಿಕ ವಿಚಾರಗಳ ಅರಿವೆ ಇಲ್ಲವಾಗಿದೆ. ತನಗೆ ನೀಡಿರುವ ಅಧಿಕಾರ ಯಾವ ಬಗೆಯದು, ಅದನ್ನು ಯಾವ ರೀತಿಯಾಗಿ ಚಲಾಯಿಸಬೇಕು ಆ ಮೂಲಕ ತನ್ನ ತನವನ್ನು, ಅಸ್ತಿತ್ವವನ್ನು ಸಾಬೀತುಪಡಿಸಲು ಅವಳಿಂದಾಗುತ್ತಿಲ್ಲ. ನಿರಂತರವಾಗಿ ದಬ್ಬಾಳಿಕೆ, ಶೋಷಣೆ ಅತ್ಯಾಚಾರ, ಬಹಿಷ್ಕಾರಗಳಂತಹ ಅಮಾನವೀಯ ನಡತೆಗಳಲ್ಲಿಯೇ ನಲುಗಿರುವ ಅವಳು ಏಕಾಏಕಿ ತನಗೆ ಅಧಿಕಾರ ಸಿಕ್ಕ ತಕ್ಷಣ ಗೊಂದಲದಲ್ಲಿ ಮುಳುಗಿ ಬಿಟ್ಟಿದ್ದಾಳೆ. ಯಾರದೋ ಒತ್ತಾಯಕ್ಕೆ ಬಂದ ರಾಜಕೀಯದಲ್ಲಿ ದಲಿತ ಮಹಿಳೆ ಕೇವಲ ಅಲಂಕಾರಿಕ ಹಾಗೂ ಸಾಂಕೇತಿಕವಾಗಿಯೇ ಪ್ರದರ್ಶಿತವಾಗುತ್ತಿದ್ದಾಳೆ.

ಹೆಚ್ಚು ಕೈಕಸುಬಿಗೆ ಮತ್ತು ಅಸಹ್ಯಕರವಾದ ಕೆಲಸಕ್ಕಿಂತ ಹೆಚ್ಚು ದೈಹಿಕ ಶ್ರಮಕ್ಕೆ ನೀಡಿರುವ ಆದ್ಯತೆಯೂ ಕ್ರಮಾನುಸಾರವಾಗಿರುತ್ತದೆ. ಎಂದು ನ್ಯಾಯಮೂರ್ತಿ ಶ್ರೀ ಚನ್ನಬಸಪ್ಪರೆಡ್ಡಿ ಅಭಿಪ್ರಾಯ ಪಟ್ಟಿದ್ದಾರೆ. ಹಿಂದೂ ಜನರ ಶೋಷಣೆಗೆ ತಿಲಾಂಜಲಿ ಹಾಡಲೆಂದು ಅನ್ಯ ಧರ್ಮಗಳಿಗೆ ವಲಸೆ ಹೋದ ದಲಿತರೂ ಅಲ್ಲಿಯೂ ತಾರತಮ್ಯ ಅನುಭವಿಸುತ್ತಿದ್ದಾರೆ ಎನ್ನಲಾಗಿದೆ ದಲಿತರು ಇಂದಿಗೂ ಸಾಮಾಜಿಕ ಜೀವನದೊಂದಿಗೆ ಬೆರೆಯದೆ ಬೇರೆಯಾಗಿ ಒಂದು ರೀತಿಯ ಅಪ್ರಕಟಿತವಾದ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗಿದ್ದಾರೆ.

### ೩.೫. ತಾಲೂಕ ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರನಿಧೀಕರಣ

ಭೂಸುಧಾರಣೆ ಕಾಯ್ದೆ, ಸಹಕಾರಿ ಚಳವಳಿ, ಸಮುದಾಯ ಅಭಿವೃದ್ಧಿ ಯೋಜನೆಗಳು ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳು ಭಾರತದ ಆಡಳಿತಾಂಗದ ಮುಖ್ಯ ಲಕ್ಷಣಗಳಾಗಿವೆ. ಈ ಚಳುವಳಿಗಳ ಮೂಲಕ ಕೇಂದ್ರ ಸರಕಾರವು ಗ್ರಾಮೀಣ ಅಭಿವೃದ್ಧಿಯ ಸಲುವಾಗಿ ಶ್ರಮಿಸುತ್ತಿದೆ. ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ನೇರವಾಗಿ ಕೇಂದ್ರ ರಾಜ್ಯ ಸರಕಾರಗಳನ್ನು ಅವಲಂಬಿಸಿದರೆ, ರಾಜ್ಯ ಸರಕಾರಗಳು ಪಂಚಾಯತ್ ರಾಜ್ ಸಂಸ್ಥೆಗಳನ್ನು ಅವಲಂಬಿಸಿ ಅವುಗಳ ಮೇಲೆ ಸಂಪೂರ್ಣವಾದ ಜವಾಬ್ದಾರಿಯನ್ನು ಹೊರಿಸುತ್ತಿವೆ. ಗ್ರಾಮೀಣಾಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಜಾರಿಗೊಳಿಸಿದ ಅಭಿವೃದ್ಧಿ ಯೋಜನೆಗಳನ್ನು ಯಶಸ್ವಿಗೊಳಿಸುವಿಕೆಗಾಗಿ ಪಂಚಾಯತ್‌ರಾಜ್ ಸಂಸ್ಥೆಯೂ ಮಹತ್ವದ ಪಾತ್ರವನ್ನು ವಹಿಸುತ್ತಿದೆ.

ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯಿತಿಯು ಆಡಳಿತದ ಕೇಂದ್ರ ಮೊದಲ ಹಂತವಾದರೆ ತಾಲ್ಲೂಕ ಪಂಚಾಯತಿಯೂ ಎರಡನೆಯ ಹಂತವಾಗಿದೆ. ಬಹುಮಟ್ಟಿಗೆ ಇದರ ವ್ಯಾಪ್ತಿಯೂ ಆಯಾ ತಾಲ್ಲೂಕಿನ ಒಳಗೆ ಮಾತ್ರವಿರುತ್ತದೆ. ಈ ಪಂಚಾಯಿತಿಗೆ ಸದಸ್ಯರುಗಳನ್ನು ಪ್ರತ್ಯಕ್ಷ ಹಾಗೂ ಪರೋಕ್ಷ ಚುನಾವಣೆಗಳ ಮೂಲಕ ಆರಿಸಲಾಗುತ್ತದೆ. ತಾಲ್ಲೂಕನ್ನು ವಿವಿಧ ಬಗೆಯಲ್ಲಿ ಭಾಗ ಮಾಡಿ ಪ್ರತಿಯೊಂದು ವಿಭಾಗದಿಂದಲೂ ಒಬ್ಬೊಬ್ಬ ಪಂಚಾಯಿತಿ ಸಮಿತಿ ಸದಸ್ಯರನ್ನು ಆರಿಸುವ ಪದ್ಧತಿ ಇರದೆ, ಪರೋಕ್ಷ ವಿಧಾನದಲ್ಲಿ ಇಡೀ ಕ್ಷೇತ್ರದ ಪಂಚಾಯಿತಿಗಳ ಅಧ್ಯಕ್ಷರು ಮತ್ತು ಪಂಚಾಯಿತಿಯ ಸದಸ್ಯರು ಚುನಾಯಿಸುತ್ತಾರೆ. ಆಯಾ ಕ್ಷೇತ್ರದ ಶಾಸಕ, ಸಂಸದರು ಇದರ ನಾಮ ನಿಮಿತ್ಯ ಸದಸ್ಯರು ಆಗಿರುತ್ತಾರೆ. ಇದರಲ್ಲಿ ಇಬ್ಬರು ಮಹಿಳೆಯರು ಪರಿಶಿಷ್ಟ ಜಾತಿ, ಪಂಗಡಗಳಿಗೆ, ಹಿಂದುಳಿದ ವರ್ಗಗಳಿಗೆ ಸೇರಿದವರಿಗೆ ಇಲ್ಲಿ ಮೀಸಲಾತಿ ಅವಕಾಶ ನೀಡಲಾಗಿದೆ. ಚುನಾಯಿತ ಸದಸ್ಯರಲ್ಲಿಯೇ ಒಬ್ಬರನ್ನು ಅಧ್ಯಕ್ಷ, ಉಪಾಧ್ಯಕ್ಷರು ಎಂದು ಆರಿಸಲಾಗುವುದು.

ತಾಲ್ಲೂಕ ಪಂಚಾಯಿತಿಯೂ ತಾಲ್ಲೂಕಿನ ಎಲ್ಲಾ ಬಗೆಯ ಅಭಿವೃದ್ಧಿ ಕಾರ್ಯಗಳನ್ನು ನಡೆಸುವ ಗುರುತರವಾದ ಜವಾಬ್ದಾರಿಯನ್ನು ಹೊಂದಿದೆ. ೭೩ ನೇಯ ತಿದ್ದುಪಡಿಯ ೨೪೩ ವಿಧಿಯನ್ವಯು ಪಂಚಾಯಿತಿಗಳ ಬಗ್ಗೆ ನಿಖರವಾಗಿ ತಿಳಿಸುವುದು. ೨೪೩ (ಬಿ) ವಿಧಿಯ ಪ್ರಕಾರ ರಾಜ್ಯಶಾಸಕಾಂಗವು ಕಾನೂನು ಮೇರೆಗೆ ಪಂಚಾಯಿತಿಯು ರಚನೆಗೆ ಸಂಬಂಧಿಸಿದಂತೆ ಉಪಬಂಧಗಳನ್ನು ರಚಿಸಬಹುದು. ೨೪೩ ಕಾಯ್ದೆಯ ಅನ್ವಯ ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳಿಗೆ ಮೀಸಲಾತಿಯನ್ನು ನೀಡಲಾಗಿದೆ. ಈ ಬಗೆಯ ಕಾಯ್ದಿರಿಸಿದ ಸ್ಥಾನಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಚುನಾವಣೆಯ ಮೂಲಕವೇ ತುಂಬುವ ಸ್ಥಾನಗಳಿಗೆ ಆಯಾ ಕ್ಷೇತ್ರದಲ್ಲಿನ ಪರಿಶಿಷ್ಟ ಜಾತಿ, ಪಂಗಡಗಳಿಗೆ ಜನಸಂಖ್ಯೆಗೆ ಅನುಗುಣ ಪ್ರಮಾಣವಲ್ಲಿರತಕ್ಕದ್ದು. ಮತ್ತು ಆಸ್ಥಾನಗಳನ್ನು ಸರದಿಯ ಪ್ರಕಾರ ಪಂಚಾಯಿತಿಯ ಬೇರೆ ಬೇರೆ ಚುನಾವಣಾ ಕ್ಷೇತ್ರಗಳಿಗೆ ಹಂಚತಕ್ಕದ್ದು. ಕಾಯ್ದಿರಿಸಿದ ಸ್ಥಾನಗಳ ಸಂಖ್ಯೆಯೂ ೧/೩ ಕ್ಕಿಂತ ಕಡಿಮೆ ಇಲ್ಲದ ಸ್ಥಾನಗಳನ್ನು ಸಂದರ್ಭಾನುಸಾರವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟುಗಳಿಗೆ ಸೇರಿದ ಮಹಿಳೆಯರಿಗೆ ಕಾಯ್ದಿರಿಸಬೇಕು. ಪ್ರತಿ ಪಂಚಾಯಿತಿಯಲ್ಲಿ ನೇರ ಚುನಾವಣೆಯ ಮೂಲಕ ಭರ್ತಿ ಮಾಡಬೇಕಾದ ಸ್ಥಾನ(ಅನುಸೂಚಿತ ಜಾತಿ, ಪಂಗಡಗಳಲ್ಲಿ ಮಹಿಳೆಯರನ್ನು ಒಳಗೊಂಡಂತೆ) ಗಳ ೧/೩ ರಷ್ಟಕ್ಕೆ ಕಡಿಮೆ ಇಲ್ಲದಂತೆ ಮಹಿಳೆಗೆ ಕಾಯ್ದಿರಿಸಿ ಆ ಸ್ಥಾನಗಳನ್ನು ಸರದಿಯ ಮೇರೆಗೆ ಪಂಚಾಯಿತಿಯ ಬೇರೆ ಬೇರೆ ಚುನಾವಣಾ ಕ್ಷೇತ್ರಗಳಿಗೆ ಹಂಚತಕ್ಕದ್ದು. ಸಂವಿಧಾನ ಬದ್ಧವಾಗಿ ದಲಿತ ಮಹಿಳೆಗೆ ತಾಲ್ಲೂಕ ಪಂಚಾಯಿತಿಯಲ್ಲಿಯೂ ಅವಕಾಶವನ್ನು ನೀಡಲಾಗಿದೆ. ಕೊಪ್ಪಳ

ಜಿಲ್ಲೆಯಲ್ಲಿ ಮೇಲಿನ ಕೋಷ್ಟಕದಲ್ಲಿರುವಂತೆ ತಾಲ್ಲೂಕ ಪಂಚಾಯಿತಿಗೆ ಆಯ್ಕೆಯಾಗಿರುವಂತ ದಲಿತ ಮಹಿಳೆಯರ ವಯಸ್ಸಿನ ಅನುಪಾತವು ಗ್ರಾಮ ಪಂಚಾಯಿತಿಯಲ್ಲಿರುವಂತೆ ಇದೆ.

ಕೊಪ್ಪಳ ಜಿಲ್ಲೆ ತಾಲೂಕು ಪಂಚಾಯಿತಿಗಳಲ್ಲಿನ ದಲಿತ ಮಹಿಳೆಯರ ವಿವರ

| ಕ್ರ. ಸಂ | ತಾಲೂಕು | ಒಟ್ಟು ಸದಸ್ಯರು | ಪುರುಷರು | ಮಹಿಳೆಯರು | ಪ.ಜಾ | | ಪ.ಪಂ | | ಒಟ್ಟು ಪ.ಜಾ/ಪ.ಪಂದ ಮಹಿಳೆಯರ ಸಂಖ್ಯೆ |
|---|---|---|---|---|---|---|---|---|---|
| | | | | | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | |
| ೦೧ | ಕೊಪ್ಪಳ | ೨೬ | ೧೬ | ೧೦ | ೦೩ | ೦೨ | ೦೧ | ೦೨ | ೦೪ |
| ೦೨ | ಗಂಗಾವತಿ | ೩೨ | ೨೨ | ೧೦ | ೦೪ | ೦೨ | ೦೩ | ೦೩ | ೦೫ |
| ೦೩ | ಯಲಬುರ್ಗಾ | ೨೩ | ೧೫ | ೦೮ | ೦೨ | ೦೧ | ೦೨ | ೦೧ | ೦೨ |
| ೦೪ | ಕುಷ್ಟಗಿ | ೨೪ | ೧೬ | ೦೮ | ೦೨ | ೦೧ | ೦೧ | ೦೨ | ೦೩ |

**೩.೫.೧. ತಾಲೂಕು ಪಂಚಾಯಿತಿಯಲ್ಲಿ ದಲಿತ ಮಹಿಳಾ ಸ್ಥಿತಿಯನ್ನಾಧರಿಸಿದ ಕೋಷ್ಟಕಗಳು**

**ತಾಲೂಕು ಪಂಚಾಯಿತಿಗೆ ಆಯ್ಕೆಯಾದ ದಲಿತ ಮಹಿಳೆಯರ ವಯೋಮಾನದ ವಿವರ(ಕೋಷ್ಟಕ-೧)**




ಮೇಲಿನ ಕೋಷ್ಟಕ ೧ರಲ್ಲಿರುವಂತೆ ತಾಲೂಕು ಪಂಚಾಯಿತಿಗೆ ಆಯ್ಕೆಯಾಗಿರುವ ದಲಿತ ಮಹಿಳೆಯರ ವಯೋಮಿತಿಯಲ್ಲಿಯೂ ಸಹ ಗ್ರಾಮಪಂಚಾಯಿತಿಯಲ್ಲಿ ಇರುವಂತಹ ಸ್ಥಿತಿಯೇ ಇದೆ. ಹೆಣ್ಣಿನ ಕುರಿತು ಕುಟುಂಬ, ಸಮುದಾಯ, ಧರ್ಮಗಳು ಹೊಂದಿರುವ ತಾತ್ಸಾರ ಭಾವನೆ, ಶೀಲ, ಪಾವಿತ್ರ್ಯಗಳ ನೆಪದೊಂದಿಗೆ ಅವಳ ರಾಜಕೀಯ ಭಾಗವಹಿಸುವಿಕೆಗೆ ತಡೆಯಾಗುತ್ತಿವೆ. ಹರೆಯದಲ್ಲಿ ರಾಜಕೀಯಕ್ಕೆ ಬರುವುದರಿಂದ ಅವಳ ಪಾವಿತ್ರ್ಯ ನಾಶವಾಗುತ್ತದೆ ಎನ್ನುವ ಕಾರಣದಿಂದಲೇ ಅವಳಿಗೆ ಹರೆಯದಲ್ಲಿ ರಾಜಕೀಯಕ್ಕೆ ದಾಪುಗಾಲು ಹಾಕಲು ಸಾಧ್ಯವಾಗುತ್ತಿಲ್ಲ. ಆ ಕಾರಣದಿಂದಲೇ ದಲಿತ ಮಹಿಳೆಯರು ಮಧ್ಯ ವಯಸ್ಸಿನಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ರಾಜಕೀಯಕ್ಕೆ ಬರುತ್ತಿದ್ದಾರೆ.

ಈರೀತಿಯ ಪರಿಸ್ಥಿತಿಯನ್ನು ನಾವು ಗ್ರಾಮಪಂಚಾಯಿತಿಯ ಮಟ್ಟದಲ್ಲಿಯೂ ಕಂಡಿದ್ದೇವೆ. ಅದೇ ಸ್ಥಿತಿ ಇಲ್ಲಿಯೂ ಮುಂದುವರೆದಿದೆ. ಹೀಗೆ ರಾಜಕೀಯ ಅಖಾಡಕ್ಕೆ ಬರುತ್ತಿರುವ ದಲಿತ ಮಹಿಳೆಯರ ವಯೋಮಾನ ೨೫-೩೫ ರವರೆಗಿನವರು ಶೇ.೧೧.೬೧. ೩೫-೪೫ರ ವರೆಗಿನ ವಯಸ್ಸಿನವರು ಶೇ.೩೬.೪೦, ೪೫-೫೦ರ ವಯಸ್ಸಿನವರು ಶೇ.೩೮.೬೬ ಹಾಗೂ ೫೫-೬೫ರ ವರೆಗಿನ ವಯಸ್ಸಿನವರ ಪ್ರಮಾಣ ಶೇ.೮.೪೩ರಷ್ಟಿದೆ.

### ಚುನಾಯಿತ ದಲಿತ ಮಹಿಳೆಯರ ಶೈಕ್ಷಣಿಕ ಮಟ್ಟ (ಕೋಷ್ಠಕ-೨)




ಮೇಲಿನ ಕೋಷ್ಠಕ ೨ರಲ್ಲಿರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಬರುವ ತಾಲ್ಲೂಕ ಪಂಚಾಯಿತಿಗಳಲ್ಲಿ ಚುನಾಯಿತ ದಲಿತ ಮಹಿಳೆಯರ ಸಾಕ್ಷರತೆ ಪ್ರಮಾಣವು ಅತ್ಯಂತ ಕಡಿಮೆಯಾಗಿದೆ. ಸಾಕ್ಷರತೆಯನ್ನು ಅಭಿವೃದ್ಧಿಯ ಸೂಚಿಯನ್ನಾಗಿ ಮತ್ತು ಅನಕ್ಷರತೆಯನ್ನು ದುಃಸ್ಥಿತಿಯ ಸೂಚಿಯನ್ನಾಗಿ ಪರಿಗಣಿಸಿದರೆ ಪರಿಶಿಷ್ಟ ಮಹಿಳೆಯರು ಅತ್ಯಂತ ಹಿಂದುಳಿದಿದ್ದಾರೆ. ಅಕ್ಷರ ಸಂಸ್ಕೃತಿಯನ್ನು ದಲಿತ ಮಹಿಳೆಯರಿಗೆ ಸಂಬಂಧಿಸಿದಂತೆ ತುಂಬ ಕ್ಲಿಷ್ಟಕರವಾಗಿದೆ. ಅಕ್ಷರ ಸಂಸ್ಕೃತಿಯ ಮಹತ್ವವನ್ನು ಪರಿಶಿಷ್ಟರಿಗೆ ಸಂಬಂಧಿಸಿದಂತೆ ಡಾ.ಬಿ.ಆರ್.ಅಂಬೇಡ್ಕರ್‌ರವರು ಸ್ಪಷ್ಟವಾಗಿ ಗುರುತಿಸಿದ್ದರು. ಲಿಖಿತ ಅಕ್ಷರವನ್ನು ಅವರು ಆರಾಧಿಸುತ್ತಿದ್ದರು. ತಮ್ಮ ಜೀವಮಾನದುದ್ದಕ್ಕೂ ಅವರು ಯಾವ ಸಮಿತಿ, ಆಯೋಗ, ಅಥವಾ ಸರಕಾರದ ಮುಂದೆ ವಾದ ಮಂಡಿಸಬೇಕಿದ್ದರೆ ಅವರು ಲಿಖಿತ ರೂಪದಲ್ಲಿ ತಮ್ಮ ವಾದವನ್ನು ಮಂಡಿಸುತ್ತಿದ್ದರು. ಮೌಖಿಕ ಸಂಪ್ರದಾಯವನ್ನು ಸತಚ್ಛಿಕೊಂಡಿರುವ ಪರಿಶಿಷ್ಟ ಸಮಾಜದಲ್ಲಿ ಅದರಲ್ಲೂ ಪ್ರತಿಷ್ಠಿತರ ಎದುರಿಗೆ ಗೌರವ ದಕ್ಕಬೇಕಾದರೆ ಪರಿಶಿಷ್ಟರು ಅಕ್ಷರ ಸಂಸ್ಕೃತಿಯನ್ನು ಮೈಗೂಡಿಸಬೇಕು ಎಂದು ಅವರು ಆಶಿಸಿದ್ದರು. ಅಕ್ಷರ ಸಂಸ್ಕೃತಿಯ ಮೇಲೆ ಬಾಬಾ ಸಾಹೇಬ್‌ರು ಪ್ರಭುತ್ವವನ್ನು ಸಾಧಿಸಿಕೊಂಡಿದ್ದರಿಂದ ಭಾರತದ ಅಸ್ಪೃಶ್ಯ ಸಮಾಜದ ನೋವನ್ನು ಪ್ರಪಂಚಕ್ಕೆ ತಿಳಿಸಲು ಅವರಿಗೆ ಸಾಧ್ಯವಾಯಿತು.[೧೧೧] ಅಕ್ಷರವು ವ್ಯಕ್ತಿಯ ಸಾಮಾಜಿಕ ಚಹರೆಯನ್ನು ಉತ್ತರಿಸುವುದು. ಆದರೆ ದಲಿತ ಮಹಿಳೆಗೆ ಅಕ್ಷರದ ಅರಿವೂ ಇಂದಿಗೂ ಸಮರ್ಪಕವಾಗಿ ದಕ್ಕಿಲ್ಲ. ಜಿಲ್ಲೆಯ ಸಾಕ್ಷರತೆ ಪ್ರಮಾಣದಲ್ಲಿ ಇವರು ಅತ್ಯಂತ ಕೆಳಗಿದ್ದಾರೆ. ಕ್ರಮವಾಗಿ ಯಲಬುರ್ಗಾ, ಗಂಗಾವತಿಯಲ್ಲಿ ಶೇ ೧೮.೬೨ ರಷ್ಟು ಇದ್ದರೆ ಕೊಪ್ಪಳ ತಾಲ್ಲೂಕಿನಲ್ಲಿ ಶೇ ೧೭.೦೩ ರಷ್ಟು ಹಾಗೂ ಕುಷ್ಟಗಿ ತಾಲ್ಲೂಕಿನಲ್ಲಿ ಶೇ.೧೩.೦೭ ರಷ್ಟಿದೆ.

### ಜಾತಿಯ ಕಾರಣದಿಂದಲೇ ಪಂಚಾಯಿತಿಯಿಂದ ದೂರ ಉಳಿಯುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೩)




ಕೋಷ್ಟಕ-೩ ರಲ್ಲಿರುವಂತೆ ತಾವು ತಳಸಮುದಾಯದ ಪ್ರತಿನಿಧಿಗಳಾಗಿರುವುದರಿಂದಲೇ ತಮಗೆ ಪಂಚಾಯಿತಿಯಿಂದ ದೂರವಿರಬೇಕಾಗಿದೆ ಎಂಬ ಅಂಶವನ್ನು ದಲಿತ ಮಹಿಳೆಯರು ಪುರಸ್ಕರಿಸುತ್ತಾರೆ. ಸಾಮಾನ್ಯವಾಗಿ ತಳ ಸಮುದಾಯದ ದಲಿತ ಮಹಿಳೆ ತನ್ನ ಮೇಲೇ ಹಿಂದಿನಿಂದಲೂ ಅವ್ಯಾಹಿತವಾಗಿ ಧಾಳಿ ಮಾಡುತ್ತಲೇ ಬಂದಿರುವ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಂಶಗಳು ಅವಳ ರಾಜಕೀಯ ಜೀವನವನ್ನೇ ಹೊಸಕಿಹಾಕಿದವು. ಗ್ರಾಮ ಪಂಚಾಯಿತಿಯೂ ಗ್ರಾಮೀಣ ವಲಯದಲ್ಲೇ ಇರುವುದರಿಂದ ಅಲ್ಲಿ ಅಸ್ಪೃಶ್ಯತೆ, ಜಾತೀಯತೆ ಅತಿಯಾಗಿ ಕಂಡು ಬಂದರೆ, ತಾಲ್ಲೂಕ ಪಂಚಾಯಿತಿಯಲ್ಲಿ ಅದರ ಕುರುಹು ಇದೆಯಾದರೂ ಪ್ರಮಾಣ ಕಡಿಮೆ, ಏಕೆಂದರೆ ತಾಲ್ಲೂಕು ಪಂಚಾಯತಿ ನಗರ ಪ್ರದೇಶಗಳಲ್ಲಿ ಕೇಂದ್ರಿಕೃತವಾಗಿರುವುದರಿಂದ ಸಹಜವಾಗಿಯೇ ಇಲ್ಲಿ ನಾಗರೀಕ ಜೀವನಕ್ಕೆ ತಲೆಬಾಗಿ ಅಸ್ಪೃಶ್ಯತೆ, ಜಾತಿಯ ಅಂಶಗಳು ಕಡಿಮೆ ಗೋಚರಿಸುತ್ತಿವೆ. ಇಂದಿಗೂ ಜಿಲ್ಲೆಯ ತಾಲ್ಲೂಕ ಪಂಚಾಯಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಲಿತ ಮಹಿಳೆಯರು ಜಾತಿಯ ಕಾರಣದಿಂದಲೇ ಒಂದು ರೀತಿಯಲ್ಲಿ ಕೀಳರಿಮೆಯನ್ನು ಅನುಭವಿಸುತ್ತಲೆ ಪಂಚಾಯಿತಿಯಿಂದ ಹಿಂದೆ ಸರಿಯುತ್ತಿದ್ದಾರೆ. ಅಂತಹ ಮಹಿಳೆಯರ ಪ್ರಮಾಣ ಕ್ರಮವಾಗಿ ಕೊಪ್ಪಳ ತಾಲ್ಲೂಕಿನಲ್ಲಿ ಶೇ. ೭೦.೧೧ ರಷ್ಟು, ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೦೮.೦೯ ರಷ್ಟು, ಗಂಗಾವತಿಯಲ್ಲಿ ಶೇ ೦೬.೩೦ ರಷ್ಟು, ಇನ್ನುಳಿದಂತೆ ಅತಿಹೆಚ್ಚು ಕುಷ್ಟಗಿ ತಾಲ್ಲೂಕಿನಲ್ಲಿ ಶೇ ೧೧.೦೪ ರಷ್ಟು ಇದೆ.

**ಹೆಂಡತಿಯ ಬದಲಿಗೆ ಅಧಿಕಾರ ಚಲಾಯಿಸುತ್ತಿರುವ ಪುರುಷರ ಪ್ರಮಾಣ (ಕೋಷ್ಟಕ-೪)**




ಮೇಲಿನ ಕೋಷ್ಟಕ-೪ ರಲ್ಲಿರುವಂತೆ ಹೆಂಡತಿಯರ ಹೆಸರಿನಡಿಯಲ್ಲಿ ಅಧಿಕಾರವನ್ನು ಕಬಳಿಸಿ ಅವಳ ಅಧಿಕಾರವನ್ನು ನೆಡೆಸುತ್ತಿರುವ ಪುರುಷರ ಪ್ರಮಾಣ ಅತಿಯಾಗಿದೆ. ಸಾಮಾನ್ಯವಾಗಿರುವ ನಂಬಿಕೆಯಂತೆ ಮಹಿಳೆಯರಿಗೆ ರಾಜಕೀಯದಲ್ಲಿ ಇರಲೇಬೇಕಾದ ಸೃಜನಶೀಲತೆ, ಚತುರತೆ, ಕ್ರಿಯಾಶೀಲತೆ, ಬದ್ಧಿ ಮತ್ತೆ, ಚುರುಕುತನ ಇಲ್ಲವೆಂಬ ಹುಸಿ ಸತ್ಯವನ್ನು ನುಡಿಯುತ್ತಲೇ ಅವಳ ಅಧಿಕಾರ ಹರಣ ಮಾಡಲಾಗಿದೆ. ಹೆಸರಿಗಷ್ಟೆ ಹೆಂಡತಿಯನ್ನು ಮುಂದಿಟ್ಟುಕೊಂಡು ಅವಳ ಹೆಸರಿನಡಿಯಲ್ಲಿ ಹಗಲು ದರೋಡೆ ನಡೆಸುವರ ಸಂಖ್ಯೆ ಹೆಚ್ಚಿದೆ. ಪಿತೃಪ್ರಧಾನತೆ ಎಂದಿಗೂ ಮಹಿಳೆ ಅಧಿಕಾರ ನೀಡಲು ಸಮ್ಮತಿಸದು. ಆ ಕಾರಣದಿಂದಲೇ ಅವಳಿಗೆ ಇಲ್ಲಸಲ್ಲದ ಮಿಥ್‌ಗಳನ್ನು ಹುಟ್ಟಿಸಿ ಅವಳ ಸೃಜನಶೀಲತೆ, ಕತೃತ್ವಶಕ್ತಿಯನ್ನು ಕುಂದಿಸಲಾಗುತ್ತಿದೆ. ಹೆಂಡತಿಯರ ಬದಲಿ ಅಧಿಕಾರದ ಸವಿ ಅನುಭವಿಸುತ್ತಿರುವವರ ಪ್ರಮಾಣ ಗಂಗಾವತಿಯಲ್ಲಿ ಶೇ ೪೧.೪೭ ರಷ್ಟು, ಕೊಪ್ಪಳದಲ್ಲಿ ಶೇ ೩೯.೬೦ ರಷ್ಟು, ಕುಷ್ಟಗಿಯಲ್ಲಿ ಶೇ ೩೩.೦೪ ರಷ್ಟು ಹಾಗೂ ಯಲಬುರ್ಗದಲ್ಲಿ ಶೇ ೨೯.೬೦ ರಷ್ಟು ಇದೆ. ಹೀಗೆ ಹೆಂಡತಿಯರ ಅಧಿಕಾರವನ್ನು ಕಸಿದುಕೊಂಡಿರುವ ಪುರುಷರ ಪ್ರಮಾಣವನ್ನು ನಾವು ಗಮನಿಸಿದಾಗ ಅವಳಿಗೆ ನಿಜವಾದ ರಾಜಕೀಯ ಸಬಲೀಕರಣ ಸಾಧ್ಯವೇ? ಎಂಬ ಪ್ರಶ್ನೆ ಮಾಡುವುದು ಸಹಜ.

### ಪಂಚಾಯಿತಿಯ ಅಧಿಕಾರ, ಕಾರ್ಯಗಳ ಬಗ್ಗೆ ಅರಿವಿರದ ದಲಿತ ಮಹಿಳಾ ಸದಸ್ಯರ ಪ್ರಮಾಣ
(ಕೋಷ್ಟಕ-೫೫)




ಮೇಲಿನ ಕೋಷ್ಟಕ-೫೫ ರಲ್ಲಿರುವಂತೆ ಪಂಚಾಯಿತಿಯ ಅಧಿಕಾರ, ಕಾರ್ಯಗಳ ಬಗ್ಗೆ ಅರಿವೆ ಇರದ ದಲಿತ ಮಹಿಳೆಯರ ಪ್ರಮಾಣ ಅತ್ಯಧಿಕವಾಗಿದೆ. ಶಿಕ್ಷಣದಿಂದ ದೂರವೇ ಇರುವ ದಲಿತ ಮಹಿಳೆಗೆ ರಾಜಕೀಯ ಪರಿಭಾಷೆಯ ಅರಿವೆ ಇಲ್ಲವಾಗಿದೆ. ಯಾವುದೋ ಒಂದು ಸಂದರ್ಭಕ್ಕೆ, ಯಾರದೋ ಒತ್ತಾಯಕ್ಕೆ ಬಲಿಯಾಗಿ ರಾಜಕೀಯಕ್ಕೆ ಅವಳು ಬಂದಿರುವಳಾದರೂ ರಾಜಕೀಯದ ಬಗ್ಗೆ ಜ್ಞಾನ ಸಂಪೂರ್ಣವಾಗಿ ಅವಳಿಗೆ ನೀಡದೆ ಇರುವುದರಿಂದ ದಲಿತ ಮಹಿಳೆ ಅಧಿಕಾರ ಚಲಾವಣೆಯಲ್ಲಿ ಎಡವುತ್ತಿದ್ದಾಳೆ. ಕಾರಣವೇನೆಂದರೆ ಅವಳಿಗೆ ಪಂಚಾಯಿತಿಗೆ ಬರುವ ಯೋಜನೆಗಳು, ಕಾರ್ಯಗಳು, ಅನುಧಾನ, ಬಜೆಟ್ ಮುಂತಾದ ಮಹತ್ತರ ಕಾರ್ಯಗಳ ಅರಿವೇ ಅವಳಿಗಿಲ್ಲ. ಈ ಬಗ್ಗೆ ಸರಕಾರ ಹಲವಾರು ಬಗೆಯ ಉಪಗ್ರಹಾಧಾರಿತ ಕಲಿಕೆಯನ್ನು ಕಲಿಸಿತು ಆದರೆ ಅದು ಸಹ ನಿರುಪದ್ರವವಾಯಿತು. ಹೀಗೆ ಪಂಚಾಯಿತಿಯಲ್ಲಿನ ಅಧಿಕಾರಗಳು ಹಾಗೂ ಕಾರ್ಯಗಳ ಅರಿವೇ ಇರದ ದಲಿತ ಮಹಿಳೆಯರ ಪ್ರಮಾಣ ಅಧಿಕವಾಗಿರುವುದು. ಕುಷ್ಟಗಿ ತಾಲ್ಲೂಕಿನಲ್ಲಿ ಶೇ ೪೪.೨೭ ರಷ್ಟು, ಯಲಬುರ್ಗ ತಾಲ್ಲೂಕಿನಲ್ಲಿ ಶೇ ೪೧.೫೫ ರಷ್ಟು, ಗಂಗಾವತಿಯಲ್ಲಿ ಶೇ ೪೨.೬೦ ರಷ್ಟು ಹಾಗೂ ಕೊಪ್ಪಳದಲ್ಲಿ ಶೇ ೪೦.೨೦ ರಷ್ಟಿದೆ. ಮೇಲಿನ ಪ್ರಮಾಣಗಳನ್ನು ನೋಡಿದಾಗ ನಮಗೆ ನಿಜವಾಗಲೂ ಸೋಜಿಗವಾಗದಿರದು. ಏಕೆಂದರೆ ದಲಿತ ಮಹಿಳೆ ಪಂಚಾಯಿತಿಯಲ್ಲಿನ ತನ್ನ ಕಾರ್ಯಗಳು, ಅಧಿಕಾರದ ಅರಿವೇ ಇಲ್ಲದಂತೆ ಅಧಿಕಾರ ನಡೆಸುತ್ತಿದ್ದಾಳೆ.

### ಪಂಚಾಯಿತಿಯಲ್ಲಿ ಜಾತಿಯ ಕೀಳರಿಮೆಯಿಂದ ಸ್ವತಂತ್ರವಾಗಿ ಅಧಿಕಾರ ಚಲಾಯಿಸಲು ಹಿಂಜರಿಯುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೬)




ಮೇಲಿನ ಕೋಷ್ಟಕ-೬ ರಲ್ಲಿರುವಂತೆ ತಾವು ಕೆಳಜಾತಿಗಳಲ್ಲಿ ಹುಟ್ಟಿದವರಾಗಿರುವ ಕಾರಣ ಎಲ್ಲಿ ತಮ್ಮ ಅಧಿಕಾರದ ಕುರಿತು ಅಪಮಾನ, ಅವಮಾನ, ನಗೆ ಪಾಟಲಿಗೆ ಬಲಿಯಾಗಬಹುದೇನೋ ಎಂಬ ಹಿಂಜರಿಕೆಯಿಂದ, ಹಾಗೂ ಜಾತಿಯ ಕೀಳರಿಮೆಯಿಂದ ತಮಗೆ ಸಂವಿಧಾನ ಬದ್ಧವಾಗಿ ಸಿಕ್ಕಿರುವ ಅಧಿಕಾರವನ್ನು ಚಲಾಯಿಸಲು ಹಿಂಜರಿಯುತ್ತಿರುವ ಮಹಿಳೆಯರ ಪ್ರಮಾಣ, ಕನಿಷ್ಟವಾಗಿಯೇ ಇದೆ. ಗ್ರಾಮೀಣ ವಲಯಗಳಲ್ಲಿ ಇಂದಿಗೂ ಜಾರಿಯಲ್ಲಿರುವ ಅಸ್ಪೃಶ್ಯತೆ, ಜಾತೀಯತೆ ಊರಿನ ಹಿರಿಯರ ಹಿಡಿತ ತಾಲ್ಲೂಕ ಪಂಚಾಯಿತಿಗೆ ಬಂದಿಲ್ಲವಾದರೂ ಜಾತಿಯ ಸಂರಚನೆಗಳು ಬೇರೆ ರೂಪದಲ್ಲಿ ಅಲ್ಲಿಯೂ ಕಾರ್ಯನಿರ್ವಹಿಸುತ್ತಿರುವುದನ್ನು ನಾವು ಸೂಕ್ಷ್ಮವಾಗಿ ಕಾಣಬಹುದು. ನಗರಕ್ಕೆ ಬಂದು ನಂತರ ಮತ್ತೆ ದಲಿತ ಮಹಿಳೆಯರು ಊರಿನಲ್ಲೇ ಇರಬೇಕಾದ ಅನಿವಾರ್ಯತೆ ಇರುತ್ತದೆ. ಹೀಗಿರುವಾಗ ಅವರು ಊರಿನ ಹಿರಿಯರಿಗೆ ಅಥವಾ ಬಲಿಷ್ಠ ಜಾತಿಗಳಿಗೆ ಸಹಜವಾಗಿ ತಾಲ್ಲೂಕ ಪಂಚಾಯಿತಿಯಲ್ಲಿ ಮಣಿಯುವುದಿಲ್ಲಾ ಎಂದು ನಂಬಿದರೂ ಅವಳ ಮುಂದಿನ ಗ್ರಾಮೀಣ ಜೀವನದಲ್ಲಿ ಎದುರಿಸಬೇಕಾದ ವಿಷಯ ಸ್ಥಿತಿಯನ್ನು ಪೂರ್ವಭಾವಿಯಾಗಿ ಅರಿತೆ ಬಲಿಷ್ಠ ಜಾತಿಗಳಿಗೆ ಇಲ್ಲಿಯೂ ಹೆದರುತ್ತಲೇ ಪಂಚಾಯಿತಿಯಲ್ಲಿ ಸ್ವತಂತ್ರವಾಗಿ, ನಿಷ್ಪಕ್ಷಪಾತವಾಗಿ ಅಧಿಕಾರ ಚಲಾಯಿಸದ ಸ್ಥಿತಿಯಲ್ಲಿ ದಲಿತ ಮಹಿಳೆ ಇದ್ದಾಳೆ. ಇಂತಹ ಜಾತಿಯ ಕೀಳರಿಮೆಯಿಂದ ತುಂಬ ಹಿಂಜರಿಕೆಯ ಅಧಿಕಾರ ಚಲಾಯಿಸುತ್ತಿರುವವರ ಪ್ರಮಾಣ ಹೀಗಿದೆ. ಕುಷ್ಟಗಿಯಲ್ಲಿ ಅತಿಹೆಚ್ಚು, ಅಂದರೆ ಶೇ ೧೦.೧೧ ರಷ್ಟು, ಗಂಗಾವತಿಯಲ್ಲಿ ಶೇ ೦೮.೮೦ ರಷ್ಟು ಯಲಬುರ್ಗಾದಲ್ಲಿ ಶೇ ೦೭.೩೦ ರಷ್ಟು ಹಾಗೂ ಕೊಪ್ಪಳದಲ್ಲಿ ಶೇ ೦೫.೧೧ ರಷ್ಟು ಇದ್ದಾರೆ.

**ಪಂಚಾಯಿತಿ ಅಧ್ಯಕ್ಷೆ, ಉಪಾಧ್ಯಕ್ಷೆ, ಸದಸ್ಯೆಯಾಗಿದ್ದಾಗ್ಯೂ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾಗಿ ಭಾಗವಹಿಸದಿರುವ ಮಹಿಳೆಯರ ಪ್ರಮಾಣ (ಕೋಷ್ಠಕ-೭)**




ಮೇಲಿನ ಕೋಷ್ಟಕ-೭ ರಲ್ಲಿರುವಂತೆ ಪಂಚಾಯಿತಿಯಲ್ಲಿ ಗೌರವಾನ್ವಿತ ವಾದಂತಹ ಅಧ್ಯಕ್ಷ, ಉಪಾಧ್ಯಕ್ಷ, ಸದಸ್ಯೆಯಂತಹ ಗೌರವಯುತವಾದ ಸ್ಥಾನಗಳನ್ನು ಅಲಂಕರಿಸಿದ್ದಾಗೂ ಅವಳು ಸಾರ್ವಜನಿಕ ಸ್ಥಳಗಳಿಗೆ ಇಂದಿಗೂ ಮುಕ್ತವಾದ ಅವಕಾಶವಿಲ್ಲವಾಗಿದೆ. ಶಾಸನಬದ್ಧವಾಗಿ ಸಾರ್ವಜನಿಕ ಪ್ರದೇಶಗಳಿಗೆ ಎಲ್ಲಾರಿಗೂ ಮುಕ್ತವಾದ ಅವಕಾಶ ನೀಡಲಾಗಿದೆಯಾದರೂ ಅದು ಕೇವಲ ಕಾಗದದ ಮೇಲಷ್ಟೆ ಇದೆ. ಇಂದಿಗೂ ಗ್ರಾಮೀಣ ವಲಯಗಳಲ್ಲಿ ಜಾತಿಯತೆ, ಅಸ್ಪೃಶ್ಯತೆಯ ಕರಾಳ ಛಾಯೆಗಳು ಅಳಿಯದೆ ಉಳಿದುಕೊಂಡಿವೆ. ಸಾಮಾನ್ಯವಾಗಿ ತಾಲ್ಲೂಕ ಪಂಚಾಯಿತಿಗೆ ಬರುತ್ತಿರುವವರೆಲ್ಲಾ ದಲಿತರು ಗ್ರಾಮೀಣ ವಲಯದವರೆ ಆಗಿರುವುದರಿಂದ ತಾಲ್ಲೂಕ ಪಂಚಾಯಿತಿಯಲ್ಲಿ ಅವರು ಎಷ್ಟೆ ಉನ್ನತ ಹುದ್ದೆಯುವಳಗಿದ್ದರೂ ಸಹ ಅವರು ತಮ್ಮ ಊರಲ್ಲಿ ಸಾರ್ವಜನಿಕ ಪ್ರದೇಶಗಳಿಗೆ ನಿರ್ಬಂಧಿಸಲ್ಪಟ್ಟಿರುವವರೆ ಆಗಿರುತ್ತಾರೆ. ಅಂತಹ ಮಹಿಳೆಯರ ಪ್ರಮಾಣ, ಕ್ರಮವಾಗಿ, ಅತಿಹೆಚ್ಚು ಅಂದರೆ ಕುಷ್ಟಗಿ ತಾಲ್ಲೂಕಿನಲ್ಲಿ ಶೇ ೧೪.೧೯ ರಷ್ಟು ಇದ್ದರೆ ಯಲಬುರ್ಗ ತಾಲ್ಲೂಕಿನಲ್ಲಿ ಅದರ ಪ್ರಮಾಣ ಶೇ ೧೧.೩೯ ರಷ್ಟು, ಗಂಗಾವತಿಯಲ್ಲಿ ಶೇ ೧೦.೦೯ ರಷ್ಟು ಹಾಗೂ ಕೊಪ್ಪಳ ತಾಲ್ಲೂಕಿನಲ್ಲಿ ಶೇ ೦೮.೧೩ ರಷ್ಟು ಎಂಬ ಅಂಶವನ್ನು ನಾವು ಗಮನಿಸಿದರೆ ನಾವು ಇಂದು ಸ್ವತಂತ್ರ ಭಾರತದಲ್ಲಿದ್ದೇವಾ? ಎಂಬ ಸಂಶಯ ಮೂಡದಿರದು.

**ಜಾತಿಯ ಕಾರಣದಿಂದಲೇ ತಮ್ಮ ಅಧಿಕಾರವನ್ನು ಮೊಟಕುಗೊಳಿಸಲಾಗುತ್ತದೆ ಎಂದು ಒಪ್ಪುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೮)**




ಮೇಲಿನ ಕೋಷ್ಟಕ-೮ ರಲ್ಲಿರುವಂತೆ ಜಾತಿಯ ಅವೈಚಾರಿಕ ಕಾರಣದಿಂದಲೇ ತಮ್ಮ ಅಧಿಕಾರವನ್ನು ಮೊಟಗುಗೊಳಿಸಲಾಗುತ್ತಿದೆ. ಎಂಬ ಅಂಶವನ್ನು ದಲಿತ ಮಹಿಳೆಯರು ಒಪ್ಪುತ್ತಾರೆ, ಸಮರ್ಥಿಸುತ್ತಾರೆ. ಸಾಮಾನ್ಯವಾಗಿರುವ ಕಲ್ಪನೆಯಂತೆ ದಲಿತರಿಗೆ ಅಧಿಕಾರ ನೀಡಬಾರದು ಅವರಿಗೇನಿದ್ದರೂ ಸೇವಾ ಕಾರ್ಯಗಳೆ ಅವರಿಗೆ ಭೂಷಣ ಎಂಬ ಚಿಂತನೆ ಸಮಾಜದಲ್ಲಿ ಇಂದಿಗೂ ಮುಂದುವರೆಯುತ್ತಿದೆ. ಅದರಲ್ಲಿಯಂತೂ ದಲಿತ ಮಹಿಳೆಗೆ ಅಧಿಕಾರವೇಕೆ ಎಂಬ ಚಿಂತನೆ ಇಂದಿಗೂ ಜೀವಂತವಾಗಿರುವುದರಿಂದಲೇ ಸಾಮಾಜಿಕ ಜೀವನದ ಅತ್ಯುನ್ನತವಾದ ರಾಜಕೀಯ ಸಂಸ್ಥೆಯಲ್ಲಿ ಮಹಿಳೆಯ ಪಾಲು ಕಡಿಮೆಯಾಗುತ್ತಿದೆ. ಹಿಂದಿನಿಂದಲೂ ಮೇಲ್ಜಾತಿಗಳು ಸಾಮಾಜಿಕ ಜೀವನದಲ್ಲಿನ ಅತ್ಯಂತ ತಳ ಸಮುದಾಯದ ಮಹಿಳೆಗೆ ಅಧಿಕಾರವನ್ನು ಈ ಮೇಲ್ವರ್ಗಗಳು ಎಂದಿಗೂ ಮಾನ್ಯ ಮಾಡಲಾರವು. ಒಂದು ರೀತಿಯಲ್ಲಿ ಅವಳಿಗೂ ನನಗ್ಯಾಕೆ ರಾಜಕೀಯ ಎಂಬ ಕಾರಣದಿಂದಲೇ ರಾಜಕೀಯದಿಂದ ದೂರ ಉಳಿಯುತ್ತಲೇ ಬಂದಿದ್ದಾಳೆ. ಪಂಚಾಯಿತಿಯಲ್ಲಿನ ಮೇಲ್ವರ್ಗಗಳ ಹಿಡಿತದಲ್ಲಿರುವ ಪಂಚಾಯತಿಯಂತಹ ಸಂಸ್ಥೆಗಳನ್ನು ಅವರಿಗೆ ನಿರ್ಧರಿಸುವವರಾಗಿರುವ ಕಾರಣ ದಲಿತ ಮಹಿಳೆ ಅವರ ಎದುರಿಗೆ ಅಧಿಕಾರ ಚಲಾಯಿಸಲು ಆಗುತ್ತಿಲ್ಲ. ಅಲ್ಲದೆ ತನಗಿರುವ ಜಾತಿಯ ಕಾರಣದಿಂದಲೇ ಈ ಬಗೆಯ ಸಂಕುಚಿತತೆಗೆ, ನಿರ್ಲಕ್ಷ್ಯತೆಗೆ, ಬಲಿಯಾಗುತ್ತಲೇ ಅಧಿಕಾರ ರಹಿತ ಆಡಳಿತ ನೆಡೆಸುವಂತಾಗಿದೆ. ಎಲ್ಲಾ ಅಧಿಕಾರವನ್ನು ಮೇಲ್ವರ್ಗಗಳೆ ಅನುಭವಿಸುತ್ತಿರುವುದರಿಂದ ದಲಿತ ಮಹಿಳೆ ತನ್ನ ಜಾತಿಯ ಕಾರಣದಿಂದಲೇ ಹಿಂದುಳಿಯುತ್ತಿದ್ದಾಳೆ. ಇಂತಹ ಅಧಿಕಾರ ರಹಿತ ದಲಿತ ಮಹಿಳೆಯರ ಪ್ರಮಾಣ ಕ್ರಮವಾಗಿ, ಕೊಪ್ಪಳ ತಾಲ್ಲೂಕಿನಲ್ಲಿ ಶೇ ೦೫.೪೦ ರಷ್ಟು ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೦೭.೧೦ ರಷ್ಟು ಕುಷ್ಟಗಿಯಲ್ಲಿ ಶೇ ೦೯.೧೧ ರಷ್ಟು ಹಾಗೂ ಶೇ ೦೯.೧೧ ರಷ್ಟು ಇರುವುದನ್ನು ಗಮನಿಸಿದರೆ ನಗರ ಪ್ರದೇಶಗಳಲ್ಲಿಯೂ ಜಾತಿಯ ಹೊರತಾದ ಅಧಿಕಾರ ಚಲಾವಣೆ ಸಾಧ್ಯವಿಲ್ಲ ಎಂದು ಪರಿಭಾವಿಸಬಹುದು.

## ಮೀಸಲಾತಿ ಬೇಕು ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೯)




ಮೇಲಿನ ಕೋಷ್ಟಕ-೯ ರಲ್ಲಿರುವಂತೆ ಶೋಷಿತ ಸಮುದಾಯಗಳನ್ನು ಮೇಲಕ್ಕೆ ತರುವಲ್ಲಿ ಮೀಸಲಾತಿಯು ಅತ್ಯಂತ ಸಹಾಯಕವಾಗಿದೆ. ತಳ ಸಮುದಾಯಗಳಿಗೆ, ಮಹಿಳೆಯರಿಗೆ ಸಾಮಾಜಿಕ ಮುಖ್ಯನೆಲೆಗೆ ತರುವಲ್ಲಿ ಇದು ತುಂಬ ಪುರೋಗಾಮಿಯಾದ ಕಾರ್ಯವನ್ನು ಕ್ರಿಯಾಶೀಲವಾಗಿ ನಿರ್ವಹಿಸುತ್ತಲಿದೆ. ಮೀಸಲಾತಿಯ ಚಿಂತನೆ ಇಲ್ಲದಿದ್ದಲ್ಲಿ ಇಂದಿಗೂ ತಳಸಮುದಾಯಗಳು ಮುಖ್ಯವಾಹಿನಿಯಿಂದ ತುಂಬ ಹಿಂದೆಯೇ ಉಳಿಯಬೇಕಾಗಿತ್ತು. ಮೀಸಲಾತಿಯ ಚಿಂತನೆಯನ್ನು ರಾಜಕೀಯ ಪರಿಭಾಷೆಯಲ್ಲಿ ತುಂಬ ಹೆಚ್ಚಾಗಿ ಕಾಣಬಹುದಾಗಿದೆ. ಮೀಸಲಾತಿಯಡಿಯಲ್ಲಿ ಇಂದು ಸಾವಿರಾರು ಮಹಿಳೆಯರು ಅಧಿಕಾರದ ಹತ್ತಿರಕ್ಕೆ ಬರುತ್ತಿದ್ದಾರೆ. ಇಂತಹ ಮೀಸಲಾತಿಯನ್ನು ಹಲವಾರು ದಲಿತ ಮಹಿಳೆಯರು ಮುಕ್ತ ಮನಸ್ಸಿನಿಂದ ಸ್ವಾಗತಿಸಿದ್ದಾರೆ. ಅಂತಹವರ ಪ್ರಮಾಣ, ಕ್ರಮವಾಗಿ ಗಂಗಾವತಿ ತಾಲ್ಲೂಕಿನಲ್ಲಿ ಶೇ ೪೪.೬೦ ರಷ್ಟು, ಕೊಪ್ಪಳ ತಾಲ್ಲೂಕಿನಲ್ಲಿ ಶೇ ೪೦.೦೧ ರಷ್ಟು, ಕುಷ್ಟಗಿ ತಾಲ್ಲೂಕಿನಲ್ಲಿ ಶೇ ೩೬.೦೮ ರಷ್ಟು ಹಾಗೂ ಯಲಬುರ್ಗ ತಾಲ್ಲೂಕಿನಲ್ಲಿ ಶೇ ೩೮.೬೦ ರಷ್ಟು ಇದೆ. ಇದರಿಂದ ನಮಗೆ ತಿಳಿದುಬರುವುದೇನೆಂದರೆ ಪಂಚಾಯಿತಿಯಂತ ರಾಜಕೀಯ ಸಂಸ್ಥೆಗೆ ಪಾಲುದಾರರಾಗುತ್ತಿರುವ ದಲಿತ ಮಹಿಳೆಯರ ಮೀಸಲಾತಿಯು ಇರದಿದ್ದಲ್ಲಿ ತಾವೆಲ್ಲಿರುತ್ತಿದ್ದವೊ ಎಂದು ಹೇಳುತ್ತಿದ್ದಾರೆ.

### ಮೀಸಲಾತಿಯೇ ಬೇಡ ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೧೦)




ಮೇಲಿನ ಕೋಷ್ಟಕ-೧೦ ರಲ್ಲಿರುವಂತೆ ದಲಿತ ಸಮುದಾಯಗಳ, ಮಹಿಳಾ ಸಮುದಾಯಗಳ ಮೇಲೆತ್ತುವಿಕೆಗೆ ಉಪಯುಕ್ತವಾಗಿರುವ ಮೀಸಲಾತಿಯಂತಹ ಚಿಂತನೆಯೂ ಹತ್ತು ಹಲವು ಬಗೆಗಳಲ್ಲಿ ತುಂಬ ಸಹಾಯವಾಗಿದೆ. ಮೀಸಲಾತಿ ಎಂಬುದು ಕೇವಲ ವ್ಯವಸ್ಥೆಯು ರೂಪಿಸುವ ಗಟ್ಟಿಮುಟ್ಟಿನ ಸೈದ್ಧಾಂತಿಕ ವಿಚಾರವಾಗಿದೆ. ಅಂಚಿನ ಸಮುದಾಯಗಳಿಗೆ ಮೀಸಲಾತಿಯೂ ಒಂದು ರೀತಿಯಲ್ಲಿ ವಿಭಿನ್ನ ಬಗೆಯ ಆಯಾಮವಾಗಿದೆ. ಮೀಸಲಾತಿಯಂತಹ ಉದಾತ್ತ ಚಿಂತನೆಯಿಂದಾಗಿ ಇಂದು ತಳ ಸಮುದಾಯಗಳು, ಮಹಿಳೆಯರು, ಅಲಕ್ಷಿತರು ಸಮಾಜದ ಮುಖ್ಯವಾಹಿನಿಗೆ ಬರುತ್ತಿದ್ದಾರೆ. ಇದೊಂದು ಒಳ್ಳೆಯ ಬೆಳವಣಿಗೆ ಸರಿಯಷ್ಟೆ, ಆದರೆ ಪಾರಂಪರಿಕವಾಗಿ ತಮ್ಮ ಮೇಲೆ ನಿರಂತರವಾಗಿ ಹೇರಿಕೊಂಡೆ ಬರಲಾಗಿ ಅಸ್ಪೃಶ್ಯತೆ, ಜಾತೀಯತೆಯಂತಹ ಅನೈತಿಕ ವಿಚಾರಗಳಿಗೆ ಬಲಿಯಾಗಿರುವ ದಲಿತರಿಗೆ ಮೀಸಲಾತಿಯ ಸವಿಯೂ ಇಂದಿಗೂ ಸಿಗಲಾರದಂತಾಗಿದೆ. ಮೀಸಲಾತಿಯನ್ನೇ ಮೇಲ್ಜಾತಿಗಳು ತಮ್ಮ ಸ್ವಾರ್ಥ ಸಾಧನೆಗೆ ಹಲವಾರು ಬಗೆಯಲ್ಲಿ ಸ್ವಪ್ರತಿಷ್ಠೆಗಾಗಿ, ಸ್ವಹಿತಾಸಕ್ತಿಗಾಗಿ ಬಳಸಿಕೊಳ್ಳುತ್ತಿದ್ದಾರೆ. ದಲಿತ ಮಹಿಳೆಗೆ ಸಿಕ್ಕಿರುವ ಮೀಸಲಾತಿ ಒಂದು ಅಸ್ತ್ರವನ್ನಾಗಿ ಮೇಲ್ಜಾತಿಗಳ ಕೈಯಡಿಯಲ್ಲಿ ನರಳುತ್ತಿದೆ. ದಲಿತ ಮಹಿಳೆಗೆ ಒದಗಿಬಂದಿರುವ ಅಧಿಕಾರ ರಹಿತ ಬದುಕಿಗೆ ಆಸರೆಯಾಗಬೇಕಿದ್ದ ಮೀಸಲಾತಿಯೂ ಅವಳಿಗೊಂದು ಕೆಡಕಾಗಿ ಕಂಡು ಬರುವಂತಿದೆ. ಗ್ರಾಮ ಪಂಚಾಯತಿಗೆ ಹೋಲಿಸಿದರೆ ಇಲ್ಲಿ ಅದರ ಪ್ರಮಾಣ ಕಡಿಮೆ. ದಲಿತ ಮಹಿಳೆಯರಿಗೆ ಸಿಗುತ್ತಿರುವ ಮೀಸಲಾತಿ ಬೇರೆಯವರ ಪಾಲಾಗುತ್ತಿರುವುದರಿಂದ, ತಮ್ಮ ಬದಲಿ ಬೇರೆಯವರು ಅಧಿಕಾರ ಚಲಾಯಿಸುತ್ತಿರುವುದರಿಂದಲೇ ಅವಳು ಮೀಸಲಾತಿಯೇ ಬೇಡ ಎನ್ನುತ್ತಿದ್ದಾಳೆ. ಅಂತಹ ಮಹಿಳೆಯರ ಪ್ರಮಾಣ ಕ್ರಮವಾಗಿ, ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೨೧.೧೬ ರಷ್ಟು, ಕುಷ್ಟಗಿಯಲ್ಲಿ ಶೇ ೨೪.೩೪ ರಷ್ಟು, ಗಂಗಾವತಿಯಲ್ಲಿ ಶೇ ೧೭.೬೧ ರಷ್ಟು, ಹಾಗೆಯೇ ಕೊಪ್ಪಳ ತಾಲ್ಲೂಕಿನಲ್ಲಿ ಶೇ ೧೪.೪೦ ರಷ್ಟು ಇದೆ.

ಮುಂದಿನ ಸಾರಿ ಚುನಾವಣೆಗೆ ನಿಲ್ಲಲ್ಲು ಒಲವಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಟಕ-೧೧)




ಮೇಲಿನ ಕೋಷ್ಟಕ-೧೧ ರಲ್ಲಿರುವಂತೆ ಮಹಿಳಾ ಸಬಲೀಕರಣದಂತಹ ಧ್ಯೇಯದ ಸಾಧನೆಗಾಗಿ ಅವಳ ರಾಜಕೀಯ ಸಹಭಾಗಿತ್ವವು ಬೇಕೆ ಬೇಕು. ಸಬಲೀಕರಣ ಎಂದರೆ ಕೇವಲ ಕೌಟುಂಬಿಕ, ಸಾಮಾಜಿಕ ಅಂಶಗಳ ಜೊತೆ ಜೊತೆಗೆ ಭೌತಿಕ, ಅಭೌತಿಕ ಜಗತ್ತಿನಲ್ಲಿಯೂ ನಿಯಂತ್ರಣ ಸಾಧಿಸುವಂತಾದಾಗ ಮಾತ್ರ ಅವಳ ನೈಜ ರಾಜಕೀಯ ಪ್ರತಿನಿಧೀಕರಣ ಸಾಧ್ಯ, ರಾಜಕೀಯದಲ್ಲಿ ಭಾಗಿಯಾಗುವ ಪ್ರತಿಯೊಬ್ಬರೂ ಸಹ ಸ್ವನಿಯಂತ್ರಣ, ನಿರ್ಧಾರ ತಗೆದುಕೊಳ್ಳುವಿಕೆ, ನೀತಿನಿಯಮಗಳನ್ನು ನಿರ್ಧರಿಸುವಲ್ಲಿ ಅತ್ಯಂತ ಮುಖ್ಯ ಪಾತ್ರ ರಾಜಕೀಯ ಪ್ರತಿನಿಧೀಕರಣದಿಂದ ಸಾಧ್ಯ. ಒಂದು ಸಾಮಾಜಿಕ ಕೇಂದ್ರದ ಅತಿಮುಖ್ಯವಾದ ಸಂಸ್ಥೆಯೆ ರಾಜಕೀಯ ಸಂಸ್ಥೆ. ಅಧಿಕಾರದ ಎಲ್ಲಾ ಬಗೆಯ ಶಕ್ತಿ ಕೇಂದ್ರಗಳು ಇಲ್ಲಿಯೇ ಅಡಕವಾಗಿರುತ್ತವೆ. ಆದ್ದರಿಂದ ರಾಜಕೀಯದಿಂದ ಹೊರತಾದ ಸಾಮಾಜಿಕ ಸಂಸ್ಥೆಯೇ ಇಲ್ಲ. ಇಂದಿನ ಪ್ರತಿಯೊಂದು ರಂಗಗಳಲ್ಲಿಯೂ ರಾಜಕೀಯದ ಇರುವಿಕೆ ಅಸ್ತಿತ್ವವನ್ನು ನಾವು ಕಾಣುತ್ತೇವೆ. ಇಂತಹ ರಾಜಕೀಯದಲ್ಲಿ ಪಾಲುದಾರಳಾಗಲೂ ಮಹಿಳೆಗೂ ಅವಕಾಶ ನೀಡಲಾಗಿದೆ. ಮೀಸಲಾತಿಯ ಮೂಲಕ ಅವಳು ರಾಜಕೀಯಕ್ಕೆ ಬಂದು ತನ್ನ ಅಸ್ತಿತ್ವ ಸಾಬೀತು ಪಡಿಸಿದ್ದಾಳೆ. ಮೀಸಲಾತಿಯ ಕಾರಣದಿಂದಲೇ ಅವಳಿಗೆ ಮನೆಯಿಂದ ಹೊರಬರಲು ಸಾಧ್ಯವಾಯಿತು ಎಂದು ಹೇಳುತ್ತಾಳೆ. ಆದ್ದರಿಂದಲೇ ಅವಳು ಮೀಸಲಾತಿಯ ಅಗತ್ಯವನ್ನು ಎತ್ತಿ ಹೇಳುತ್ತಾಳೆ. ಮೀಸಲಾತಿ ಅಡಿಯಲ್ಲಿ ಮುಂದಿನ ಸಾರಿ ಚುನಾವಣೆಗೆ ನಿಲ್ಲಲು ಒಲವಿರುವವರ ಪ್ರಮಾಣ ಕ್ರಮವಾಗಿ ಗಂಗಾವತಿ ತಾಲ್ಲೂಕಿನಲ್ಲಿ ಶೇ ೩೧.೪೪ ರಷ್ಟು, ಕೊಪ್ಪಳ ತಾಲ್ಲೂಕಿನಲ್ಲಿ ಶೇ ೩೯.೬೧ ರಷ್ಟು, ಕುಷ್ಟಗಿ ತಾಲ್ಲೂಕಿನಲ್ಲಿ ಶೇ ೩೯.೬೧ ರಷ್ಟು ಹಾಗೆಯೇ ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೪೧.೨೭ ರಷ್ಟು ಇದೆ.

ಮುಂದೆಂದೂ ಚುನಾವಣೆಗೆ ನಿಲ್ಲುವುದಿಲ್ಲ ಎನ್ನುತ್ತಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಟಕ-೧೨)




ಮೇಲಿನ ಕೋಷ್ಟಕ-೧೨ ರಲ್ಲಿರುವಂತೆ ರಾಜಕೀಯ ದೊಂಬರಾಟಗಳಲ್ಲಿ ತನಗೆ ಸಂವಿಧಾನ ಬದ್ಧವಾಗಿ, ಶಾಸನಾತ್ಮಕವಾಗಿ ಒದಗಿ ಬಂದಿರುವಂತ ಅಧಿಕಾರವನ್ನು ಕಾಣದ ಕೈಗಳು ತಮ್ಮ ಹಿಡಿತದಲ್ಲಿಟ್ಟುಕೊಂಡು ಇವಳನ್ನು ಅಧಿಕಾರ ವಂಚಿತಳನ್ನಾಗಿ ಮಾಡಿದ್ದು, ಹಾಗೆಯೇ ಹೆಸರಿಗೆ ಮಾತ್ರವೇ ನಾಮಮಾತ್ರ ಕಾರ್ಯಾಂಗದಂತೆ ಕಾರ್ಯನಿರ್ವಹಿಸುವುದು ಸಹ ಅವಳಿಗೆ ಅಸಹನೀಯವಾಗಿದೆ. ತನಗೆ ಸಿಕ್ಕಿರುವ ಅಧಿಕಾರದಿಂದ ಯಾವುದೇ ಪ್ರಯೋಜನವು ತನ್ನಿಂದಾಗಲಿಲ್ಲ. ಎಂದರೆ ಅದು ಇದ್ದರೆಷ್ಟು, ಇಲ್ಲದಿದ್ದರೆಷ್ಟು ಎಂಬ ಅಂತಿಮ ಹಂತಕ್ಕೆ ಅವಳು ಬಂದು ನಿಂತಿದ್ದಾಳೆ. ದೀನ ದಲಿತರನ್ನು, ಮಹಿಳೆಯನ್ನು ಉದ್ಧಾರ ಮಾಡಲೆಂದೆ ಜಾರಿಯಲ್ಲಿ ತರಲಾದ ಮೀಸಲಾತಿಯ ಅನ್ವಯ ಸುಮಾರು ಮಹಿಳೆಯರು ರಾಜಕೀಯಕ್ಕೆ ತುಂಬ ಉತ್ಸುಕತೆಯಿಂದಲೇ ಬಂದರು. ಆದರೆ ಇಲ್ಲಿನ ಭ್ರಷ್ಟತೆ, ಜಾತಿ ಆಧಾರಿತವಾದ ಸ್ಥಾನಗಳನ್ನು ಕಂಡು ಅವಳು ಏತಕ್ಕಾದರೂ ರಾಜಕೀಯಕ್ಕೆ ಬಂದೆನೋ ಎಂದು ಮರುಗುತ್ತಿದ್ದಾಳೆ. ಆ ಕಾರಣದಿಂದಲೇ ಮೀಸಲಾತಿಯೇ ಬೇಡ ಎನ್ನುತ್ತಿದ್ದಾಳೆ. ಯಾವುದೋ ಒಂದು ಘನ ಉದ್ದೇಶಕ್ಕೋಸ್ಕರ ಆರಂಭವಾದಂತಹ ಮೀಸಲಾತಿ ಅದರ ಉದ್ದೇಶಕ್ಕೆ ವಿರುದ್ಧವಾದ ಕಾರ್ಯಗಳು ನಡೆಯುವಂತಾದರೆ ಅದರಿಂದ ಯಾವುದೇ ಪ್ರಯೋಜನ ಇಲ್ಲ ಎಂಬುದು ದಲಿತ ಮಹಿಳೆಯ ಅಳಲು ಆ ಕಾರಣದಿಂದಲೇ ಹಲವಾರು ದಲಿತ ಮಹಿಳೆಯರು ಮೀಸಲಾತಿಯಿಂದ ಯಾವುದೇ ಉಪಯೋಗ ಇಲ್ಲ ಅದು ಮೇಲ್ಜಾತಿಯವರಿಗೆ ಯಾಕೆ ತನ್ನ ಅಧಿಕಾರವನ್ನು ಧಾರೆ ಎರೆದು ಕೊಡಬೇಕು ಎಂಬ ಕಾರಣದಿಂದ ಮೀಸಲಾತಿಯೇ ಬೇಡ ಎನ್ನುತ್ತಿರುವಂತೆ ದಲಿತ ಮಹಿಳೆಯರ ಸಂಖ್ಯೆ ಅಧಿಕವಿದೆ. ಕೊಪ್ಪಳ ತಾಲ್ಲೂಕಿನಲ್ಲಿ ಸುಮಾರು ಶೇ ೭.೫೯ ರಷ್ಟು, ಕುಷ್ಟಗಿಯಲ್ಲಿ ಶೇ ೯.೦೬ ರಷ್ಟು, ಗಂಗಾವತಿಯಲ್ಲಿ ಶೇ ೫.೪೧ ರಷ್ಟು ಹಾಗೂ ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೩.೯೦ ರಷ್ಟು ಇದೆ. ಗ್ರಾಮ ಪಂಚಾಯಿತಿಯಲ್ಲಿ ಮಹಿಳೆಗೆ ಹೋಲಿಸಿದರೆ ತಾಲ್ಲೂಕ ಪಂಚಾಯಿತಿಯ ದಲಿತ ಮಹಿಳೆಯ ಪಾಲು ಕಡಿಮೆಯೇ ಎನ್ನಬೇಕು.

ರಾಜಕೀಯ ಪಕ್ಷಗಳೊಂದಿಗೆ ಒಡನಾಟ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಠಕ-೧೩)




ಮೇಲಿನ ಕೋಷ್ಠಕ ೧೩ರಲ್ಲಿರುವಂತೆ ಚುನಾಯಿತ ತಾಲ್ಲೂಕ ಪಂಚಾಯಿತಿಯಲ್ಲಿನ ದಲಿತ ಮಹಿಳೆಯರಿಗೆ ಸ್ಥಳೀಯ, ರಾಜ್ಯ ಮಟ್ಟಗಳಲ್ಲಿನ ರಾಜಕೀಯ ಪಕ್ಷ, ನಾಯಕರುಗಳ ಪರಿಚಯವೆ ಇಲ್ಲ. ರಾಜಕೀಯವಾಗಿ ಮುಂದೆ ಬರಲು ಅವರು ಬಂದಿಲ್ಲ ಒಂದು ರೀತಿಯಲ್ಲಿ ಯಾವುದಾದರೂ ರಾಜಕೀಯ ಪಕ್ಷದೊಂದಿಗೆ ಒಡನಾಟ ಇಟ್ಟುಕೊಂಡಿರಬೇಕು. ಇದರಿಂದ ಅವರು ತಮ್ಮ ರಾಜಕೀಯ ಇಚ್ಛಾಶಕ್ತಿಯನ್ನು ಸಾಕಾರಗೊಳಿಸಿಕೊಳ್ಳಲು ಸಾಮಾಜಿಕ ಜೀವನದಲ್ಲಿ ಒಂದು ಉತ್ತಮ ಸ್ಥಾನ ಪಡೆಯಲು ಇದು ಅಗತ್ಯವೂ, ಅನಿವಾರ್ಯವೂ ಆಗಿದೆ. ಆದರೆ ದಲಿತ ಮಹಿಳೆಯ ಪಾಲಿಗೆ ರಾಜಕೀಯ ಪಕ್ಷಗಳ ನಾಯಕರುಗಳು ಕೇವಲ ಅಶ್ವಾಸನೆ ಕೊಡುತ್ತಲೇ ದಲಿತ ಮಹಿಳೆಯರನ್ನು ಮತ ದೋಚುವ ಓಟ್‌ಬ್ಯಾಂಕ್‌ಗಳಂತೆ ಬಳಸಿಕೊಳ್ಳುತ್ತಲೆ ಬಂದಿದ್ದಾರೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ದಲಿತ ಮಹಿಳೆಗೆ ರಾಜಕೀಯದಲ್ಲಿ ಒಂದು ಭದ್ರನೆಲೆ ಸಿಗಲೂ ರಾಜಕೀಯ ಪಕ್ಷಗಳೊಂದಿಗೆ ಬಾಂಧವ್ಯ, ಒಡನಾಟ ಅತ್ಯಂತ ಅಗತ್ಯವಾಗಿದೆ. ಆದರೆ ವಾಸ್ತವದಲ್ಲಿ ಅದಾಗುತ್ತಿಲ್ಲ. ಕಾರಣ ಎಂದರೆ ದಲಿತ ಮಹಿಳೆಯ ರಾಜಕೀಯ ಜಾಗೃತಿಯ ಕುರಿತು ರಾಜಕೀಯ ಪಕ್ಷಗಳಿಗೆ ಅರಿವೆ ಇಲ್ಲದಿರುವುದು. ರಾಜಕೀಯ ಪಕ್ಷಗಳೊಂದಿಗೆ ಒಡನಾಟ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ ಹೀಗಿದೆ. ಯಲಬುರ್ಗಾ ತಾಲ್ಲೂಕಿನಲ್ಲಿ ಶೇ ೧೦.೬೦ ರಷ್ಟು, ಕುಷ್ಟಗಿಯಲ್ಲಿ ಶೇ ೦೭.೪೩ ರಷ್ಟು, ಕೊಪ್ಪಳದಲ್ಲಿ ಶೇ ೧೩.೭೫ ರಷ್ಟು ಹಾಗೆಯೇ ಗಂಗಾವತಿಯಲ್ಲಿ ಶೇ ೧೧.೯೧ ರಷ್ಟು ಇದೆ.

**ತಾಲ್ಲೂಕ ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ**

ತಾಲ್ಲೂಕ ಪಂಚಾಯಿತಿಯಲ್ಲಿ ಚುನಾಯಿತರಾಗಿರುವ ದಲಿತ ಮಹಿಳೆಯರಿಗೆ ರಾಜಕೀಯ ತುಂಬ ಹೊಸದು. ಹಲವರು ಗ್ರಾಮ ಪಂಚಾಯಿತಿಯಿಂದ ಬಂದವರಾದರೆ, ಇನ್ನು ಹಲವರು ಹೊಸ ಮುಖಗಳೇ. ಸಾಮಾನ್ಯವಾಗಿ ತಾಲ್ಲೂಕ ಪಂಚಾಯಿತಿಗಳು ಆಯಾ ತಾಲ್ಲೂಕು ಕೇಂದ್ರಗಳಲ್ಲಿಯೇ ಇರುವುದರಿಂದ ಇಲ್ಲಿ ಅಸ್ಪೃಶ್ಯತೆಯನ್ನು ಬಿಟ್ಟರೆ ಉಳಿದಂತೆ ಜಾತಿಯ ಸಂರಚನೆಗಳು ಸದಾ ಜಾಗೃತವಾಗಿಯೇ ಕಾರ್ಯನಿರ್ವಹಿಸುತ್ತಿರುತ್ತವೆ. ತಾಲ್ಲೂಕ ಪಂಚಾಯಿತಿಗೆ ಬರುವ ಎಲ್ಲಾ ಸದಸ್ಯರು ಗ್ರಾಮೀಣ ವಲಯದಿಂದಲೇ ಬಂದವರಾಗಿರುವುದರಿಂದ ಅವರಿಗೆ ತಮ್ಮ ಹಿಂದಿನ ನಂಬಿಕೆ, ಕಟ್ಟುಪಾಡು, ನೀತಿ, ನಿಯಮಗಳು ಯಾವುದೇ ಕಾರಣಕ್ಕೂ ಬದಲಾಗದೆ ಮುಂದುವರೆಯುತ್ತಿರುತ್ತವೆ. ಮೇಲ್ನೋಟಕ್ಕೆ ಇಲ್ಲಿ ಎಲ್ಲಾ ಚನ್ನಾಗಿದೆ ಎಂದು ತಿಳಿದರೂ ಸಹ ಅಂತರ್ಯದಲ್ಲಿ ಜಾತಿಯ ವಿಷಚಕ್ರಗಳು ಎಲ್ಲಾ ವರ್ತುಲಗಳಿಂದ ಅವರ ಸುತ್ತಲು ಸುತ್ತುತ್ತಿರುತ್ತವೆ.

ಹೀಗೆ ಸದಾನಿಯಂತ್ರಿತ ಸ್ಥಿತಿಯಲ್ಲೇ ದಲಿತ ಮಹಿಳೆಯ ಅಧಿಕಾರ ರಚನೆಯನ್ನು ಅವಳ ರಾಜಕೀಯ ಸಹಭಾಗಿತ್ವದಡಿಯಲ್ಲಿ ಕಾಣಬಹುದು. ಅಧಿಕಾರ ಎಷ್ಟೆ ದೊಡ್ಡದಾಗಿದ್ದರೂ ಕೂಡ ಅದು ಜಾತಿಯನ್ನು ತಿರಸ್ಕರಿಸಿ ನಡೆಯಲಾರದು. ಅಧಿಕಾರ ಎಂಬುದು ಶಾಸನಾತ್ಮಕವಾದ ಕ್ರಮವಾಗಿದ್ದರೂ ಅದು ಸದಾ ಸ್ಥಾಪಿತ ಪ್ರಭುತ್ವದ ಎದುರು ಶರಣಾಗಿಯೇ ನಡೆಯುತ್ತಿರುತ್ತದೆ. ಜಾತಿಯನ್ನು ಮೀರಿ ಅಧಿಕಾರ ತನ್ನ ಅಸ್ತಿತ್ವ ಕಂಡುಕೊಳ್ಳಲು ಏನಾದರೂ ಬಯಸಿದರೆ ಸಮುದಾಯದಿಂದ ಹೊರಗೆ ನಡೆಯುವಂತಹ ದುಸ್ಸಾಹಸಕ್ಕೆ ಅವರು ಇಳಿಯಬೇಕಾಗುತ್ತದೆ. ಚುನಾಯಿತ ದಲಿತ ಮಹಿಳೆಯ ಸ್ಥಿತಿಯನ್ನು ನಾವು ಈ ಮೇಲಿನ ವಿಚಾರ ಸರಣಿಯನ್ನು ನೋಡಿದರೆ ಅವಳ ರಾಜಕೀಯ ಭವಿಷ್ಯ, ಅಸ್ತಿತ್ವ, ಅರಿವಾಗಬಲ್ಲದು. ಆದ್ದರಿಂದಲೇ ಜಾತಿಯನ್ನು ಕುರಿತು ಡಾ.ಬಿ.ಆರ್. ಅಂಬೇಡ್ಕರರು ಹೀಗೆ ನಿರ್ವಚಿಸುತ್ತಾರೆ." ಜಾತ್ಯಾಂಧತೆ ಕೇವಲ ಮಾನಸಿಕ ಜಾಡ್ಯವಾಗಿಲ್ಲ ಅದೊಂದು ಲಾಭದಾಯಕ ಕುತಂತ್ರವಾಗಿದೆ. ಜಾತಿ ಪದ್ಧತಿಯ ಉಳಿವಿನಲ್ಲಿ ಸವರ್ಣಿಯರ ಆರ್ಥಿಕ, ಸಾಮಾಜಿಕ, ಧಾರ್ಮಿಕ ಅಂಶಗಳು ಅಡಗಿವೆ. ರಾಜಕೀಯ ಹಿಡಿತವು ಇದರ ಮೂಲಕ ಸುಲಭವಾಗುವುದು." (ವಜ್ರಮುಟ್ಟಿ, ೪೩.೧೯೯೩) ಆದ್ದರಿಂದಲೇ ಜಾತಿ ಮೇಲ್ವರ್ಗಗಳಿಗೆ ಸಾಮಾಜಿಕ ಜೀವನವನ್ನು ನಿಯಂತ್ರಿಸುವಂತ ತಮ್ಮ ಹಿಡಿತದಲ್ಲಿಟ್ಟುಕೊಳ್ಳುವಂತ ಒಂದು ಸಾಧನ, ಪರಿಕರವಾಗಿಯೇ ಬಳಕೆಯಾಗುತ್ತಿದೆ. ಹಿಂದೂ ಧರ್ಮದಡಿಯಲ್ಲಿನ ಶ್ರೇಷ್ಠ ಕನಿಷ್ಠ ಮೌಲ್ಯಗಳೇ ವಾಸ್ತವವಾಗಿ ಅಧಿಕಾರವನ್ನು ಕ್ರಮಬದ್ಧವಾಗಿ ವಿಭಜಿಸುತ್ತಿರುವುದು. ಅವುಗಳ ಮೂಲಕವೇ ಅಧಿಕಾರ ವಿಕೇಂದ್ರಿಕರಣವಾಗಿ ಮೇಲ್ಜಾತಿಗಳಿಗೆ ಆಳುವ ಸ್ಥಾನ ಸಿಕ್ಕರೆ, ತಳಸಮುದಾಯಗಳಿಗೆ ಗುಲಾಮರಾಗುವ ಸ್ಥಾನ ಸಿಕ್ಕಿದೆ. ತಮಗೆ ಹಿಂದಿನಿಂದಲೂ ಸಾಮಾಜಿಕ ಜೀವನದಲ್ಲಿ ಯಾವ ಬಗೆಯ ಅಧಿಕಾರವನ್ನು ನೀಡಲಾಗಿತ್ತೋ ಅದೇ ಸ್ಥಾನದಲ್ಲಿ ದಲಿತ ಸಮುದಾಯಗಳು ಇಂದಿಗೂ ಇರಬೇಕು ಎಂಬುದು ಮೇಲ್ಜಾತಿಗಳ ಚಿಂತನೆಯಾಗಿದೆ.

ಸಮಕಾಲೀನ ಸಂದರ್ಭದಲ್ಲಿ ದಲಿತ, ಅಲಕ್ಷಿತ ಸಮುದಾಯಗಳಲ್ಲಿನ ರಾಜಕೀಯ ಅಸ್ತಿತ್ವವನ್ನು ಕುರಿತು ಶ್ರೀ ಕುಲದೀಪ್ ನಯ್ಯರ್‌ರವರು ತುಂಬ ಮಾರ್ಮಿಕವಾಗಿ ನುಡಿಯುತ್ತಾರೆ. "ಅಸ್ಪೃಶ್ಯತೆಯ ನಿವಾರಣೆಯಾಗಲಿ, ಭೇದವಾಗಲಿ, ಹರಿಜನರಿಗೆ ಮೀಸಲು ಸ್ಥಾನಗಳಾಗಲಿ ಸುಧಾರಿಸಿಲ್ಲ. ಹಲವಾರು ದಶಕಗಳ ಹಿಂದೆ ದಲಿತರ, ಹರಿಜನರ ಬಗ್ಗೆ ಮೇಲ್ಜಾತಿಯವರಿಗೆ ಇವರ ಬಗ್ಗೆ ಇದ್ದ ತಿರಸ್ಕಾರದ ಸ್ವರೂಪವೇ ಇಂದಿಗೂ ಮುಂದುವರೆಯುತ್ತಿದೆ."

(ಅದೇ) ಮೇಲಿನ ಇಬ್ಬರ ಸೈದ್ಧಾಂತಿಕ ವಿಚಾರಗಳನ್ನು ಪರಾಮರ್ಶಿಸಿದಾಗ ದಲಿತ ಮಹಿಳಾ ರಾಜಕೀಯದ ಪರಿಭಾಷೆಯ ಬಗ್ಗೆ ಅರಿವು ಉಂಟಾಗಬಲ್ಲದು. ಸನಾತನ ಚಿಂತನೆಗಳೆ ಇಂದಿಗೂ ವಾಸ್ತವವಾಗಿ ಸಮಾಜವನ್ನು ಆವರಿಸಿಕೊಂಡು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದೆ.

**೩.೫.೨. ದಲಿತ ಮಹಿಳಾ ರಾಜಕೀಯ ನಡಿಗೆಯಲ್ಲಿ ತಡೆಯಾಗಿರುವ ಜಾತಿ ಪ್ರಶ್ನೆ**

ಹಿಂದಿನ ಚರ್ಚೆಯಲ್ಲಿ ಗಮನಿಸಿದಂತೆ ಜಾತಿಯ ನಿಯಂತ್ರಣಗಳು, ಸಂರಚನೆಗಳು ಎಲ್ಲವನ್ನು ಗಮನಿಸಿದಾಗ ವರ್ತಮಾನದಲ್ಲಿಯೂ ಸಹ ಸಮಾಜ ಎಷ್ಟೇ ಆಧುನಿಕತೆಯೆಡೆಗೆ ಮುಖ ಮಾಡಿದ್ದರೂ ಸಹ ಜಾತಿಯ ಹಿಡಿತ, ಸಂಕೋಲೆಗಳು ಯಾವುದೇ ಬಗೆಯ ಬದಲಾವಣೆಗೆ ಒಳಗಾಗದೆ ಗಟ್ಟಿಯಾಗಿ ಎದೆಯೊಡ್ಡಿ ಬದಲಾವಣೆಗೆ ತಡೆಯೊಡ್ಡಿವೆ. ಇಂತಹ ಜಾತಿಯ ರೂಪದಲ್ಲಿ ನರಳುವ ತಳಸಮುದಾಯಗಳು ಹಾಗೂ ಮಹಿಳಾ ಸಮುದಾಯಗಳ ರಾಜಕೀಯ ಎಚ್ಚರ ಎಂದಿಗೂ ಸಾಧ್ಯವೇ ಆಗುವುದಿಲ್ಲ. ನಿರಂತರವಾಗಿ ಇವರ ಮೇಲೆ ಮೇಲ್ವರ್ಗಗಳ ನಿಯಂತ್ರಣ ಬಂದಿಲ್ಲ ಒಂದು ಬಗೆಯಲ್ಲಿ ಇರುತ್ತದೆ. ಆದ್ದರಿಂದ ದಲಿತ, ತಳಸಮುದಾಯ ಹಾಗೂ ದಲಿತ ಮಹಿಳಾ ಸಮುದಾಯಗಳ ಕುರಿತು ಖ್ಯಾತ ಚಿಂತಕರಾದ ಶ್ರೀ ಮೊಗಳ್ಳಿ ಗಣೇಶರು ತುಂಬ ವಿವೇಚನಾಯುತವಾದ ವಿಚಾರ ಮಂಡಿಸುತ್ತಾರೆ. ಇವರ ಪ್ರಕಾರ ದಲಿತ ವರ್ಗದ ರಾಜಕಾರಣ ಎಂದರೆ "ಒಂದು ಸಮುದಾಯದ ಎಚ್ಚರ ಮತ್ತು ಸಮಷ್ಠಿಯಲ್ಲಿ ಬೇರೆಯದ್ದನ್ನು ಹೇಳುವಂತಹದ್ದು, ಇಡೀ ಸಮುದಾಯದ ಅಂತಃ ಶಕ್ತಿಯನ್ನು ತನ್ನ ಇರುವಿಕೆ ಮತ್ತು ಭವಿಷ್ಯವನ್ನು ಸೂಚಿಸುವಂತೆ ಹುದ್ದೆ, ರಾಜಕಾರಣ ತನಗೆ ಬೇಕಾದ ಪ್ರಭುತ್ವವನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಕಟ್ಟಿಕೊಳ್ಳುವ ಒಂದು ವ್ಯವಸ್ಥೆ, ವಿಶಾಲಾರ್ಥದಲ್ಲಿ ರಾಜಕಾರಣ ಎಂದರೆ ಸಾಮಾಜಿಕ ಮೌಲ್ಯಗಳೆಲ್ಲವನ್ನು ಒಟ್ಟು ಅರ್ಥಪೂರ್ಣವಾಗಿ ನಿಭಾಯಿಸುವ ಇಚ್ಛಾಶಕ್ತಿಯ ಹಾಗೆಯೇ ಸಮುದಾಯದ ಸಾಮೂಹಿಕ ಕನಸುಗಳ ಪ್ರತಿಬಿಂಬದ ವಾಸ್ತವ ಕ್ರಿಯೆ ಚಾರಿತ್ರಿಕ ಪ್ರಜ್ಞೆ ಮತ್ತು ಸಂಸ್ಕೃತಿಯ ಸಂಯೋಗದೊಂದಿಗೆ ಹುಟ್ಟುವ ರಾಜಕಾರಣ ವಿಚಾರಗಳನ್ನು ಯಾವೊತ್ತು ಎಲ್ಲರನ್ನು ಸಮೀಪಿಸುತ್ತವೆ. ಆದರೆ ಜಾತಿ ಮತ್ತು ಧರ್ಮದಂತಹ ವಿಚಾರಗಳಿಂದ ಹುಟ್ಟಿದ ರಾಜಕಾರಣ ಎಂದಿಗೂ ಮನುಷ್ಯ ಪರವಾಗಿರುವುದಿಲ್ಲ." ಇಂತಹ ಕ್ಯಾಸ್ಟ್ ಕೆಮಿಸ್ಟ್ರಿಗಳ ಅಡಿಯಲ್ಲಿ ದಲಿತ ಮಹಿಳಾ ರಾಜಕಾರಣಕ್ಕೆ ತಡೆಯಾಗಿರುವ ಸಾಮಾಜಿಕ, ಧಾರ್ಮಿಕ, ಸಂಸ್ಕೃತಿಕ ಹಾಗೂ ವಾಸ್ತವಿಕ ಅಂಶಗಳನ್ನು ಅರಿಯುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ. ಪರಂಪರೆಯುದ್ದಕ್ಕೂ ದಲಿತ ಮಹಿಳಾ ಸಮುದಾಯದ ಮೇಲೆ ನಡೆದ ಚಾರಿತ್ರಿಕ ಶೋಷಣೆಯಿಂದ ದೈಹಿಕವಾಗಿ, ಮಾನಸಿಕವಾಗಿ ಅವಳು ದಾಸ್ಯದ ರೂಪದಲ್ಲೇ ತನ್ನನ್ನು ತಾನು ಸಮರ್ಪಿಸಿಕೊಂಡು ಮೇಲ್ವರ್ಗದವರ ಮಾತಿನ ಅಣತಿಯಂತೆ ಧಾಳವಾಗಿ ಬಳಕೆಯಾಗುತ್ತಿದ್ದಾಳೆ.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ದಾಸ್ಯದ ಪ್ರಶ್ನೆ ಮಹಿಳೆಯಿಂದ ಆರಂಭಗೊಂಡಿದ್ದಾದರೂ ನಂತರದಲ್ಲಿ ಅದು ಮಹಿಳೆಯ ಆಚೆಗೂ ಹರಡಿದ್ದಾಗಿದೆ. ಸಮಾಜ ರಚನೆಯ ಐತಿಹಾಸಿಕ ಸಂದರ್ಭವೊಂದರಲ್ಲಿ ಪುರುಷನನ್ನು ಆಶ್ರಯಿಸುವ ಪ್ರವೃತ್ತಿ ಬಾಗಿಗೊಂಡು ಆತನು ಜನಾಂಗ ಮತ್ತು ವರ್ಗಾಧಾರಿತವಾದ ದಾಸ್ಯಕ್ಕೆ ಒಳಗಾಗಿದ್ದಾನೆ. ಈ ಅಂಶವಲ್ಲಿ ದಾಸ್ಯದ ಪ್ರಶ್ನೆ ಮಹಿಳೆಯ ಆಚೆಯೂ ಹರಡಿರುವುದನ್ನು ದೃಢಪಡಿಸುತ್ತಿದೆ ಈ ಲಿಂಗವ್ಯವಸ್ಥೆಯ ಕ್ರಮವೊಂದು ಅವರ ವ್ಯಾಪ್ತಿಯನ್ನು ಮೀರಿದ ಸಂದರ್ಭದಲ್ಲಿ ಅದು ಸ್ತ್ರೀಯ ದಾಸ್ಯವನ್ನು ಪರಿಭಾವಿಸದ ಕ್ರಮ ವಿಸ್ತರಿಸಿದ್ದು ಯಾವುದು ಎಂಬುದು ಗಮನಾರ್ಹ ವಿಚಾರ." ಜಾತಿ, ಜನಾಂಗ ವರ್ಗ ವ್ಯವಸ್ಥೆಯಂತಹ ಮೌಲ್ಯಗಳೆ

ಪಿತೃಪ್ರಧಾನತೆಯು ಪುರುಷಾಪರೇದ ಘಟಕವಾಗಿದ್ದರೂ ಅದು ಕುಟುಂಬದ ಅಸ್ತಿತ್ವವನ್ನು ಹಾಗೆಯೇ ಉಳಿಸಿಕೊಂಡಿರುತ್ತದೆ. ಈ ನೆಲೆಯೊಳಗೆ ಮಹಿಳೆಯ ಮೇಲೆ ನಡೆಯುವ ಎಲ್ಲಾ ಬಗೆಯ ಲಿಂಗ ಸಂಬಂಧಿಯಾದ ವಿಭಜನ ಕ್ರಮಗಳು ಅವಳನ್ನು ತಿರಸ್ಕೃತವಾಗಿಯೇ ಪರಿಭಾವಿಸುತ್ತಿವೆಯಲ್ಲದೇ ಹಾಗೆಯೇ ನಡೆಸಿಕೊಳ್ಳುತ್ತವೆ.

ಪ್ರತಿಯೊಂದು ಆಡಳಿತ ಚಲಾವಣೆ, ಪ್ರಾಬಲ್ಯ, ಪ್ರಭುತ್ವಗಳನ್ನು ಸಾಧಿಸಲು ವ್ಯಕ್ತಿಗಳಿಗೆ ಮುಖ್ಯವಾಗಿ ಅವರ ಜಾತಿ, ಧರ್ಮಗಳ ಬೆಂಬಲ ಅತ್ಯಗತ್ಯ, ವಾಸ್ತವವಾಗಿ ನಮ್ಮನ್ನು ನಮ್ಮ ಸಮಾಜವನ್ನು ನಿಯಂತ್ರಿಸುತ್ತಿರುವುದು ಇವುಗಳೇ. ಜಾತಿ, ಧರ್ಮಗಳ ಹೊರತಾದ ರಾಜಕಾರಣವನ್ನು ನಾವು ಕಾಣಲು ಸಾಧ್ಯವೇ ಇಲ್ಲ. ರಾಜಕಾರಣದ ಸೈದ್ಧಾಂತಿಕ ಬೆನ್ನೆಲುಬುಗಳೇ ಜಾತಿ, ಧರ್ಮಗಳು ಎಂದರೆ ತಪ್ಪಾಗಲಾರದು. ಮೇಲ್ವರ್ಗದಲ್ಲಿನ ವ್ಯಕ್ತಿಗಳಿಗೆ ಧರ್ಮ, ಜಾತಿಗಳು ಬೆಂಬಲ ನಿರಂತರವಾಗಿ ಅವರ ಜೀವನದುದ್ದಕ್ಕೂ ಒಳ್ಳೆಯ, ಕೆಟ್ಟ ಕೆಲಸಗಳಿಗೂ ಬೆನ್ನೆಲುಬಾಗಿ, ಬೆಂಗಾವಲಾಗಿ ನಿಂತಿರುತ್ತವೆ. ಅವರೆ ತಳಸಮುದಾಯಗಳ, ಮಹಿಳೆಯ ವಿಷಯದಲ್ಲಿ ತುಂಬ ಕಠೋರವಾದ ನೀತಿಯನ್ನು ಅನುಸರಿಸುತ್ತವೆ. ಅಧಿಕಾರ ಎಂಬುದು ಕೇವಲ ತಮಗಷ್ಟೆ ಸೀತವಾಗಿರಬೇಕು. ಎಂಬ ಸನಾತನ ಚಿಂತನೆ ಇವರಲ್ಲಿರುವುದರಿಂದಲೇ ದಲಿತ ಮಹಿಳಾ ಸಮುದಾಯ ಬರಿಗೈ ಆಡಳಿತ ನಡೆಸಬೇಕಾದ ಸನ್ನಿವೇಶ ನಿರ್ಮಾಣವಾಗಿದೆ.

ಜಾತಿ ಅಥವಾ ಜನಾಂಗದ ಶ್ರೇಷ್ಠತೆಯ ಹೆಸರಿನಲ್ಲಿ ಹುಟ್ಟಿಕೊಳ್ಳುವ ತಾರತಮ್ಯ, ಉತ್ಪಾದನಾ ಹಕ್ಕುಗಳ ನೆಲೆಯಲ್ಲಿ ಕೇಂದ್ರೀಕೃತಗೊಳ್ಳುವಲ್ಲಿ ವರ್ಗ ತಾರತಮ್ಯ ಇತ್ಯಾದಿಗಳೆಲ್ಲವೂ ಸ್ತ್ರೀಯ ಸುತ್ತಲೂ ವರ್ತುಲಗಳನ್ನು ನಿರ್ಮಿಸುತ್ತವೆ. ಈ ರೀತಿಯ ಬಲಪಡಿಸುವಿಕೆಯ ದಾರಿ ಸ್ತ್ರೀಯನ್ನು ಜಾತಿ, ಜನಾಂಗ ಹಾಗೂ ವರ್ಗಾಧಾರಿತವಾದ ವಿಭಜನೆಗೊಳಪಡಿಸುವುದೇ ಆಗಿದೆ. ಈ ವಿಭಜನೆಯೂ ಮಹಿಳೆಯನ್ನು ಅವಳ ಸ್ಥಾನದ ಮೇಲ ಒಟ್ಟಾರೆಯಾಗಿಯೂ, ವ್ಯಕ್ತಿಗತವಾಗಿಯೂ ಪ್ರಭಾವ ಬೀರುವುದಾಗಿರುತ್ತದೆ. ಎಲ್ಲಾ ಮಹಿಳೆಯರು ವರ್ಗ, ಹಾಗೂ ಜನಾಂಗ ಹಿತಾಸಕ್ತಿಗೆ ಒಳಗಾಗುತ್ತಲೇ ಪರಸ್ಪರರಿಗೆ ಅಭಿಮುಖರಾಗಿ ನಿಲ್ಲುತ್ತಾರೆ. ಮಹಿಳೆಯರ ಒಳಗೂ ಶೋಷಕ, ಶೋಷಕಿ ಎಂಬೆರೆಡು ನೆಲೆಗಳು ನಿರ್ಮಾಣವಾಗುತ್ತವೆ.[೧೨೧] ಹೀಗಾಗಿ ಮಹಿಳೆ ಎಂಬ ಅಖಂಡತ್ವವಾದ ವ್ಯಕ್ತಿಯನ್ನು ಸಮುದಾಯ, ಜಾತಿ, ವರ್ಗಾಧಾರಿತವಾಗಿ ಬೇರೆಬೇರೆಯಾಗಿ ರೂಪಿಸಿರುವುದು ಚಾರಿತ್ರಿಕ ಸತ್ಯ, ಜಾತಿ ವರ್ಗಗಳ ಹಿಡಿತದಲ್ಲೇ ಪಿತೃ ಪ್ರಧಾನ ಮೌಲ್ಯಗಳ ಹಿತಾಸಕ್ತಿಗೆ ಅನುಗುಣವಾಗಿ ಸಮಾಜ ವರ್ಗೀಕರಣಗೊಳ್ಳುವ ಸಂದರ್ಭದಲ್ಲಿ ಅದರ ಚಹರೆ ಕರಾಳರೂಪ ಸ್ವಲ್ಪ ಬದಲಾವಣೆಯಾಗಬಹುದಾದರೂ ಅದರ ಮೌಲ್ಯಗಳ ಆಚರಣೆಯಲ್ಲಿ ಬಿಗಿ ಹಿಡಿತ ಎಂದಿಗೂ ಬದಲಾಗದು. ಹೀಗೆ ಸಾಮಾಜಿಕ ಜೀವನದಲ್ಲಿನ ಆಚರಣಾತ್ಮಕ ಪಿತೃಪ್ರಧಾನ ಮೌಲ್ಯಗಳು ದಲಿತ ಮಹಿಳಾ ಅಧಿಕಾರಕ್ಕೆ ಹಿನ್ನಡೆಯನ್ನುಂಟು ಮಾಡುತ್ತಲೆ ಅವಳನ್ನು ಅಧಿಕಾರ ವಂಚಿತಗೊಳಿಸಿವೆ. ಪಿತೃಪ್ರಧಾನತೆಯ ಮೂಲ ಆಶಯವೇ ಪುರುಷಾಧಿಕಾರ ಪ್ರತಿಷ್ಠಾಪಿಸುವುದಾಗಿರುವುದರಿಂದ ಜಾತಿಯ ಹಿನ್ನೆಲೆಯಲ್ಲಿ ಸಂಕುಚಿತಗೊಂಡಿರುವ ದಲಿತ ಮಹಿಳೆ ತನ್ನ ಸಮುದಾಯದ ಪುರುಷನ ಜೊತೆಗೆ ಬೇರೆ ವರ್ಗದ ಪುರುಷನಿಗೂ ತನ್ನ ಅಧಿಕಾರ ಧಾರೆ ಎರೆದಿದ್ದಾಳೆ.

### ೩.೫.೩. ದಲಿತ ಮಹಿಳಾ ಅಧಿಕಾರದ ಪ್ರಶ್ನೆ

ದಲಿತ ಮಹಿಳಾ ಅಧಿಕಾರದ ಪ್ರಶ್ನೆ ಎಂದಾಗ ಅಲ್ಲಿ ಪುರುಷನು ಮಹಿಳೆಯ ಮೇಲೆ ಹೊಂದಿರುವ ಅಧಿಪತ್ಯ, ಆಧಿಕೃತ, ಶಾಸ್ತ್ರೀಯ ಪದ್ಧತಿಗಳನ್ನು ನಾವು ಪರಾಮರ್ಶಿಸಬೇಕಾಗುತ್ತದೆ. ಅಂದರೆ ದಲಿತ ಮಹಿಳೆಗೆ ದೊರೆಯುವ

ಅಧಿಕಾರವೂ ಅವಳ ಗಂಡ, ತಂದೆ, ಸಹೋದರರಂತೆ ಪುರುಷರ ಬೆಂಗಾವಲಿನಲ್ಲಿಯೇ ಜೋಡನೆಯಾಗಿರುತ್ತದೆ, ಅಷ್ಟೇ ಉಳಿದಂತೆ ಅವಳಿಗೆ ತನ್ನ ಅಧಿಕಾರವಾಗಲಿ, ಅಥವಾ ರಾಜಕಾರಣವನ್ನು ಒಳಗೊಂಡಂತೆ ಯಾವುದೇ ಬಗೆಯ ಶಾಸನೀಯ ಅಧಿಕಾರಗಳ ಮೇಲೆ ಅವಳಿಗೆ ನಿಯಂತ್ರಣವಾಗಲಿ, ಅಥವಾ ಪ್ರಭುತ್ವ ಸಾಧಿಸುವಿಕೆಯಾಗಲಿ ಇರುವುದಿಲ್ಲ. ಆದ್ದರಿಂದಲೇ ದಲಿತ ಮಹಿಳೆ ರಾಜಕಾರಣ ಕುರಿತ ಚರ್ಚೆಯೊಳಗೆ ಅವಳ ರಾಜಕೀಯ ಪ್ರಶ್ನೆಯೊಂದಿಗೆ ಅಡಕವಾಗಿರುತ್ತದೆ. ಎಂದರೆ ತಪ್ಪಾಗಲಾರದು. ಅರ್ಥಾತ್ 'ಗೌರವಾನ್ವಿತ ಮಹಿಳೆ' ಎಂಬ ಸ್ಥಾನವು ಮಹಿಳೆಗೆ ತಂದೆಯಿಂದ ಅಥವಾ ಗಂಡನಿಂದ ಇಲ್ಲ ಮಗನಿಂದ ದೊರೆಯಬೇಕಾಗುತ್ತದೆ. ಇಂತಹ ಸಿದ್ಧಮಾದರಿಯ ಸ್ಥಾನಗಳಲ್ಲಿಯೇ ಅವಳು ತನ್ನ ತನವನ್ನು, ಅಸ್ತಿತ್ವವನ್ನು ಕಾಣುವ ದಲಿತ ಮಹಿಳೆ ಎಂಬ ಅಮೂರ್ತರೂಪಕ್ಕೆ ಈ ಬಗೆಯ 'ಗೌರವಾನ್ವಿತ ಮಹಿಳೆ' ಎಂಬುವುದನ್ನು ಅವಳ ಕುಟುಂಬ, ಮೇಲ್ವರ್ಗ ಈ ಎರಡೂ ವರ್ಗಗಳು ಪ್ರತ್ಯಕ್ಷವಾಗಿ ಪರೋಕ್ಷವಾಗಿಯೇ ಒಳಗೊಳಗೆಯೇ ಆರಾಧಿಸುತ್ತದೆ. ಇಂತಹ ರೆಡಿಮೇಡ್ ಸ್ಥಿರೀಕೃತ ಪಾತ್ರಗಳು ದಲಿತ ಮಹಿಳೆಗೆ ಹಂಗಿನ ರಾಜಕಾರಣಕ್ಕೆ ಎಡೆಮಾಡಿಕೊಡುತ್ತಿವೆ. ಇಂತಹ ಸಿದ್ಧಮಾದರಿಯ ಪಾತ್ರಗಳಿಗೆ ತನ್ನನ್ನು ತಾನು ಸಮರ್ಪಿಸಿಕೊಂಡ ದಲಿತ ಮಹಿಳೆ ರಾಜಕಾರಣದ ಕೀಲಿ ಕೈಯನ್ನು ಪುರುಷನಿಗೆ ವಹಿಸಿ ತಾನೊಂದು ಷೋಕೇಸಿನ ಗೊಂಬೆಯಂತೆ ನಿಂತಿದ್ದಾಳೆ. ಅಧಿಕಾರದಿಂದ ಇವಳಿಗೆ ಸಾಮಾಜಿಕ ಜೀವನದ ಗೌರವಾನ್ವಿತ ಸ್ಥಾನ ಸಿಕ್ಕಿದೆಯಾದರೂ ಅದು ಕೇವಲ ತೋರಿಕೆಯದ್ದು ಎಂಬುದು ಅವಳಿಗೆ ಬಿಡಿಸಿ ಹೇಳಲು ಸಾಧ್ಯವಾಗುತ್ತಿಲ್ಲ. ಮೇಲಿನ ಈ ಎರಡೂ ಅಂಶಗಳನ್ನು ಗಮನಿಸಿದಾಗ ದಲಿತ ಮಹಿಳೆ ಅಧಿಕಾರಕ್ಕೆ ಒದಗಿರುವಂತೆ ಅಡೆತಡೆಗಳ ಅರಿವಾಗದಿರದು. ರಾಜಕೀಯ ಸಂಸ್ಥೆಯಡಿಯಲ್ಲಿ ದಲಿತ ಮಹಿಳೆ ತನಗೂ ಹೊರಗಿನ ಪ್ರಪಂಚದಲ್ಲಿ ಒಂದು ಗೌರವಾನ್ವಿತ ಸ್ಥಾನ ಸಿಕ್ಕು, ವಿಮೋಚನೆ ದೊರೆಯಬಹುದೆಂಬ ಅವಳ ಕನಸು ಭಗ್ನಗೊಂಡಿದೆ.

ದಲಿತ ಮಹಿಳಾ ಸ್ಥಿತಿಗತಿಯನ್ನು ಚಿತ್ರಿಸುವಾಗ ನಾವು ಅಲ್ಲಿ ಕಪ್ಪು ಮಹಿಳೆಯನ್ನು ಅರಿಯುವುದು ಸೂಕ್ತ, ಏಕೆಂದರೆ ಕಪ್ಪು ಮಹಿಳೆ ಹಾಗೂ ದಲಿತ ಮಹಿಳೆಯ ಶೋಷಣೆಯಲ್ಲಿ ಸೌಮ್ಯತೆ ಕಂಡುಬಂದಿದೆ. ಇಬ್ಬರ ಶೋಷಣೆಗೆ ಮುಖ್ಯ ಕಾರಣವೇ ವರ್ಗರಾಜಕಾರಣ. ಭಾರತೀಯ ಮೇಲ್‌ವರ್ಗದ ಮಹಿಳೆಯರು ದಲಿತ ಮಹಿಳೆಯ ವಿಚಾರದಲ್ಲಿಯೂ ಸಹ ಪುರುಷರಂತೆ ಶೋಷಕ ಪ್ರವೃತ್ತಿಯಾಗಿವರಾಗಿರುತ್ತಾರೆ. ಎಂಬ ಅಂಶವು ಕಪ್ಪು ಮಹಿಳೆಯ ವಿಚಾರದಲ್ಲಿ ಕಂಡು ಬರುತ್ತದೆ. ಇದನ್ನೆ ಜಾತಿ ಹಗ್ಗಿನ್ಸ್ ಹೀಗೆ ವಿಶ್ಲೇಷಿಸುತ್ತಾಳೆ. ಒಂದೇ ವರ್ಗಕ್ಕೆ ಸೇರಿದವರಿಗಿಂತ ಒಂದೇ ಲಿಂಗಕ್ಕೆ ಸೇರಿದ ಮಹಿಳೆಯರ ನಡುವೆ ಹೆಚ್ಚು ಸಮಾನ ಅಂಶಗಳಿವೆ ಎಂಬುದನ್ನು ಅವಳು ನಿರಾಕರಿಸುತ್ತಾಳೆ.

ಅವಳ ವಾದದ ಸಾರಾಂಶ ಹೀಗಿದೆ. ಮೇಲ್‌ವರ್ಗದ ಮಹಿಳೆಯರು ಕೇವಲ ಅವರ ಶ್ರೀಮಂತ ಗಂಡಂದಿರ ಹಾಸಿಗೆಯ ಸಂಗಾತಿಗಳಲ್ಲ. ಅವರನ್ನು ಒಟ್ಟಿಗೆ ಸೇರಿಸುವ ಒತ್ತಾಯದ ನಂಟೂ ಇರುತ್ತದೆ. ಖಾಸಗಿ ಆಸ್ತಿ, ಲಾಭ ಪಡೆಯುವಿಕೆ, ಸೇನಾಶಾಹಿತ್ವ, ಜನಾಂಗೀಯತೆ, ಮತ್ತು ಉಳಿದ ಹೆಂಗಸರ ಶೋಷಣೆಯ ಸಮರ್ಥನೆ ಇವುಗಳಲ್ಲಿ ಮತ್ತು ಉಳಿದ ಹೆಂಗಸರ ಶೋಷಣೆಯ ಸಮರ್ಥನೆ ಇವುಗಳಲ್ಲಿ ಸೇರಿರುವ ಅವರ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಸಿಗೆಯ ಸಂಗಾತಿಗಳೂ ಆಗಿದ್ದಾರೆ. ತಮ್ಮ ಬಂಡವಾಳಶಾಹಿ ಆಸಕ್ತಿಗಳನ್ನು, ಅನುಕೂಲಗಳನ್ನು ಬೆದರಿಸುವ ಕ್ರಾಂತಿಕಾರಿ ಹೋರಾಟವನ್ನು ಹೆಚ್ಚು ಸಂಖ್ಯೆಯ ಶ್ರೀಮಂತ ಮಹಿಳೆಯರು ಬೆಂಬಲಿಸುತ್ತಾರೆಂದು ನಿರೀಕ್ಷಿಸಲಾಗುವುದಿಲ್ಲ. ಇಂಥ ಮಹಿಳೆಯರಿಗಿಂತ ಕಪ್ಪು ಬಿಳಿ ಶ್ರಮಿಕ ವರ್ಗದ ಗಂಡಸರು ವಿಮೋಚನಾ

ಹೋರಾಟದಲ್ಲಿ ಜೊತೆಗಿರುತ್ತಾರೆ. ಆಳುವ ಶಕ್ತಿಗಳು ಎಲ್ಲಾ ಬಗೆಯ ತಾರತಮ್ಯ ಮತ್ತು ತುಳಿತವನ್ನು ಹುಟ್ಟು ಹಾಕುತ್ತವೆ. ಅದರ ಅನುಕೂಲತೆಗಳನ್ನು ಪಡೆಯುತ್ತವೆ." ಮೇಲಿನ ವಿಚಾರ ಸರಣಿಯನ್ನು ಗಮನಿಸಿದರೆ ದಲಿತ ಮಹಿಳೆಯ ರಾಜಕೀಯ ಅಸ್ತಿತ್ವದ ಕುರಿತಂತೆ ಹೆಚ್ಚಿನ ಭಿನ್ನತೆ ಇದರಲ್ಲಿ ಇಲ್ಲ ಎಂದರೆ ತಪ್ಪಾಗಲಾರದು. ರಾಜಕೀಯವಾಗಿ ದಲಿತ ಮಹಿಳೆಗೆ ಎಷ್ಟೇ ದೊಡ್ಡ ಹುದ್ದೆ ಸಿಕ್ಕರೂ ಸಹ ಅವಳು ಸ್ವಜಾತಿಯ ಪುರುಷನ ಜೊತೆ ಜೊತೆಗೆ ಮೇಲ್ವರ್ಗದ ಪುರುಷನಿಗೂ ಅಡಿಯಾಳಾಗಿರಬೇಕಾಗುತ್ತದೆ. ಇಂತಹ ಪುರುಷ ಹಿತಾಸಕ್ತಿಯನ್ನು ಕಾಯ್ದುಕೊಂಡೆ ಅವಳು ಪೂರಕವಾಗಿಯೇ ಸಕಲ ಕಾರ್ಯಗಳು, ಚಟುವಟಿಕೆಗಳು ಹಂಗಿನ ನೆರಳಿನಡಿಯಲ್ಲಿ ನೆಲೆಗೊಳ್ಳುತ್ತಿವೆ. ಹೀಗೆ ಸ್ತ್ರೀಯರೊಳಗೆನೆ ನಡೆಯುವಂತಹ ಅಧಿಕಾರ ಕೇಂದ್ರಿತ ಕಾರ್ಯ ಚಟುವಟಿಕೆಗಳು ಮೇಲ್ ನೋಟಕ್ಕೆ ಒಂದು ಸಮುದಾಯದ ಮಹಿಳೆಗೆ ದೊರೆಯುವಂತಹ ಸವಲತ್ತುಗಳನ್ನು ತೋರಿಸುತ್ತದೆಯಾದರೂ ಅದು ಕೂಡ ತುಂಬ ಕಠಿಣತೆಗೆ ಒಳಪಟ್ಟಿರುವಂತಹದ್ದಾಗಿರುತ್ತದೆ. ಇಂತಹ ಅವೈಚಾರಿಕ ನಿಬಂಧನೆಗಳು ಆಯಾ ಸಮುದಾಯದೊಳಗಿನ ಮಹಿಳೆಯನ್ನು ಆಯಾ ವರ್ಗಕ್ಕೆ 'ಮೀಸಲು ಆಳು' ಆಗಿ ಇಡುವುದರ ಮೂಲಕ ಸ್ತ್ರೀ ದಾಸ್ಯದ ಸ್ವರೂಪವನ್ನು ಲಿಂಗ ವ್ಯವಸ್ಥೆಯ ಆಚೆಯೂ ವಿಸ್ತರಿಸುತ್ತಿದೆ." ಅಂದರೆ ಮಹಿಳಾ ರಾಜಕಾರಣದ ಪ್ರಶ್ನೆಯನ್ನು ಆಯಾ ವರ್ಗಗಳಿಗೆ ಬದ್ಧವಾಗಿಯೇ ಪುನರ್‌ರಚಿಸುತ್ತದೆ. ಮೇಲ್‌ವರ್ಗದ ಮಹಿಳೆಗೆ ಯಾವ ಬಗೆಯ ಅಧಿಕಾರ ನೀಡಬೇಕು? ದಲಿತ ಮಹಿಳೆಗೆ ಯಾವ ರೀತಿಯ ಅಧಿಕಾರ ನೀಡಬೇಕು? ದಲಿತ ಮಹಿಳೆಯ ದಾಸ್ಯದ ವ್ಯಾಪ್ತಿಯನ್ನು ಹೇಗೆ ವಿಸ್ತರಿಸಬೇಕು? ಅಧಿಕಾರ ಏಕಮುಖವಾಗಿಸಬೇಕೋ ಅಥವಾ ಬಹುಮುಖಿಯಾಗಿಸಬೇಕೋ? ಇತ್ಯಾದಿಗಳು ನಿರಂತರವಾಗಿ ಪಿತೃಪ್ರಧಾನ ಮೌಲ್ಯಾಚರಣೆಗಳಡಿಯಲ್ಲಿಯೇ ಬಿಟ್ಟುಬಿಡದೆ ಪುನರ್‌ರೂಪಿಸುತ್ತಲೇ ಇರುತ್ತಿವೆ. ಅಲ್ಲದೆ ಮೇಲ್‌ವರ್ಗದ ಮಹಿಳೆಯ ಮೇಲಿನ ಕಟ್ಟುಪಾಡುಗಳು ಶಿಕ್ಷೆಗೆ ಒಳಗಾದರೆ, ದಲಿತ ಮಹಿಳೆಯ ಪಾಡು ಅಲಕ್ಷಿತ, ತಿರಸ್ಕೃತವಾಗಿಯೇ ಅತಂತ್ರಸ್ಥಿತಿಯೊಳಗೆ ಅವಳ ರಾಜಕೀಯ ಭವಿಷ್ಯವನ್ನು ನಿರ್ಧರಿಸುತ್ತಿವೆ.

ಪ್ರಜಾಪ್ರಭುತ್ವದಲ್ಲಿ ಶೋಷಿತರು, ದಲಿತರು, ಮಹಿಳೆಯರ ಹಕ್ಕುಗಳನ್ನು ಸಾಂವಿಧಾನಾತ್ಮಕವಾದ ಕಾನೂನಿನ ಮೂಲಕವೇ ಸಮಾಜದಲ್ಲಿ ಜಾರಿಗೆ ತರಬೇಕು. ಇದರಿಂದ ಮಾತ್ರ ಪ್ರಬಲವರ್ಗದ ದೌರ್ಜನ್ಯ ಕುಸಿದು ಪ್ರತಿಯೊಬ್ಬ ಪ್ರಜೆಯೂ ಸಮಾನತೆಯಿಂದ ಸಮಾಜಮುಖಿಯಾಗಿ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಜೀವಿಸುವ ಅವಕಾಶಗಳು ನಿರ್ಮಾಣವಾಗುತ್ತವೆ. ಎಂಬ ಕನಸು ಡಾ.ಬಿ.ಆರ್. ಅಂಬೇಡ್ಕರವರ ಕನಸಾಗಿತ್ತು. ಸಮಾನತೆಯ ತತ್ವವನ್ನು ಪ್ರತಿಪಾದಿಸಿದವರಲ್ಲಿ ಅಂಬೇಡ್ಕರರು ಅಗ್ರಮಾನ್ಯ ಆದ್ಯಪ್ರವರ್ತಕರಾಗಿ ನಿಲ್ಲುತ್ತಾರೆ. ಶೋಷಿತ ದಲಿತ ಸಮುದಾಯಗಳ ಜನರ ವಾಸ್ತವ ಸ್ಥಿತಿಗತಿಯನ್ನು ಮನಗಂಡೆ ಅವರ ಸಂವಿಧಾನಾತ್ಮಕ, ಮಾನವ ಹಕ್ಕುಗಳಿಗಾಗಿ ಹಪಾಹಪಿಸಿದ್ದರು. ಆದರೆ ಸಂವಿಧಾನ ಸಮಾನತೆಯ ತತ್ವದಡಿಯಲ್ಲಿ ರೂಪಿಸಿದ ಎಲ್ಲಾ ಮೌಲ್ಯಗಳು ನಿರ್ಜೀವವಾಗಿ ಮತ್ತೆ ಭೂಷ್ವಾ, ಬಂಡವಾಳಶಾಹಿ, ಊಳಿಗಮಾನ್ಯಶಾಹಿ ವ್ಯವಸ್ಥೆಗಳೇ ತಮ್ಮಲ್ಲಿ ಪ್ರಭುತ್ವವನ್ನು ಹಿಡಿದುಕೊಂಡವು. ರಾಜಕೀಯ ಅಧಿಕಾರ ಸಂಪಾದನೆ ಎನ್ನುವುದು ಅಂಬೇಡ್ಕರರ ಪ್ರಕಾರ ದಲಿತರ ಎಲ್ಲಾ ಬಗೆಯ ಸಾಮಾಜಿಕ ರೋಗಗಳಿಗೆ ಸಿದ್ಧೌಷಧಿ ಎಂಬುದು ಅವರ ಅಭಿಮತವಾಗಿತ್ತು. ಆದರೆ ಅಂದಿನಿಂದ ಇಂದಿನವರೆಗೂ ದಲಿತ, ಮತ್ತು ದಲಿತ ಮಹಿಳಾ ಸ್ಥಿತಿಯಲ್ಲಿ ಅಂತಹ ಮಹತ್ತರ ಬದಲಾವಣೆ ಏನು ಕಾಣಲಿಲ್ಲ. ರಾಜಕೀಯ ಅಧಿಕಾರ ಸಿಕ್ಕಿತು ಆದರೆ ಸಾಮಾಜಿಕ ನಿಯಂತ್ರಕ ಶಕ್ತಿಗಳು ಅದನ್ನು ಬಿಟ್ಟುಬಿಡದೆ ತಮ್ಮಲ್ಲಿಯೇ ಇಟ್ಟುಕೊಂಡಿವೆ.

### ೩.೫.೪. ದಲಿತ ಮಹಿಳಾ ರಾಜಕೀಯ ಅಧಿಕಾರ ಮತ್ತು ಯಾಜಮಾನ್ಯ ವ್ಯವಸ್ಥೆ

'ಅಧಿಕಾರ ಎಂಬುದು ಸೇವೆಯ ಕರ್ಮಭೂಮಿಯಂತಿರಬೇಕು' ಎಂದು ಕುವೆಂಪುರವರ ಅಭಿಮತವಾಗಿದೆ. ಅಧಿಕಾರ ವ್ಯಕ್ತಿಯ ಸ್ವವ್ಯಕ್ತಿತ್ವದ ಜೊತೆಗೆ ಚಹರೆಯನ್ನು ಸಮರ್ಪಕವಾದ ರೀತಿಯಲ್ಲಿ ಗುರುತಿಸುವಂತಹದ್ದಾಗಿದೆ. ಅಧಿಕಾರ ಹೊಂದಿರುವ ವ್ಯಕ್ತಿ ತನ್ನ ಸ್ವಸಾಮರ್ಥ್ಯ ಹಾಗೂ ಶಾಸನಬದ್ಧವಾದ ಅಧಿಕಾರದಿಂದ ಸಾಮಾಜಿಕ ರಂಗದಲ್ಲಿ, ರಾಜಕೀಯರಂಗದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಕಾರ್ಯನಿರ್ವಹಿಸಬಲ್ಲರು, ಎಂಬುದೊಂದು ಸಾಮಾನ್ಯ ಪರಿಕಲ್ಪನೆಯಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅಧಿಕಾರವಿರುವವರು ಸಾಮಾಜಿಕ ವರ್ಚಸನ್ನು ಸಹಜವಾಗಿಯೇ ಪಡೆಯಬಲ್ಲರೆಂಬುದೆ ಇದರರ್ಥ. ಆದ್ದರಿಂದ ನಾವು ಮೊದಲು ಅಧಿಕಾರವನ್ನು ರಾಜ್ಯಶಾಸ್ತ್ರ ನೆಲೆಯಲ್ಲಿರಿಯುವುದು ಸೂಕ್ತ.

ಖ್ಯಾತ ಚಿಂತಕರಾದ ಥಾಮಸ್ ಹಾಬ್ಸ್ ತನ್ನ 'ಲೇವಿಯತಾನ್' ಎಂಬಪುಸ್ತಕವನ್ನು ಬರೆದ ಮೇಲೆ 'ಸಾಮರ್ಥ್ಯ' (Power) ಎಂಬ ವ್ಯಾಖ್ಯಾನ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಮುಖವಾಗಿ ಚಾಲನೆಗೆ ಬಂದಿತು. ವರ್ತಮಾನದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಮುಂತಾದವುಗಳಲ್ಲಿ ಪರಿಭಾವಿಸುವಿಕೆ ಭಿನ್ನವಾಗಿರುವುದರಿಂದ 'ಪವರ್' ಎಂಬ ಪದದ ಅರ್ಥವಿವರಣೆಯನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲವಾಗಿದೆ. ರಾಜಕೀಯ ಸಿದ್ಧಾಂತದಲ್ಲಿ ಸಾಮರ್ಥ್ಯ ಎಂಬ ಪದ ಪ್ರಮುಖ ಅಧ್ಯಯನ ವಿಷಯವಾಗಿದೆ. ಇಂದು ರಾಜಕೀಯ ಅಧ್ಯಯನ ನಾಯಕಶಕ್ತಿಯನ್ನು ಹೇಗೆ ಪಡೆದುಕೊಳ್ಳಬಹುದು? ಅದನ್ನು ಯಾವ ಉದ್ದೇಶಕ್ಕೋಸ್ಕರ ಇದನ್ನು ಬಳಸಬೇಕು? ಹೇಗೆ ತೀರ್ಮಾನವನ್ನು ಕೈಗೊಳ್ಳಬೇಕು? ಈ ತೀರ್ಮಾನ ಕೈಗೊಳ್ಳುವಾಗ ಪ್ರಭಾವ ಬೀರುವ ಅಂಶಗಳು ಯಾವುವು? ಯಾವ ಸಂದರ್ಭದಲ್ಲಿ ಎಂತಹ ತೀರ್ಮಾನಗಳು ಹೊರ ಬೀಳುತ್ತವೆ ಎಂಬುದು ಸಾಮರ್ಥ್ಯದ ಮೂಲಕ ಅಧಿಕಾರವಡಿಯಲ್ಲಿ ಬರುತ್ತದೆ.

ಒಂದು ನಿರ್ದಿಷ್ಟ ಗುರಿಸಾಧನೆಗೋಸ್ಕರ ಜನರ ನಡವಳಿಕೆಯನ್ನು ನಿಯಂತ್ರಿಸುವ ಆಜ್ಞಾನುಸಾರ ನಡೆದುಕೊಳ್ಳದವರನ್ನು ಶಿಕ್ಷಿಸಬಹುದಾದ ಪರಿಸ್ಥಿತಿಯನ್ನು ನಾವು ಸಾಮರ್ಥ್ಯ ಅಥವಾ ಅಧಿಕಾರವೆಂದು ಪರಿಭಾವಿಸಿಕೊಳ್ಳಬಹುದಾಗಿದೆ. ಸಾಮಾನ್ಯ ಅರ್ಥದಲ್ಲಿ ತೀರ್ಮಾನ ತೆಗೆದುಕೊಳ್ಳಬಹುದಾದ ಅಧಿಕಾರವೇ ಸಾಮರ್ಥ್ಯ. ರಾಜಕೀಯ ಅಧಿಕಾರ ಅಥವಾ ಸಾಮರ್ಥ್ಯ ಎಂದರೆ ಬೇರೆಯವರ ನಡವಳಿಯನ್ನು ಯಾವುದಾದರೂ ವಿಧವಾದ ಅಧಿಕಾರ ಮುದ್ರೆಯ ಭಯದಿಂದ ನಿಯಂತ್ರಿಸುವುದು. ಅಧಿಕಾರ ಮುದ್ರೆ ಹೆಚ್ಚಿಗಾದಂತೆಲ್ಲ ರಾಜಕೀಯ ಸಾಮರ್ಥ್ಯದ ಪ್ರಮಾಣ ಹೆಚ್ಚಿಗಾಗುತ್ತಿದೆ. ಅಧಿಕಾರ ಎಂದರೆ ಒಂದು ಸ್ಪರ್ಧೆಯಲ್ಲಿ ಗೆಲ್ಲುವ ಸಾಮರ್ಥ್ಯ, ಬೇರೆಯವರ ಅಭಿಪ್ರಾಯ ಹಾಗೂ ಅವರ ಕಾರ್ಯಗಳು ತನ್ನ ಇಚ್ಛೆಯ ಪ್ರಕಾರ ನಡೆಯುವಂತೆ ಮಾಡುವ ಸಾಮರ್ಥ್ಯವೇ ಅಧಿಕಾರ ಎಂಬ ನಿರ್ವಚನದ ತಿರುಳು.

ಅಧಿಕಾರ ಎಂಬುದು ರಾಜಕೀಯ ಅಧಿಕಾರದ ಕೇಂದ್ರವಸ್ತು, ರಾಜಕೀಯ ಅಧಿಕಾರಕ್ಕಾಗಿ ನಡೆಯುವ ಹೋರಾಟ ಇದಾಗಿದೆ. ಆದ್ದರಿಂದ ರಾಜಕೀಯದಿಂದ ಈ ಸಾಮರ್ಥ್ಯವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಅಧಿಕಾರವಿಲ್ಲದೆ ಯಾವ ರಾಜ್ಯವು ಅಧಿಕಾರ ಹೊಂದಿರುತ್ತದೆ.?

ಹೀಗೆ ಅಧಿಕಾರ ಸಂಬಂಧಿ ರಾಜಕೀಯ ಪಾರಿಭಾಷಿಕ ಅಂಶಗಳತ್ತ ಗಮನಹರಿಸಿದಾಗ ಅಧಿಕಾಂದ ಬಗೆಗಿನ ನಮ್ಮ ಕಲ್ಪನಾಲಹರಿ ಬೇರೆಯೇ ಆಗುವುದು. ಅಧಿಕಾರದ ಕುರಿತಂತೆ ಜನ ಸಾಮಾನ್ಯರಿಗೆ ಇಂದಿಗೂ ಯಾಜಮಾನ್ಯಶಾಹಿಯ ಆಡಳಿತವೇ ಬೇಕು ಎಂಬ ಭ್ರಮೆ ಸಾಮಾಜಿಕ ರಂಗದಲ್ಲಿ ಆಳವಾಗಿ ಬೇರೂರಿದೆ. ಆದ್ದರಿಂದ ಅವರು ಅನಾದಿಕಾಲದಿಂದಲೂ ತಮ್ಮ ಕಪಿಮುಷ್ಠಿಯಲ್ಲಿ ನೆಡೆಸುತ್ತ ಬಂದಿರುವ ಅಧಿಕಾರ ತಮಗೆ ದೈವ ದತ್ತವಾಗಿ ಬಂದಿವೆ. ಎಂಬಂತೆ ಸಾಮಾಜಿಕ ಜೀವನವನ್ನು ಆವರಿಸಿಕೊಂಡಿದ್ದಾರೆ. ಹೀಗಿರುವಾಗ ಸಾಮಾಜಿಕ ರಂಗದ ತಳ ಸಮುದಾಯಗಳಿಗೆ ಶಾಸನ ಬದ್ಧ ಅಧಿಕಾರ ಸಿಕ್ಕಾಗಲೂ ಕೂಡ ಅವರಿಗೆ ದಾಸ್ಯ, ಪ್ರಭುತ್ವದ ಭಯಗಳು ಏಕೆಂದರೆ ಸಾಂಪ್ರದಾಯಿಕ ಭಾರತೀಯ ಸಮಾಜವನ್ನೇ ನಿಯಂತ್ರಿಸುತ್ತಿರುವ ನೈಜ ಶಾಸನ ಕೇಂದ್ರವಾಗಿರುವ ಪ್ರಭುತ್ವದ ಕುರುಹುಗಳಾದ ಊಳಿಗಮಾನ್ಯಶಾಹಿ, ಬಂಡವಾಳಶಾಹಿಗಳು ತಳ ಸಮುದಾಯಗಳಿಗೆ ಅಧಿಕಾರದತ್ತಿರ ಬರಲು ಎಂದಿಗೂ ಒಪ್ಪಲಾರವು. ಇಂತಹ ಸ್ಥಿತಿಯಲ್ಲಿ ದಲಿತ ಮಹಿಳೆಯ ರಾಜಕೀಯ ಭವಿಷ್ಯ ಪ್ರಭುತ್ವಗಳಡಿಯಲ್ಲಿಯೇ ನಿಯಂತ್ರಿತವಾಗುತ್ತದೆ. ಅವಳ ಶಾಸನಾತ್ಮಕವಾಗಿ ಅಧಿಕಾರವನ್ನು ಪಡೆದಿದ್ದರೂ ಸಹ ಅವಳು ಅದನ್ನು ಎಂದಿಗೂ ಶಾಸನಬದ್ಧಗೊಳಿಸಿ ಸಮರ್ಪಕವಾಗಿ ಚಲಾಯಿಸಲಾರಳು. ಹಿಂದೆ ಬೇರೆಯೇ ರೂಪದಲ್ಲಿ ಇದ್ದ ದಾಸ್ಯದ ರೂಪ ಇಂದು ಈ ರೀತಿಯಾಗಿ ಚಲಾವಣೆಯಾಗುತ್ತಿದೆ.

ಈ ಮೊದಲೇ ಲಿಂಗತಾರತಮ್ಯಕ್ಕೆ ಒಳಗಾದ ದಲಿತ ಮಹಿಳೆ ಈ ಹಂತದಲ್ಲಿ ತಾರತಮ್ಯಗಳ ಸರಮಾಲೆಯನ್ನೇ ಹಾಕಿಕೊಳ್ಳಬೇಕಾಗಿದೆ. ಇದರಿಂದವಳು ದ್ವಿವಿಧದ ಶೋಷಣೆಗೆ ಬಲಿಯಾಗಬೇಕಾಗಿ ಬಂದಿದೆ. ಅವಳು ತನ್ನ ಕುಟುಂಬದ ಪುರುಷನ ಜೊತೆ ಜೊತೆಗೆ ಮೇಲ್ವರ್ಗದ ಪುರುಷನ ನಿಯಂತ್ರಣದಡಿಯಲ್ಲಿ ಸೀಮಿತಾಧಿಕಾರ ಚಲಾಯಿಸುವಂತಾಗಿದೆ. ಈ ಇಬ್ಬರೂ ಪುರುಷರು ಅವಳ ಅಧಿಕಾರ ಹರಣಮಾಡಿದ್ದರಿಂದ ಅವಳಿಂದ ಯಾವ ಬಗೆಯ ಅಭಿವೃದ್ಧಿಯನ್ನು ನಿರೀಕ್ಷಿಸಲು ಸಾಧ್ಯವೇ. ಪತಿ ಪತ್ನಿಗೆ ಸಂಬಂಧಿಸಿದಂತೆ 'ಒಡೆಯ ಪತಿ' ಎಂದು ದ್ವಿಗುಣಗೊಳ್ಳುತ್ತಿದೆ. ಅವಳ ಪತಿಯಂತೆ ಒಡೆಯನು ವರ್ತಿಸುವುದರ ಮೂಲಕ ರಾಜಕೀಯಕ್ಕೆ ತಾನೇ ಸರ್ವಾಧಿಕಾರಿ ಎಂಬ ಯಾಜಮಾನ್ಯದ ಕಲ್ಪನೆ ಪುರುಷನಲ್ಲಿ ಮತ್ತಷ್ಟು ಹೆಚ್ಚುತ್ತಲೇ ನಡೆಯುತ್ತಿದೆ.

ಮೇಲ್ಜಾತಿಯ ಮಹಿಳೆಯರು ತಮ್ಮ ಸವಲತ್ತುಗಳ ಹಿನ್ನೆಲೆಯಲ್ಲಿ ತಮ್ಮನ್ನು ತಾವು ಒಡತಿಯರು ಎಂದು ಸಾಬೀತು ಪಡಿಸಲು ಮುಂದಾಗುತ್ತಾರೆ. ಲಿಂಗವ್ಯವಸ್ಥೆಯ ಸಂದರ್ಭದಲ್ಲಿ ಕಳೆದುಕೊಳ್ಳುವ ಅಧಿಕಾರವನ್ನು ವರ್ಗದ ಸಂದರ್ಭದಲ್ಲಿ ತುಂಬಿಕೊಳ್ಳಲು ಹಾತೊರೆಯುತ್ತಾರೆ. ಈ ಹಕ್ಕಿನ 'ಬದಲಿ ಬೇಡಿಕೆ'ಯು ಸ್ತ್ರೀಯರ ನಡುವೆ ಶ್ರೇಣೀಕರಣವನ್ನು ನಿರ್ಮಿಸುತ್ತಲೇ ಪಿತೃಪ್ರಧಾನತೆಯನ್ನು ಬಲಪಡಿಸುತ್ತಿದೆ. ಸ್ತ್ರೀಯೇ ಸ್ವಯಂ ಆಗಿ ಪಿತೃ ಪ್ರಧಾನತೆಯನ್ನು ಬಲಪಡಿಸುತ್ತಿದೆ. ಸ್ತ್ರೀಯೇ ಸ್ವಯಂ ಆಗಿ ಪಿತೃ ಪ್ರಧಾನತೆಯನ್ನು ಊರ್ಜಿತಗೊಳಿಸುತ್ತಾಳೆ. ಹಾಗಾಗಿಯೇ ಮಹಿಳೆಯ ದಾಸ್ಯದ ಪ್ರಶ್ನೆಯನ್ನು ಲಿಂಗವ್ಯವಸ್ಥೆಯ ಆಚೆಗೆ ವಿಸ್ತರಿಸಿಕೊಂಡು ಪರಿಭಾವಿಸಿಕೊಳ್ಳಬೇಕಾಗುತ್ತದೆ. ಸ್ವತಃ ಮಹಿಳೆಯನ್ನು ಅನುಮಾನಿಸಬೇಕಾಗುತ್ತದೆ. ಪ್ರಶ್ನಿಸಬೇಕಾಗುತ್ತದೆ.

ಅಧಿಕಾರ ಮಾನ್ಯತೆಯನ್ನು ಪಡೆದ ರಾಜಕೀಯ ಸಂಸ್ಥೆ ಒಬ್ಬ ವ್ಯಕ್ತಿ ಬಲವಂತದಿಂದ ಬೇರೆಯವರಿಂದ ಕೆಲಸವನ್ನು ತನ್ನಿಷ್ಟದ ಪ್ರಕಾರ ಮಾಡಿಸಿದರೆ ಅದು ಅಧಿಕಾರ ಎಂದೆನಿಸಿಕೊಳ್ಳುವುದಿಲ್ಲ. ಒಂದು ನಿರ್ದಿಷ್ಟವಾದ ಗುರಿಯನ್ನು ತಲುಪುವ ಸಲುವಾಗಿ ರಾಜಕೀಯ ಅಧಿಕಾರ ಬಳಕೆಯಾಗಬೇಕಾಗುತ್ತದೆ. ಯಾವ ಉದ್ದೇಶವೂ ಇಲ್ಲದೆ ಬಳಕೆಯಾದ

ಅಧಿಕಾರ ವ್ಯರ್ಥ. ಅದರ ಸಂವಿಧಾನಿಕ ಚಿಂತನೆ, ಆಶಯಗಳಿಗೆ ಸಮಾಜದಲ್ಲಿ ಬೇರೂರಿ ಯಾಜಮಾನ್ಯಶಾಹಿಯ ಚಹರೆಗಳು ಹಾಗೂ ಹಿರಿತ ಕರಾಳವಾಗಿ ಬಲಗೊಳ್ಳುತ್ತಿವೆ. ಅಲ್ಲದೆ ಅವು ಪ್ರಜಾಪ್ರಭುತ್ವವನ್ನೇ ನಿರಾಕರಿಸುತ್ತಲೇ ದಲಿತ ಮಹಿಳೆಯನ್ನು ಅಧಿಕಾರದಿಂದಾಚೆಗೆ ತಳ್ಳುತ್ತವೆ.

### ೩.೪.೫. ದಲಿತ ಮಹಿಳಾ ರಾಜಕೀಯ ಅಧಿಕಾರಕ್ಕೆ ಅಡ್ಡಿಯಾಗುತ್ತಿರುವ ಪುರುಷನ ಪ್ರವೇಶ

ಸಮಾಜದಲ್ಲಿ ವಾಸ್ತವಾಗಿ ಪಿತೃಪ್ರಧಾನ ಮೌಲ್ಯಗಳು ರೂಪಿಸಿರುವ ಕೆಲವು ಮಿಥ್‌ಗಳು ಈಗಲೂ ಯಶಸ್ವಿಯಾಗಿ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿವೆ. ಹೆಣ್ಣು ಎಂದರೆ ಅವಳ ಗೃಹಕಾರ್ಯಗಳಿಗಾಗಿಯೇ ಇರುವವಳು ಅವಳಿಗೇಕೆ ಸಾರ್ವಜನಿಕ ಜೀವನ ಎಂದೆಲ್ಲ ಸಾಂಪ್ರದಾಯಿಕ ಗುಲಾಮ ಸಂತತಿಯ ಚಿಂತನೆಗಳೇ ಇಂದಿಗೂ ಕಾಣಬಹುದು. ಸಮಾಜ ಪ್ರಾರಂಭವಾದಗಿನಿಂದ ಮಹಿಳೆಯು ಪುರುಷನ ಗುಲಾಮಳು ಎಂಬ ಭಾವನೆ ಬೆಳೆದದ್ದು ಅತ್ಯಂತ ಬುದ್ಧಿಗೇಡಿತನ" ಎಂದು ಎಂಗೆಲ್ಸ್ ಅಭಿಪ್ರಾಯ ಪಡುತ್ತಾನೆ. ಆದ್ದರಿಂದ ಸ್ತ್ರೀ ಪುರುಷರ ನಡುವಿನ ಈ ಬಗೆಯ ಅಸಮಾನತೆ ಆದಿ ಸಮಾಜದಲ್ಲಿ. ಆದರೆ ನಾಗರಿಕತೆ ಬೆಳೆದಂತೆ ಹೆಣ್ಣು ಪುರುಷನ ಗುಲಾಮಳಾದದ್ದು ಚಾರಿತ್ರಿಕ ಸತ್ಯ, ಮನುಕುಲದ ಚರಿತ್ರೆಯ ಆರಂಭದಿಂದಲೂ ಮಾನವ ಕುಲದ ಒಂದು ವರ್ಗವನ್ನುಇನ್ನೊಂದು ವರ್ಗ, ಒಂದು ಜಾತಿಯನ್ನು ಇನ್ನೊಂದು ಜಾತಿ ಶೋಷಿಸುತ್ತಲೇ ಬಂದಿದೆ. ಒಟ್ಟು ಮಾನವನನ್ನು ಇನ್ನೊಬ್ಬ ಮಾನವ, ಒಂದು ವರ್ಗವನ್ನು ಇನ್ನೊಂದು ವರ್ಗ, ಒಂದು ಧರ್ಮದವರನ್ನು ಇನ್ನೊಂದು ಧರ್ಮದವರು, ಒಂದು ಜಾತಿಯವರನ್ನು ಇನ್ನೊಂದು ಜಾತಿಯವರು, ಒಂದು ಲಿಂಗದವರನ್ನು ಇನ್ನೊಂದು ಲಿಂಗದವರು ಗುಲಾಮಗಿರಿಯಲ್ಲಿ ಮತ್ತು ಅವಲಂಬನೆಯ ಸ್ಥಿತಿಯಲ್ಲಿ ಇಡುವಂತಹ ಸಂಬಂಧಗಳನ್ನು ಮತ್ತು ಈ ಬಗೆಯ ಸಂಬಂಧಗಳಿಂದ ಉಂಟಾಗುವ ಮನುಷ್ಯ ವಿರೋಧಿ ಚಟುವಟಿಕೆಗಳನ್ನು ನಿರ್ಮೂಲನೆಗೊಳಿಸುವುದೇ ಪ್ರಗತಿಯ ಮೊದಲ ಸೋಪಾನ.''[೧೬] ಆದರೆ ವ್ಯವಸ್ಥೆಯಲ್ಲಿ ಎಲ್ಲವೂ ತದ್ವಿರುದ್ಧವಾಗಿವೆ. ವ್ಯಕ್ತಿಗಳ ಸಾಮಾಜಿಕರಣದಲ್ಲಿ ಅವರ ಕೌಟುಂಬಿಕ ಹಿನ್ನೆಲೆಯೂ ಅತಿ ಮುಖ್ಯವಾಗಿದೆ ಇದು ಮಹಿಳಾ ಅಧ್ಯಯನದ ಪ್ರಮುಖ ಪರಿಕಲ್ಪನೆಯೂ ಆಗಿದೆ. ಸಾಮಾಜಿಕ ಜೀವನದ ಅತ್ಯಂತ ಸಣ್ಣ ಘಟಕವಾಗಿರುವ ಕುಟುಂಬ ಮಹಿಳೆಯ ಮೇಲಿನ ಹಿಡಿತವು ಅತ್ಯಂತ ಬಿಗಿಯಾಗಿದೆ. ಸ್ವತಃ ಕುಟುಂಬವೇ ಒಂದು ಸ್ವಯಂ ಪೂರ್ಣವಾದ ವ್ಯವಸ್ಥೆಯಂತಿದ್ದು ಒಬ್ಬ ಯಜಮಾನನ ಅಧೀನದಲ್ಲಿ ಉಳಿದ ಎಲ್ಲಾ ಸ್ತ್ರೀ ಪುರುಷರು ಇರಬೇಕಾಗುತ್ತಿವೆ. ಇದು ಕೇಂದ್ರಿಕೃತ ವ್ಯವಸ್ಥೆಯಾಗಿದ್ದರೂ ಅದರಲ್ಲಿರುವ ಅಧೀನತೆಯ ಪ್ರಶ್ನೆ. ಸ್ವರೂಪ ಸ್ತ್ರೀಯರ ನಿರಂತರ ಅಧೀನತೆ ಹೆಣ್ಣು ಕುಟುಂಬ, ಸಮಾಜ, ರಾಜಕಾರಣ, ರಾಜಕೀಯಕ್ಕೆ ಸಂಬಂಧಿಸಿದ ಯಾವುದೇ ಅಧಿಕಾರ ವಿಭಾಗವಿರಲಿ ಅವಳ ಪಾತ್ರ ಕೇವಲ ಸಾಂಕೇತಿಕವಾಗಿರುತ್ತದೆ. ವಾಸ್ತವವಾಗಿ ಅದನ್ನು ನಿರ್ವಹಿಸುವವರು ಪುರುಷರೇ ಆಗಿರುತ್ತಾರೆ. ಅವಳೆಷ್ಟೇ ಸುಶಿಕ್ಷಿತಳಾಗಿರಲಿ, ಅವಳ ಹಿಂದೆ ಪುರುಷನ ಹಿಡಿತ ಇದ್ದೆ ಇರುತ್ತದೆ. ಹೀಗೆ ಮಹಿಳೆಯನ್ನು ಅವಳ ಜೀವಮಾನದುದ್ದಕ್ಕೂ ಒಬ್ಬನ ನಂತರ ಒಬ್ಬರಂತೆ ಹಲವು ಪುರುಷರ ನಿರಂತರ ಹಿಡಿತ ಇದ್ದೆ ಇರುತ್ತದೆ.

ಹೀಗೆ ಆರಂಭದಲ್ಲಿಯೇ ಮಹಿಳೆಗೆ ದೊರೆಯುವ ಸಾಮಾಜಿಕರಣದ ಪಾಠ ಅವಳ ಜೀವನ ಪರ್ಯಂತವಾಗಿ ಬೆಂಬಿಡದೆ ಅವಳ ನೆರಳಿನೊಂದಿಗೆ ಹಿಂಬಾಲಿಸುತ್ತಿರುತ್ತವೆ. ಕ್ಷೇತ್ರ ಕಾರ್ಯದಲ್ಲಿ ಅವಲೋಕಿಸಿದಂತೆ ಸುಮಾರು ಜನ ಪುರುಷರು ಹೆಂಡತಿಯ ಹೆಸರಿನಲ್ಲಿಯೇ ರಾಜಕೀಯಕ್ಕೆ ಬರುತ್ತಿದ್ದಾರೆ. ಅಧಿಕಾರದ ಎರಡನೆಯ ಉನ್ನತ

ಹಂತವಾಗಿರುವ ತಾಲ್ಲೂಕು ಪಂಚಾಯಿತಿಯಲ್ಲಿ ದಲಿತ ಮಹಿಳೆ ಗ್ರಾಮ ಪಂಚಾಯತಿಯಲ್ಲಿನ ದಲಿತ ಮಹಿಳೆಗಿಂತ ಭಿನ್ನವಾದ ಅಧಿಕಾರವನ್ನೇನು ಚಲಾಯಿಸುತ್ತಿಲ್ಲ. ಗ್ರಾಮ ಪಂಚಾಯಿತಿಯಲ್ಲಿನ ಸ್ಥಿತಿಯೇ ಕಡಿಮೆ ಪ್ರಮಾಣದಲ್ಲಿ ಇಲ್ಲಿ ಕಂಡು ಬರುತ್ತಿದೆ. ಅವಳ ಅಧಿಕಾರ ನಗರ ಕೇಂದ್ರಿತವಾಗಿರುವುದರಿಂದ ಸ್ವಲ್ಪ ಜಾತೀಯತೆಯ ಪ್ರಮಾಣ ಕಡಿಮೆ ಎಂಬುದನ್ನು ಬಿಟ್ಟರೆ ಉಳಿದಂತೆ ಜಾತಿಯ ಸಂರಚನೆಗಳು ಹಾಗೆಯೇ ಇವೆ. ಮೇಲ್ವರ್ಗದ ಮಹಿಳೆಯಾದರೆ ಅವಳಿಗೆ ತನ್ನ ಗಂಡ, ತಂದೆ, ಸಹೋದರರ ಹಿಡಿತದಲ್ಲಿ ಮಾತ್ರ ತನ್ನ ಅಧಿಕಾರವನ್ನು ನಡೆಸುತ್ತಲೇ ಇದ್ದಾಳೆ. ಅಭಿವೃದ್ಧಿಯ ಕಾರ್ಯಗಳಾಗಲಿ ಅಥವಾ ರಾಜಕೀಯ ಸಬಲೀಕರಣದ ವಿಷಯ ಬಂದಾಗ ಅಲ್ಲಿ ನಿರಂತರವಾಗಿ ಪುರುಷನೇ ತಡೆಯಾಗಿ ತಾನೇ ನೀತಿ ನಿರ್ಧಾರ ತಗೆದುಕೊಳ್ಳುತ್ತಿರುವುದರಿಂದ ಅವಳ ಅಧಿಕಾರದುರುಪಯೋಗವಾಗುತ್ತಿದೆ.

ಪಿತೃ ಪ್ರಧಾನತೆಯೂ ಯಾವಾಗಲೂ ಸಾಮಾಜಿಕ ಸಂಸ್ಥೆಗಳಲ್ಲಿ ತನ್ನ ನಿಯಂತ್ರಣ ಹೊಂದಿರುವಂತೆ ರಾಜಕೀಯ ರಂಗದಲ್ಲಿಯೂ ತನ್ನ ಕರಾಳ ಛಾಯೆಯನ್ನು ಚಾಚಿಕೊಂಡಿದೆ. ಆ ಕಾರಣದಿಂದಲೇ ಮಹಿಳೆ ಅನಾದಿಕಾಲದ ಚರಿತ್ರೆಯಲ್ಲಿ ದಾಖಲಾಗದೆ ದೂರಉಳಿಯುವಂತಾಯಿತು. ಇಂತಹ ವ್ಯವಸ್ಥಿತ ಸಂಚಿನ ವಿರುದ್ಧ ಮಹಿಳೆಗೆ ಧ್ವನಿ ಎತ್ತಲೂ ಸಾಧ್ಯವಾಗಲೇ ಇಲ್ಲ. ಅದರ ಪರಿಣಾಮವಾಗಿ ರಾಜಕೀಯದಲ್ಲಿ ಮಹಿಳೆ ಅಧಿಕಾರ ರಹಿತವಾಗಿಯೇ ಉಳಿಯುವಂತಾಯಿತು. ಇಂತಹ ನಿಕೃಷ್ಟ ಸ್ಥಿತಿಯೇ ಅವಳನ್ನು ರಾಜಕೀಯ ಧ್ರುವೀಕರಣದಿಂದ ನಿರ್ಲಿಪ್ತವಾಗುವಂತೆ ಮಾಡಿತು. ಹೀಗೆ ಲಿಂಗ, ಜಾತಿಯಾಧಾರಿತವಾದ ರಾಜಕಾರಣವನ್ನು ಅರಿಯುವ, ಅದಕ್ಕೆ ಪರ್ಯಾಯವಾಗಿ ತನ್ನ ರಾಜಕಾರಣವನ್ನು ತಾತ್ವಿಕರಿಸಿಕೊಂಡು ಅದರ ಕಾರ್ಯರೂಪಕ್ಕೆ ತೊಡಗುವ ಎಲ್ಲಾ ಸಾಧ್ಯತೆಗಳು ನಿರಾಕರಣಗೊಳ್ಳುತ್ತಲೇ ಇವೆ. ಗಂಡಸಿನ ಹಸ್ತಕ್ಷೇಪವಿಲ್ಲದೆ ಯಾವುದೇ ಬಗೆಯ ಅಧಿಕಾರ ಚಲಾಯಿಸಲು ಸಾಧ್ಯವೇ ಇಲ್ಲ ಎನ್ನುವಂತ ಮನಸ್ಥಿತಿಯನ್ನು ಮಹಿಳೆಗೆ ಮಾನಸಿಕವಾಗಿ ತಯಾರುಗೊಳಿಸಲಾಗಿದೆ.

ಮೇಲಿನ ಗುಣಾತ್ಮಕ, ಋಣಾತ್ಮಕ, ಕ್ರಿಯಾತ್ಮಕ ಅಂಶಗಳನ್ನು ಗಮನಿಸಿದರೆ ಎರಡು ಜಾತಿ, ಜನಾಂಗ, ವರ್ಗ, ಲಿಂಗ ನೆಲೆಯ ಸಾಮಾಜಿಕ ನಿಯಂತ್ರಣದ ವರ್ಗೀಕರಣದ ಸಂದರ್ಭದಲ್ಲಿ ದಲಿತ ಮಹಿಳೆಯನ್ನು ಆ ವಿಷವರ್ತುಲದ ಒಳಗೆ ಎಳೆದುಕೊಳ್ಳುವ ಮೂಲಕ ಅವಳ ಅಸ್ತಿತ್ವವನ್ನೇ ಪಲ್ಲಟಗೊಳಿಸಲಾಗುತ್ತಿದೆ.

ಎಂಬುದನ್ನು ಮೇಲಿನ ಸರಣಿಯುದ್ದಕ್ಕೂ ಕಾಣಬಹುದಾಗಿದೆ. ಪುರುಷರೊಂದಿಗೆ ದಲಿತ ಮಹಿಳೆಯೂ ಹೊಂದಿರುವ ರಾಜಕೀಯ ಅನುಸಂಧಾನ ಕ್ರಮವನ್ನು ಆಧರಿಸಿಯೇ ಅವಳನ್ನು ಸಾರ್ವಜನಿಕ ಜೀವನದಿಂದಷ್ಟೇ ಅಲ್ಲದೆ ಸಾಮಾಜಿಕ ಹಾಗೂ ಬಾಹ್ಯ ಜಗತ್ತಿನಿಂದಲೇ ದೂರವಿರಸಲಾಗುತ್ತಿದೆ. ಹೀಗೆ ವಿಭಜಿಸುವ ಕ್ರಮದಿಂದ ದಲಿತ ಮಹಿಳೆಯ ಅನುಭವ, ಹಿತಾಸಕ್ತಿ, ಅನನ್ಯತೆ, ಸೃಜನಶೀಲತೆ ಮತ್ತು ಅಸ್ತಿತ್ವಗಳು ಪರಸ್ಪರ ವಿಮುಖವಾಗಿ ಶ್ರೇಣೀಕರಣದಲ್ಲಿ ನೆಲೆಗೊಳ್ಳುತ್ತಿವೆ. ಪರಿಸ್ಥಿತಿ ಹೀಗಿರುವುದರಿಂದಲೇ ದಲಿತ ಮಹಿಳೆಗೆ ತನ್ನ ಅಧಿಕಾರದ ಬಗ್ಗೆ ತನಗೆ ದೊರಕಿಸುವ ರಾಜಕೀಯ ಅಧಿಕಾರದ ಕುರಿತು ಅಪನಂಬಿಕೆ, ಅಲಸ್ಯ, ಜಿಗುಪ್ಸೆ ಉಂಟಾಗುತ್ತಿದೆ. ಇಂತಹ ಪರಿಸ್ಥಿತಿಯಲ್ಲಿಯೇ ಅವಳಿಗೆ ಪಿತೃಪ್ರಧಾನ ಮೌಲ್ಯಗಳನ್ನು ಕುರಿತ ನಂಬಿಕೆಗಳು ಬಲಗೊಂಡು ದಲಿತ ಮಹಿಳೆಯನ್ನು ಅಧೀನತೆಯನ್ನು ತಾನೇ ಸಮರ್ಥಿಸಿಕೊಳ್ಳುತ್ತಿದ್ದಾಳೆ. ಇದರಿಂದಲೇ ನಾವು ತಾಲ್ಲೂಕ ಪಂಚಾಯಿತಿಯಲ್ಲಿನ ಮಹಿಳೆಯ ಸ್ಥಿತಿಯನ್ನು ಅರಿಯಲು ಅತ್ಯಂತ ಪೂರಕವಾಗಿದೆ.

**೩.೫.೬. ತಾಲ್ಲೂಕ ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣದಲ್ಲಿ ಕಂಡುಕೊಂಡು ಅಂಶಗಳು**

* ತಾಲೂಕ ಪಂಚಾಯಿತಿಗೆ ಸೇರ್ಪಡೆಯಾಗಿರುವ ದಲಿತ ಮಹಿಳೆಯರಲ್ಲಿ ಅತ್ಯಧಿಕ ಮಹಿಳೆಯರು ಪ್ರೌಢಶಾಲೆಯ ಮೆಟ್ಟಲನ್ನೇ ಏರಿಲ್ಲ, ಓದು ಬರಹ, ಸಹಿಗಳು ಅವರಿಗೆ ಅಲ್ಪ ಸ್ವಲ್ಪ ಬರುತ್ತಿವೆ.
* ತಾಲ್ಲೂಕ ಪಂಚಾಯಿತಿಗೆ ಆಯ್ಕೆಯಾಗಿರುವ ದಲಿತ ಮಹಿಳೆಯರು ಸಹ ಗ್ರಾಮ ಪಂಚಾಯಿತಿಯಲ್ಲಿರುವಂತೆ ಶೀಲ, ಪಾವಿತ್ರ್ಯದ ಕಾರಣಗಳಿಂದಲೇ ಹರೆಯದಲ್ಲಿ ರಾಜಕಾರಣಕ್ಕೆ ಬರದೆ ಮಧ್ಯವಯಸ್ಸಿನಲ್ಲಿ (೩೫-೪೫ ವಯಸ್ಸಿನಲ್ಲಿ ೩೭-೪೦ ರಷ್ಟು ಹಾಗೂ ೪೫-೫೦ ನೇಯ ವಯಸ್ಸಿನಲ್ಲಿ) ೩೮-೬೬ ರಷ್ಟು ರಾಜಕೀಯಕ್ಕೆ ಬರುತ್ತಿದ್ದಾರೆ.
* ತಾಲೂಕ ಪಂಚಾಯಿತಿಯೂ ಸಾಮಾನ್ಯವಾಗಿ ನಗರ ಪ್ರದೇಶಗಳಲ್ಲಿರುವುದರಿಂದ ಇಲ್ಲಿ ಜಾತಿರಹಿತ, ವರ್ಗರಹಿತ ವಾತವರಣ ಇರುತ್ತದೆಯಾದರೂ ಜಾತೀಯತೆಗೆ ಅವಕಾಶವಿಲ್ಲ. ಆದರೆ ಇಲ್ಲಿಯೂ ಸಹ ಮೇಲ್ವರ್ಗದ ಪುರಿಯಾಳುಗಳೇ ಅಧಿಕ ಸಂಖ್ಯೆಯಲ್ಲಿರುವುದರಿಂದ ದಲಿತ ಮಹಿಳೆಗೆ ಜಾತಿಯ ಹೊರತಾದ ರಾಜಕಾರಣವನ್ನು ನಡೆಸಲು ಸಾಧ್ಯವಾಗುತ್ತಿಲ್ಲ. ಮೇಲ್ನೋಟಕ್ಕೆ ಜಾತಿಯ ಸಂರಚನೆಗಳು ಇಲ್ಲವಾದರೂ ಜಾತಿಯ ಕಾರಣದಿಂದಲೇ ಸ್ವತಂತ್ರವಾಗಿ ವರ್ತಿಸದೆ ಇರುವ ಸ್ಥಿತಿ ದಲಿತ ಮಹಿಳೆಗೆ ಇದೆ. ಆ ಕಾರಣದಿಂದಲೇ ಅವಳು ಪಂಚಾಯಿತಿಯಿಂದ ದೂರ ಉಳಿಯುತ್ತಿದ್ದಾಳೆ. ಅಂತಹ ದಲಿತ ಮಹಿಳೆಯರ ಪ್ರಮಾಣ ಕೊಪ್ಪಳ ತಾಲೂಕಿನಲ್ಲಿ ಶೇ ೦೭.೧೦ ರಷ್ಟು ಕುಷ್ಟಗಿ ತಾಲ್ಲೂಕಿನಲ್ಲಿ ಶೆ ೧೧.೦೪ ಯಲಬುರ್ಗ ತಾಲೂಕಿನಲ್ಲಿ ಶೇ.೦೮.೦೯ ಹಾಗೂ ಗಂಗಾವತಿ ತಾಲೂಕಿನಲ್ಲಿ ಶೇ ೦೬.೩೦ ರಷ್ಟು ಇದೆ. ಅಭಿವೃದ್ಧಿಯಿಂದ ದೂರ ಉಳಿಯುತ್ತಿರುವ ದಲಿತ ಮಹಿಳೆಗೆ ತಾಲೂಕ ಪಂಚಾಯಿತಿಯಲ್ಲಿಯೂ ಮುಕ್ತ ವಾತಾವರಣ ಸಿಕ್ಕಿಲ್ಲ.
* ಹೆಂಡತಿಯ ಬದಲಿಗೆ ಅಧಿಕಾರರೂಢರಾಗಿರುವ ಗಂಡಸರ ಪ್ರಮಾಣ ತಾಲ್ಲೂಕ ಪಂಚಾಯಿತಿಯಲ್ಲಿ ಅಗಾಧವಾಗಿದೆ. ಅವಳಿಗೆ ಏನು ಗೊತ್ತಿಲ್ಲ, ಸಮಾಜದ ಜೊತೆ ಬೆರೆಯಲಾರಳು ಎಂಬೆಲ್ಲ ಅವಾಸ್ತವಿಕ ಅಂಶಗಳನ್ನು ಮುಂದು ಮಾಡಿ ಅವಳ ಬದಲಿಗೆ ಪುರುಷರೇ ಅಧಿಕಾರ ಅನುಭವಿಸುತ್ತಿದ್ದಾರೆ. ಅಂತಹ ಪುರುಷರ ಪ್ರಮಾಣ ಕ್ರಮವಾಗಿ ಕುಷ್ಟಗಿ ತಾಲೂಕ ಪಂಚಾಯಿತಿಯಲ್ಲಿ ಶೇ ೩.೦೪ ರಷ್ಟು ಗಂಗಾವತಿ ತಾಲೂಕಿನಲ್ಲಿ ಶೇ ೫೧.೪೭ ರಷ್ಟು ಕೊಪ್ಪಳ ತಾಲೂಕ ಪಂಚಾಯಿತಿಯಲ್ಲಿ ಶೇ ೩೯.೬೦ ರಷ್ಟು ಹಾಗೂ ಯಲಬುರ್ಗಾ ತಾಲೂಕ ಪಂಚಾಯಿತಿಯಲ್ಲಿ ಶೇ ೨೯.೬೦. ಮೇಲಿನ ಶೇಕಡಾವಾರು ಪ್ರಮಾಣದಲ್ಲಿ ಪುರುಷರೇ ಅವರ ಹೆಂಡತಿಯ ಬದಲಿಗೆ ಅತ್ಯಧಿಕ ಪ್ರಮಾಣದಲ್ಲಿ ಅಧಿಕಾರ ಅನುಭವಿಸುತ್ತಿರುವ ಸತ್ಯ ಕಾಣಬಹುದು. ಹಲವಾರು ಬಗೆಯ ಸಾಮಾಜಿಕ ಅಂಶಗಳಿಂದ ಸಾಮಾಜಿಕ ಜೀವನದಿಂದ ಅತ್ಯಂತ ದೂರವೇ ಉಳಿದಿರುವ ದಲಿತ ಮಹಿಳೆ ರಾಜಕಾರಣ ನಿರುಪಯುಕ್ತವಾಗಿಯೇ ಉಳಿಯುತ್ತಿದ್ದಳೇ. ಪಂಚಾಯಿತಿಯ ಕಾರ್ಯಗಳಿಗೆ ಸಂಬಂಧಿಸಿದಂತೆ ಸಹಿ ಹಾಕಲು ಮಾತ್ರವೇ ಅವಳ ಅಧಿಕಾರ ಉಪಯೋಗವಾಗುತ್ತಿವೆ.
* ತಾಲ್ಲೂಕ ಪಂಚಾಯಿತಿಯಲ್ಲಿನ ದಲಿತ ಮಹಿಳೆಯರು ಅಭಿವೃದ್ಧಿ ಕಾರ್ಯಗಳಿಂದ ಅತ್ಯಂತ ಹಿಂದುಳಿದಿದ್ದಾರೆ. ಇದಕ್ಕೆ ಅವರ ಅನಕ್ಷರತೆ ಒಂದು ಕಾರಣವಾದರೆ, ನಿರಂತರವಾಗಿ ಅವಳ ಮೇಲೆ ಸವಾರಿ

ಮೂಡಿಕೊಂಡು ಬಂದಿರುವ ಜಾತಿನಿಷ್ಠೆ ಮೌಲ್ಯಗಳು ಸಹಕಾರವಾಗಿವೆ ಎಂದರೆ ತಪ್ಪಾಗಲಾರದು. ತನಗೆ ಸಂವಿಧಾನದತ್ತವಾಗಿ ಬಂದಿರುವಂತ ಅಧಿಕಾರವನ್ನು ಯಾವ ರೀತಿ ಚಲಾಯಿಸಬೇಕು, ತನ್ನ ಅಧಿಕಾರದ ಮಿತಿಯೊಳಗೆ ಯಾವ ಯಾವ ಕಾರ್ಯಗಳು, ಅನುದಾನಗಳು ಬರುತ್ತಿವೆ ಅವುಗಳನ್ನು ಹೇಗೆ ನಿಭಾಯಿಸಬೇಕು ಎಂಬ ಸಾಮಾನ್ಯ ಕಲ್ಪನೆಯೂ ಅವಳಿಗೆ ಇಲ್ಲ. ತನ್ನ ಕ್ಷೇತ್ರದಲ್ಲಿಯೂ ಸಹ ಸಾಮಾನ್ಯವಾದ ಮಹಿಳಾ ಶೌಚಾಲಯ, ನೀರು, ರಸ್ತೆಗಳಂತ ಕಾರ್ಯಗಳನ್ನು ಹೊರತುಪಡಿಸಿದರೆ ಅವಳ ಪಾತ್ರ ಅಷ್ಟೇನು ಪ್ರಮುಖವಾಗಿಲ್ಲ. ತನ್ನ ಅಧಿಕಾರ, ಕಾರ್ಯಗಳ ಬಗ್ಗೆ ಅರಿವಿರದ ಹಲವಾರು ದಲಿತ ಮಹಿಳೆಯರು ತಾಲೂಕ ಪಂಚಾಯಿತಿಯಲ್ಲಿದ್ದಾರೆ ಅಂತಹ ದಲಿತ ಮಹಿಳೆಯರ ಪ್ರಮಾಣ ಕ್ರಮವಾಗಿ ಯಲಬುರ್ಗ ತಾಲೂಕ ಪಂಚಾಯಿತಿಯಲ್ಲಿ ಶೇ ೪೧.೫೩ ರಷ್ಟು, ಕುಷ್ಠಗಿ ತಾಲೂಕಿನಲ್ಲಿ ಶೇ ೪೪.೨೭ ರಷ್ಟು, ಕೊಪ್ಪಳ ತಾಲೂಕಿನಲ್ಲಿ ಶೇ ೪೦.೨೦ ರಷ್ಟು ಹಾಗೂ ಗಂಗಾವತಿ ಮಹಿಳೆಯರ ಪ್ರಮಾಣ ದಂಗುಬಡಿಸುವಂತಿದೆ. ಇದರ ಹಿಂದೆ ಯಾವುದೇ ಕಾರಣಗಳಿರಬಹುದು. ಆದರೆ ಸರಕಾರ ಈ ನಿಟ್ಟಿನಲ್ಲಿ ಅವರಿಗೆ ಸೂಕ್ತ ತರಬೇತಿ ನೀಡದಿರುವುದೂ ಸಹ ಒಂದು.

* ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಪ್ರಭಾವಶಾಲಿಯಾಗಿರುವ ಜಾತಿರಾಜಕಾರಣವು ತಾಲೂಕ ಪಂಚಾಯಿತಿಯಲ್ಲಿಯೂ ಅತ್ಯಂತ ಢಾಳವಾಗಿ ಕಂಡುಬರುತ್ತಿದೆ. ಕೇವಲ ಗ್ರಾಮೀಣ ಪ್ರದೇಶಗಳಿಗೆ ಮಾತ್ರವೇ ಸೀಮಿತವಾಗಿದ್ದ ಜಾತಿ ವಿಚಾರಗಳು ನಗರ ಕೇಂದ್ರಿಕೃತವಾದ ತಾಲ್ಲೂಕ ಪಂಚಾಯಿತಿಯಲ್ಲಿಯೂ ಪಸರಿಸಿವೆ. ತನ್ನ ಜೀವನದುದ್ದಕ್ಕೂ ಒಂದಿಲ್ಲ ಒಂದು ಬಗೆಯಲ್ಲಿ ಶೋಷಣೆ, ದಬ್ಬಾಳಿಕೆ, ಹಿಂಸೆ, ದೌರ್ಜನ್ಯಗಳಿಗೆ ಬಲಿಯಾಗಿದ್ದ ದಲಿತ ಮಹಿಳೆ ಮಾನಸಿಕ ಒತ್ತಡದಲ್ಲಿ ತನ್ನ ಅಧಿಕಾರವನ್ನು ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸುವಿಕೆಯಲ್ಲಿ ಹೆದರುತ್ತಿದ್ದಾಳೆ. ಅಂತಹ ದಲಿತ ಮಹಿಳೆಯರ ಪ್ರಮಾಣ, ಕೊಪ್ಪಳ ತಾಲೂಕಿನಲ್ಲಿ ಶೇ.೦೫.೧೦ ರಷ್ಟು ಯಲಬುರ್ಗ ತಾಲೂಕಿನಲ್ಲಿ ಶೇ ೦೭.೩೦ ರಷ್ಟು ಗಂಗಾವತಿ ತಾಲ್ಲೂಕಿನಲ್ಲಿ ಶೇ.೦೮.೦೮ ರಷ್ಟು, ಹಾಗೂ ಕುಷ್ಠಗಿ ತಾಲೂಕಿನಲ್ಲಿ ಶೇ ೧೦.೧೧ ರಷ್ಟು ಇದೆ. ಭಾರತದಲ್ಲಿ ಜಾತಿಯ ನಿರ್ಮೂಲನೆಗೆ ಎಷ್ಟೇ ಕಾರ್ಯಕ್ರಮಗಳು, ಹೋರಾಟಗಳು ನಡೆದರೂ ಸಹ ದಲಿತ ಮಹಿಳಾ ಸ್ಥಿತಿಯಲ್ಲಿ ಮಾತ್ರ ಯಾವುದೇ ಬದಲಾವಣೆ ಕಾಣಲಾಗಲಿಲ್ಲ.

* ಸಮಾಜದಲ್ಲಿ ವ್ಯಕ್ತಿಯೂ ತಾನು ಪಡೆದ ಸ್ಥಾನದಿಂದಲೇ ಗೌರವಾದರಗಳಿಗೆ ಒಳಗಾಗುತ್ತಾರೆ. ಅವರಿಗೆ ಸಿಕ್ಕಿರುವ ಸ್ಥಾನವು ಸಾಮಾಜಿಕ ಜೀವನದಲ್ಲಿ ಒಂದು ಮೌಲ್ಯಯುತ, ಗೌರವಯುತ ಜೀವನಕ್ಕೆ ದಾರಿ ಮಾಡಿಕೊಡುತ್ತದೆ. ಆದರೆ ತಾಲೂಕು ಪಂಚಾಯಿತಿಯಂತಹ ಉನ್ನತ ಸಂಸ್ಥೆಯ ಅಧ್ಯಕ್ಷೆ, ಉಪಾಧ್ಯಕ್ಷೆ, ಹಾಗೂ ಸದಸ್ಯೆಯಾಗಿದ್ದರೂ ದಲಿತ ಮಹಿಳೆ ಇಂದಿಗೂ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾದ ಪ್ರವೇಶಾವಕಾಶವನ್ನೇ ಪಡೆದಿಲ್ಲ. ಅಂತಹ ನತದೃಷ್ಟ ಮಹಿಳೆಯರ ಪ್ರಮಾಣ, ಕೊಪ್ಪಳ ತಾಲೂಕಿನಲ್ಲಿ ಶೇ.೨೫.೧೨ ರಷ್ಟು ಯಲಬುರ್ಗಾ ತಾಲೂಕಿನಲ್ಲಿ ಶೇ ೧೧.೬೭ ರಷ್ಟು ಗಂಗಾವತಿ ತಾಲೂಕಿನಲ್ಲಿ ಶೇ.೧೦.೦೯ ರಷ್ಟು ಹಾಗೂ ಕುಷ್ಟಗಿ ತಾಲೂಕಿನಲ್ಲಿ ಶೇ ೧೪.೧೯ ರಷ್ಟು ಇದೆ.

* ಸಾಮಾಜಿಕ ಜೀವನದಲ್ಲಿ ಜಾತಿಯು ವ್ಯಕ್ತಿಗಳ ಸ್ಥಾನಮಾನಗಳನ್ನು ನಿರ್ಧರಿಸುತ್ತದೆ. ಮೇಲ್ಜಾತಿಯವರಿಗೆ ಹಿಂದಿನಿಂದಲೂ ಆಳುವ ಅಧಿಕಾರ ದೈವದತ್ತವಾಗಿ ಬಂದಿದ್ದರೆ. ತಳ ಸಮುದಾಯಗಳಿಗೆ ಆಳಿಸಿಕೊಳ್ಳುವ ಪರಿಸ್ಥಿತಿ ಇದೆ. ಹೀಗೆ ಜಾತಿಯೇ ವ್ಯಕ್ತಿಗಳ ಸಾಮಾಜಿಕ ಚಹರೆಯನ್ನು ನಿರ್ಧರಿಸುವ ಪ್ರಮುಖ ಮಾನದಂಡವಾಗಿದೆ. ತಳ ಸಮುದಾಯದೊಳಗಿನ ದಲಿತ ಮಹಿಳೆಗೆ ಇದೊಂದು ಶಾಪವಾಗಿ ಕಾಡುತ್ತಿದೆ. ಸಂವಿಧಾನದತ್ತವಾಗಿ, ಶಾಸನಾತ್ಮಕವಾಗಿ ತನಗೆ ಅಧಿಕಾರ ಸಿಕ್ಕರೂ ಸಹ ಜಾತಿಯ ಕಾರಣದಿಂದಲೇ ಅಧಿಕಾರ ಚಲಾವಣೆ, ನಿರ್ವಹಣೆಯಲ್ಲಿ ತೊಡಕು ಉಂಟಾಗಿ ತಮ್ಮ ಅಧಿಕಾರ ಮೊಟಕುಗೊಳಿಸಲಾಗಿದೆ ಎಂಬಂಶವನ್ನು ದಲಿತ ಮಹಿಳೆ ಅರಿತಿದ್ದಾಳೆ. ಅಂತಹ ದಲಿತ ಮಹಿಳೆಯರ ಪ್ರಮಾಣ ಕ್ರಮವಾಗಿ ಕೊಪ್ಪಳ ತಾಲೂಕಿನಲ್ಲಿ ಶೇ.೦೫.೪೦ ರಷ್ಟು ಯಲಬುರ್ಗ ತಾಲೂಕಿನಲ್ಲಿ ಶೇ ೦೭.೧೦ ರಷ್ಟು ಕುಷ್ಟಗಿ ತಾಲೂಕಿನಲ್ಲಿ ಶೇ ೦೯.೧೧ ರಷ್ಟು ಹಾಗೂ ಗಂಗಾವತಿ ತಾಲೂಕಿನಲ್ಲಿ ಶೇ ೦೯.೧೧ ರಷ್ಟು ಇದೆ.

* ಮೀಸಲಾತಿಯ ಚಿಂತನೆ ಇರದೆ ಹೋಗಿದ್ದರೆ ತಾವು ಪಂಚಾಯಿತಿಯ ಮುಖವನ್ನೇ ನೋಡುತ್ತಿರಲಿಲ್ಲ ಆದ್ದರಿಂದ ತಮಗೆ ಮೀಸಲಾತಿ ಅತ್ಯಗತ್ಯವಾಗಿಬೇಕು ಎಂದು ದಲಿತ ಮಹಿಳೆಯರು ಒಕ್ಕೊರಲಿನಿಂದ ಬೆಂಬಲಿಸಿದ್ದಾರೆ. ನಿಜ ಮೀಸಲಾತಿ ಇಲ್ಲದಿದ್ದರೆ ತಾವು ನಾಲ್ಕುಗೋಡೆಗಳ ಮಧ್ಯೆ ಇರಬೇಕಾಗಿರುತ್ತಿತ್ತು. ಎಂಬುದು ಅವರ ಅಭಿಮತ. ಮೀಸಲಾತಿ ಇಷ್ಟಕ್ಕೆ ಇರದೆ ಇನ್ನು ವಿಸ್ತರಿಸಿ ಎಲ್ಲಾ ಮಹಿಳೆಯರಿಗೂ ಸಿಗುವಂತಾಗಲಿ. ಹಾಗೆಯೇ ಇದು ನಿರಂತರವಾಗಿ ಮುಂದುವರೆಯಲಿ ಎಂದು ಆಶಿಸುತ್ತಿರುವ ದಲಿತ ಮಹಿಳೆಯರ ಪ್ರಮಾಣ. ಗಂಗಾವತಿ ತಾಲೂಕ ಪಂಚಾಯತಿಯಲ್ಲಿ ಶೇ ೪೪.೬೦ ರಷ್ಟು ಕೊಪ್ಪಳ ತಾಲೂಕು ಪಂಚಾಯಿತಿಯಲ್ಲಿ ಶೇ ೪೦.೦೫ ರಷ್ಟು ಕುಷ್ಟಗಿ ತಾಲೂಕ ಪಂಚಾಯಿತಿಯಲ್ಲಿ ಶೇ ೩೬.೦೮ ಹಾಗೂ ಯಲಬುರ್ಗ ತಾಲೂಕ ಪಂಚಾಯಿತಿಯಲ್ಲಿ ಶೇ ೩೮.೬೦ ರಷ್ಟು ಇದೆ.

* ಮೀಸಲಾತಿಯ ಕುರಿತು ಎಷ್ಟೇ ಮಹಿಳೆಯರು ಸಕಾರಾತ್ಮಕ ಪ್ರತಿಕ್ರಿಯೆ ತೋರಿಸಿದ್ದರೂ ಅದನ್ನು ಬೇಡ ಎನ್ನುವವರ ಸಂಖ್ಯೆ ಏನು ಕಡಿಮೆ ಏನಿಲ್ಲ. ಏಕೆಂದರೆ ಮೀಸಲಾತಿಯಡಿಯಲ್ಲಿ ಚುನಾಯಿತರಾದ ದಲಿತ ಮಹಿಳೆಯರು ತಮ್ಮನ್ನು ನೆಪ ಮಾತ್ರಕ್ಕೆ ಆಡಳಿತದಲ್ಲಿ ತಂದು ಎಲ್ಲಾ ಅಧಿಕಾರ ಪರ ಪುರುಷರೇ ನಿಭಾಯಿಸುತ್ತಿರುವುದರಿಂದ, ಪಂಚಾಯಿತಿಯಲ್ಲಿ ಜಾತಿಯ ಸಂರಚನೆಗಳು ಇನ್ನೂ ಜೀವಂತವಿರುವುದರಿಂದ ಮೀಸಲಾತಿ ಬೇಡ ಎಂಬ ನಿಲುವು ಕೆಲವು ದಲಿತ ಮಹಿಳೆಯರದಾಗಿದೆ. ಅಂತಹ ದಲಿತ ಮಹಿಳೆಯರ ಪ್ರಮಾಣ. ಯಲಬುರ್ಗ, ಶೇ ೨೧.೧೬ ರಷ್ಟು ಕುಷ್ಟಗಿಯಲ್ಲಿ ಶೇ ೨೪.೩೪ ರಷ್ಟು ಗಂಗಾವತಿಯಲ್ಲಿ ಶೇ.೧೭.೬೧ ರಷ್ಟು, ಕುಷ್ಟಗಿಯಲ್ಲಿ ಶೆ ೧೪.೪೦ ರಷ್ಟು ಇದೆ.

* ಮಹಿಳಾ ರಾಜಕಾರಣ ಬಲವಾಗಲು ಮಹಿಳೆಯರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ರಾಜಕೀಯಕ್ಕೆ ಬರಬೇಕು. ಆ ಮೂಲಕ ಸಾಮಾಜಿಕ ಮುಖ್ಯವಾಹಿನಿಯಲ್ಲಿ ತಮ್ಮ ಚಹರೆಯನ್ನು ತೋರಿಸಬೇಕು. ಹೀಗಾದಾಗ ಅವರ ಮೇಲಿರುವ ಪುರುಷ ಪ್ರಧಾನತೆಯ ಅವೈಚಾರಿಕ ನಿಲುವುಗಳು ಸುಳ್ಳಾಗುತ್ತವೆ. ಎಂಬ ಮಾತು ದಲಿತ ಮಹಿಳೆಯರದಾಗಿದೆ. ಆದ್ದರಿಂದಲೇ ತಾನು ಮುಂದಿನ ಸಾರಿ ಚುನಾವಣೆಗೆ ಮತ್ತೆ ನಿಲ್ಲುತ್ತೇನೆ ಎನ್ನುತ್ತಿದ್ದಾಳೆ. ಅಂತಹ ಒಲವಿರುವ ದಲಿತ ಮಹಿಳೆಯರ ಪ್ರಮಾಣ. ಗಂಗಾವತಿಯಲ್ಲಿ ಶೇ.೩೧.೪೪, ಕೊಪ್ಪಳದಲ್ಲಿ

ಶೇ.೩೯.೬೧ ರಷ್ಟು ಕುಷ್ಟಗಿಯಲ್ಲಿ ಶೇ ೩೯.೬೧ ರಷ್ಟು ಹಾಗೂ ಯಲಬುರ್ಗ ತಾಲೂಕಿನಲ್ಲಿ ಶೇ ೪೧.೨೭ ರಷ್ಟು ಇದೆ.

* ಚುನಾವಣೆಯ ವಿಷಯದಲ್ಲಿ ನಿರ್ಲಿಪ್ತ ಧೋರಣೆತಾಳಿ ಆ ಮೂಲಕ ಮುಂದೆ ಎಂದೂ ಚುನಾವಣೆಗೆ ನಿಲ್ಲಲಾರೆ ಎಂಬ ಮಾತು ಕೆಲವರದಾಗಿದೆ. ಏಕೆಂದರೆ ಪಂಚಾಯಿತಿಯೊಳಗೆ ಅವಳ ವಿರುದ್ಧ ನಡೆಯುತ್ತಿರುವ ಅಧಿಕಾರ ಹೀನ ಚಟುವಟಿಕೆಗಳ ಪ್ರಮುಖ ಕಾರಣವಾಗಿವೆ. ಮುಂದಿನ ಚುನಾವಣೆಯಲ್ಲಿ ನಿಲ್ಲಲಾರೆ ಎಂಬ ನಿರ್ಲಿಪ್ತತೆ ತಾಳಿರುವಂತೆ ದಲಿತ ಮಹಿಳೆಯರ ಪ್ರಮಾಣ, ಕೊಪ್ಪಳ ತಾಲೂಕಿನಲ್ಲಿ ಶೇ ೦೭.೫೯ ರಷ್ಟು, ಕುಷ್ಟಗಿ ತಾಲೂಕಿನಲ್ಲಿ ಶೇ ೦೯.೧೬ ರಷ್ಟು ಗಂಗಾವತಿ ತಾಲೂಕಿನಲ್ಲಿ ಶೇ ೦೫.೪೧ ರಷ್ಟು ಹಾಗೂ ಯಲಬುರ್ಗದಲ್ಲಿ ಶೇ ೦೬.೯೦ ರಷ್ಟು ಇದೆ.

* ರಾಜಕೀಯವಾಗಿ ಬೆಳೆಯಲು ಹಾಗೂ ರಾಜಕೀಯದಲ್ಲಿ ಭದ್ರವಾಗಿ ತಳವೂರಲು ರಾಜಕೀಯ ಪಕ್ಷಗಳೊಂದಿಗೆ ಒಡನಾಟ ಅತ್ಯಂತ ಅವಶ್ಯವಿದೆ. ಇದರಿಂದ ಅವರು ಪಂಚಾಯಿತಿಯ ಸದಸ್ಯರಾಗಿರದಿದ್ದರೂ ಸಹ ರಾಜಕೀಯಾಧಿಕಾರದಲ್ಲಿ ರಾಜ್ಯ, ರಾಷ್ಟ್ರೀಯ ಮಟ್ಟದಲ್ಲಿ ಬೆಳಕಿಗೆ ಬರಲು ಸಾಧ್ಯ. ಇಂತಹ ರಾಜಕೀಯ ಪಕ್ಷಗಳೊಂದಿಗೆ ಒಡನಾಟ, ಸಂಪರ್ಕ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ, ಯಲಬುರ್ಗ ತಾಲೂಕಿನಲ್ಲಿ ಶೇ ೧೦.೬೦ ರಷ್ಟು, ಕುಷ್ಟಗಿ ತಾಲೂಕಿನಲ್ಲಿ ಶೇ ೦೭.೪೩ ರಷ್ಟು ಕೊಪ್ಪಳ ತಾಲೂಕಿನಲ್ಲಿ ಶೇ.೧೩.೭೬ ರಷ್ಟು ಹಾಗೂ ಗಂಗಾವತಿ ತಾಲೂಕಿನಲ್ಲಿ ಶೇ ೧೧.೯೧ ರಷ್ಟು ಇದೆ.

**೩.೬. ಜಿಲ್ಲಾ ಪಂಚಾಯತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣ**

ಪ್ರತಿಯೊಂದು ಜಿಲ್ಲೆಗೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೆ ಕಾನೂನಿನ ಅಡಿಯಲ್ಲಿ ರಚಿಸಿದ ಮೇಲ್‌ಸ್ತರದ ಅಧಿಕಾರದ ಅಂಗ ಇದಾಗಿದೆ. ಇಡಿ ಜಿಲ್ಲೆಯ ಮೇಲೆ ಇದರ ಅಧಿಕಾರ ವ್ಯಾಪ್ತಿ ಇರುತ್ತದೆ. ಜಿಲ್ಲಾ ಪಂಚಾಯತಿಯಿಂದ ಹೊರತುಪಡಿಸಿದ ಭಾಗದೊಳಗಿನ ಯಾವುದೆ ಪ್ರದೇಶದೊಳಗಿನ ಯಾವುದೆ ಪ್ರದೇಶದಲ್ಲಿ ತನ್ನ ಕಛೇರಿಯನ್ನು ಹೊಂದಿರಬಹುದು. ಅಂತಹ ಪ್ರದೇಶಗಳಲ್ಲಿ ಅದರ ನಿಯಂತ್ರಣ ಅಥವಾ ವ್ಯವಸ್ಥಾಪನೆಯಲ್ಲಿರುವ ಇತಿಮಿತಿ ಮತ್ತು ಇತರ ಸಂಸ್ಥೆಗಳ ಮೇಲೆ ನಿಯಂತ್ರಣ ಅಥವಾ ಅಧಿಕಾರವನ್ನು ಇದು ಹೊಂದಿರುತ್ತದೆ. ಪ್ರತಿಯೊಂದು ಜಿಲ್ಲಾಡಳಿದ ಅಂಗ ಜಿಲ್ಲಾಪಂಚಾಯತಿ ಎಂಬ ಹೆಸರಿನಡಿಯಲ್ಲಿ ಕರೆಯಲಾಗುತ್ತದೆ. ಇದು ಶಾಶ್ವತವಾದಂತಹ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವುದು. ಜಿಲ್ಲೆಯ ಒಟ್ಟು ಜನ ಸಂಖ್ಯೆಯೊಳಗಿನ ಅನುಸೂಚಿತ ಜಾತಿ ಮತ್ತು ಪಂಗಡಗಳ ಜನಸಂಖ್ಯೆಯು, ಇರುವ ಅನುಪಾತದಡಿಯಲ್ಲಿ ನೇರ ಚುನಾವಣೆಯ ಮೂಲಕ ತುಂಬಲಾಗುವುದು. ಅವರಿಗೆ ಪ್ರತಿಯೊಂದು ಜಿಲ್ಲೆಯಲ್ಲಿಯೂ ಕನಿಷ್ಟ ಒಂದೊಂದು ಸ್ಥಾನವನ್ನು ಮೀಸಲಿರಿಸಿದೆ. ⅓ ಸ್ಥಾನಗಳನ್ನು ಹಿಂದುಳಿದ ವರ್ಗಗಳ ವ್ಯಕ್ತಿಗಳಿಗೆ ಮೀಸಲಿರಿಸಲಾಗಿದೆ. ಅನುಸೂಚಿತ ಜಾತಿ, ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಹುದ್ದೆಗಳಲ್ಲಿ ಮಹಿಳೆಯರಿಗಾಗಿ ⅓ ಭಾಗಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳನ್ನು ಮೀಸಲಿಡುವುದು. ಮೀಸಲಿಟ್ಟಿರುವ ಅನುಸೂಚಿತ ಜಾತಿ, ವರ್ಗ, ಹಿಂದುಳಿದ ವರ್ಗ ಅಥವಾ ಮಹಿಳೆಗೆ ಮೀಸಲಿಟ್ಟಿರದ ಯಾವುದೇ ಸ್ಥಾನಗಳಲ್ಲೂ ಚುನಾವಣೆಯಲ್ಲಿ

ಸ್ಪರ್ಧಿಸಬಹುದು. ಒಟ್ಟು ಕೊಪ್ಪಳ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಒಟ್ಟು ನಾಲ್ಕು ದಲಿತ ಮಹಿಳೆಯರು ಜಿಲ್ಲಾ ಪಂಚಾಯತಿಗೆ ಆಯ್ಕೆಯಾಗಿದ್ದಾರೆ.

ಗ್ರಾಮ ಹಾಗೂ ತಾಲ್ಲೂಕು ಪಂಚಾಯತಿಗಳಲ್ಲಿ ದಲಿತ ಮಹಿಳಾ ರಾಜಕೀಯ ಸ್ಥಿತಿಗತಿಯನ್ನು ಅವಲೋಕಿಸಿದ ನಂತರ ಉನ್ನತ ಹಾಗೂ ಸ್ಥಳೀಯ ಸಂಸ್ಥೆಯಾಗಿರುವ ಜಿಲ್ಲಾ ಪಂಚಾಯತಿಯಲ್ಲಿ ಅವಳ ಸ್ಥಾನಮಾನಗಳನ್ನು ಅರಿಯುವ ಪ್ರಯತ್ನ ಈ ಅಧ್ಯಾಯದಲ್ಲಿದೆ. ತಳಮಟ್ಟದ ಸ್ಥಳೀಯ ಸಂಸ್ಥೆಗಳಲ್ಲಿ ಇಂದಿಗೂ ಜಾತಿಯ, ಲಿಂಗೀಯ, ಪಿತೃಪ್ರಧಾನ ಮೌಲ್ಯಗಳೇ ಅವಳನ್ನು ಅಧಿಕಾರದೆಡೆಗೆ ಬರುವಲ್ಲಿ ನಿಯಂತ್ರಿಸುತ್ತಿವೆ. ಅಲ್ಲದೆ ಅವಳ ಭಾಗವಹಿಸುವಿಕೆಯನ್ನು ನಿರಾಕರಿಸುತ್ತಿವೆ. ಇಂದಿಗೂ ಗ್ರಾಮೀಣ ವಲಯಗಳಲ್ಲಿ ಅತಿಯಾಗಿರುವ ಸಾಂಸ್ಕೃತಿಕ ಯಾಜಮಾನ್ಯ ಜಮೀನ್ದಾರಿಶಾಹಿ ಕಾರಣಗಳಿಂದ ಅವಳ ಅಧಿಕಾರ ದೃವೀಕರಣಕ್ಕೆ ತಡೆಯಾಗಿ ಪರಿಣಮಿಸಿವೆ. ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವಂತೆ ದಲಿತಳಾಗಿರುವ ಕಾರಣದಿಂದಲೆ ಅವಳು ಅನುಭವಿಸುವ ಯಾತನೆ, ಶೋಷಣೆ ಕೇವಲ ಸಾಮಾಜಿಕ ರಂಗದಲ್ಲಷ್ಟೆ ಇರದೆ, ರಾಜಕೀಯ ರಂಗದಲ್ಲಿಯೂ ಹಾಸುಹೊಕ್ಕಾಗಿವೆ. ಹಿಂದಿನಿಂದಲೂ ಸಮಾಜದ ಅಧಿಪತಿಗಳಂತಿರುವ ಸ್ಥಾಪಿತ ಪ್ರಭುತ್ವಗಳು ಇಡೀ ಸಾಮಾಜಿಕ ವ್ಯವಸ್ಥೆಯನ್ನೇ ತನ್ನ ಅಧೀನದಲ್ಲಿಟ್ಟುಕೊಂಡಿರುವುದರಿಂದ ಇವು ತಮ್ಮ ಉಳಿವು, ಹಾಗೂ ಶ್ರೆಯೋಭಿವೃದ್ಧಿಗಾಗಿಯೇ ಸದಾ ಚಲನಶೀಲವಾಗಿ ಕಾರ್ಯನಿರ್ವಹಿಸುತ್ತಿವೆ.

ರಾಜಕೀಯ ಶಕ್ತಿ ಎಂಬುದು ಪ್ರಭುತ್ವ, ಹಕ್ಕುದಾರಿಕೆ, ನಿರ್ಧಾರಿತ ಶಕ್ತಿ, ಅಧಿಕಾರ, ಅತಿಯಾದ ಸೌಕರ್ಯ, ಗೌರವಾದಗಳನ್ನು ಒಳಗೊಂಡಿರುವ ಸಾಮಾಜಿಕ ಸಂಸ್ಥೆಯಾಗಿದೆ. ಹೀಗಿರುವುದರಿಂದಲೆ ಇದನ್ನು ಪಡಿಯಲೇಬೇಕು ಹಾಗೂ ನಿತ್ಯ ನಿರಂತರವಾಗಿ ತನ್ನ ಅಧೀನದಲ್ಲಿಯೇ ಉಳಿಯಬೇಕು ಎಂದು ಸಾಮಂತಶಾಹಿ ಪ್ರಭುತ್ವಗಳು ಆಲೋಚನೆಯನ್ನು ಹೊಂದಿರುತ್ತದೆ. ಅಲ್ಲದೆ ಅಂಚಿನ ಸಮುದಾಯಗಳನ್ನು ರಾಜಕೀಯಾಧಿಕಾರದಿಂದ ದೂರವಿಡುವಲ್ಲಿಯೂ ಸದಾ ಜಾಗೃತವಾಗಿರುತ್ತವೆ. ಅಲ್ಲದೆ ಇದರಲ್ಲಿ ಭಾಗಶಃ ಯಶಸ್ವಿಯೂ ಆಗಿವೆ. ಇದೊಂದು ರಾಜಕೀಯ ಸಂಸ್ಥೆಯೊಳಗಿನ ಹಕ್ಕುದಾರಿಕೆಯ ಪ್ರಶ್ನೆ. ಇಂತಹ ಚಿಂತನೆಗಳನ್ನು ಆಧರಿಸಿದ ನೆಲೆಯಲ್ಲಿಯೇ ಸ್ತ್ರೀ ಪುರುಷರ ನಡುವಿನ ರಾಜಕೀಯ ಚಟುವಟಿಕೆಗಳು, ಸಂಘರ್ಷಗಳು, ಒಪ್ಪಂದಗಳು ನಡೆಯುತ್ತಿರುತ್ತವೆ. ಇದನ್ನು ನಾವು ವರ್ತಮಾನಕಾಲದಲ್ಲಿಯೂ ದಿನನಿತ್ಯ ಕಾಣುತ್ತೇವೆ. ಸಂವಿಧಾನದತ್ತವಾಗಿ ತನಗೆ ಒಲಿದು ಬಂದಿದ್ದ ರಾಜಕೀಯ ಹಕ್ಕುಗಳನ್ನು ಪಡೆಯಲು ತಾನು ಪುರುಷನಂತೆ ಸಮಾನ ಹಕ್ಕುಳ್ಳವಳು ಎಂದು ತಿಳಿಸಿ ರಾಜಕೀಯ ಹಕ್ಕುಗಳನ್ನು ಪಡೆಯಲು ಮಹಿಳೆ ತುಂಬ ದೊಡ್ಡ ಹೋರಾಟವನ್ನೇ ಮಾಡಬೇಕಾಯಿತು.

೭೩.೭೪ನೆಯ ತಿದ್ದುಪಡಿಯ ನಂತರ ಪಂಚಾಯತಿಯ ಮಟ್ಟಗಳಲ್ಲಿಯಂತೂ ಸಾವಿರಾರು ಮಹಿಳೆಯರು ಒಮ್ಮೆಲೆ ದಾಖಲಾದರು. ಅಲ್ಲದೆ ಪುರುಷನ ಆಧಿಪತ್ಯವನ್ನು ಮುರಿದು ಹೊಸ ಶಾಖೆಯನ್ನು ಆರಂಭಿಸಿದರು. ಅದಕ್ಕಿಂತ ಮುಂಚೆ ಮಹಿಳೆಗೂ ಮತ್ತು ರಾಜಕೀಯಕ್ಕೂ ನಡುವೆ ಇದ್ದ ಹೋಲಿಕೆ ಎಂದರೆ ಮಹಿಳೆ ರಾಜಕೀಯಕ್ಕೆ ಬರುವುದರಿಂದ ಅವಳ ಶೀಲ, ಪಾವಿತ್ರ್ಯ, ಸಾಮಾಜಿಕ ಸ್ವಾಸ್ಥ್ಯ ಹಾಳಾಗುತ್ತದೆ ಎಂಬ ಹುಸಿ ಸತ್ಯ ಇತ್ತು. ಆದರೆ ಪುರುಷನ ವಿಷಯದಲ್ಲಿ ಇವಕ್ಕೆ ತದ್ವಿರುದ್ಧವಾದ ಚಿಂತನೆ ಇತ್ತು. ರಾಜಕೀಯವು ಏಕೆ ಮಹಿಳೆಗೆ ಬೇಡ. ಅದು ಪುರುಷನಿಗೆ ಮಾತ್ರ ಸೀಮಿತವೆ

ಎಂದು ಮಹಿಳಾವಾದಿಗಳು ಪ್ರಶ್ನಿಸತೊಡಗಿದರು. ಅಲ್ಲದೆ ಇಂತಹ ಕುತರ್ಕಗಳ ಹಿಂದಿರುವ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನು ಹೊರಹಾಕಿದರು. ಮಹಿಳೆಯ ರಾಜಕೀಯವನ್ನು ಸಮಾಜ, ಕುಟುಂಬ, ಧರ್ಮಗಳು ಸಕಾರಾತ್ಮಕವಾಗಿ ಕಂಡಿಲ್ಲ. ಏಕೆಂದರೆ ಅವಳ ಭಾಗವಹಿಸುವಿಕೆಯಲ್ಲಿ ಅವಳು ತನ್ನ ಸ್ವಂತ ಆಯ್ಕೆಯಾಗಿ ಎಂದಿಗೂ ರಾಜಕೀಯವನ್ನು ಆರಿಸಿಕೊಂಡಿಲ್ಲ. ಇದೊಂದು ಒತ್ತಾಯದ, ಆಕಸ್ಮಿಕವಾದ, ಮೀಸಲಾತಿಯ ಕಾರಣದಿಂದ ಅವಳಿಗೆ ಸಿಕ್ಕಿದೆ. ಅವಳು ತನಗೆ ಒಪ್ಪಿಗೆ ಇರದಿದ್ದರೂ ಒಲ್ಲದ ಮನಸ್ಸಿನಿಂದಲೆ ರಾಜಕೀಯಕ್ಕೆ ಪ್ರವೇಶ ಪಡೆಯುತ್ತಿದ್ದಾಳೆ. ಅಲ್ಲದೆ ಚುನಾವಣೆಯಲ್ಲಾಗಲಿ, ಮತಚಲಾವಣೆಯಲ್ಲಾಗಲಿ ಅವಳಿಗೆ ಈವರೆಗೂ ಮುಕ್ತ ಪ್ರವೇಶಾವಕಾಶವೇ ದೊರೆತಿಲ್ಲ. ಮಹಿಳೆಯ ರಾಜಕೀಯ ಭಾಗವಹಿಸುವಿಕೆಗೆ ವಿವಿಧ ಬಗೆಯಲ್ಲಿ ನಿಯಂತ್ರಿಸುವ ಸಮಾಜ, ಕುಟುಂಬಗಳಿಗೆ ಪುರುಷನ ವಿಷಯದಲ್ಲಿ ಮೌನ ಸಮ್ಮತಿ ನೀಡಿಬಿಡುತ್ತವೆ. ಇಲ್ಲಿ ಮಹಿಳೆಗೆ ತಾತ್ವಿಕವಾಗಿಯಾದರೂ ರಾಜಕೀಯದಲ್ಲಿ ಪ್ರವೇಶ ಪ್ರಾತಿನಿಧ್ಯವನ್ನು ಹೊಂದಿದ್ದಾಳೆನ್ನುವುದು ಒಪ್ಪುವಂತಹದ್ದು, ಕುಟುಂಬದ ಹಿನ್ನೆಲೆಯಲ್ಲಿ ವರ್ಗಹಿತಾಸಕ್ತಿ, ಜಾತಿ, ಪ್ರಾದೇಶಿಕ ಅಂಶಗಳ ಹಿನ್ನೆಲೆಯಲ್ಲಿ ಹೇಗೆ ಇವು ಪುರುಷನ ರಾಜಕೀಯಕ್ಕೆ ಬೆಂಬಲ ನೀಡುತ್ತಿವೆಯೊ ಹಾಗೆ ಮಹಿಳೆಯ ವಿಷಯದಲ್ಲಿ ಏಕೆ ತಾತ್ಸಾರ ಮನೋಭಾವನೆಯನ್ನು ತಾಳಿವೆ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ತಳಮಟ್ಟದ, ರಾಜಕೀಯದಲ್ಲಿ ಪ್ರವೇಶ ಪಡೆದ ನಂತರ ಮಹಿಳೆ ತನ್ನ ಮೇಲೆ ಹೇರಲಾಗಿದ್ದ ಪಿತೃಪ್ರಧಾನ ಮೌಲ್ಯಾಚರಣೆಗಳನ್ನು, ಚಿಂತನೆಗಳನ್ನು ಹುಸಿಗೊಳಿಸಿದಳು. ತಳಮಟ್ಟದಲ್ಲಿಯ ರಾಜಕೀಯ ಪ್ರವೇಶ ನಗರ ಪ್ರದೇಶದ ರಾಜಕೀಯಕ್ಕಿಂತಲೂ ತುಂಬ ಕ್ಲಿಷ್ಟಕರವಾದದ್ದು, ಏಕೆಂದರೆ ಶೀಲ, ಪಾವಿತ್ರ, ಸಂಸ್ಕೃತಿಗಳ ಹೆಸರಿನಲ್ಲಿ ಗ್ರಾಮೀಣ ಮಹಿಳೆ ಇಂದಿಗೂ ಬಲಿಯಾಗುತ್ತಿದ್ದಾಳೆ.

ರಾಜಕೀಯ ರಂಗದ ನಿಯೋಗಿಯಾಗಿರುವ ಜಿಲ್ಲಾ ಪಂಚಾಯತ್‌ಗಳಲ್ಲಿ ದಲಿತ ಮಹಿಳಾ ರಾಜಕಾರಣದ ಪ್ರಶ್ನೆಯನ್ನು ಬಿಡಿಸಿಕೊಳ್ಳುವ ಮೊದಲು ಅದರ ಹಿಂದೆ ಅವಿತಿರುವ ಜಾತಿಯ ಚಹರೆಯನ್ನು ಅರಿಯುವುದು ಒಳಿತು. ಮುಖ್ಯವಾಗಿ ಭಾರತೀಯ ಸಾಮಾಜಿಕ ವ್ಯವಸ್ಥೆ ನಿಂತಿರುವುದೆ ಜಾತಿಯಾಧಾರದ ಮೇಲೆ. ಒಬ್ಬ ವ್ಯಕ್ತಿಯ ಜೀವನದಲ್ಲಿನ ಎಲ್ಲಾ ಬಗೆಯ ಕಾರ್ಯಚಟುವಟಿಕೆಗಳು ಅವರ ಜಾತಿಯ ಹಿನ್ನೆಲೆಯಲ್ಲಿಯೇ ರೂಪುಪಡೆಯುತ್ತಿವೆ. ಮೀಸಲಾತಿಯೊಂದೆ ದಲಿತ ಮಹಿಳೆಗೆ ರಾಜಕೀಯ ವೇದಿಕೆಗೆ ಮುಖ್ಯ ರಹದಾರಿಯಾಗಿದ್ದರೂ ಸಹ ಅದರ ಹಿಂದೆ ಅವಳ ಜಾತಿಯೂ ಸಹ ಪ್ರಭಾವ ಬೀರುತ್ತದೆ. ಇಲ್ಲಿ ಸ್ಪೃಶ್ಯ, ಅಸ್ಪೃಶ್ಯರಲ್ಲಿ ಯಾರು ಸಬಲರಾಗಿರುತ್ತಾರೋ, ಜನಸಂಖ್ಯೆಯಲ್ಲಿ ಯಾರು ಪ್ರಾಬಲ್ಯ ಹೊಂದಿರುತ್ತಾರೋ ಅಂತಹವರಿಗೆ ಮಾತ್ರ ಮಣೆಹಾಕಲಾಗುತ್ತಿದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಸ್ಪೃಶ್ಯ ಜಾತಿಗಳೆ ರಾಜಕೀಯದಲ್ಲಿ ಪಡೆದು ಅಸ್ಪೃಶ್ಯ ಜಾತಿಗಳನ್ನು ಅಂಚಿಗೆ ಅಧಿಕ ಪಾಲನ್ನು ತಳ್ಳುತ್ತಿವೆ ಎಂಬ ಅಪವಾದವೂ ಇದೆ. ಇದು ರಾಜಕೀಯ ಪಕ್ಷಗಳ ವ್ಯವಸ್ಥಿತ ರಾಜಕಾರಣ, ಜಾತಿ ಜಾತಿಗಳ ನಡುವೆ ಕಂದಕ ತರುವ ಮೂಲಕ ತಾವು ಬದ್ಧರಾಗುತ್ತಿದ್ದಾರೆ. ಇಂತಹ ರಾಜಕೀಯ ಪಕ್ಷಗಳು ಅಂಚಿನ (Marginal women) ಮಹಿಳೆಯ ಬಗ್ಗೆ ಸ್ವಲ್ಪ ಕೂಡ ಗಮನಹರಿಸದಿರುವುದನ್ನು ನೋಡಿದರೆ ಅವುಗಳಿಗಿರುವ ಬದ್ಧತೆ ಅರಿವಾಗುತ್ತಿದೆ. ಬದಲಿಗೆ ಇಲ್ಲಿ ದಲಿತ ಮಹಿಳೆ ಎಂದಾಗ ಅದೊಂದು ಶೋಷಿತವರ್ಗ ಅದರಲ್ಲಿಯೂ ಮಹಿಳೆ ಎಂದರೆ ಅತಿ ಶೋಷಿತಳು ಎನ್ನುವುದು ಸತ್ಯ. ಜಿಲ್ಲಾ ಪಂಚಾಯತಿಗೆ ಪ್ರವೇಶ ಪಡೆಯುತ್ತಿರುವ ದಲಿತ ಮಹಿಳೆ

ಜಾತಿಯ ಹಿಡಿತದಲ್ಲಿ ತನ್ನ ಕರ್ತೃತ್ವಶಕ್ತಿಯನ್ನು, ಸೃಜನಶೀಲತೆಯನ್ನು ಅಧಿಕಾರಹೀನತೆಯನ್ನು ಕಳೆದುಕೊಳ್ಳುತ್ತಿದ್ದಾಳೆ. ಗ್ರಾಮ ಹಾಗೂ ತಾಲೂಕು ಪಂಚಾಯತಿಗಳಲ್ಲಿರುವಂತೆ ಇಲ್ಲಿ ಊರ ಹಿರಿಯರ ನಿಯಂತ್ರಣವಿಲ್ಲ ಎಂದು ಭಾವಿಸಬಹುದಾದರೂ ಪ್ರಜಾತ್ವದ ಹೆಸರಿನಲ್ಲಿ ಮೇಲ್ ಜಾತಿಗಳೆ ದಲಿತ ಮಹಿಳೆಯನ್ನು ಪಕ್ಷದ ಹೆಸರಿನಲ್ಲಿ ತಮಗೆ ಹೇಗೆ ಬೇಕೊ ಹಾಗೆ ನಿಯಂತ್ರಿಸುತ್ತಿವೆ. ಆದ್ದರಿಂದಲೆ ಈ ಹಂತದಲ್ಲಿಯೂ ದಲಿತ ಮಹಿಳಾ ರಾಜಕೀಯ ಅಸ್ತಿತ್ವಗಳು ಇಲ್ಲಿಯೂ ಮೇಲ್ವರ್ಗಗಳ ಅಧೀನದಲ್ಲಿಯೇ ನಡೆಯುತ್ತಿವೆ.

ಮಹಿಳೆಯರು ರಾಜಕೀಯ ಕ್ಷೇತ್ರದಿಂದ ಅಸಮಾನವಾಗಿ ಪ್ರಭಾವಿಸಲ್ಪಟ್ಟವರು. ಕೆಲವು ಮಹಿಳೆಯರಿಗೆ ಅದರಿಂದ ಅಪಾರವಾದ ಲಾಭವಾಗಿರಬಹುದಾದರೂ, ಅಂಚಿನ ಮಹಿಳೆಗೆ ಅದರ ಸುಳಿವೆ ಸಿಕ್ಕಿಲ್ಲ. ಹೀಗಾಗಿ ದಲಿತ ಮಹಿಳೆಯರಲ್ಲಿ ಬಹುಪಾಲು ಅಂಚಿನವರು, ಹೀಗಾಗಿ ರಾಜಕೀಯ ಅಧಿಕಾರವಿದ್ದಾಗ್ಯೂ ಕೂಡ ಅದರ ಸದ್ಬಳಕೆ ಸರಿಯಾಗಿಲ್ಲದೆ ಅತಂತ್ರಸ್ಥಿತಿಯಲ್ಲಿ ನಿಂತಿದ್ದಾರೆ. ಅಧಿಕಾರ ಗ್ರಹಣದ ನಂತರವೇ ಅನೇಕ ದಲಿತ ಮಹಿಳೆಯರಿಗೆ ರಾಜಕೀಯ ಅನುಭವವಾಗಿರುವುದು. ರಾಜಕೀಯ ಪಕ್ಷಗಳು, ಒತ್ತಡದ ಗುಂಪುಗಳು, ಸಮುದಾಯದ ಒತ್ತಡಗಳಿಂದ ಮಾತ್ರವಲ್ಲದೆ ಜಾತೀಯ ಕಾರಣದಿಂದಲೆ ತನ್ನನ್ನು ನಿಯಂತ್ರಿಸುತ್ತಿರುವ ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಜಮೀನ್ದಾರಿ ಶಾಹಿಯಂತಹ ನಿಯಂತ್ರಕಗಳೆ ಅವಳನ್ನು ಸಮಾಜದ ಮುಖ್ಯವಾಹಿನಿಯಿಂದ ತುಂಬ ದೂರವೆ ಇಟ್ಟಿವೆ. ಈ ಬಗೆಯ ರಾಜಕೀಯ ವೈಪರಿತ್ಯ ಹಾಗೂ ವ್ಯತ್ಯಾಯದಿಂದ ಕೂಡಿದ ಪರಿಣಾಮಗಳ ಬಗೆಗೆ ಹೆಚ್ಚಿನ ಗಮನಹರಿಸುವುದು ಅಗತ್ಯವಿದೆ. ಇದು ಕೇವಲ ವರ್ಗ, ಲಿಂಗ, ಜಾತಿ, ಧರ್ಮ ಅಥವಾ ಪ್ರಾದೇಶಿಕ ಅಸಮಾನತೆಗಳಿಗೆ ಮಾತ್ರವಲ್ಲದೆ ಲಿಂಗಾಧಾರಿತ ವಿಭಜನಾ ಕ್ರಮಗಳಿಗೂ ಗಮನ ಹರಿಸುವುದು ಅಗತ್ಯವಾಗಿದೆ. ಪ್ರತಿಯೊಂದು ದೇಶ, ರಾಜಕೀಯ ಪಕ್ಷಗಳನ್ನು ವಾಸ್ತವವಾಗಿ ನಿಯಂತ್ರಿಸುತ್ತಿರುವುದು ಜಾತಿಯೆ ಮುಖ್ಯ ಕಾರಣವಾಗಿದೆ. ಇಂದು ಧರ್ಮರಹಿತ ವರ್ಗರಹಿತ ಸಮಾಜವನ್ನು ಊಹಿಸಿಕೊಳ್ಳಬಹುದು. ಆದರೆ ಜಾತಿ ರಹಿತವಾದ ಸಮಾಜವನ್ನು ಊಹಿಸಿಕೊಳ್ಳುವುದು ಅಸಾಧ್ಯವಾಗಿದೆ.

ಮಹಿಳೆಯನ್ನು ಕುರಿತಂತೆ ಮಹಿಳಾ ಅಧ್ಯಯನ ಯೋಜಿತವಾದ ನೆಲೆಯಲ್ಲಿ ಚರ್ಚಿಸುತ್ತಲೆ ಅವಳ ವಾಸ್ತವ ಬದುಕಿನ ಚಿತ್ರಣವನ್ನು ಒರೆಗೆ ಹಚ್ಚಿ ಪ್ರಯತ್ನಿಸುತ್ತದೆ. ಪ್ರಸ್ತುತ ಅಧ್ಯಯನದುದ್ದಕ್ಕೂ ಮಹಿಳೆ ಅನುಭವ ಜನ್ಯ ಅಂಶಗಳನ್ನೆ ವಿಶ್ಲೇಷಿಸಲಾಗಿದೆ. ಇಂತಹ ಅಧ್ಯಯನಗಳಲ್ಲಿ ಮಹಿಳೆಯರ ಅನುಭವದ ಬಗ್ಗೆ ವಿವರಿಸುವುದು ನಿಜವಾಗಿಯೂ ಶ್ಲಾಘನೀಯವಾದುದೆ. ಪರಿವರ್ತನೀಯ ಪ್ರಯತ್ನದ ಮೂಲಕ ಮಹಿಳೆಯ ಅನುಭವವು ಸ್ಥಳೀಯ ಸಂಸ್ಕೃತಿ ಮತ್ತು ಸಂಪ್ರದಾಯಗಳಿಗೆ ದೊರೆಯುವುದಿಲ್ಲ ಎಂಬುದನ್ನು ಮೊದಲು ಅರಿಯಬೇಕು. ಅನುಭವವು ಸರಳವಾಗಿ ಅಸ್ತಿತ್ವದಲ್ಲಿರುವುದು ಮತ್ತು ಅದನ್ನು ಅನುಭವಿಸಲಾಗುತ್ತಿರುವುದುಂಟು. ಈ ವಿಷಯವಾಗಿ ಸ್ತ್ರೀವಾದಿ ದೃಷ್ಟಿಕೋನವಿರುವುದು ಸತ್ಯ. ಎಲ್ಲಾ ಮಹಿಳೆಯರಿಗೂ ಅನುಭವಗಳಿರುತ್ತವೆ ಆದರೆ ಅವರೆಲ್ಲರ ಅನುಭವಗಳು ಮಹಿಳಾವಾದಿ ದೃಷ್ಟಿಕೋನದಿಂದ ಕೂಡಿರುವುದಿಲ್ಲ ಎಂಬುದನ್ನು ನಾವು ಮೊದಲು ಅರಿಯಲೇಬೇಕು. ಇಂತಹ ನೆಲೆಯೊಳಗೆ ದಲಿತರಲ್ಲಿಯೇ ದಲಿತಳಾಗಿರುವ ದಲಿತ ಮಹಿಳೆಯ ರಾಜಕೀಯ ಸಬಲೀಕರಣಕ್ಕೆ ತಡೆಯಾಗಿರುವ ಅಂಶಗಳನ್ನು ಅವಳ ಸ್ವಂತ ಅನುಭವದ ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

೩.೬.೧. ಜಿಲ್ಲಾ ಪಂಚಾಯಿತಿಯವಲ್ಲಿ ದಲಿತ ಮಹಿಳಾ ಸ್ಥಿತಿಗತಿಯನ್ನಾಧರಿಸಿದ ಕೋಷ್ಟಕಗಳ ವಿವರ

ಜಿಲ್ಲಾ ಪಂಚಾಯಿತಿಗೆ ಆಯ್ಕೆಯಾಗಿರುವ ದಲಿತ ಮಹಿಳೆಯರ ವಯೋಮಿತಿ ವಿವರ (ಕೋಷ್ಟಕ-೧)




ಮೇಲಿನ ಕೋಷ್ಟಕ ಒಂದರಲ್ಲಿ ತೋರಿಸಲಾಗಿರುವಂತೆ ಜಿಲ್ಲಾ ಪಂಚಾಯಿತಿಯಲ್ಲಿನ ಚುನಾಯಿತ ದಲಿತ ಮಹಿಳೆಯರ ವಯಸ್ಸಿನ ಪ್ರಮಾಣವು ಹಿಂದಿನ ತಾಲ್ಲೂಕ ಹಾಗೂ ಗ್ರಾಮ ಪಂಚಾಯಿತಿಗಳಲ್ಲಿರುವಂತೆಯೇ ಇದೆ.

ಚುನಾವಣೆಗೆ ನಿಲ್ಲಲು ಪ್ರತಿಯೊಬ್ಬರಿಗೂ ಇಪ್ಪತ್ತೊಂದು ವರ್ಷದ ಮಿತಿ, ಇದೆ. ಆದರೆ ಇಪ್ಪತ್ತೊಂದರಿಂದ ಇಪ್ಪತ್ತೈದರವರೆಗಿನ ವಯೋಮಾನದಲ್ಲಿ ಚುನಾಯಿತರಾಗುವ ದಲಿತ ಮಹಿಳೆಯರ ವಯಸ್ಸಿನ ಪ್ರಮಾಣ ಶೇ.೦೫.೧೯ ರಷ್ಟಿದೆ. ಮುಖ್ಯವಾಗಿ ಸಮಾಜ, ಕುಟುಂಬಗಳಲ್ಲಿ ಮಹಿಳೆಯರ ಶೀಲ, ಪಾವಿತ್ರ್ಯ ಹಾಗೂ ರಾಜಕೀಯ ಕುರಿತಾದ ಅಪನಂಬಿಕೆಗಳೇ ಅವರು ಚಿಕ್ಕವಯಸ್ಸಿನಲ್ಲಿ ರಾಜಕಾರಣಕ್ಕೆ ಬರಲು ತಡೆಯಾಗಿದೆ. ರಾಜಕೀಯಕ್ಕೆ ಬರುತ್ತಿರುವ ದಲಿತ ಮಹಿಳೆಯರಲ್ಲಿ ಮೂವತ್ತರಿಂದ ನಲವತ್ತೈದನೆಯ ವಯಸ್ಸಿನವರೆ ಅಧಿಕವಾಗಿದ್ದಾರೆ ಅಂತಹವರ ಪ್ರಮಾಣ ೩೮.೦೬ ಕಾರಣ ಎಂದರೆ ಇದು ವ್ಯಕ್ತಿಗಳ ಮಧ್ಯವಯಸ್ಸಾಗಿರುವುದರಿಂದ ಇಲ್ಲಿ ಅವರು ಕೌಟುಂಬಿಕ ಜೀವನದಲ್ಲಿನ ಎಲ್ಲಾ ಬಗೆಯ ಕರ್ತವ್ಯಗಳನ್ನು ನಿರ್ವಹಿಸಿ ಮುಗಿಸಿರುತ್ತಾರಲ್ಲದೆ. ಮನೆಯಿಂದ ಹೊರಬರಲು ಕುಟುಂಬದ ಪ್ರತಿರೋಧ ಅಷ್ಟಾಗಿ ಇರಲಾರದು. ಹಾಗೆಯೇ ನಲವತ್ತೈದರಿಂದ ಐವತ್ತೈದರವರಗಿನ ವಯಸ್ಸಿನಲ್ಲಿ ರಾಜಕೀಯಕ್ಕೆ ಬರುತ್ತಿರುವಂತೆ ದಲಿತ ಮಹಿಳೆಯರ ಪ್ರಮಾಣ ಶೇ. ೦೯.೪೯ ರಷ್ಟು ಈ ವಯಸ್ಸಿನಲ್ಲಿ ವ್ಯಕ್ತಿಗಳಲ್ಲಿ ಕ್ರಿಯಾತ್ಮಶಕ್ತಿ ಕುಂದಿರುತ್ತಿಲ್ಲದೆ ಅವರಿಗೆ ಉತ್ಸಾಹವಾಗಲಿ ಅಥವಾ ಹುರುಪಾಗಲಿ ಇರಲಾರದು ಕೌಟುಂಬಿಕ ಬಂಧನಗಳು ಸಹ ಅವಳ ಮೇಲೆ ನಿಯಂತ್ರಣ ಕಡಿಮೆ ಹೊಂದಿರುತ್ತವೆ.

### ಚುನಾಯಿತ ದಲಿತ ಮಹಿಳೆಯರ ಶೈಕ್ಷಣಿಕ ಮಟ್ಟದ ವಿವರ (ಕೋಷ್ಟಕ-೨)




ಕೋಷ್ಟಕ ೨ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಗೆ ಚುನಾಯಿತರಾಗಿರುವ ದಲಿತ ಮಹಿಳೆಯರ ಸಾಕ್ಷಾರತೆ ಮಟ್ಟ ಸಾಧಾರಣವಾಗಿಯೇ ಇದೆ. ಈ ಹಂತದಲ್ಲಿ ದೊಡ್ಡ ಮಟ್ಟದ ಯೋಜನೆಗಳು, ಅನುದಾನಗಳು ಜಾರಿಯಾಗುವುದರಿಂದ, ರಾಜಕೀಯ ವೇದಿಕೆಗೆ ಮುಖ್ಯ ಹಂತವಾಗಿರುವ ಜಿಲ್ಲಾ ಪಂಚಾಯಿತಿಯಲ್ಲಿ ದಲಿತ ಮಹಿಳೆಯರಲ್ಲಿ ಪ್ರಾಥಮಿಕ ಹಂತ ಮಾತ್ರವೇ ಮುಗಿಸಿರುವ ದಲಿತ ಮಹಿಳೆಯರ ಪ್ರಮಾಣ, ಶೇ ೦೬.೩೧ ರಷ್ಟು ಇದ್ದರೆ ಪ್ರೌಢಶಾಲಾನಂತರದ ಹಂತದಲ್ಲಿ ಶೇ ೨೨.೩೩ ರಷ್ಟು ಹಾಗೂ ಪದವಿ ಮಟ್ಟದಲ್ಲಿ ಶೇ ೨೯.೪೪ ರಷ್ಟು ಸಾಕ್ಷಾರತೆಯನ್ನು ದಲಿತ ಮಹಿಳೆ ಹೊಂದಿದ್ದಾಳೆ. ಕೆಳಹಂತಗಳಾದ ತಾಲ್ಲೂಕ, ಗ್ರಾಮ ಪಂಚಾಯಿತಿಗಳಿಗೆ ಹೋಲಿಸಿದರೆ ಜಿಲ್ಲಾ ಪಂಚಾಯಿತಿಯಲ್ಲಿನ ದಲಿತ ಮಹಿಳಾ ಸಾಕ್ಷರತೆಯ ಪ್ರಮಾಣ ಸುಧಾರಣೆಯಾಗಿವೆ ಎನ್ನಬಹುದು. ಒಬ್ಬ ವ್ಯಕ್ತಿಯ ವ್ಯಕ್ತಿತ್ವ, ಚತುರತೆ, ಬುದ್ಧಿ ಮತ್ತೆ ಎಲ್ಲವೂ ಅವರು ಪಡೆದ ಶಿಕ್ಷಣದ ಮೂಲಕವೇ ಚಲಾವಣೆಗೆ ಬರುತ್ತವೆ. ಕಡಿಮೆ ಸಾಕ್ಷಾರತೆ ಇದ್ದರೆ ಅವರಿಗೆ ಸ್ವ ಅರಿವಿನ ಬಗ್ಗೆಯಾಗಲಿ ಅಥವಾ ರಾಜಕೀಯಾಧಿಕಾರದ ಬಗ್ಗೆಯಾಗಲಿ ತಿಳುವಳಿಕೆ ಹೇಗೆ ಸಾಧ್ಯ.

### ಹೆಂಡತಿಯ ಬದಲಿಗೆ ಅಧಿಕಾರ ಚಲಾಯಿಸುತ್ತಿರುವ ಪುರುಷರ ಪ್ರಮಾಣ (ಕೋಷ್ಟಕ-೩)




ಕೋಷ್ಟಕ ೩ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಯಲ್ಲಿ ಹೆಂಡತಿಯ ಅಥವಾ ಮಗಳ ಬದಲಿಗೆ ಅಧಿಕಾರ ಚಲಾಯಿಸುತ್ತಿರುವ ಪುರುಷರ ಪ್ರವೇಶ ಅಥವಾ ಪ್ರೋಕ್ಸಿ ವ್ಯವಸ್ಥೆ ಅಧಿಕವಾಗಿದೆ. ಗ್ರಾಮ ಹಾಗೂ ತಾಲ್ಲೂಕ ಪಂಚಾಯತಿಗಳಿಗೆ ಹೋಲಿಸಿದರೆ ಇಲ್ಲಿ ಅದರ ಪ್ರಮಾಣ ಅತ್ಯಧಿಕವಾಗಿದೆ. ಮುಖ್ಯವಾಗಿ ಜಿಲ್ಲಾ ಪಂಚಾಯಿತಿಗೆ ಅಧಿಕ ಅನುದಾನ ಬರುತ್ತಿರುವುದರಿಂದ ಲಂಚಗೋಳಿತನ ಇಲ್ಲಿ ಅಧಿಕವಾಗಿರುವುದರಿಂದ ಹಾಗೂ ಇದು ನಗರಕೇಂದ್ರಿತವಾಗಿರುವುದರಿಂದವೆನೋ ಇಲ್ಲಿ ಪತಿರಾಯರ ಪವಾಡಗಳು ಅತ್ಯಧಿಕವಾಗಿ ಕಂಡುಬರುತ್ತಿವೆ. ಪ್ರತಿಸಾರಿ ನಾನು ಕ್ಷೇತ್ರಕಾರ್ಯದ ನಿಮಿತ್ಯ ಜಿಲ್ಲಾ ಪಂಚಾಯಿತಿಯ ಮೀಟಿಂಗ್‌ಗಳಿಗೆ ಹೋದರೆ ಅಲ್ಲಿ ಹೆಂಡತಿಯ ಬದಲಿ ಪುರುಷರೇ ಅವರ ಸ್ಥಾನ ಅಲಂಕರಿಸಿ ಎಲ್ಲಾ ನಿರ್ಣಯಗಳನ್ನು ಮಂಡಿಸುತ್ತಿರುವುದನ್ನು ಕಂಡಿದ್ದೇನೆ. ಹಾಗೆಯೇ ಪಂಚಾಯಿಯ ಸದಸ್ಯೆಯರನ್ನು ಭೇಟಿ ಮಾಡಲು ಇವರ ಒಪ್ಪಿಗೆ ಪಡೆಯದಂತೆ ಸುಮಾರು ದಿನ ಕಾಯ್ದಿದ್ದೇನೆ. ಕ್ಷೇತ್ರಕಾರ್ಯದ ಸಮಯದಲ್ಲಿಯೂ ಇವರು ಅವಳಿಗೆ ಮಾತನಾಡಲು ಬಿಡಲಿಲ್ಲ ಎಲ್ಲಾ ತಾವೆ ಮಾತಾಡುತ್ತಿದ್ದರು. ಹೀಗೆ ದಲಿತ ಮಹಿಳೆಯ ಅಧಿಕಾರ ಕೇವಲ ನೆಪಮಾತ್ರಕ್ಕಾಗಿ ಸಿಕ್ಕಿದ್ದು ಉಳಿದಂತೆ ಅವಳ ಗಂಡ, ರಾಜಕೀಯ ಪಕ್ಷಗಳೇ ವಾಸ್ತವವಾಗಿ ಅದನ್ನು ನಿರ್ವಹಿಸುತ್ತಿವೆ. ಇಂತಹ ಅಧಿಕಾರ ಕಳೆದುಕೊಂಡು ಪತಿರಾಯರಿಗೆ ಅಧಿಕಾರ ಬಿಟ್ಟುಕೊಟ್ಟಿರುವ ದಲಿತ ಮಹಿಳೆಯರ ಪ್ರಮಾಣ. ಕೊಪ್ಪಳದಲ್ಲಿ ಶೇ ೪೪.೧೧ರಷ್ಟು, ಯಲಬುರ್ಗದಲ್ಲಿ ಶೇ.೪೯.೬೦ರಷ್ಟು, ಕುಷ್ಟಗಿಯಲ್ಲಿ ಶೇ ೫೭.೪೪ರಷ್ಟು, ಗಂಗಾವತಿಯಲ್ಲಿ ಶೇ. ೫೮.೬೧ರಷ್ಟು ಇದೆ.

### ಪಂಚಾಯಿತಿಯ ಅಧಿಕಾರ, ಕಾರ್ಯಗಳು, ಯೋಜನೆಗಳ ಬಗ್ಗೆ ಅರಿವಿರದ ದಲಿತ ಮಹಿಳಾ ಸದಸ್ಯರ ಪ್ರಮಾಣ (ಕೋಷ್ಟಕ-೪)




ಕೋಷ್ಟಕ ೪ ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಯಲ್ಲಿನ ಚುನಾಯಿತ ದಲಿತ ಮಹಿಳೆಯರಿಗೆ ಅಧಿಕಾರ, ಯೋಜನೆಗಳು, ಅನುದಾನಗಳ ಬಗ್ಗೆ ಇರುವ ಅರಿವಿನ ಮಟ್ಟ ಸ್ವಲ್ಪ ಸಾಮಾನ್ಯವಾಗಿದೆ. ಏಕೆಂದರೆ ಕೆಳಹಂತದ ಪಂಚಾಯಿತಿಗಳಿಗೆ ಹೋಲಿಸಿದರೆ ಇಲ್ಲಿ ಅದರ ಪ್ರಮಾಣ ಸ್ವಲ್ಪ ಪರವಾಗಿಲ್ಲ ಎನ್ನಬಹುದು. ಒಂದು ಜವಾಬ್ದಾರಿಯುತವಾದ ಹುದ್ದೆಯಲ್ಲಿರುವ ಸದಸ್ಯರುಗಳು ತಮಗೆ ನೀಡಿದ ಅಧಿಕಾರದ ಅರಿವು ಇತಿ ಮಿತಿಗಳ ಅರಿವಿರದಿದ್ದಲ್ಲಿ ಅಂತಹವರಿಂದ ಯಾವುದೇ ಬಗೆಯ ಅಭಿವೃದ್ಧಿಯ ಫಲಗಳನ್ನು ನಿರೀಕ್ಷಿಸಲಾಗುವುದಿಲ್ಲ. ತನ್ನ ಅಧಿಕಾರದ ಮಿತಿಯಲ್ಲಿ ಯಾವ ಯಾವ ಬಗೆಯ ಕಾರ್ಯಗಳನ್ನು ಮಾಡಬೇಕು. ಪಂಚಾಯಿತಿಗೆ ಯಾವ ಯಾವ ಮೂಲಗಳಿಂದ ಎಷ್ಟು ಹಣ ಬರುತ್ತದೆ. ಅದನ್ನು ಹೇಗೆ ಬಳಸಿಕೊಳ್ಳಬೇಕು, ಎಂಬುದರ ಅರಿವಿರದಿದ್ದರೆ ಮಟ್ಟಿಗೆ ಅಂತಹವರಿಂದ ನಾವು ಅಭಿವೃದ್ಧಿಯನ್ನು ನಿರೀಕ್ಷಿಸುವುದು ಅಸಾಧ್ಯ. ಅಂತಹ ದಲಿತ ಮಹಿಳೆಯರ ಪ್ರಮಾಣವು ಕ್ರಮವಾಗಿ ಕೊಪ್ಪಳದಲ್ಲಿ ೧೩.೬೦ ರಷ್ಟು ಗಂಗಾವತಿಯಲ್ಲಿ ೨೧.೧೬ ರಷ್ಟು ಯಲಬುರ್ಗದಲ್ಲಿ ೩೦.೦೧ ಹಾಗೂ ಕುಷ್ಟಗಿಯಲ್ಲಿ ೧೦.೪೧ ರಷ್ಟು ಇದೆ. ಇಲ್ಲಿಯೂ ಸಹ ಇತರೆ ಕೆಳಹಂತಗಳಲ್ಲಿ ದಲಿತ ಮಹಿಳೆಯರ ಸ್ಥಿತಿಗೆ ತುಲನೆ ಮಾಡಿದಾಗ ಜಿಲ್ಲಾ ಪಂಚಾಯಿತಿಯಲ್ಲಿನ ದಲಿತ ಮಹಿಳೆಯ ಸ್ಥಿತಿಯಲ್ಲಿ ಸುಧಾರಣೆ ಕಂಡುಬರುವುದು. ಆದರೂ ಸ್ವಲ್ಪ ಈ ದಿಶೆಯಲ್ಲಿ ಪ್ರಯತ್ನಗಳು ನಡೆಯಬೇಕಿದೆ.

ಜಿಲ್ಲಾ ಪಂಚಾಯಿತಿಯ ಅಧ್ಯಕ್ಷೆ, ಉಪಾಧ್ಯಕ್ಷೆ, ಸದಸ್ಯೆಯಾಗಿದ್ದಾಗ್ಯೂ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾದ ಪ್ರವೇಶಾವಕಾಶವನ್ನು ಪಡೆಯದೆ ಇರುವ ಮಹಿಳೆಯರ ಪ್ರಮಾಣ (ಕೋಷ್ಟಕ-೫)




ಮೇಲಿನ ಕೋಷ್ಟಕ ೫ ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಯಂತಹ ಹಿರಿಯ ಸಂಸ್ಥೆಯೊಳಗೆ ಶಾಸನಬದ್ಧವಾಗಿ ಕಾರ್ಯ ನಿರ್ವಹಿಸುವ ಮಹಿಳೆಯರು ತಮ್ಮ ಜಾತಿಯ ಕಾರಣದಿಂದಲೇ ಸಾರ್ವಜನಿಕ ಸ್ಥಳಗಳಲ್ಲಿ ವ್ಯವಹರಿಸುವ, ಸಂಚರಿಸುವ ಮುಕ್ತ ಅವಕಾಶವನ್ನು ಸಂಪೂರ್ಣವಾಗಿ ಪಡೆಯಲಾಗಿಲ್ಲವಾದರೂ ಅಲ್ಪ ಪ್ರಮಾಣದಲ್ಲಿಯಾದರೂ ಪಡೆದಿದ್ದಾಳೆ. ದಲಿತ ಮಹಿಳೆ ಎಷ್ಟೇ ಮೇಲಿನ ಹಂತದಲ್ಲಿ ಪ್ರಭಾವಶಾಲಿಯಾದ ಅಧಿಕಾರವನ್ನು ಪಡೆದಿದ್ದರೂ ಸಹ ಅವಳು ಜಾತಿಯನ್ನು ನಿರಾಕರಿಸಿ ತನ್ನ ಸ್ವಹಿತಾಸಕ್ತಿಯನ್ನು ಮೆರೆಯಲು ಸಾಧ್ಯವೇ ಇಲ್ಲ ಎಂಬ ಸ್ಥಿತಿಯನ್ನು ಮೇಲಿನ ಕೋಷ್ಟಕದಲ್ಲಿ ಕಾಣಬಹುದು. ತಾನು ಪ್ರತಿನಿಧಿಸುವ ಊರಿಗೆ ಮಾತ್ರವಲ್ಲದೆ ಇಡೀ ಜಿಲ್ಲೆಗೆ ಪ್ರಮುಖ ಅಧಿಕಾರ ಸ್ಥಾನವನ್ನು ಪಡೆದಿದ್ದರೂ ಕೂಡ ಹಿಂದಿನಿಂದ ಅವಳ ಮೇಲಿರುವ ಪಿತೃಪ್ರಧಾನ, ಜಾತಿನಿಷ್ಠ ಮೌಲ್ಯಗಳಿಗೆ ತಲೆಬಾಗಿ ನಡೆಯುವ ಸ್ಥಿತಿ ಅವಳಿಗೆ ಇಂದಿಗೂ ಕಾಡುತ್ತಿದೆ. ಹಿಂದಿನ ಪಂಚಾಯಿತಿಯ ಅಧ್ಯಕ್ಷರು ಪ್ರಸಿದ್ಧ ಯಾತ್ರಸ್ಥಳಕ್ಕೆ ಹೋದಾಗ ಅಲ್ಲಿ ಇಂತಹ ಮುಜುಗರ ಪರಿಸ್ಥಿತಿಯನ್ನು ಎದುರಿಸಿದ ಉದಾಹರಣೆಯೂ ಇದೆ. ಆದ್ದರಿಂದಲೇ ಜಿಲ್ಲಾ ಪಂಚಾಯಿತಿಯಂತಹ ಮೇಲ್‌ಹಂತದಲ್ಲಿಯೂ ಅವಳು ಜಾತಿಯ ಕುರಿತು ಮುಜುಗರವನ್ನೇ ಅನುಭವಿಸುತ್ತಿರುವುದು. ಇಂತಹ ಮುಜುಗರಕ್ಕೆ ಒಳಗಾಗಿರುವ ದಲಿತ ಮಹಿಳೆಯರ ಪ್ರಮಾಣವು ಯಲಬುರ್ಗದಲ್ಲಿ ಶೇ.೦೩.೧೧ ರಷ್ಟು ಕೊಪ್ಪಳದಲ್ಲಿ ಶೇ.೦೬.೧೭ ರಷ್ಟು ಕುಷ್ಟಗಿಯಲ್ಲಿ ಶೇ.೦೪.೧೫ ರಷ್ಟು ಹಾಗೂ ಗಂಗಾವತಿಯಲ್ಲಿ ಶೇ.೦೩.೧೦ ರಷ್ಟು ಇದೆ.

### ಜಾತಿ ಕಾರಣದಿಂದಲೆ ತಮ್ಮ ಅಧಿಕಾರವನ್ನು ಮೊಟಕುಗೊಳಿಸಲಾಗುತ್ತಿದೆ ಎಂದು ಒಪ್ಪುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೬)




ಕೋಷ್ಟಕ ೬ ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಯಲ್ಲಿನ ದಲಿತ ಮಹಿಳೆಯರು ಅನುಭವಿಸುವ ಹತ್ತು ಹಲವು ಬಗೆಯ ಇಕ್ಕಟ್ಟು, ಸವಾಲುಗಳಿಗೆ ಜಾತಿಯೇ ಪ್ರಮುಖ ಕಾರಣ ಎಂಬುದನ್ನು ಒಪ್ಪುತ್ತಾರೆ. ಸಾಮಾಜಿಕ ವ್ಯವಸ್ಥೆಯನ್ನೇ ಹಾಳುಗೆಡವಿದ ಜಾತಿನಿಷ್ಠ ಅಂಶಗಳು ಮೇಲ್‌ವರ್ಗದವರಿಗೆ ಮಾತ್ರವೇ ಅಧಿಕಾರ ಹೊಂದುವ ಅವಕಾಶ ನೀಡಿವೆ. ಇತರ ದಲಿತ ಸಮುದಾಯಗಳು ಮಾತ್ರ ಇದರಿಂದ ತುಂಬಾ ದೂರ. ಇರಬೇಕು ಎಂಬ ಅರಚಿತ ನಿಯಮಗಳು ಇಂದಿಗೂ ವ್ಯವಸ್ಥೆಯೊಳಗೆ ಇವೆ. ದಲಿತಳಾಗಿರುವುದರಿಂದ ತನಗೆ ಅಧಿಕಾರ ನಿಭಾವನೆಯಲ್ಲಿ ತೊಡಕು ಉಂಟಾಗಿದೆ ಎಂಬುದನ್ನು ದಲಿತ ಮಹಿಳೆ ಒಪ್ಪಿಕೊಳ್ಳುತ್ತಿದ್ದಾಳೆ. ಅಧಿಕಾರ ಎಂಬುದು ಕೇವಲ ಮೇಲ್‌ವರ್ಗಗಳಿಗೆ ಮಾತ್ರವೇ ಸೀಮಿತ ಎಂಬುದನ್ನು ಇದು ಸಮರ್ಥಿಸುತ್ತದೆ. ಕೊಪ್ಪಳ ಜಿಲ್ಲೆಯಾದ್ಯಾಂತ ದಲಿತ ಸಮುದಾಯದ ಸಂಖ್ಯೆ ಹೆಚ್ಚಾಗಿದ್ದರೂ ಸಹ ಅವರು ಒಂದು ನಿರ್ಧಾರಕ ಶಕ್ತಿಯಾಗಿ ರೂಪುಗೊಳ್ಳಲು ಸಾಧ್ಯವಾಗುತ್ತಿಲ್ಲ. ತನ್ನ ಜಾತಿಯ ಕಾರಣದಿಂದಲೇ ಅಧಿಕಾರವನ್ನು ಪ್ರಭುತ್ವಶಕ್ತಿಗಳು, ರಾಜಕೀಯ ಪಕ್ಷಗಳು ಮೊಟಕುಗೊಳಿಸುತ್ತಿವೆ. ಎಂಬುದನ್ನು ಮೇಲಿನ ಕೋಷ್ಟಕದಲ್ಲಿ ಕಾಣಬಹುದು. ಅಂತಹ ದಲಿತ ಮಹಿಳೆಯರ ಸಂಖ್ಯೆ ಕ್ರಮವಾಗಿ ಕುಷ್ಟಗಿಯಲ್ಲಿ ಶೇ.೦೬.೧೯ ರಷ್ಟು ಯಲಬುರ್ಗಾದಲ್ಲಿ ಶೇ.೦೪.೧೧ ರಷ್ಟು ಗಂಗಾವತಿಯಲ್ಲಿ ಶೇ.೦೬.೪೬ ರಷ್ಟು ಕೊಪ್ಪಳದಲ್ಲಿ ಶೇ.೦೩.೬೧ ರಷ್ಟು ಇದೆ.

ರಾಜಕೀಯ ಮೀಸಲಾತಿ ಪರವಿರುವ ದಲಿತ ಮಹಿಳೆಯರ ಪ್ರಮಾಣ (ಕೋಷ್ಟಕ-೭)




ಕೋಷ್ಟಕ ೭ ರಲ್ಲಿರುವಂತೆ ಮೀಸಲಾತಿಯನ್ನು ಬೆಂಬಲಿಸಲು ದಲಿತ ಮಹಿಳೆಯರಿಗೆ ಹಲವು ಕಾರಣಗಳಿವೆ. ಅವುಗಳಲ್ಲಿ ಸಮಾಜದ ಅಂಚಿನಿಂದ ಮುಖ್ಯವಾಹಿನಿಗೆ ತರುವ ಸಾಧನ ಎಂಬ ಅರಿವೂ ಅವಳಿಗಿದೆ. ಮೀಸಲಾತಿ ಏನಾದರೂ ಇರದಿದ್ದರೆ ಎಲ್ಲೋ ಒಂದು ಮೂಲೆಯೊಳಗಿದ್ದ ತನಗೆ ಇಂತಹ ದೊಡ್ಡ ರಾಜಕೀಯ ಸಹಭಾಗಿತ್ವದ ಅವಕಾಶವೇ ಇರುತ್ತಿರಲಿಲ್ಲ ಎಂದು ಅವಳು ಹೇಳುತ್ತಿದ್ದಾಳೆ. ಅಧಿಕಾರವನ್ನೆಲ್ಲಾ ತಮ್ಮ ಕೈವಶಮಾಡಿಕೊಂಡಿದ್ದ ಮೇಲ್‌ಜಾತಿಗಳಿಂದ ಎಲ್ಲಾರಿಗೂ ಸರಿ ಸಮನಾಗಿ ಹಂಚಿಕೆಯಾಗಿರುವುದು ಒಳ್ಳೆಯ ಬೆಳವಣಿಗೆ. ಹೀಗೆ ಅಧಿಕಾರ ಕೇಂದ್ರಿತ ಜಾತಿಗಳಿಂದ ಅಧಿಕಾರ ಅಂಚಿನ. ವಂಚಿತ ಜಾತಿಗಳಿಗೆ ಸಿಕ್ಕಿರುವುದು ಮೀಸಲಾತಿಯ ಹಿರಿಮೆ ಎಂಬುದು ಅವಳ ಅಭಿಮತ. ಇಂತಹ ಮೀಸಲಾತಿ ಇರದಿದ್ದರೆ ತನಗೆ ಅಧಿಕಾರವೇ ಸಿಗುತ್ತಿರಲಿಲ್ಲ ಹಾಗೂ ನಾಲ್ಕು ಜನರಿಗೂ ಬೆರೆಯಲು ಸಾಧ್ಯವಾಗುತ್ತಿರಲಿಲ್ಲ. ಆ ಕಾರಣದಿಂದಲೇ ದಲಿತ ಮಹಿಳೆ ಮೀಸಲಾತಿಯನ್ನು ತುಂಬು ಮನಸ್ಸಿನಿಂದ ಸ್ವೀಕರಿಸಿ ಅದರ ಮುಂದುವರೆಕೆಗಾಗಿ ಆಶಿಸುತ್ತಿದ್ದಾಳೆ. ಹೀಗೆ ಮೀಸಲಾತಿಯ ಪರವಾಗಿರುವ ದಲಿತ ಮಹಿಳೆಯರ ಪ್ರಮಾಣ ಕುಷ್ಟಗಿಯಲ್ಲಿ ಶೇ.೩೬.೪೧ ರಷ್ಟು ಯಲಬುರ್ಗದಲ್ಲಿ ಶೇ.೪೨.೪೪ ರಷ್ಟು ಕುಷ್ಟಗಿಯಲ್ಲಿ ಶೇ.೪೦.೬೦ ರಷ್ಟು, ಹಾಗೂ ಕೊಪ್ಪಳದಲ್ಲಿ ಶೇ.೩೮.೬೦ ರಷ್ಟು ಜಿಲ್ಲಾ ಪಂಚಾಯಿತಿಯಲ್ಲಿನ ಹಾಲಿ ಮತ್ತು ಮಾಜಿ ಸದಸ್ಯೆ, ಅಧ್ಯಕ್ಷೆಯರಿಂದ ಇಂತಹ ಮಾಹಿತಿ ಪಡೆಯಲಾಗಿದೆ.

## ಮುಂದಿನಸಾರಿ ಚುನಾವಣೆಗೆ ನಿಲ್ಲಲು ಒಲವಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಟಕ-೮)




ಮೇಲಿನ ಕೋಷ್ಟಕ ೮ ರಲ್ಲಿರುವಂತೆ ಜಿಲ್ಲಾ ಪಂಚಾಯಿತಿಯಂತೆ ಉನ್ನತ ಅಧಿಕಾರ ಕೇಂದ್ರಕ್ಕೆ ದಾಪುಗಾಲಾಗಿ ಅಲ್ಲಿ ನೆಲೆಕಂಡುಕೊಂಡ ದಲಿತ ಮಹಿಳೆ ತನಗೆ ಅಧಿಕಾರದಿಂದ ತುಂಬ ಸಹಾಯಕವಾಗಿದೆ. ಮನೆಯಿಂದ ಹೊರಗೆ ಬರಲು ನಾಲ್ಕು ಜನರ ಬಳಿ ಹೋಗಲು ಸಾಧ್ಯವಾಯಿತು. ಅಲ್ಲದೆ ಜನರು ತನ್ನ ಗುರುತಿಸುತ್ತಿರಲ್ಲದೆ, ಸಮಾಜದಲ್ಲಿ ಗೌರವಯುತ ಸ್ಥಾನ ಸಿಕ್ಕಿತು ಎನ್ನುತ್ತಿದ್ದಾಳೆ. ತಾನು ಪಂಚಾಯಿತಿಯಲ್ಲಿ ಅನುಭವಿಸಿದ ಹಲವು ಕಾರಣಗಳಿಂದಲೇ ಅವಳು ಮುಂದಿನ ರಾಜಕೀಯ ಭವಿಷ್ಯಕ್ಕಾಗಿ ಮುಂದಿನ ಸಾರಿಯು ಚುನಾವಣೆಯನ್ನು ಎದುರಿಸುವುದಾಗಿ ವಿಶ್ವಾಸದಿಂದ ಹೇಳುತ್ತಿದ್ದಾಳೆ. ಅಲ್ಲದೆ ಮುಂದಿನ ಸಾರಿಯೂ ಸಹ ತಾನು ಗೆದ್ದೆ ಗೆಲ್ಲುತ್ತೇನೆ ಎಂಬ ಭರವಸೆಯೂ ಅವಳಲ್ಲಿದೆ. ಹೀಗೆ ರಾಜಕೀಯ ಸಬಲೀಕರಣದ ಸಾಕಾರಕ್ಕಾಗಿ ಮುಂದಿನ ಸಾರಿಯೂ ಚುನಾವಣೆಗೆ ನಿಲ್ಲಲು ಒಲವಿರುವ ದಲಿತ ಮಹಿಳೆಯರ ಪ್ರಮಾಣ ಕೊಪ್ಪಳದಲ್ಲಿ ಶೇ.೪೩.೫೧ ರಷ್ಟು, ಗಂಗಾವತಿಯಲ್ಲಿ ಶೇ.೪೧.೬೭ ರಷ್ಟು ಗಂಗಾವತಿಯಲ್ಲಿ ಶೇ.೫೨.೭೦ ರಷ್ಟು ಹಾಗೂ ಯಲಬುರ್ಗದಲ್ಲಿ ಶೇ.೪೦.೧೫ ರಷ್ಟು ಇದೆ.

## ರಾಜಕೀಯ ಪಕ್ಷಗಳೊಂದಿಗೆ ಒಡನಾಟ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ(ಕೋಷ್ಟಕ-೯)




ಕೋಷ್ಟಕ ೯ರಲ್ಲಿ ತೋರಿಸಲಾಗಿರುವಂತೆ ಜಿಲ್ಲಾ ಪಂಚಾಯಿತಿಯಂತಹ ದೊಡ್ಡ ರಾಜಕೀಯ ಸಂಸ್ಥೆಯಲ್ಲಿ ರಾಜಕೀಯ ಪಕ್ಷಗಳೊಂದಿಗೆ ಸಂಬಂದ ಒಡನಾಟ ಹೊಂದಿರುವ ದಲಿತ ಮಹಿಳೆಯರ ಸಂಖ್ಯೆ ಗರಿಷ್ಠ ಪ್ರಮಾಣದಲ್ಲಿದೆ. ಮುಖ್ಯವಾಗಿ ವ್ಯಕ್ತಿಯು ರಾಜಕೀಯವಾಗಿ ಮುಂದುವರೆಯಲು ಪಕ್ಷಗಳ ಆಶ್ರಯ ಅತ್ಯಗತ್ಯ. ಪಕ್ಷವನ್ನು ಹೊರತು ಪಡಸಿದ ರಾಜಕಾರಣ ಅಸಾಧ್ಯ ಎಂಬ ಸ್ಥಿತಿ ಇಂದು ನಾವು ಕಾಣಬಹುದು. ಹಲವು ದಲಿತ ಮಹಿಳೆಯರು ಇಂತಹ ರಾಜಕೀಯ ಪಕ್ಷಗಳಲ್ಲಿ ಗುರುತಿಸಿಕೊಂಡಿರುವವರು ಸಹ ಇದ್ದಾರೆ. ಆದರೆ ಪಕ್ಷಕ್ಕೆ ಇವರು ಬೇಕು ಆದರೆ ಪಕ್ಷದ ಕಾರ್ಯಕರ್ತರಲ್ಲಿ ಪ್ರತಿಶಿತ ಪುರುಷರದ್ದೇ ಅಧಿಪತ್ಯ. ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ದಲಿತ ಮಹಿಳೆಯರಿಗೆ ಯಾವೊಂದು ರಾಜಕೀಯ ಪಕ್ಷವು ಸಹ ಉನ್ನತ ಸ್ಥಾನ ನೀಡುವಲ್ಲಿ ಉದಾರತೆಯನ್ನು ತೋರಿಲ್ಲ. ಬದಲಿಗೆ ಅವಳನ್ನು ಮುಂದಿಟ್ಟುಕೊಂಡು ಅವಳ ಸಮುದಾಯದ ಸಮಸ್ತ ಓಟುಗಳನ್ನು ತಾನೆ ಕಬಳಿಸುವ ಕುತಂತ್ರವನ್ನು ಅನುಸರಿಸುತ್ತಿವೆ. ಅದೇನೆ ಇರಲಿ ವ್ಯಕ್ತಿಗಳಿಗೆ ಇಂದು ರಾಜಕೀಯ ಪಕ್ಷಗಳ ಅಗತ್ಯತೆ ಮಾತ್ರ ತುಂಬ ಜರೂರಿನದಾಗಿದೆ. ಎಂಬುದನ್ನು ನಾವೆಲ್ಲರೂ ಒಪ್ಪಲೇಬೇಕು. ಹೀಗೆ ರಾಜಕೀಯ ಪಕ್ಷಗಳೊಂದಿಗೆ ಒಡನಾಟ, ಸಂಬಂಧ ಹೊಂದಿರುವ ದಲಿತ ಮಹಿಳೆಯರ ಪ್ರಮಾಣ ಸಮರ್ಪಕವಾಗಿಯೇ ಇದೆ ಎನ್ನಬಹುದು. ಕೊಪ್ಪಳದಲ್ಲಿ ಶೇ.೪೬.೩೦ ರಷ್ಟು, ಗಂಗಾವತಿಯಲ್ಲಿ ಶೇ.೪೪.೬೧ ರಷ್ಟು, ಯಲಬುರ್ಗದಲ್ಲಿ ಶೇ.೪೦.೯೦ ರಷ್ಟು, ಹಾಗೂ ಕುಷ್ಟಗಿಯಲ್ಲಿ ಶೇ.೫೨.೧೩ ರಷ್ಟು ಇದೆ. ಇದನ್ನು ಗಮನಿಸಿದರೆ ರಾಜಕೀಯ ಪಕ್ಷಗಳಲ್ಲಿ ಮಹಿಳೆ ಹೊಂದಿರುವ ಅವಕಾಶಗಳು ಸಮರ್ಪಕವಾಗಿವೆ ಎನ್ನಲಡ್ಡಿಇಲ್ಲ.

### ೩.೬.೨. ದಲಿತ ಮಹಿಳಾ ರಾಜಕಾರಣವನ್ನು ನಿರಾಕರಿಸುತ್ತಿರುವ ಜಾತಿ ವ್ಯವಸ್ಥೆ

ಗ್ರಾಮೀಣ ಜನರಿಗೆ ಅಧಿಕಾರವನ್ನು ನೀಡಿ ಅವರನ್ನು ತಳಹಂತದಿಂದಲೆ ಮೇಲಕ್ಕೆ ತರುವ, ಆ ಮೂಲಕ ಅವರಿಗೆ ಸಾಮಾಜಿಕ ಜೀವನದಲ್ಲಿ ಒಂದು ಗೌರವಯುತ ಸ್ಥಾನ ದೊರಕಿಸಿಕೊಡುವ ಉದಾತ್ತ ಚಿಂತನೆ ವಿಕೇಂದ್ರೀಕರಣದಲ್ಲಿದೆ. ತಮ್ಮ ಅಭಿವೃದ್ಧಿಯನ್ನು ಗ್ರಾಮೀಣ ಜನತೆ ತಾವೆ ಸ್ವಂತಃ ನಿರ್ವಹಿಸಿ, ಪೂರೈಸಿಕೊಳ್ಳುವಂತಾಗಲೂ ಇಲ್ಲಿ ಅವಕಾಶವು ಉಂಟು. ಅಲ್ಲದೆ ಅವರು ಸಾಮಾಜಿಕ ಬದುಕಿನಲ್ಲಿ ಒಂದು ಗೌರವಯುತ ಸ್ಥಾನ ಹೊಂದಲು ಇದು ಸಹಾಯಕವಾಗಿದೆ. ಆದರೆ ಜಾತಿನಿಷ್ಠ, ಧರ್ಮನಿಷ್ಠ ಅಂಶಗಳಿಗೆ ಬಲಿಯಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಇದಕ್ಕೆ ತದ್ವಿರುದ್ಧವಾದ ವಾತಾವರಣವನ್ನು ಹೊಂದಿದೆ. ಹಿಂದಿನಿಂದಲೂ ತಳಸಮುದಾಯಗಳಿಗೆ ಯಾವ ಬಗೆಯ ಸ್ಥಾನಮಾನಗಳಿದ್ದವೂ ಇಂದಿಗೂ ಅವೇ ಮುಂದುವರೆಯುತ್ತಿವೆ. ಅಲ್ಲದೆ ದಲಿತರೂ ಸಹ ತಮಗೆ ಒಲಿದಿರುವ ಸಾಂಪ್ರದಾಯಿಕ ಹುದ್ದೆ, ಸ್ಥಾನಮಾನಗಳಿಗೆ ಅನುಗುಣವಾಗಿಯೇ ಇರಬೇಕೆಂದು ಸ್ಥಾಪಿತ ವ್ಯವಸ್ಥೆ ಬಯಸುತ್ತದೆ. ಅಲ್ಲದೆ ಮೇಲಿನವರಿಗೆ ಮಾತ್ರವೆ ಇರುವ ಅಧಿಕಾರ ಸ್ಥಾನಗಳಿಗೆ ಬರಲೇಬಾರದು. ಆದರೆ ಮೀಸಲಾತಿಯ ಮೂಲಕ ದಲಿತರಿಗೆ ಒದಗಿಸಿಕೊಡಲಾದ ಸಮಾನ ಹಕ್ಕು, ಅವಕಾಶಗಳನ್ನು ಮೇಲ್‌ವರ್ಗಗಳು ತಮ್ಮ ಕೈವಶಮಾಡಿಕೊಂಡು ದಲಿತರಿಗೆ ರಾಜಕೀಯ ಹಿನ್ನಡೆಯನ್ನುಂಟು ಮಾಡುತ್ತಿವೆ. ಸಂವಿಧಾನಿಕವಾಗಿ ದಲಿತರು ರಾಜಕೀಯ ಪ್ರವೇಶಾವಕಾಶವನ್ನು ಪಡೆದಿದ್ದಾರೆಂಬುದನ್ನು ನಾವು ಹುಂಬುತನವೆಂದೇ ಪರಿಗಣಿಸಬೇಕಾಗುತ್ತದೆ. ರಾಜಕೀಯ ಪ್ರವೇಶಾವಕಾಶ ಸಿಕ್ಕನಂತರ ದಲಿತರೆಲ್ಲರೂ ಸಬಲರಾದರು ಎಂಬುದು ಹುಸಿಸತ್ಯ. ಆದರೆ ಇದು ವಾಸ್ತವವಲ್ಲ. ಸರಕಾರ ಹಕ್ಕನ್ನು ಮಾತ್ರ ಕೊಟ್ಟು ಶಾಸನಾತ್ಮಕ ಗೊಳಿಸಿತೆ ವಿನಃ ಅದನ್ನು ಅರ್ಥಪೂರ್ಣವಾಗಿ ಜಾರಿಗೆ ತರುವಲ್ಲಿ ಸೋತಿತು. ಅಧಿಕಾರ ವಿಕೇಂದ್ರಿಕರಣದ ತತ್ವದಡಿಯಲ್ಲಿ ಅಧಿಕಾರ ಪಡೆದ ದಲಿತ ಮಹಿಳೆ ಗ್ರಾಮ, ತಾಲ್ಲೂಕು ಪಂಚಾಯತಿಗಳಲ್ಲಿ ಮೇಲ್‌ವರ್ಗಗಳ ಹಿಡಿತದಲ್ಲಿ ಸಿಕ್ಕು ಅಧಿಕಾರ ಹೀನತೆಯನ್ನು ಅನುಭವಿಸುತ್ತಿದ್ದಾಳೆ. ಜಿಲ್ಲಾ ಪಂಚಾಯತಿಯಲ್ಲಿ ಜಮೀನ್ದಾರಿಶಾಹಿ ಹಾಗೂ ಪಕ್ಷಗಳಿಗೆ ತಲೆಬಾಗಿ ನಡೆಯುವಂತಾಗಿದೆ. ಈ ರೀತಿಯ ಮೇಲ್‌ವರ್ಗಗಳ ಹಕ್ಕುದಾರಿಕೆ ಇಂದು ನಿನ್ನೆಯದಲ್ಲ ಇದಕ್ಕೆ ನೂರಾರು ವರ್ಷಗಳ ಇತಿಹಾಸವೇ ಇದೆ. ಜಿಲ್ಲಾ ಪಂಚಾಯತಿಯಲ್ಲಿ ತನ್ನ ಜಾತಿಯ ಕಾರಣದಿಂದಲೆ ಅಧಿಕಾರ ಕುಸಿತಕಂಡಿದೆ ಎಂದು ಅಲ್ಪ ಪ್ರಮಾಣದಲ್ಲಿಯಾದರೂ ದಲಿತ ಮಹಿಳೆ ಕಂಡಿದ್ದಾಳೆ. ಅಲ್ಲದೆ ತನಗೆ ಎಲ್ಲೊ ಒಂದು ಕಡೆಯಲ್ಲಿ ನಿಯಂತ್ರಣ, ಬಂಧನಗಳು ಇವೆ ಎಂಬುದು ಅವಳ ಚಿಂತನೆಯಲ್ಲಿದೆ. ಜಿಲ್ಲಾ ಪಂಚಾಯತಿಗಳು ನಗರಕೇಂದ್ರಿತವಾಗಿದ್ದರೂ ಅಲ್ಲಿ ಜಾತಿಯತೆಗೆ ಅವಕಾಶ ವಿರುವುದಿಲ್ಲವಾದರೂ ಜಾತಿಯ ಸಂರಚನೆಗಳು ಈ ಮಟ್ಟದಲ್ಲಿ ಸದಾ ಕಾರ್ಯಶೀಲವಾಗಿರುತ್ತವೆ ಎಂಬುದು ಮಾತ್ರ ಸತ್ಯ. ರಾಜಕೀಯದ ಸಮಸ್ತ ಒಡೆಯರು, ಸಂಸ್ಥಾಪಕರು, ನಿಯಂತ್ರಕರು ಮೇಲ್ ವರ್ಗದವರೆ ಆಗಿರುವುದರಿಂದ ಅವರಿಗೆ ಹೇಗೆ ಬೇಕೋ ಹಾಗೆ ದಲಿತ ಮಹಿಳೆಯನ್ನು ಬಳಸಿಕೊಳ್ಳುತ್ತಿವೆ. ಇವೆಲ್ಲ ನಡೆಯುವುದು ಅವಳ ಪಕ್ಷದ ಹೆಸರಿನಲ್ಲಿಯೇ. ಜಿಲ್ಲಾ ಪಂಚಾಯತಿಯಲ್ಲಿ ಅಧ್ಯಕ್ಷೆಯಂತಹ ಉನ್ನತ ಅಧಿಕಾರವನ್ನು ಪಡೆದಾಗ್ಯೂ ಸಹ ಅವಳು ಪ್ರಭುತ್ವಕ್ಕೆ ತಲೆಬಾಗಿ ಕಾರ್ಯನಿರ್ವಹಿಸುವಂತಾಗಿದೆ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಪಕ್ಷದಿಂದ ಉಚ್ಚಾಟನೆ. ಅಧಿಕಾರ ಕಬಳಿಕೆ, ಮೂಲೆಗುಂಪುಮಾಡುವಲ್ಲಿ ಇವು ಹಿಂದೆ ಸರಿಯಲಾರವು

ಎಂಬುದನ್ನು ಸ್ವತಃ ಅನುಭವಿಸಿದ ಮಾಜಿ ಅಧ್ಯಕ್ಷೆ ಶ್ರೀಮತಿ ಮಾಲತಿನಾಯಕರೆ ಪ್ರಸ್ತಾಪಿಸುವರು. ಪ್ರಭುತ್ವದ ವಿರುದ್ಧ ಪ್ರತಿಭಟಿಸಿದ್ದರಿಂದಲೆ ತನಗೆ ಸಿಕ್ಕ ಅಧಿಕಾರವನ್ನು ಕಸಿದುಕೊಂಡು ಮೂಲೆಗುಂಪು ಮಾಡಲಾಯಿತು. ಅಲ್ಲದೆ ತಮ್ಮ ಜಾತಿ ಜಾತಿಗಳ ನಡುವೆ ವೈಮನಸ್ಸು ಸೃಷ್ಟಿಸಿ ವ್ಯವಸ್ಥಿತವಾಗಿ ದಲಿತ ಮಹಿಳೆಯ ವಿರುದ್ಧ ದಲಿತ ಮಹಿಳೆಯನ್ನು ಎತ್ತಿಕಟ್ಟಿ ಅಧಿಕಾರ ಹರಣಮಾಡಿದ ಸಂಗತಿಗಳನ್ನು ಸ್ಪಷ್ಟವಾಗಿ ಚಿತ್ರಿಸಿದರು. ಅಂದರೆ ಪಕ್ಷಗಳು ದಲಿತ ಮಹಿಳೆಯನ್ನು ಜಾತಿಯ ಹೆಸರಿನಲ್ಲಿ ನಿಯಂತ್ರಿಸುತ್ತಿವೆ. ಅಲ್ಲದೆ ಸ್ಥಾಪಿತ ಪ್ರಭುತ್ವಗಳೂ ಸಹ ಅವಳನ್ನು ಜಾತಿ, ಲಿಂಗದ ಹಿನ್ನೆಲೆಯಲ್ಲಿ ತಮ್ಮಿಷ್ಟದಂತೆ ಬಳಸಿಕೊಳ್ಳುತ್ತಿವೆ. ಅಲ್ಲದೆ ತನಗೆ ವಿರುದ್ಧವಾದವರನ್ನು ಪದಚ್ಯುತಿಗೊಳಿಸಿ ತನಗೆ ನಿಷ್ಠರಾದವರನ್ನು ನೇಮಿಸಿಕೊಳ್ಳುವುದು ಪ್ರಭುತ್ವಗಳಿಗೆ ತುಂಬ ಸಲೀಸಾಗಿದೆ. 'ನಂ ಅಧಿಕಾರ ಯಾರೊಬ್ರು ಕೊಟ್ಟಿದ್ದಲ್ರಿ ನಾನ ಸ್ವಂತ ಇಚ್ಛೆಯಿಂದ ಬಂದೀನಿ. ಸ್ವಂತ ಅಧಿಕಾರನು ನೆಡಿಸ್ತಿನಿ. ಇದಕ್ಕೆ ಒಪ್ಪದವ್ರು ಕೆಳಗಿಳಿಸಿದ್ರು. ಅಲ್ಲ ಅದುಕ ನಂ ಸಮುದಾಯದಾರ್ರು ಕೂಡ ಬಾಳ ಬೆಂಬ್ಲನು ಇತ್ರಿ'. ಜಾತಿ ಜಾತಿಗಳ ನಡುವೆ ಕಂದಕವನ್ನುಂಟು ಮಾಡಿ ಅದರಿಂದ ರಾಜಕೀಯದ ಮೂಲಕ ರಾಜಕಾರಣ ಮಾಡುವುದು ಮೇಲ್‌ವರ್ಗಗಳಿಗೆ ಸಲೀಸಾಗಿದೆ.

**೩.೬.೩. ರಾಜ್ಯ ಹಾಗೂ ಸ್ಥಾನಿಕ ಸಂಸ್ಥೆಗಳಲ್ಲಿ ಅಧಿಕಾರ ಹಂಚಿಕೆಯ ಸಮಸ್ಯೆ**

ಸ್ಥಾನಿಕ ಸರಕಾರಗಳು ಅಥವಾ ಪಂಚಾಯತ್‌ರಾಜ್ ಸಂಸ್ಥೆಗಳು ಹೆಚ್ಚಿನ ಅಧಿಕಾರವನ್ನು ಪಡೆದರೆ, ರಾಜ್ಯ ಸರಕಾರ ಕೆಲವು ಅಧಿಕಾರಗಳನ್ನು ಪಂಚಾಯತ್ ಸಂಸ್ಥೆಗಳಿಗೆ ಒದಗಿಸಿಕೊಡಬೇಕಾಗುತ್ತದೆ. ಆದರೆ ಅಧಿಕಾರ ಹಕ್ಕುಗಳನ್ನು ಕೊಟ್ಟು, ಅದಕ್ಕೆ ಬೆಂಗಾವಲಾಗಿ ಶಾಸನಾತ್ಮಕ ಅಧಿಕಾರಗಳನ್ನು ಕೊಟ್ಟರೂ ಅವುಗಳ ಪಾಲನೆಯಲ್ಲಿ ಈ ಬಗೆಯ ಸಂಕಲ್ಪ ಬೆಳೆಯುವುದಿಲ್ಲವೋ ಅಲ್ಲಿಯವರೆಗೆ ದಲಿತರು, ಮಹಿಳೆಯರು ಯಾವ ರಕ್ಷಣೆ ಇಲ್ಲದೆ ಮತ್ತದೇ ಸ್ಥಿತಿಯಲ್ಲಿ ಬದುಕಬೇಕಾಗುತ್ತದೆ. ದಲಿತ ಮಹಿಳೆಯ ಅಧಿಕಾರ ಎಷ್ಟು ಬಾರಿ ಸರಕಾರಿ ಕಾರ್ಯದರ್ಶಿಗಳಿಗೆ ಒಂದು ವರವಾಗಿ ಪರಿಣಮಿಸಿರಬಹುದು. ಏಕೆಂದರೆ ಅನಕ್ಷರತೆಯ ಹಾಗೂ ಅಭಿವೃದ್ಧಿಯ ಕುರಿತ ಅಷ್ಟೇನು ಅರಿವಿರದ ಅವಳನ್ನು ತಮ್ಮ ಅಡಿಯಾಳಾಗಿಸಿಕೊಂಡು ಇವರು ತಮ್ಮ ಪುರೋಭಿವೃದ್ಧಿಗಾಗಿಯೇ ಶ್ರಮಿಸುತ್ತಿರುತ್ತಾರೆ. ಸರಕಾರಕ್ಕೆ ಇಂತಹ ಪರಿಸ್ಥಿತಿಯ ಬಗ್ಗೆ ಮನವರಿಕೆ ಇದ್ದರೂ ಕೂಡ ಈ ದಿಶೆಯಲ್ಲಿನ ಪ್ರಯತ್ನ ಮಾತ್ರ ಶೂನ್ಯ. ದಲಿತ ಮಹಿಳೆಗೆ ಅಧಿಕಾರದಲ್ಲಿ ಸಹಾಯ ಮಾಡುವ ನೆಪದಲ್ಲಿಯೇ ಸರಕಾರಿ ಅಧಿಕಾರಿಗಳು ಅವಳೆಲ್ಲ ಅಧಿಕಾರವನ್ನು ತಾವೇ ನಿರ್ವಹಿಸುತ್ತಿರುತ್ತಾರೆ. ತನಗಿರುವ ಅಧಿಕಾರಯಾವ ಬಗೆಯದು, ಅವನ್ನು ಹೇಗೆ ಬಳಸಿಕೊಳ್ಳಬೇಕು. ಅನುದಾನ, ಬಜೆಟ್‌ಗಳು ಹೇಗಿರುತ್ತವೆ ಎಂಬ ಅರಿವು ಅವಳಿಗಿಲ್ಲ. ಆ ಕಾರಣದಿಂದಲೇ ಸರಕಾರಿ ಅಧಿಕಾರಿಗಳು ಅವಳ ಅಧಿಕಾರವನ್ನು ಚೆನ್ನಾಗಿಯೇ ಬಳಸಿಕೊಳ್ಳುತ್ತಿದ್ದಾರೆ.

**೩.೬.೪. ದಲಿತ ಮಹಿಳೆಯ ಪರಾಧೀನತೆ ಹಾಗೂ ಅವಳ ಅಧಿಕಾರ ಚಲಾವಣೆಯಲ್ಲಿ ಗಂಡಿನ ಪಾತ್ರ**

ಮಹಿಳಾ ಅಧ್ಯಯನದಲ್ಲಿ ಪರಾಧೀನತೆಯ ಪರಿಕಲ್ಪನೆಯನ್ನು ತುಂಬ ಯೋಜನಾಬದ್ಧವಾಗಿ ಬಳಸಲಾಗುತ್ತದೆ. ಎಲ್ಲಾ ವಿಷಯಗಳಲ್ಲಿಯೂ ಮಹಿಳೆಯರು ಪುರುಷನನ್ನೆ ಅವಲಂಬಿಸಿ ಬದುಕಬೇಕೆಂಬ ಪರಿಪಾಠ ಲಿಂಗ ನಿರಪೇಕ್ಷತೆಯಿಂದ ಕೂಡಿರುವಂತಹದ್ದಲ್ಲ. ಆದ್ದರಿಂದಲೆ ಇದನ್ನು ವಿಶಾಲ ಅರ್ಥದಲ್ಲಿ ನಾವು ಪರಿಭಾವಿಸಿಕೊಳ್ಳುವ ಅಗತ್ಯವಿದೆ. ಮಹಿಳೆಯರ ಪರಾಧೀನತೆ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ, ಪುರುಷ ಪ್ರಧಾನ ಸಾಮಾಜಿಕ

ವ್ಯವಸ್ಥೆ, ರಾಜಕೀಯ ವ್ಯವಸ್ಥೆ, ಹಾಗೂ ಆರ್ಥಿಕ ವ್ಯವಸ್ಥೆಯ ನೇರ ಪರಿಣಾಮವಾಗಿದೆ. ಐತಿಹಾಸಿಕವಾಗಿ ಮಹಿಳಾ ಪರಾಧೀನತೆಯ ಎಲ್ಲಾ ಕಡೆಗಳಲ್ಲಿಯೂ ಇತ್ತು. ಅದು ಎಲ್ಲಾ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದು ಸರ್ವಕಾಲಿಕವೂ, ಸರ್ವವ್ಯಾಪಿಯೂ ಆಗಿತ್ತು ಎಂಬುದು ಸ್ತ್ರೀವಾದಿಗಳ ನಿಲುವು, ಖ್ಯಾತ ದಾರ್ಶನಿಕರಾದ ಶ್ರೀ ಜೆ.ಎಸ್.ಮಿಲ್‌ರವರು ಮಹಿಳಾ ಪರಾದಿನತೆಯೂ ಹೇಗೆ ಮಾನವ ಪ್ರಗತಿಗೆ ಕಂಟಕವಾದದ್ದು ಎಂದು ಹೀಗೆ ವಿವರಿಸುತ್ತಾರೆ. ಎರಡು ಲಿಂಗಗಳ ನಡುವೆ ಅಸ್ತಿತ್ವದಲ್ಲಿರುವ ಸಾಮಾಜಿಕ ಸಂಬಂಧಗಳನ್ನು ನಿಯಂತ್ರಿಸುವ ಸೂತ್ರ ಒಂದು ಲಿಂಗದವರು ಇನ್ನೊಂದು ಲಿಂಗದ ಜನರಿಗೆ ಶಾಸನಾತ್ಮಕವಾಗಿ ಪರಾಧೀನವಾಗುವುದು ಸ್ವಯಂ ತಪ್ಪು. ಅದು ಇಂದು ಮಾನವ ಪ್ರಗತಿಗೆ ಮಾರಕವಾಗಿದೆ. ಆದ್ದರಿಂದ ಅದನ್ನು ಪರಿಪೂರ್ಣ ಸಮಾನತೆಯ ಸೂತ್ರದ ಮೂಲಕ ಸ್ಥಳಾಂತರಿಸಬೇಕಿದೆ. ಅದು ಒಂದೆಡೆ ಪ್ರಾಧಿಕಾರ ಅಥವಾ ವಿಶೇಷ ಹಕ್ಕನ್ನಾಗಲಿ ಒಳಗೊಳ್ಳಬಾರದು. ಮತ್ತು ಇನ್ನೊಂದೆಡೆ ಅಸಾಮರ್ಥ್ಯವನ್ನು ಹೊಂದಬಾರದು.[illegible] ಸಾಂಪ್ರದಾಯಿಕ ಭಾರತೀಯ ಜೀವನದ ಪಿತೃಪ್ರಧಾನ ಚಿಂತನೆಯಾಗಿರುವ ಮನೆಯೊಳಗಿನ ಹಾಗೂ ಹೊರಗಿನ ಕಾರ್ಯಗಳು ವ್ಯಕ್ತಿಗಳನ್ನು ಅವರ ಲಿಂಗದ ನೆಲೆಯಲ್ಲಿ ವಿಭಜಿಸಿದೆ. ಸ್ತ್ರೀಯರಿಗೆ ಮನೆಯ ಒಳಗಿನ ಗೃಹಕಾರ್ಯಗಳನ್ನು ಒಪ್ಪಿಸಿದರೆ ಪುರುಷನಿಗೆ ಹೊರಜಗತ್ತಿನೊಂದಿಗೆ ಬೆರೆಯುವ ಅವಕಾಶ ಕೊಟ್ಟಿತು. ಈ ಬಗೆಯ ಸಿದ್ಧಮಾದರಿಯ ಪ್ರತಿಮೆಗಳನ್ನು ಸೃಷ್ಟಿಸಿ ವ್ಯವಸ್ಥಿತವಾಗಿ ಒಬ್ಬರ ಕಾರ್ಯದಲ್ಲಿ ಮತ್ತೊಬ್ಬರು ಬರದಂತೆ ತಡೆಯಲಾಯಿತು. ಮಹಿಳೆ ಮನೆಯ ಹೊರಗಿನ ಕಾರ್ಯ ಅಥವಾ ಸಂಪಾದನೆಗಳಲ್ಲಿ ತೊಡಗಿದ್ದರೂ ಕೂಡ ಅವುಗಳೆಲ್ಲವೂ ಸಾಂಸ್ಥಿಕವಾಗಿದ್ದು ಸಾಪೇಕ್ಷವಾಗಿ ಅಷ್ಟೇನು ಮಹತ್ವವಲ್ಲದ ಚಟುವಟಿಕೆಯಾಗಿ ಬಳಕೆಯಾಗುತ್ತಿವೆ. ಆದರೆ ಸಮಾಜವನ್ನು ಮುನ್ನೆಡೆಸುತ್ತಿರುವ ಗಂಭೀರವಾದ ಕಾರ್ಯ ಚಟುವಟಿಕೆಗಳು ಇಂದಿಗೂ ಪುರುಷನಿಗೆ ಮೀಸಲಾಗಿವೆ. ಈ ನೆಲೆಯೊಳಗೆ ದಲಿತ ಮಹಿಳೆಯ ಅಧಿಕಾರ ನಿರ್ವಹಣೆಯಲ್ಲಿ ಅವಳ ಗಂಡ, ಹಾಗೂ ಇತರ ಪುರುಷರ ಕೈವಾಡಗಳ ಬಗ್ಗೆ ಅರಿಯುವ ಅಗತ್ಯವಿದೆ. ಅಧ್ಯಕ್ಷೆಯಂತಹ ಉನ್ನತ ಸ್ಥಾನ ಪಡೆದಿದ್ದಾಗಲೂ ಅವಳು ಗಂಡ, ಮುಖಂಡರ ಒಪ್ಪಿಗೆಯ ಆಧಾರದ ಮೇಲೆ ನಡೆಯಬೇಕು. ಕ್ಷೇತ್ರಕಾರ್ಯದುದ್ದಕ್ಕೂ ಗಮನಿಸಿದಂತೆ ನಾನು ಸಂದರ್ಶನಕ್ಕಾಗಿ ಕುಳಿತಿದ್ದಾಗ ತನ್ನ ಪತಿರಾಯನ ಉಪಸ್ಥಿತಿ ಇರದಿದ್ದರೆ ಅವಳ ಬಾಯಿ ಎಳ್ಳಷ್ಟು ತೆರೆಯುತ್ತಿರಲಿಲ್ಲ. ಅವನು ಬಂದಾಗ ಇವಳ ಎಲ್ಲಾ ಮಾತುಗಳಿಗೆ ಅವನೆ ಉತ್ತರಿಸಬೇಕಿತ್ತು ಅಷ್ಟೊಂದು ಪರಾಧೀನ ಸ್ಥಿತಿಯಲ್ಲಿ ಅವಳಿದ್ದಾಳೆ. ಅಲ್ಲದೆ ಕೆಲವರಂತೂ ಗಂಡನು ಬರುವವರೆಗೂ ಕಾಯಿಸಿದ್ದಲ್ಲದೆ ಅವನು ಬರದಿದ್ದರೆ ಅಂದು ಮೌನ ವ್ರತಕ್ಕೆ ಶರಣಾಗುತ್ತಿದ್ದರು. ಗಂಡನ ನೆರವಿಲ್ಲದೆ ಪಕ್ಷಗಳ ನೆರವಿಲ್ಲದೆ ಅವಳು ಕಾರ್ಯನಿರ್ವಹಿಸಲಾಗುತ್ತಿಲ್ಲ. ಹಲವು ದಲಿತ ಮಹಿಳೆಯರು ಇದು ಸಾಧ್ಯ ಎಂದು ಹಿಂಬದಿಯಲ್ಲಿ ಹೇಳಿದರೆ ಹೋರತು ಪುರುಷನನ್ನು ಹೊರತು ಪಡಿಸಿದ ರಾಜಕಾರಣ ತನ್ನಿಂದ ಸಾಧ್ಯವಿಲ್ಲ ಎಂದು ಅವಳು ಒಪ್ಪಿಕೊಳ್ಳುತ್ತಾಳೆ. ಇದಕ್ಕೆ ಕಾರಣ ಎಂದರೆ ಸರಕಾರಿ ಯೋಜನೆಗಳ ಬಗ್ಗೆ, ರಾಜಕೀಯ ಚಟುವಟಿಕೆ, ಅನುದಾನಗಳ ಬಗ್ಗೆ ತನಗೆ ಅರಿವಿಲ್ಲದ ಕಾರಣ ಪತಿಯನ್ನು ಅವಲಂಬಿಸುತ್ತೇನೆಂದು ಹೇಳಿದರೂ ಕೂಡ ಅದರ ಹಿಂದೆ ಮೇಲಿನ ಕಾರಣವೆ ಅಡಗಿದೆ. ಪಂಚಾಯಿತಿಯಲ್ಲಿ ಉನ್ನತ ಹುದ್ದೆ ಗೌರವಯುತಸ್ಥಾನ ಪಡೆದಿದ್ದಾಗ್ಯೂ ಅವಳು ಸ್ವತಂತ್ರವಾಗಿ, ನಿರ್ಭಯವಾಗಿ ಸ್ವಹಿತಾಸಕ್ತಿಗೆ ಪೂರಕವಾಗಿ ಕಾರ್ಯನಿರ್ವಹಿಸಲು ಆಗುತ್ತಿಲ್ಲ. ಆದ್ದರಿಂದ ಪಂಚಾಯಿತಿಯಲ್ಲಿ ಅವಳ ಅಧಿಕಾರವನ್ನು ಪುರುಷನೆ [illegible] ಅವನ್ನು ಚಲಾಯಿಸುವಿಕೆಯಲ್ಲಿ ಎಡವುತ್ತಿದ್ದಾಳೆ.

### ೩.೬.೫. ನಿಯಂತ್ರಕ ಸಾಧನಗಳಾಗಿರುವ ರಾಜಕೀಯ ಪಕ್ಷಗಳು

ಬಹುದಿನಗಳಿಂದ ಅಧಿಕಾರವನ್ನು ತನ್ನಲ್ಲಿಯೇ ಉಳಿಸಿಕೊಳ್ಳುವ ಹಂಬಲದಿಂದ ರಾಜಕಾರಣದಲ್ಲಿ ಸಕ್ರಿಯವಾಗಿರುವ ಇತರ ಹಿರಿಯ ರಾಜಕಾರಣಿಗಳು ಹೊಸದಾಗಿ ದಾಖಲಾಗುವ ಕಿರಿಯರಿಗೆ ಅಡೆತಡೆಯನ್ನುಂಟುಮಾಡುತ್ತಿದ್ದಾರೆ. ಇದು ದಲಿತ ಮಹಿಳೆಯ ವಿಷಯದಲ್ಲಿಯಂತೂ ತುಂಬ ದರ್ಪದಿಂದ ಕೂಡಿರುವ ವಿಚಾರ. ಏಕೆಂದರೆ ದಲಿತಳಾಗಿರುವ ಕಾರಣದಿಂದಲೆ ಅವಳನ್ನು ಎಲ್ಲಾ ಬಗೆಯ ಅಧಿಕಾರ ಹಂತಗಳಲ್ಲಿಯೂ ತುಳಿಯುವ ಪ್ರಯತ್ನಗಳು ನಿರಾತಂಕವಾಗಿ ನಡೆಯುತ್ತಿರುತ್ತವೆ. ಒಂದು ವೇಳೆ ಅಧಿಕಾರವನ್ನು ಸಂಪೂರ್ಣವಾಗಿ ಅವಳಿಗೆ ಅನುಭವಿಸಲು ಬಿಟ್ಟರೆ ಎಲ್ಲಿ ತಾವು ನಿರ್ಲಕ್ಷಿಸಲ್ಪಡುವೆವೊ, ಎಲ್ಲಿ ತಮ್ಮ ಮೇಲೆ ಅಧಿಕಾರ ಚಲಾಯಿಸುವರೊ ಎಂಬ ಚಿಂತೆ ಅವರಿಗಿದೆ. ಅಲ್ಲದೆ ತಮ್ಮ ಘನತೆಗೆ ಪೊಳ್ಳು ಆಶ್ವಾಸನೆಗಳಿಗೆ ಎಲ್ಲಿ ಕೊಡಲಿ ಪೆಟ್ಟು ಕೊಡುತ್ತಾರೊ ಎಂಬ ಭಯವೂ ಅವರಿಗಿದೆ. ಆದ್ದರಿಂದಲೆ ಇಂತಹ ಮನಸುಗಳು ಪಕ್ಷ ಎಂಬ ಸಂಸ್ಥೆಯ ಹೆಸರಿನಡಿಯಲ್ಲಿ ಎಲ್ಲವನ್ನು ತಮಗೆ ಹೇಗೆ ಬೇಕೊ ಹಾಗೆ ನಿರ್ವಹಿಸುವ, ಬದಲಾಯಿಸುವ, ನಿಯಂತ್ರಿಸುವ ಅಧಿಕಾರವನ್ನು ತಮ್ಮಲ್ಲಿಯೇ ಉಳಿಸಿಕೊಂಡು ಬಿಟ್ಟಿವೆ. ದಲಿತ ಮಹಿಳೆಯನ್ನು ಪಕ್ಷದ ಹೆಸರಿನಲ್ಲಿ ತಮ್ಮ ಹಿತಾಸಕ್ತಿಯನ್ನು ಉಳಿಸಿಕೊಳ್ಳಲೆಂದೇ ಅವಳನ್ನು ತಮ್ಮ ಇಚ್ಛೆಗೆ ಅನುಗುಣವಾಗಿ ಬಳಸಿಕೊಳ್ಳುತ್ತಿವೆ. ಇದಕ್ಕೆ ಒಪ್ಪದಿದ್ದವರಿಗೆ ಉಚ್ಚಾಟನೆಯಂತಹ ಶಿಕ್ಷೆಯನ್ನು ಹೇರಿ ಅವರನ್ನು ರಾಜಕೀಯವಾಗಿ ಮುಗಿಸಿ ಬಿಡುವಲ್ಲಿಯೂ ಇವು ಹಿಂಜರಿಯಲಾರವು. ಪಕ್ಷರಾಜಕಾರಣ ಎಂಬುದೆ ವಾಸ್ತವವಾಗಿ ಸಾಮಂತಶಾಹಿ, ಊಳಿಗಮಾನ್ಯಶಾಹಿ, ಜಮೀನ್ದಾರಿ ಶಾಹಿಗಳಂತಹ ನಿಯಂತ್ರಕ ಶಕ್ತಿಗಳ ಮುಖವಾಡವಾಗಿದೆ. ಇವುಗಳು ಮೂಲ ಆಕಾರದಲ್ಲಿ ಬದಲಾವಣೆಯಾಗಿರಬಹುದಾದರೂ ಅವುಗಳ ಹಿಂದಿನ ಸಾಂಪ್ರದಾಯಿಕ ಚಿಂತನೆ ಮಾತ್ರ ಅದೇ ಮುಂದುವರೆಯುತ್ತಿದೆ. ಪಕ್ಷದ ತತ್ವ, ಸಿದ್ಧಾಂತಗಳ ಹೆಸರಿನಡಿಯಲ್ಲಿ ಶೋಷಿತರನ್ನು ಇನ್ನಷ್ಟು ಶೋಷಣೆಗೆ ಗುರಿಮಾಡಿ ಅವರ ಅಧಿಕಾರಲಾಭವನ್ನೆಲ್ಲಾ ತಾವೆ ಪಡೆಯುವ ಹುನ್ನಾರ ಇಲ್ಲಿ ಅಡಗಿದೆ.

### ೩.೬.೬. ಅಧಿಕಾರಶಾಹಿ ಪ್ರಭುತ್ವ

ಇಂದು ಭಾರತದ ತುಂಬೆಲ್ಲ ಕೇಳಿಬರುತ್ತಿರುವ ನೌಕರಿಶಾಹಿ ವರ್ಗ ಅಥವಾ ಅಧಿಕಾರಶಾಹಿವರ್ಗವೆ ವಾಸ್ತವವಾಗಿ ದೇಶವನ್ನು ಆಳುತ್ತಿರುವುದಾಗಿದೆ. ರಾಜಕಾರಣಿಗಳು ಸಹ ಇವರ ಕಪಿಮುಷ್ಠಿಯಲ್ಲಿಯೇ ನಡೆಯುತ್ತಿರುವುದು ವಾಸ್ತವ ಸತ್ಯ. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವ ವಿಕೇಂದ್ರೀಕರಣವಿದೆಯೇ ವಿನಃ ಆಡಳಿತ ವಿಕೇಂದ್ರೀಕರಣ ಸಾಧ್ಯವಾಗಿಲ್ಲ. ಇದನ್ನು ಅರ್ಥಮಾಡಿಕೊಳ್ಳುವಲ್ಲಿ ನಮ್ಮ ಬಹುತೇಕ ರಾಜ್ಯ, ರಾಷ್ಟ್ರೀಯ ಸರಕಾರಗಳು ಮತ್ತು ಆಡಳಿತ ಸೇವಾ ವರ್ಗಗಳು ವಿಫಲವಾಗಿವೆ ಎಂದರೆ ತಪ್ಪಾಗಲಾರದು. ಕೆಳಹಂತದ ಅಧಿಕಾರ ಸ್ಥಾನವಾಗಿರುವ ಪಂಚಾಯತಿಯಲ್ಲಿ ಚುನಾಯಿತ ಜನ ಪ್ರತಿನಿಧಿಗಳ ಅಧಿಕಾರಕ್ಕಿಂತಲೂ ನೌಕರಶಾಹಿಯ ಆಳ್ವಿಕೆಯೇ ಅಧಿಕವಾಗಿದೆ. ಅಷ್ಟೆ ಪ್ರಭಾವಶಾಲಿಯಾಗಿದೆ. ಅಲ್ಲದೆ ಇದೊಂದು ಒತ್ತಡದ ಗುಂಪಾಗಿ ಕಾರ್ಯನಿರ್ವಹಿಸುತ್ತಿದೆ. ಪಂಚಾಯತಿಗೆ ಬರುವ ರಾಜಕಾರಣಿಗಳಿಗೆ ಪಂಚಾಯತಿಯ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಯಾವುದೆ ಬಗೆಯ ಅರಿವು ಇರುವುದಿಲ್ಲವಾದ್ದರಿಂದ ಸಹಜವಾಗಿ ಇವರನ್ನೆ ಅವಲಂಬಿಸುವ ಸ್ಥಿತಿ ಇದೆ. ಆಡಳಿತದ ಉದ್ದಕ್ಕೂ ಒಂದೆ ಕಡೆಯಲ್ಲಿ ಇವರು ಕೇಂದ್ರೀಕೃತವಾಗಿರುವುದರಿಂದ ಅಲ್ಲಿಯ ಎಲ್ಲಾ ಒಳಹುಗಳ ಬಗ್ಗೆ ಪರಿಪಕ್ವ ಮಾಹಿತಿಯನ್ನೇ ತಮ್ಮ ಅಧೀನ

ಮಾಡಿಕೊಂಡಿರುತ್ತಾರೆ. ಅಲ್ಲದೆ ಅವರ ಮೇಲೆ ನಿಯಂತ್ರಣವನ್ನು ಸಾಧಿಸಿರುತ್ತಾರೆ. ಆ ಕಾರಣದಿಂದಲೆ ಅಧಿಕಾರದ ದರ್ಪ ಅತಿಯಾಗಿಯೇ ಇವರಲ್ಲಿ ಮನೆ ಮಾಡಿಕೊಂಡಿರುತ್ತದೆ. ಇಂತಹ ಅಧಿಕಾರ ಸ್ಥಾನಗಳಿಗೆ ಜಾತಿಯ ಬೆಂಬಲವೂ ಇದ್ದೆ ಇರುತ್ತದೆ. ಇಂತಹ ಕಡೆಯಲ್ಲಿ ಚುನಾಯಿತರಾಗಿ ಬರುತ್ತಿರುವ ದಲಿತ ಮಹಿಳೆಯರು ತನಗೆ ಅರಿವಿಲ್ಲದ ಕಾರ್ಯಗಳನ್ನು ಅರಿಯುವ ಮುಗ್ಧ ನೆಪದಲ್ಲಿ ತನಗರಿವಿಲ್ಲದಂತೆ ನೌಕರಶಾಹಿಗೆ ತನ್ನೆಲ್ಲ ಅಧಿಕಾರವನ್ನು ಧಾರೆಯೆರೆಯುತ್ತಿದ್ದಾಳೆ. ತಾವು ತಿಂದು ಉಳಿದಿದ್ದನ್ನು ಅವಳಿಗೆ ನೌಕರಶಾಹಿ ನೀಡುತ್ತಿದೆ. ಅಧಿಕಾರಿಗಳ ಎದುರಿಗೆ ಕುಳಿತುಕೊಳ್ಳುವಲ್ಲಿಯೂ ಸಹ ಇವಳು ಮುಕ್ತ ಮನಸ್ಸು ಮಾಡಿಲ್ಲ. ಅಂಜಿಕೆ, ಭಯಗಳಿಂದಲೆ ಅವರ ಹತ್ತಿರ ಬರುತ್ತಾಳೆ. ಗ್ರಾಮೀಣ ವಲಯಗಳಲ್ಲಿನ ಅಧೀನತೆಯ ಪ್ರಶ್ನೆ ಇಲ್ಲಿಯೂ ಸಹ ಯಥಾವತ್ತಾಗಿ ಪಾಲನೆಯಾಗುತ್ತಿದೆ. ನೌಕರಶಾಹಿಯಿಂದ ದಲಿತ ಮಹಿಳೆಯ ಅಧಿಕಾರದ ಮೇಲೆ ಹಿಡಿತವಿರುವುದಷ್ಟೆ ಅಲ್ಲದೆ ಪಂಚಾಯತ್‌ರಾಜ್ ಸಂಸ್ಥೆಗಳು ಸಹ ಕಳೆಗುಂದುವಂತಹ ಪರಿಸ್ಥಿತಿ ನಿರ್ಮಾಣಗೊಳ್ಳುತ್ತಿದೆ.

ದಲಿತ ಮಹಿಳೆಯ ಸ್ಥಾನವು ಅವಳ ಜಾತಿ ಸಂರಚನೆಯಲ್ಲಿ ಅವಳಿಗೆ ನೀಡಲ್ಪಟ್ಟಿರುವ ರಾಜಕೀಯ ಪರಿಕಲ್ಪನೆಯ ಕೆಳಹಂತದಲ್ಲಿನ ಸ್ಥಾನ ಮಾನ, ಮೌಲ್ಯಗಳಡಿಯಲ್ಲಿಯೇ ಸ್ಪಷ್ಟಗೊಳ್ಳುವುದು. ದಲಿತ ಮಹಿಳೆ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಸಮರ್ಪಕವಾಗಿ, ಸಕ್ರೀಯವಾಗಿ ಭಾಗಿಯಾಗಿಲ್ಲದಿರುವಿಕೆಗೆ ಸರಕಾರಿ ಅಂಶಗಳು, ಚಿಂತನೆಗಳು, ಆಲೋಚನೆಗಳು, ಸರಿಯಾಗಿ ಜಾರಿಯಾಗಿಲ್ಲದಿರುವಿಕೆ, ಸ್ಥಾಪಿತ ಒಡೆತನಗಳು ಪ್ರಭುತ್ವದ ಹಿಡಿತ ಹೆಚ್ಚಾಗಿರುವುದರಿಂದ ಅವಳ ಪ್ರತಿನಿಧೀಕರಣ ನಿಷ್ಕ್ರೀಯ ನೆಲೆಯಲ್ಲಿ ನಡೆಯುತ್ತಿದೆ. ಅಲ್ಲದೆ ಅವಳು ತನ್ನ ಕುಟುಂಬ ಸಮುದಾಯಗಳಲ್ಲಿಯೂ ಹೆಚ್ಚಿನ ಪ್ರಾಧಿಕಾರವನ್ನು ಪಡೆಯುವಿಕೆಯಲ್ಲಿಯೂ ಹಿಂದುಳಿದಿದ್ದಾಳೆ. ಮಹಿಳೆಯರು ಪುರುಷ ಪ್ರಧಾನ ಹುದ್ದೆಗಳನ್ನು ಪ್ರವೇಶಿಸಿದ್ದಾಗ್ಯೂ ಅವಳ ಲಿಂಗ, ಜಾತಿಯ ಅಂಶಗಳು ಮಹಿಳೆ ಜಿಲ್ಲಾ ಪಂಚಾಯತಿಯಂತಹ ಸ್ಥಳೀಯ ಹಂತದ ಉನ್ನತ ಅಧಿಕಾರ ಸ್ಥಾನಗಳಲ್ಲಿದ್ದಾಗ್ಯೂ ಕೂಡ ಸುಲಭವಾಗಿ ಪ್ರಧಾನವಾದ, ನ್ಯಾಯೋಚಿತವಾದ, ಗುಣಾತ್ಮಕವಾದ, ತಾರತಮ್ಯರಹಿತವಾದ ಕಾರ್ಯಗಳನ್ನು ನಿರ್ವಹಿಸಲು ಆಗುತ್ತಿಲ್ಲ.

**೩.೬.೨. ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಂಡ ಅಂಶಗಳು**

* ಗ್ರಾಮ, ತಾಲೂಕು ಪಂಚಾಯತಿಗಳಲ್ಲಿನ ದಲಿತ ಮಹಿಳೆ ಜಾತಿಯ ವಿಷಯದಲ್ಲಿ ಅತ್ಯಧಿಕ ತಾರತಮ್ಯ, ಶೋಷಣೆಗಳಿಗೆ ಒಳಗಾಗಿದ್ದಾರೆ. ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆ ಅದರಿಂದ ಅಂತಹ ತಾರತಮ್ಯವನ್ನೇನು ಅನುಭವಿಸುತ್ತಿಲ್ಲ.
* ಗ್ರಾಮೀಣ ವಲಯಗಳಲ್ಲಿರುವಂತೆ ಜಿಲ್ಲಾ ಪಂಚಾಯತಿಯ ಮಟ್ಟದಲ್ಲಿ ಅವಳ ಆಡಳಿತ ಸಹಭಾಗಿತ್ವಕ್ಕೆ ತಡೆಯಾಗಿದ್ದ ಅಸ್ಪೃಶ್ಯತೆಯ ಪ್ರಭಾವ ಇಲ್ಲಿ ಕಾಣೆಯಾಗಿದೆ. ಆದರೆ ಜಾತೀಯ ಸಂರಚನೆಗಳು ಇಲ್ಲಿಯೂ ಕಾರ್ಯನಿರತವಾಗಿರುವುದರಿಂದ ಸಂಪೂರ್ಣವಾಗಿ ಅವಳು ಮುಕ್ತಿ ಹೊಂದಿದ್ದಾಳೆಂದು ಹೇಳಲಾಗುವುದಿಲ್ಲ.
* ಚುನಾವಣೆಯ ನಂತರ ಅಧಿಕಾರಕ್ಕೆ ಬರುತ್ತಿರುವ ದಲಿತ ಮಹಿಳೆ ಆರಂಭದಿಂದ ಅಂತ್ಯದವರೆಗೂ ನೌಕರಶಾಹಿಯ ಕಪಿಮುಷ್ಟಿಯಲ್ಲಿಯೆ ತನ್ನೆಲ್ಲ ಅಧಿಕಾರವನ್ನು ಕೊಟ್ಟು ತನ್ನ ಅಧಿಕಾರದಿಂದ ದೂರ ಉಳಿಯುವಂತಾಗಿ ಬಿಟ್ಟಿದ್ದಾಳೆ. ನೌಕರಶಾಹಿಯೂ ಕೂಡ ಅವಳಿಗೆ ಆಡಳಿತದಲ್ಲಿ ಸಹಾಯ ಮಾಡುವ ನೆಪದಲ್ಲಿ ಅವಳನ್ನು ವ್ಯವಸ್ಥಿತವಾಗಿ ಶೋಷಣೆಗೆ ಈಡುಮಾಡುತ್ತಿದೆ.

* ಗ್ರಾಮೀಣ ವಲಯಗಳಲ್ಲಿ ಸ್ಥಾಪಿತ ಪಟ್ಟಭದ್ರ ಹಿತಾಸಕ್ತಿಗಳು ದಲಿತ ಮಹಿಳೆಯನ್ನು ನಿಯಂತ್ರಿಸುತ್ತವೆ ಅವಳ ಅಸ್ತಿತ್ವವನ್ನೆ ಅಲ್ಲಗಳೆಯುತ್ತಿದ್ದಾರೆ. ಜಿಲ್ಲಾ ಪಂಚಾಯತಿಯ ಮಟ್ಟದಲ್ಲಿ ಪಕ್ಷಗಳ ಹೆಸರಿನಡಿಯಲ್ಲಿ ನಿಯಂತ್ರಿಸಲಾಗುತ್ತಿದೆ. ಜಿಲ್ಲಾ ಪಂಚಾಯತಿಯಂತಹ ಉನ್ನತ ಸ್ಥಾನದಲ್ಲಿಯೂ ಜಾತಿಯ ಕಾರ್ಯಾಚರಣೆಯನ್ನು ಇದೊಂದೆ ಉದಾಹರಣೆಯ ಮೂಲಕ ಅರಿಯಬಹುದು.
* ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆ ರಾಜಕೀಯವನ್ನು ಕುರಿತಂತೆ ಇತ್ಯಾತ್ಮಕ ನಿಲುವು ತಾಳಿದ್ದಾಳೆ. ರಾಜಕೀಯವೊಂದೆ ತನ್ನ ಅಸ್ತಿತ್ವ, ಅನನ್ಯತೆಯನ್ನು ವಿಸ್ತರಿಸಬಲ್ಲದು ಎಂಬ ಅರಿವೂ ಅವಳಿಗಿದೆ.
* ಇತರ ಕೆಳಹಂತದ ಪಂಚಾಯತಿಗಳಿಗಿಂತಲೂ ಜಿಲ್ಲಾ ಪಂಚಾಯತಿಯಲ್ಲಿ ಪತಿರಾಯರ ಧ್ವನಿ ದೊಡ್ಡದಾಗಿದೆ. ಅಲ್ಲದೆ ಪಕ್ಷದ ಪತ್ತಾರರಂತೆ ಇತರೆ ವಾಸ್ತವವಾಗಿ ಹೆಂಡತಿಯ ಬದಲು ಆಡಳಿತ ನಡೆಸುತ್ತಿದ್ದಾರೆ.

**ಟಿಪ್ಪಣಿಗಳು**

೦೧. ಚಂದ್ರಶೇಖರ ಟಿ.ಆರ್, ಪುಟ:೮೩, ೨೦೦೩

೦೨. ಚಂದ್ರಶೇಖರ ಟಿ.ಆರ್, ಪುಟ:೮೫, ೨೦೦೩

೦೩. ಮುಡುಬಿ ಬಾಬುರಾವ್, ಪುಟ:೨೦೦, ೨೦೦೬

೦೪. ಕಲಾವತಿ ಬಿ.ಜೆ, ೨೦೦೭

೦೫. ಮಮತಾ ಸಾಗರ, ೨೦೦೬

೦೬. ಪ್ರೀತಿ ಶುಭಚಂದ್ರ, ಪುಟ:೨೦೪, ೨೦೦೪

೦೭. ಇಂದಿರಾ.ಆರ್, ಪುಟ:೧೧೦, ೨೦೦೨

೦೮. ಚಂದ್ರಶೇಖರ ಟಿ.ಆರ್, ಪುಟ:೯೦, ೨೦೦೬

೦೯. ಮೊಗಳ್ಳಿ ಗಣೇಶ, ಪುಟ:೧೯, ೧೯೯೯

೧೦. ಎಂ.ಉಷಾ, ೨೦೦೫

೧೧. ಎಂ.ಉಷಾ, ೨೦೦೫

೧೨. ಅದೇ ಪುಟ:೪೦, ೨೦೦೫

೧೩. ಸುಮಿತ್ರಾಬಾಯಿ ಬಿ.ಎನ್. ಪುಟ:೭೧, ೧೯೯೮

೧೪. ಅದೇ, ಪುಟ:೭೩, ೧೯೯೮

೧೫. ಎಂ.ಉಷಾ, ೨೦೦೫

೧೬. ಮಾಲತಿ ಸೋಮಶೇಖರ್, ಪುಟ:೭೪, ೨೦೦೭

೧೭. ಹೆಗಡೆ, ಪುಟ:೨೬, ೨೦೦೫

■■■

## ಅಧ್ಯಾಯ-ನಾಲ್ಕು

# ದಲಿತ ಮಹಿಳಾ ರಾಜಕಾರಣದ ಇಕ್ಕಟ್ಟುಗಳು ಮತ್ತು ಸವಾಲುಗಳು

## ಅಧ್ಯಾಯ-ನಾಲ್ಕು

## ದಲಿತ ಮಹಿಳಾ ರಾಜಕಾರಣದ ಇಕ್ಕಟ್ಟುಗಳು ಮತ್ತು ಸವಾಲುಗಳು

೧೯೪೫ರಲ್ಲಿ ಜಾಗತೀಕ ದೇಶಗಳ ಉನ್ನತಿಗಾಗಿ ರಚನೆಯಾದ ವಿಶ್ವಸಂಸ್ಥೆ ಹಾಗೂ ಅದರ ಅಂಗ ಸಂಸ್ಥೆಗಳು ಮಹಿಳೆಯರ ಹಕ್ಕುಗಳಿಗೆ ಸಂಬಂಧಿಸಿದಂತೆ ಮಾನವ ಹಕ್ಕುಗಳನ್ನು ಜಾಗೃತಗೊಳಿಸುವುದಕ್ಕಾಗಿ ಹಲವು ರೀತಿಯಿಂದ ಪ್ರೋತ್ಸಾಹಿಸಿತು. ೧೯೪೮ ರ ಡಿಸೆಂಬರ್ ೧೦ ರಂದು ಸಂಯುಕ್ತ ರಾಷ್ಟ್ರಗಳ ಸಾಮಾನ್ಯ ಸಭೆಯಲ್ಲಿ "ಮಾನವ ಸಮಾಜವು ಮಾತು ಮತ್ತು ನಂಬಿಕೆಗಳಲ್ಲಿ ಮುಕ್ತತೆಯನ್ನು ಮತ್ತು ಭಯ ಆಕಾಂಕ್ಷೆಗಳಲ್ಲದ ಮುಕ್ತತೆಯನ್ನು ಪಡೆಯುವುದೆ ಸಾಹಸ." ಎಂಬ ಪ್ರಧಾನ ದೂರದೃಷ್ಟಿತ್ವವನ್ನು ಗಮನದಲ್ಲಿರಿಸಿಕೊಂಡು ಮಾನವ ಸಹಜ ಹಕ್ಕುಗಳಿಗಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅನುಮೋದನೆಯನ್ನು ಪಡೆಯಿತು." ಭಾರತವೂ ಸಹ ವಿಶ್ವ ಸಂಸ್ಥೆಯ ಒಂದು ಸದಸ್ಯ ರಾಷ್ಟ್ರವಾಗಿರುವುದರಿಂದ, ಭಾರತೀಯ ಮಹಿಳೆಯರು ಇಲ್ಲಿ ಯಾವ ರೀತಿಯಾಗಿ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದಾರೆ? ಜಾತಿ, ಧರ್ಮ, ವರ್ಗ ನಿಷ್ಠವಾಗಿರುವ ಸಾಂಪ್ರದಾಯಿಕ ಭಾರತೀಯ ಸಾಮಾಜಿಕ ಜೀವನದಲ್ಲಿ ಸ್ತ್ರೀಯರಿಗೆ ಯಾವ ರೀತಿಯ ಅವಕಾಶ, ಸ್ಥಾನಮಾನಗಳನ್ನು ನೀಡಲಾಗಿದೆ? ನಿರಂತರವಾಗಿ ಮಹಿಳೆಯ ನೆರಳಾಗಿ ಅವಳಿಗೆ ನೆರವಾಗಲು ಸದಾ ಅವಳ ಹಿಂದೆಯೇ ಸುತ್ತುವ ಪುರುಷರ ಪಾತ್ರ ಯಾವ ಬಗೆಯದು? ಜಾತಿಯ ಬಗ್ಗೆ ಅತೀ ಕಾಳಜಿಯನ್ನು, ನಿಷ್ಠೆಯನ್ನು ಹೊಂದಿರುವ ಭಾರತದ ಸಾಮಾಜಿಕ ವ್ಯವಸ್ಥೆಯ ಅಡಿಯಲ್ಲಿ ತಳಸಮುದಾಯದ ದಲಿತ ಮಹಿಳೆಯ ಅಸ್ತಿತ್ವ, ರಾಜಕೀಯ ಭವಿಷ್ಯ, ರಾಜಕೀಯ ಸಬಲೀಕರಣ, ವಿಕೇಂದ್ರಿಕರಣದ ಸಫಲತೆ, ಹಾಗೂ ರಾಜಕೀಯ ಸಮಾನತೆಯ ಸಾಧ್ಯತೆಯನ್ನು ಅರಿಯುಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಸಾಮಾನ್ಯ ಜನಹೇಳುವಂತೆ ಸ್ತ್ರೀಯರು ಪುರುಷನ ಹಿಂಬಾಲಕಿ, ಅಡಿಆಳು ಎಂಬುದು ನಿಜವಾದರೂ ಅದಕ್ಕಿಂತ ಭಿನ್ನವಾದ ಪಾತ್ರ ಸಾಮಾಜಿಕ, ರಾಜಕೀಯ ಜೀವನದಲ್ಲಿದೆ. ಸ್ತ್ರೀಯ ಅಸ್ತಿತ್ವ, ಸ್ತ್ರೀತ್ವ, ಚಹರೆ, ಅವಳ ಗುಣಲಕ್ಷಣಗಳನ್ನು ಸಾಮರ್ಥ್ಯ, ಸಾಧ್ಯತೆಗಳನ್ನು, ಬುದ್ಧಿಮಂತಿಕೆ, ಚತುರತೆಯನ್ನು, ಹಕ್ಕು, ಒಡೆತನ, ಪಾಲನ್ನು ವಾಸ್ತವವಾಗಿ ಅರಿಯುವುದಾದರೆ ಇವೆಲ್ಲವುಗಳು ಸಹ ಅನಾದಿಕಾಲದಿಂದ ವ್ಯವಸ್ಥಿತವಾಗಿ ಕಡಿಯಲ್ಪಟ್ಟಿಂತವಾಗಿವೆ. ಇದು ಸ್ತ್ರೀವಾದಿಗಳ ನೇರ ಆಪಾದನೆಯೂ

ಕೂಡ. ಕುಟುಂಬ, ಕುಟುಂಬದ ಆಚೆಗಿನ ಪಾತ್ರಗಳ ಮೌಲ್ಯಗಳನ್ನು ಸ್ತ್ರೀಯಿಂದ ಕಸಿದುಕೊಂಡು ಅವಳನ್ನು ಎಲ್ಲಾ ಬಗೆಯ ಪಾತ್ರಗಳಿಂದ, ದೂರವೆ ತಳ್ಳಲಾಗಿದೆ. ಇಂತಹ ಕೃತ್ಯಗಳ ವಿರುದ್ಧ ಪುರುಷನಿಗೆ ಸರಿಸಮಾನವಾಗಿ ನಿಲ್ಲಲು ಮಹಿಳೆಗೆ ಸಾಧ್ಯವೆ ಇಲ್ಲದಂತ ಸ್ಥಿತಿ ಸಾಮಾಜಿಕ ಜೀವನದಲ್ಲಿದೆ. ಆದ್ದರಿಂದಲೇ ತನ್ನಲ್ಲಿಯ ಆತ್ಮಗೌರವ, ಸಮಾನ ಮೌಲ್ಯವೃದ್ಧಿಯನ್ನು ಅರಿತು ಪುರುಷನೊಂದಿಗೆ ಸ್ವತಂತ್ರವಾಗಿ ಯಾವುದೆ ಅಂಜಿಕೆ, ಅಳುಕಿಲ್ಲದೆ ಸ್ವಂತಿಕೆಯಿಂದ ಅವಳು ತನ್ನ ಸ್ವ ಅಧಿಕಾರ ಚಲಾಯಿಸುವಂತಾದಾಗ ಮಾತ್ರ ನಿಜವಾದಂತಹ ಮಹಿಳಾ ರಾಜಕೀಯ ಸಬಲೀಕರಣ ಸಾಧ್ಯವಾಗಬಲ್ಲದು.

ಭಾರತದಲ್ಲಿ ಸಂವಿಧಾನಾತ್ಮಕವಾಗಿ ಎಲ್ಲಾ ನಾಗರಿಕರಿಗೆ ಸರಿಸಮಾನವಾದ ಹಕ್ಕುಗಳು ದೊರಕಿವೆಯಾದರೂ, ಅವುಗಳ ಪಾಲನೆಯಲ್ಲಿ ಆಗಲಿ ಅಥವಾ ಜಾರಿಯಲ್ಲಾಗಲಿ ಇಂದಿಗೂ ಸಮರ್ಪಕವಾಗಿ ಅಥವಾ ನಿರ್ದಿಷ್ಟವಾದ ಪ್ರಮಾಣದ ಗುರಿಯನ್ನು ಸಾಧಿಸಲಾಗಿಲ್ಲ. ಹಕ್ಕುಗಳನ್ನು ಹಾಕಿಕೊಟ್ಟು ಎಲ್ಲರಿಗೂ ಒಳ್ಳೆಯದಾಗುತ್ತದೆ ಎಂದು ಭಾವಿಸಿದ್ದು ಕೇವಲ ಕನಸಾಯಿತು. ಏಕೆಂದರೆ ನಾಗರಿಕ ಜೀವನದ ತಳ ಸಮುದಾಯಗಳಿಗೆ ನಾಗರಿಕ ಹಕ್ಕುಗಳ ಪರಿವೆ ಇಲ್ಲ, ಅದರ ಪ್ರಾಥಮಿಕ ನಿಯಮಗಳ ಅರಿವೂ ಸಹ ಇಲ್ಲದಂತಾಗಿದೆ.

ಇದರ ಹಿನ್ನೆಲೆಯಲ್ಲಿ ನಾವು ದಲಿತ ಮಹಿಳಾ ಸಮುದಾಯದ ರಾಜಕೀಯ ಕುರಿತಾದ ವಿಚಾರಗಳತ್ತ ಮುಖಮಾಡಿದಾಗ ಮೇಲಿನ ವಿಷಯದ ಅಥವಾ ಊಹೆಯ ನಿಜಾಂಶ ತಿಳಿಯುತ್ತದೆ. ಏಕೆಂದರೆ ದಲಿತ ಮಹಿಳೆಗೆ ಸಂವಿಧಾನಾತ್ಮಕವಾದ ಸಮಾನ ಹಕ್ಕುಗಳಿದ್ದಾಗೂ ಕೂಡ ಸ್ವಹಿತಾಸಕ್ತಿ, ವರ್ಗ ಹಿತಾಸಕ್ತಿಯ ಕಾರಣದಿಂದ ಅವಳು ರಾಜಕೀಯ ಪರದೆಯಿಂದ ದೂರವನ್ನೇ ಕಾಯ್ದುಕೊಂಡು ಬಂದಿದ್ದಾಳೆ. ರಾಜಕೀಯ ಧ್ರುವೀಕರಣಕ್ಕೆ ಸಂಬಂಧಿಸಿದಂತೆ ಆಡಳಿತಾಂಗದ ಅಧಿಕಾರ, ನಾಯಕತ್ವ, ಸಂಘಟನೆ, ಪಕ್ಷ ಎಲ್ಲವೂ ಪುರುಷ ಕೇಂದ್ರಿತ ಅಥವಾ ಪುರುಷಮಯವಾಗಿರುವವರಿಂದ ಇಲ್ಲಿ ಮಹಿಳೆಯ ಗೈರು ಹಾಜರಿ ಎದ್ದು ಕಾಣಿಸುತ್ತದೆ. ಆಧುನಿಕ ಕಾಲದಲ್ಲಿ ರಾಜಕೀಯಕ್ಕೆ ಹಣ, ಜಾತಿಯ ಬೆಂಬಲ ಅತ್ಯಗತ್ಯ, ಆದರೆ ಜಾತಿಯ ಕಾರಣದಿಂದ ಸಾಮಾಜಿಕ ಜೀವನದಿಂದ ದೂರವೆ ಉಳಿದಿರುವ ದಲಿತ ಮಹಿಳೆಯ ಪಾಲಿಗೆ ಇದು ಅತ್ಯಂತ ದೂರದ ಮಾತೆ ಆಗಿದೆ. ಏಕೆಂದರೆ ಬಡತನ, ಜಾತಿಯ ಕುರಿತಾಗಿ ಅವಳಲ್ಲಿ ಮನೆಮಾಡಿರುವ ಕೀಳರಿಮೆ, ಭಯ, ಹಿಂಜರಿಕೆಗಳೆ ನಿರಂತರವಾಗಿ ಅವಳು ಪ್ರತಿಯೊಂದು ರಂಗಗಳಲ್ಲಿಯೂ ಹಿಂದುಳಿಯಲಿಕ್ಕೆ ಮುಖ್ಯ ಕಾರಣವಾಗಿವೆ. ಹೀಗೆ ಹಿಂಜರಿಕೆಯ ಕಾರಣಗಳಿಂದಲೇ ಅವಳು ಮುಕ್ತವಾಗಿ, ಸ್ವತಂತ್ರವಾಗಿ, ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಭಾಗಿದಾರಳಾಗಲು ಸಾಧ್ಯವಾಗುತ್ತಿಲ್ಲ.

ಕರ್ನಾಟಕ ರಾಜ್ಯದಲ್ಲಿ ಒಟ್ಟು ದಲಿತ ಸಮುದಾಯದ ಪಾಲು ಶೇಕಡಾ ೧೬% ರಷ್ಟು ಇದೆ. ಇದರಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ೫೩.೯೦ ರಷ್ಟಿದೆ. ಹೀಗಾಗಿ ಇಲ್ಲಿ ಮಹಿಳೆಯರ ಪಾಲು ಶೆ ೨೬.೭೦ ರಷ್ಟು ಹಾಗೆಯೇ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ೬೬.೦೧, ಇದರಲ್ಲಿ ೪೭.೯೫ ರಷ್ಟು ಪುರುಷರಿದ್ದಾರೆ. ಮಹಿಳೆಯರ ಪಾಲು ೩೩.೧೬ ರಷ್ಟು (ಕೃಪೆ, ಜನಗಣತಿ ವರದಿ ೨೦೦೧) ಹೀಗೆ ಜನಸಂಖ್ಯೆಯಲ್ಲಿ ಅತ್ಯಧಿಕ ಪ್ರಮಾಣದಲ್ಲಿ ದಾಖಲಾದ ದಲಿತ ಮಹಿಳಾ ರಾಜಕೀಯದಲ್ಲಿ ಚಿಂತನೆಗಳಿಗೆ ಸಂಬಂಧಿಸಿದಂತೆ ಈ ಮೇಲಿನ ಅಂಕಿ ಸಂಖ್ಯೆಗಳನ್ನು

ಅವಲೋಕಿಸಿದರೆ ತುಂಬ ಗೌಣವಾಗಿಬಿಟ್ಟಿದ್ದಾಳೆ. ರಾಜಕೀಯ ಪಕ್ಷಗಳು ದಲಿತರ ಓಟುಗಳ ಮೇಲೆ ಕಣ್ಣಿಟ್ಟು ದಲಿತರ ನಾಯಕರೆನಿಸಿಕೊಂಡ ಕೆಲವು ಪುಡಿಗಾಸು ನಾಯಕರಿಗೆ ಮಣೆ ಹಾಕಿ ಅವರನ್ನೇ ಶೋಷಿತ ಸಮುದಾಯದ ನೇತಾರರು ಎಂದು ಪ್ರತಿಬಿಂಬಿಸುತ್ತವೆ. ಆದರೆ ಆ ಸಮುದಾಯದೊಳಗೆ ಇರುವ ದಲಿತ ಮಹಿಳೆಯರನ್ನು ಮರೆತು ಬಿಡುತ್ತಾರೆ. ಅದ್ದರಿಂದಲೇ ದಲಿತ ಮಹಿಳೆಯ ರಾಜಕೀಯ ಸ್ಥಾನಮಾನಗಳು ಇಂದು ತಮ್ಮ ವಿಶಿಷ್ಟ ಅರ್ಥವನ್ನು ಕಳೆದುಕೊಂಡು ಬಿಟ್ಟಿವೆ. ರಾಜಕೀಯ ಪಕ್ಷಗಳು ಆಕೆಯನ್ನು ನಿರ್ಲಕ್ಷಿಸಿರುವುದು, ಆಕೆಗೆ ಸ್ಥಾನಮಾನ ಕಲ್ಪಿಸದೆ ಇರುವುದು, ಸಾಮಾಜಿಕ ಅಭಿವೃದ್ಧಿಯ ವ್ಯವಸ್ಥೆಯನ್ನು ಸೂಚಿಸುವ ಪ್ರತಿಬಿಂಬಗಳಾಗಿರುವುದನ್ನು ನಾವು ನೋಡಬಹುದಾಗಿದೆ. ರಾಜಕಾರಣದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಅಲ್ಪವಿದೆಯಾದರೂ ಅದರಲ್ಲಿ ಮೇಲ್ವರ್ಗದ ಮಹಿಳೆಯರದೇ ಹೆಚ್ಚು ಸಿಂಹಪಾಲು, ೧೯೫೨ ರಿಂದಲೂ ಲೋಕಸಭೆ ಹಾಗೂ ಕರ್ನಾಟಕ ವಿಧಾನ ಸಭೆಯಲ್ಲಿನ ಅವರ ಅಸ್ತಿತ್ವವನ್ನು ಅವಲೋಕಿಸಿದಾಗ ಅಲ್ಲಿ ನಡೆದಿರುವ ಲಿಂಗರಾಜಕಾರಣದ ಪಕ್ಷಪಾತಿತನ ಅರಿವಾಗಬಲ್ಲದು.[೨] ದುರ್ಬಲ ಸಮುದಾಯದ ಮಹಿಳೆಗೆ ಸಮಾನತೆಯನ್ನು ಕಾಪಾಡುವ ರಾಷ್ಟ್ರದಲ್ಲಿ ಯಾವುದೇ ಸ್ಥಾನಮಾನಗಳನ್ನು ನೀಡದಿರುವುದು ನಿಜಕ್ಕೂ ಅದೊಂದು ಆಶ್ಚರ್ಯಕರ ಸಂಗತಿಯಾಗಿದೆ.

ದಲಿತ ಮಹಿಳಾ ರಾಜಕಾರಣ ಎಲ್ಲಿಯೂ ಇಲ್ಲ, ಅದೇನಿದ್ದರೂ ಕಾಗದದ ಮೇಲೆ, ಪತ್ರಿಕೆಗಳಲ್ಲಿ, ವೇದಿಕೆಗಳ ಮೇಲೆ ಮಾತ್ರವೆ ಇದೆ. ಒಬ್ಬ ದಲಿತ ಮಹಿಳೆ ಕುಮಾರಿ ಮಾಯಾವತಿ ರಾಷ್ಟ್ರದ ಮುಂಚೂಣಿ ನಾಯಕಿ ಆಗಿದ್ದಾಕ್ಷಣ ಎಲ್ಲಾ ದಲಿತ ಮಹಿಳೆಯರು ರಾಜಕೀಯವಾಗಿ ಸಬಲರಾಗಿದ್ದಾರೆಂದು ಭಾವಿಸುವುದು ತಪ್ಪಾಗುತ್ತದೆ. ಏಕೆಂದರೆ ಮಾಯಾವತಿಯವರು ದಲಿತ ಸಮುದಾಯದ ಪ್ರತಿನಿಧಿಯಾಗಿದ್ದರೂ ಸಹ ಅವರು ಎಂದಿಗೂ ದಲಿತ ಮಹಿಳೆಯರ ಪರವಾಗಿ, ಅಥವಾ ಅವರ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಲಾರರು. ಅವರೇನಿದ್ದರೂ ಪಕ್ಷದೊಳಗಿರುವ ಮೇಲ್ವರ್ಗದವರ ಆಜ್ಞಾಪಾಲಕರಾಗಿಯೇ ಕಾರ್ಯನಿರ್ವಹಿಸುವುದು ಸಾಮಾನ್ಯರಿಗೂ ತಿಳಿದಿರುವ ಸಂಗತಿ, ಇಂತಹ ದಲಿತ ಮಹಿಳ ರಾಜಕಾರಣವನ್ನು ನಾವು ಸಮಸ್ತ ದಲಿತ ಮಹಿಳಾ ಸಮುದಾಯದೊಂದಿಗೆ ಸಮೀಕರಿಸಿ ಹೇಳಲು ಸಾಧ್ಯವೆ ಇಲ್ಲ. ಏಕೆಂದರೆ ಕುಮಾರಿ ಮಾಯಾವತಿಯವರು ಪೂರ್ಣ ಪ್ರಮಾಣದ ದಲಿತ ಮಹಿಳೆಯರ ಪ್ರತಿನಿಧಿಯಾಗಿಲ್ಲ. ಇದು ಕೇವಲ ಕಲ್ಪಿತ ಆದರ್ಶವೇ ಹೊರತು ವಾಸ್ತವ ಆದರ್ಶವಲ್ಲ. ಆದರೆ ದಲಿತ ಮಹಿಳಾ ರಾಜಕಾರಣವನ್ನು ಊಹೆ ಮಾಡಿಕೊಳ್ಳಬಹುದು. ಇದು ದೇಶದ ಮೇಲ್ ಸ್ತರದ ದಲಿತ ಮಹಿಳೆಯ ಸ್ಥಿತಿಯಾದರೆ ಗ್ರಾಮ ಸ್ವರಾಜ್ಯದ ಕೂಸಾಗಿರುವ ಪಂಚಾಯತ್‌ರಾಜ್ ಸಂಸ್ಥೆಯೊಳಗಿನ ದಲಿತ ಮಹಿಳೆಯ ಸ್ಥಿತಿ ಇದಕ್ಕಿಂತ ತುಂಬ ನಿಕೃಷ್ಟವಾಗಿದೆ. ಈ ಎರಡೂ ಕಡೆಯಲ್ಲಿಯೂ ದಲಿತ ಮಹಿಳೆ ಮೇಲ್‌ವರ್ಗದ ಪುರುಷರ ಹಿಡಿತದಲ್ಲಿಯೇ ರಾಜಕೀಯ ಆಟ ಆಡುತ್ತಿದ್ದಾಳೆ.

ಗ್ರಾಮ ಭಾರತದ ಅಡಿಪಾಯಲ್ಲಿರುವ ಪಂಚಾಯತ್ ರಾಜ್ ಸಂಸ್ಥೆಗಳು ವಾಸ್ತವವಾಗಿ ಗ್ರಾಮ ಸಮುದಾಯದ ಮುಖ್ಯ ರಾಜಕೀಯ ಶಕ್ತಿ ಕೇಂದ್ರಗಳು. ಹಿಂದಿನ ಎಲ್ಲಾ ಶ್ರೀಮಂತಶಾಹಿ, ಊಳಿಗಮಾನ್ಯಶಾಹಿ, ಬಂಡವಾಳಶಾಹಿಯ ಗುಣಲಕ್ಷಣಗಳೆ ಇಂದಿಗೂ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮನೆ ಮಾಡಿಕೊಂಡು ಅವರ ಉನ್ನತಿ, ಮುನ್ನಡೆಗೆ

ಅಡೆತಡೆಯಾಗಿವೆ. ತಮ್ಮ ಅಸ್ತಿತ್ವ, ಪ್ರಭುತ್ವಕ್ಕೆ ಯಾವುದೇ ರೀತಿಯ ಪರಿಣಾಮ ಬೀರದಂತೆ ನಿರಂತರವಾಗಿ ಇವು ಕಾರ್ಯನಿರ್ವಹಿಸುತ್ತಲೇ ಬಂದಿವೆ. ಅಲ್ಲದೆ ಹಿಂದಿನಿಂದಲೂ ಸಮಾಜದ ದುರ್ಬಲ ಸಮುದಾಯಗಳ ಮೇಲೆ ಯಾವ ರೀತಿಯ ಮನೋಸ್ಥಿತಿ ಹೊಂದಿದ್ದವೊ ಇಂದಿಗೂ ಸಹ ಅದೇ ಮುಂದುವರೆಯುತ್ತಿದೆ. ಗುಲಾಮಗಿರಿಗೆ, ಬಿಟ್ಟಿಚಾಕರಿಗೆ ಮೀಸಲಾಗಿದ್ದ ತಳ ಸಮುದಾಯಗಳು ಮೇಲ್ವರ್ಗಗಳ ಸೇವೆಯೇ ಸರ್ವಸ್ವ ಎಂಬಂತೆ ಭಾವಿಸಿ ಅವರಿಗೆ ತಲೆಬಾಗಿ ಇಂದಿಗೂ ನಡೆಯುತ್ತಿವೆ. ರಾಜಕೀಯದಲ್ಲಿ ದಲಿತ ಸಮುದಾಯಗಳಿಗೆ ಶಾಸನಾತ್ಮಕ ಕಾನೂನಿನಾತ್ಮಕ ಬೆಂಬಲಗಳಿದ್ದರೂ ಅವು ಕಾಗದದಡಿಯಲ್ಲಿಯೇ ಮಾತ್ರ ಉಳಿದು ಸಾಮಂತಶಾಹಿ ವ್ಯಕ್ತಿಗಳೆ ಅವಳ ಬದಲಿ ಅಧಿಕಾರವನ್ನು ಚಲಾಯಿಸುವಂತ ಸ್ಥಿತಿ ದಲಿತ ಮಹಿಳೆಯ ಪಾಲಿಗಿದೆ. ಅಲ್ಲದೆ ಇದರಲ್ಲಿ ದಲಿತ ಮಹಿಳೆಯರು ಹಾಗೂ ಇತರೆ ಮಹಿಳಾ ಸಮುದಾಯದವರು ಒಟ್ಟುಗೂಡಿ ಒಂದು ಸಂಘಟನಾತ್ಮಕ ಶಕ್ತಿಯಾಗದೆ ಇರುವುದು ಸಹ ಮಹಿಳಾ ಮುನ್ನಡೆಗೆ, ಸಂಘಟನೆಗೆ ತುಂಬ ತೊಡಕಾಗಿ ಮಾರ್ಪಾಡಾಗಿದೆ.

ಕೇವಲ ಒಂದು ಮೀಸಲು ಸ್ಥಾನದಿಂದಲೇ ರಾಜಕೀಯ ಅಸ್ತಿತ್ವವನ್ನು ಕಾಣಲು ಪರದಾಡುತ್ತಿರುವ ದಲಿತ ಮಹಿಳೆ ಪೂರ್ಣ ಪ್ರಮಾಣದ ರಾಜಕಾರಣಿಯಾಗಿ ಬದಲಾಗಲು ಸಾಧ್ಯವಿಲ್ಲದಂತಹ ಸ್ಥಿತಿ ಇಂದು ನಿರ್ಮಾಣವಾಗಿದೆ. ಒಂದು ವೇಳೆ ಹಾಗೇನಾದರೂ ಆದರೆ ಅದು ದಲಿತ ಮಹಿಳಾ ರಾಜಕಾರಣ ಎನಿಸಿಕೊಳ್ಳಲಾರದು. ದಲಿತ ದೃಷ್ಟಿಕೋನ ಒಂದು ಸಮುದಾಯ, ಸಮಾಜದ ದೃಷ್ಟಿಕೋನವಾದಾಗ ಮಾತ್ರ ಅದು ದಲಿತ ಮಹಿಳಾ ರಾಜಕಾರಣವಾಗಬಲ್ಲದು. ಸ್ಥಳೀಯ ಹಾಗೂ ಮೇಲಿನ ಎಲ್ಲಾ ಹಂತಗಳಲ್ಲಿಯೂ ಮಹಿಳೆಯನ್ನು ಭಿನ್ನವಾಗಿ ವಿಭಜಿಸಿರುವುದರಿಂದ ಅವಳು ಕೇಂದ್ರಿಕೃತವಾಗುವಲ್ಲಿ ಸೋತಿದ್ದಾಳೆ. ಇದಕ್ಕೆ ಕಾರಣವೇನೆ ಇರಲಿ, ಇದರಲ್ಲಿ ಪಿತೃ ಪ್ರಧಾನತೆಯ ಛಾಯೆ ಮಾತ್ರ ಇರುವುದು ಕಂಡುಬರುತ್ತದೆ. ಕೇವಲ ಶಾಸನಾತ್ಮಕವಾಗಿ ಸಿಕ್ಕ ರಾಜಕೀಯ ಅವಕಾಶಗಳಿಂದಲೇ ಅದನ್ನು ದಲಿತ ಮಹಿಳಾ ರಾಜಕಾರಣ ಎಂದು ಭಾವಿಸಬಹುದಾದರೂ ಅದು ಕೇವಲ ಜಾತಿಗೆ ಸೀಮಿತ ಮಾಡಬೇಕು ಎಂಬುದು ತುಂಬ ತಪ್ಪಾಗುತ್ತದೆ. ಅದನ್ನು ಜಾತಿಯೊಳಗೆ ನೋಡಬೇಕೆಂದರೆ ಅದು ಪ್ರಧಾನ ಧ್ವನಿಯ ಜೊತೆಗೆ ಉಪಧ್ವನಿಯಾಗಿ ಉಳಿಯುವ ಸಂಭವ ಇರುತ್ತದೆ. ಹೀಗೆ ಪ್ರಧಾನ ಧ್ವನಿಯೊಳಗೆ ಉಪಧ್ವನಿಯಾಗುತ್ತಿರುವ ದಲಿತ ಮಹಿಳೆಯನ್ನು ಇಟ್ಟುಕೊಂಡೆ ಪಿತೃ ಪ್ರಧಾನತೆಯ ಜೊತೆಗೆ ಯಾಜಮಾನ್ಯಶಾಹಿ, ಪುರುಷಶಾಹಿ, ಊಳಿಗಮಾನ್ಯಶಾಹಿಗಳನ್ನು ಎದುರಿಸಿ ಅವಳು ಅಧಿಕಾರ ಚಲಾಯಿಸುವಂತಾದರೆ ಅದು ನಿಜವಾದ ದಲಿತ ಮಹಿಳಾ ರಾಜಕಾರಣ ಎನಿಸಿಕೊಳ್ಳಬಲ್ಲದು. ದಲಿತ ಮಹಿಳೆಯರು ಸಂಘಟನಾತ್ಮಕ ಶಕ್ತಿಯಾಗಿ ಒಂದಾಗುವುದು ಕೇವಲ ಕಲ್ಪನೆ ಅಷ್ಟೇ. ಶೇಕಡಾ ೧೮ ರಷ್ಟು ರ ಮೀಸಲಾತಿಯಡಿಯಲ್ಲಿ ದಲಿತ ಮಹಿಳಾ ರಾಜಕಾರಣವನ್ನು ಪರಿಭಾವಿಸಿಕೊಳ್ಳುವುದು ನಿಜವಾದ ದಲಿತ ಮಹಿಳ ರಾಜಕಾರಣ ಅಲ್ಲವೆ ಅಲ್ಲ. ಕೇವಲ ಒಂದು ಸ್ಥಳೀಯ ಸರಕಾರದ ಒಳಗಿನ ನಿರ್ದಿಷ್ಟವಾದ ಸೀಟುಗಳ ಹಂಚಿಕೆಯೂ ಸಹ ಅವೈಜ್ಞಾನಿಕ. ಮೀಸಲು ಕ್ಷೇತ್ರದಿಂದ ಬಂದವರು ಎಲ್ಲಾ ಬಗೆಯ ಸಾಮಾಜಿಕ ವಿರೋಧವನ್ನು ಎದುರಿಸಿ ಅಧಿಕಾರವನ್ನು ಎಂದಿಗೂ ಚಲಾಯಿಸಲಾರರು. ಸಂವಿಧಾನಾತ್ಮಕ ಬೆಂಬಲವಿದ್ದರೂ ಸಹ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಂಶಗಳಡಿಯಲ್ಲಿ ಅದು ತನ್ನ ಸೋಲನ್ನು ಒಪ್ಪಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ದಲಿತ ಮಹಿಳಾ ರಾಜಕಾರಣದ ಇಕ್ಕಟ್ಟುಗಳು, ಸವಾಲುಗಳನ್ನು ಅರಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

### ೪.೧ ದಲಿತ ಮಹಿಳಾ ರಾಜಕಾರಣ

"One most choose the slave stand point not only because the slave is oppressed but also because he epresnts a higher-order cognition which perforce includes the mastere has a human wheve as the mastevos cogition has to exclude, the slave except as a hing"[3]

"ಆಶಿಶ್‌ನಂದಿ"

ಸಮಾಜದ ಅಂಚಿಗೆ ದೂಡಲ್ಪಟ್ಟ ವಂಚಿತರ, ನಿಕೃಷ್ಟರ ನೆಲೆಯಿಂದ ಅಭಿವೃದ್ಧಿಯನ್ನು ನಿರ್ವಚಿಸುವ ಅಗತ್ಯವನ್ನು ಮೇಲಿನ ವಾಕ್ಯದಲ್ಲಿ ತುಂಬ ಸ್ಥೂಲವಾಗಿ ಕಾಣಬಹುದು. ಸಾಮಾಜಿಕ ಜೀವನದಿಂದಲೇ ಹಾಗೂ ಅಭಿವೃದ್ಧಿಯ ನೆಲೆಯಿಂದ ದೂರವೆ ಉಳಿಯುತ್ತಿರುವ ನಿಕೃಷ್ಟರ ನೆಲೆಯಿಂದ ಅಭಿವೃದ್ಧಿಯ ಪರಿಭಾಷೆಯನ್ನು ನೋಡುವುದು ಒಳಿತು. ಇದಕ್ಕೆ ಕಾರಣ ಅವರು ನಿಕೃಷ್ಟರು, ನಿರ್ಗತಿಕರು ಅಂತ ಏನಲ್ಲ, ಈ ವರ್ಗದ ಜನರ ಅರಿವು ಮಾತ್ರ ಒಡೆಯರನ್ನು ಮಾತ್ರ ಮನುಷ್ಯರೆಂದು ಪರಿಭಾವಿಸಿಕೊಂಡಿರುವುದು. ಇದಕ್ಕೆ ಪ್ರತಿಯಾಗಿ ಒಡೆಯರ ಅರಿವಿನಲ್ಲಿ ನಿಕೃಷ್ಟರಿಗೆ ಸ್ಥಾನ, ಅವಕಾಶಗಳೇ ಇರುವುದಿಲ್ಲ."[4] (ಟಿ.ಆರ್ ಚಂದ್ರಶೇಖರ್, ೨೦೦೪) ಅಂಚಿನ ಸಮುದಾಯಗಳಿಗೆ ಈ ಬಗೆಯ ನಿಕೃಷ್ಟತೆಗೆ ಹಲವು ಬಗೆಗಳಿವೆ. ಅವುಗಳಲ್ಲಿ ಅಸಮಾನತೆಯೂ ಒಂದು ಇಂತಹ ಅಸಮಾನತೆಯ ಎಳೆಯೊಳಗೆಯೇ ಲಿಂಗ ಅಸಮಾನತೆ, ಲಿಂಗ ಸಂಬಂಧಿ ಅಸಮಾನತೆಗಳು ತೂರಿಕೊಂಡಿವೆ. ಆದ್ದರಿಂದಲೇ ಲಿಂಗ ಸಂಬಂಧಿ ಅಸಮಾನತೆಯನ್ನು ವಿರೋಧಿಸುವುದೆಂದರೆ ಇತರ ಎಲ್ಲಾ ಬಗೆಯ ಸಾಮಾಜಿಕ, ಆರ್ಥಿಕ, ರಾಜಕೀಯಗಳಲ್ಲಿಯ ಅಸಮಾನತೆಗಳನ್ನು ವಿರೋಧಿಸುವುದೆಂದೆ ಅರ್ಥ. ಜನಾಂಗ ಸಂಬಂಧಿ, ಲಿಂಗಸಂಬಂಧಿ, ವರ್ಗ ಸಂಬಂಧಿ, ಅಂಶಗಳು ಮಹಿಳೆಯನ್ನು ಸಮಾಜದಲ್ಲಿ ವಿಭಜಿಸಿ ಅವಳನ್ನು ಅತಂತ್ರಕ್ಕೆ ತುಳಿದಿರುವುದು ಮಾತ್ರ ಸತ್ಯ.

ವಿಶ್ವದ ಮೂರನೆಯ ಜಗರಾಷ್ಟ್ರಗಳಲ್ಲಿ ಮಹಿಳೆಯರ ಸ್ಥಿತಿ ಇಂದು ವಾಸ್ತವವಾಗಿ ಇಂತಹ ಅವಗಾಹಣೆಗೆ ಒಳಗಾಗಿದೆ. ಭಾರತದ ಸಂದರ್ಭದಲ್ಲಿ ಇರಲಿ, ಕರ್ನಾಟಕದ ಸಂದರ್ಭದಲ್ಲಿರಲಿ, ಅಲ್ಲಿ ಅಭಿವೃದ್ಧಿಯನ್ನು ದಲಿತ ಮಹಿಳೆ ನೆಲೆಯಿಂದಲೇ ಪರಿಭಾವಿಸ ಕೊಳ್ಳಬೇಕಾಗಿದೆ. ದಲಿತ ಮಹಿಳೆಯರ ಬದುಕು ಅಭಿವೃದ್ಧಿಯ ಎಲ್ಲಾ ಹಿತಾಸಕ್ತಿಗಳನ್ನು ಹಾಗೂ ಸಮುದಾಯಿಕ ಜೀವನದ ಮೌಲ್ಯಾಚರಣೆಗಳನ್ನು ಪ್ರತಿನಿಧೀಸುತ್ತಿರುತ್ತದೆ. ದಲಿತ ಮಹಿಳೆಯರ ಬದುಕು. ಸಮಾಜದ ಅಂಚಿನಲ್ಲಿರುವ ಎಲ್ಲಾ ಸೌಲಭ್ಯಗಳ ವಂಚಿತರ ಬದುಕನ್ನು ಪ್ರತಿನಿಧೀಸುತ್ತಿರುತ್ತವೆ. ಲಿಂಗ ಸಂಬಂಧ ಅಭಿವೃದ್ಧಿ ಮಿಮಾಂಸೆಯೂ ಕೇವಲ ಮಹಿಳೆಯನ್ನು ಮಾತ್ರವೇ ಒಳಗೊಂಡಿರುವ ಸಂಕಥನವಲ್ಲ. ಅದು ಜನಪರವೂ, ಸಮಾಜ ಮುಖಿಯೂ ಲಿಂಗ ಸ್ನೇಹಿಯೂ ಆಗಿದೆ."[5] (ಟಿ.ಆರ್. ಚಂದ್ರಶೇಖರ, ೧೩೯,೨೦೦೪)

ದಲಿತ ಮಹಿಳೆ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾಳೆ ಇದರಲ್ಲಿ ಯಾವುದೇ ಆಕ್ಷೇಪಣೆಯೂ ಇಲ್ಲ. ಆದರೆ ಅವಳ ರಾಜಕೀಯ ಚಟುವಟಿಕೆ, ಸಹಭಾಗಿತ್ವ, ನಿರ್ಣಯ ತೆಗೆದುಕೊಳ್ಳುವಿಕೆ ಆಕೆಗೆ ಪ್ರಧಾನವಾಗಿ ಬಂದದ್ದಲ್ಲ. ಬದಲಿಗೆ ಅದು ಕೇವಲ ಜನಾಂಗದ ನೆಲೆಯಿಂದ ಬಂದದ್ದು. ಇದನ್ನು ಹಿಂದಿನ ಅಧ್ಯಾಯಗಳಲ್ಲಿ

ಅರಿತುಕೊಂಡಿದ್ದೇವೆ. ಇತರ ಮೇಲ್ವರ್ಗದ ಮಹಿಳೆಯರಂತೆ ದಲಿತ ಮಹಿಳೆಗೂ ಸಹ ಗೃಹಕೃತ್ಯದ ಹೊರೆ ಇದೆ. ಆದರೆ ಸಾರ್ವಜನಿಕ ಜೀವನದಲ್ಲಿ ಅವಳ ರಾಜಕೀಯ ಸ್ಥಿತಿಗತಿ ಅತ್ಯಂತ ಪ್ರಧಾನವಾದುದು, ಆದರೆ ಕುಟುಂಬ, ಸಮಾಜ, ಧರ್ಮಗಳು ಅವಳ ರಾಜಕೀಯ ಪಾತ್ರವನ್ನು ತಿರಸ್ಕರಿಸಿ ಅವಳನ್ನು ಅಪ್ರಧಾನ ಸ್ಥಿತಿಯಲ್ಲಿ ತಂದು ನಿಲ್ಲಿಸಿವೆ. ಅಲ್ಲದೆ ಅವಳ ಪಾತ್ರವನ್ನು ಅನುಷಂಗಿಕವಾದದು, ಪ್ರಾಸಂಗಿಕವಾದದು ಎಂಬ ಧೋರಣೆಯಲ್ಲಿಯೇ ಮುಳುಗಿವೆ. ಆದರೆ ಮಹಿಳಾ ಅಧ್ಯಯನ ಇಂತಹ ಪೂರ್ವಾಗ್ರಹಗಳನ್ನು ಪ್ರಶ್ನಿಸುತ್ತದೆ. ರಾಜಕೀಯ ಭಾಗವಹಿಸುವಿಕೆ ಕೇವಲ ಪುರುಷರಿಗಷ್ಟೆ ಸೀಮಿತವಲ್ಲ. ಅಲ್ಲಿ ಮಹಿಳೆಯ ಪಾಲು ಸಹ ಇದೆ. ರಾಜಕಾರಣದಲ್ಲಿ ಪುರುಷರಿಗಿರುವಷ್ಟೇ ಸ್ಥಾನಮಾನಗಳು, ಜವಾಬ್ದಾರಿಗಳು, ಮಹಿಳೆಗ ಇವೆ ಎಂದು ತೋರಿಸಿಕೊಟ್ಟಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮಗಾಂಧಿ ಮತ್ತು ಡಾ.ಬಿ.ಆರ್. ಅಂಬೇಡ್ಕರ್‌ರವರ ನಡುವಿನ ಪೂನಾ ಒಪ್ಪಂದ ಚಾರಿತ್ರಿಕವಾಗಿ ದಲಿತರ ಪಾಲಿನ ಒಪ್ಪಂದವೇ ಆಯಿತು. ಭಾರತೀಯ ಸಮಾಜದಲ್ಲಿ ದಲಿತರನ್ನು ನಡೆಸಿಕೊಳ್ಳುತ್ತಿದ್ದ ಹೇಯ ಕೃತ್ಯಗಳಿಗೆ ತಿಲಾಂಜಲಿ ಹಾಡಿ, ತಮ್ಮ ಹಕ್ಕೋತ್ತಾಯಗಳಿಗಾಗಿ ದಲಿತರಿಗೆ ಪ್ರತ್ಯೇಕ ಮತದಾನದ ವ್ಯವಸ್ಥೆಗಾಗಿ ಬಾಬಾಸಾಹೇಬರು ಹಪಾಹಪಿಸಿದರು. ಆದರೆ ಮನುವಾದಿಗಳ ಕಪಟ ನಾಟಕಗಳಿಗೆ ಬಲಿಯಾಗಿ ಮನಸ್ಸಿಲ್ಲದೆ ಹಿಂದೆ ಸರಿಯಬೇಕಾಯಿತು. ದಲಿತರಿಗಿಂತ ಸ್ವಲ್ಪ ಉತ್ತಮ ಜೀವನಮಟ್ಟ ಹೊಂದಿದ್ದ ಸಮುದಾಯಕ್ಕೆ ಪ್ರತ್ಯೇಕ ರಾಷ್ಟ್ರ ನೀಡಲು ಒಪ್ಪಿದ ಮಹಾತ್ಮರು, ದಲಿತರ ವಿಷಯದಲ್ಲಿ ಇಬ್ಬಗೆಯ ನೀತಿಯನ್ನೇ ಅನುಸರಿಸಿದರು. ಅವಕಾಶವಾದಿ ರಾಜಕಾರಣಿಗಳ ಹಿಂದೆ ಮಹಾತ್ಮಗಾಂಧಿಯವರ ಹಿಂಡು ಇತ್ತು. ಹಾಗೇನಾದರೂ ಡಾ. ಅಂಬೇಡ್ಕರರ ಹಕ್ಕೋತ್ತಾಯಕ್ಕೆ ಮನ್ನಣೆ ಸಿಕ್ಕಿದ್ದರೆ ದಲಿತರು ಪೂರ್ಣ ಪ್ರಮಾಣದಲ್ಲಿ ನಾಗರಿಕ ಜೀವನ ನಡೆಸುವಂತಾಗುತ್ತಿತ್ತೇನೋ. ಮೀಸಲಾತಿಯ ಆಸೆಯನ್ನು ತೋರಿಸಿ ಮತ್ತೆ ದಲಿತರಿಗೆ ಗುಲಾಮರಾಗಿಯೇ ಉಳಿಯುವಂತೆ ಮಾಡಲಾಯಿತು. ಮೀಸಲಾತಿ, ಸಮಾನತೆಯ ವಿಚಾರಗಳು ವಾಸ್ತವವಾಗಿ ತಮ್ಮ ನೈಜಕಾರ್ಯ ಚಲಾಯಿಸಲು ಸಾಧ್ಯವೆ ಆಗಲಿಲ್ಲ. ಅದು ಕೆಲವರಿಗೆ ಮಾತ್ರವೆ ಒಲಿಯಿತು. ಸಾಮಾಜಿಕ ಜೀವನದ ಕೊನೆಯ ಅಂಚಿನ ವ್ಯಕ್ತಿಯ ಕಡೆ ಇದು ಒಲಿಯಲೆ ಇಲ್ಲ.

ಸ್ವಾತಂತ್ರ್ಯ ನಂತರ ಉದಾರವಾದಿನೆಲೆಯಲ್ಲಿ ರೂಪು ಪಡೆದ ಪಂಚಾಯತ್‌ರಾಜ್ ಸಂಸ್ಥೆಯೂ ಸಹ ಮೇಲಿನ ಅಂಶಕ್ಕೆ ಹೊರತಾಗಿಲ್ಲ ಎಂದೇಳಬಹುದು. ಕರ್ನಾಟಕ ಸರಕಾರ ಜಾರಿಗೊಳಿಸಿದ ಪಂಚಾಯತರಾಜ್ ಅಧಿನಿಯಮವು ಸಹ ಅಂಚಿನ ಸಮುದಾಯಗಳಿಗೆ ಅಧಿಕಾರದ ಬಲ ನೀಡಲು ಶ್ರಿ ದೇವರಾಜ ಅರಸು, ನಜೀರ್‌ಸಾಬ್ ಕಾಲಾವಧಿಯಲ್ಲಿ ಹತ್ತು ಹಲವು ಬಗೆಯಲ್ಲಿ ಅಂಚಿನ ಸಮುದಾಯಗಳಿಗಾಗಿ ಶ್ರಮಿಸಿತು. ಗಾಂಧೀಜಿ, ಜೆ.ಪಿ. ಲೋಹಿಯಾ ಕಂಡಂತಹ ಪೂರ್ಣ ಸ್ವರಾಜ್ಯದ ಆಶಯಕ್ಕೆ ಕರ್ನಾಟಕ ಸರಕಾರದ ಪಾತ್ರ ತುಂಬ ಹತ್ತಿರವಾಗಿತ್ತು. ಹಿಂದುಳಿದ, ಅಂಚಿನ ಸಮುದಾಯಗಳ ಏಳಿಗೆಯನ್ನೇ ತಮ್ಮ ಪ್ರಮುಖ ಮಾನದಂಡವನ್ನಾಗಿಸಿಕೊಂಡ ಅರಸು ಸರಕಾರ ಹಲವಾರು ಮಹತ್ತರ ಯೋಜನೆಗಳನ್ನು, ಅವಕಾಶಗಳನ್ನು, ಮೀಸಲಾತಿಯನ್ನು ನೀಡುವುದರ ಮೂಲಕ ದಲಿತ, ಹಿಂದುಳಿದ ಸಮುದಾಯಗಳ ಆಶಾಕಿರಣವಾದರು.

ಹಿಂದುಳಿದ ಮತ್ತು ದಲಿತ ಎಂದು ಮಧ್ಯಮ ಮತ್ತು ಕೆಳಜಾತಿಗಳನ್ನು ಸಂಬೋಧಿಸುವುದು ತಿಳಿಯದ ವಿಷಯವಲ್ಲ. ತಿಳಿದ ಸಂಗತಿಗಳು. ಈ ದಲಿತ ಹಿಂದುಳಿದ ಅರ್ಥ ವಿಸ್ತೃತವಾದದ್ದು. ಇವುಗಳಲ್ಲಿ ಅಸಂಖ್ಯಾ ಜಾತಿಗಳಿರುವುದು ಸರ್ವರಿಗೂ ವೇದ್ಯ. ಇವುಗಳಲ್ಲಿ ಕೆಲವು ಚಾಲಾಕಿ ಜಾತಿಗಳು ಮೇಲ್ಜಾತಿಗಳ ತಂತ್ರ, ಕುತಂತ್ರ ಅಳವಡಿಸಿಕೊಂಡಿವೆ. ಗುಲಾಮಗಿರಿ ಕಳಚಿಕೊಂಡು ಆಳುವ ಮನಃ ಸ್ಥಿತಿಗೆ ರೂಪಾಂತರಗೊಳ್ಳುತ್ತಿವೆ. ಇದು ತಪ್ಪಲ್ಲ. ಶೋಷಿತ ರಾಜಕೀಯ ವ್ಯವಹಾರಗಳಿಗೆ ಜನತಂತ್ರದ ದೊಡ್ಡ ಕಾಣಿಕೆ, ಎಲ್ಲರ ಪರವಾಗಿ ರಾಜಕೀಯ ವ್ಯವಹಾರಗಳಿಗೆ ಮುಂದಾಗುವ ಚಾಲಾಕಿ ಜಾತಿಗಳು ಒಳಗೊಳಗೆ ತಮಗೆ ಅನುಕೂಲವಾಗುವ ಹಾಗೆ ಸಂಧಾನ ಕುದುರಿಸಿಕೊಳ್ಳುತ್ತವೆ. ತರುವಾಯ ರಾಜಕೀಯ ಚಟುವಟಿಕೆಯಲ್ಲಿ ಅಧಿಕಾರ ಪಲ್ಲಟವು ಆಗಲಾರಂಭಿಸುತ್ತದೆ.[೬] (ಸಿ.ಕೆ. ಮಹೇಶ್, ೨೦೦೨) ಆದರೆ ದೇವರಾಜ ಅರಸರವರು ದುರ್ಬಲ ವರ್ಗಗಳು ಮುಖ್ಯವಾಗಿ ಪ್ರಭಲ ವರ್ಗಗಳಿಗೆ ಸರಿಸಮನಾಗಿ ಅಧಿಕಾರ ಹಾಗೂ ಎಲ್ಲಾ ಸಾರ್ವಜನಿಕ ಹುದ್ದೆ, ಅಧಿಕಾರಗಳನ್ನು ನೆಡೆಸುವಂತಾಗಲೂ ಮೀಸಲಾತಿಯನ್ನು ಇನ್ನಷ್ಟು ವಿಸ್ತರಿಸಿದರು. ಹಿಂದಿನಿಂದಲೂ ಆಳ್ವಿಕೆಯನ್ನೇ ತನ್ನ ಪ್ರಮುಖ ಆಕಾಂಕ್ಷೆಯಾಗಿ ಹೊಂದಿದ್ದ ಮೇಲ್ವರ್ಗಕ್ಕೆ ಅಲ್ಪವಾದರೂ ಇವರ ಕಾಲಾವಧಿಯಲ್ಲಿ ಚುರುಕು ಮುಟ್ಟಿಸಿದರು.

ದಲಿತ ಸಮುದಾಯದೊಳಗಿನ ಕೆಲವು ಸ್ಪೃಶ್ಯ, ಪ್ರಭಲ, ಜಾತಿಗಳು ಮುಂದುವರೆದವರ ಹುಸಿ ಆಸೆಗಳಿಗೆ ತಮ್ಮ ಅಸ್ತಿತ್ವವನ್ನೇ ಅವರಿಗೆ ಮಾರಿಕೊಂಡಿದ್ದಾರೆ. ಹೀಗಾಗಿ ದಲಿತ ಸಮುದಾಯದೊಳಗಿನ ಇತರ ಜಾತಿಗಳು ಅವರ ಸೇವಕರಾಗಿಯೇ, ಅವರ ಆಜ್ಞಾನುಸಾರ ತಮ್ಮ ತನವನ್ನು ಅವರಿಗೆ ಒಪ್ಪಿಸಿದ್ದಾರೆ. ಈ ಕಾರಣಗಳಿಂದಲೇ ದಲಿತ ಮಹಿಳೆಯ ರಾಜಕೀಯ ಅಸ್ತಿತ್ವ ಕುಂಠಿತಗೊಂಡಿರುವುದು. ದಲಿತ ಸಮುದಾಯದಲ್ಲಿನ ಕೆಲವು ಜಾತಿಗಳು ಊಳಿಗಮಾನ್ಯಶಾಹಿಗೆ ಶರಣಾಗಿ ಅವರ ಇಚ್ಛೆಯಂತೆ ನೆಡೆದು ಅಲ್ಪ ಸ್ವಲ್ಪ ರಾಜಕೀಯ ಅವಕಾಶ ಬಳಸಿಕೊಂಡಿವೆಯಾದರೂ ಅವಕ್ಕಿಂತ ತಳಸಮುದಾಯಗಳಿಗೆ ಅದರ ಅವಕಾಶವೆ ಇಲ್ಲ. ಈ ಎಲ್ಲಾ ಕಾರಣಗಳಿಂದ ದಲಿತ ಮಹಿಳಾ ರಾಜಕೀಯ ಭವಿಷ್ಯ, ಅಸ್ತಿತ್ವ, ಸಹಭಾಗಿತ್ವ ನಾಮಮಾತ್ರವೆ ಎಂಬಂತಾಗಿದೆ. ಮೇಲಿನವರ ತಾಳಕ್ಕೆ ತಕ್ಕಂತೆ ನಡೆಯುತ್ತಲೆ ತನಗೆ ಸಿಕ್ಕ ಅವಕಾಶವನ್ನು ಮರೀಚಿಕೆ ಮಾಡಿಕೊಳ್ಳುತ್ತಿದ್ದಾಳೆ. ದಲಿತರ ಪ್ರಗತಿಗಾಗಿಯೇ ರೂಪಿತವಾಗಿರುವ ಕೆಲವು ದಲಿತ ಸಂಘಟನೆಗಳಂತೂ ದಲಿತ ಮಹಿಳೆಯನ್ನು ತಮ್ಮ ಹೋರಾಟ, ಚಳುವಳಿಯಲ್ಲಿ ಭಾಗಿದಾರರನ್ನಾಗಿ ಮಾಡಿಕೊಳ್ಳುತ್ತಿವೆಯಾದರೂ ಅವಳಿಗೆ ಸೂಕ್ತ ಸ್ಥಾನಮಾನ ನೀಡಲು ಇವು ಸಹ ಸಂಪೂರ್ಣ ವಿಫಲವಾಗಿವೆ ಎಂದೇ ಹೇಳಬೇಕು. ಏಕೆಂದರೆ ದಲಿತ ಸಂಘಟನೆಗಳ ಸಮಾವೇಶಗಳು ಕೆಲವು ಡೊಂಗಿ ದಲಿತ ನಾಯಕರ ರಾಜಕೀಯ ಜೀವನಕ್ಕೆಗೆ. ಅಸ್ತಿತ್ವಕ್ಕಾಗಿಯೇ ನಡೆಯುತ್ತಿರುವುದರಿಂದ ಅಲ್ಲಿ ಮಹಿಳೆ ಜನಬೆಂಬಲದ ಸಮವಾಗಿ ಅಲ್ಲಿ ಭಾಗಿಯಾಗುತ್ತಿದ್ದಾಳಷ್ಟೆ. ಹೀಗೆ ತಳಸಮುದಾಯಗಳಲ್ಲಿಯೇ ಅವಳ ರಾಜಕೀಯ ಭವಿಷ್ಯಕ್ಕೆ ಅವಕಾಶವಿಲ್ಲದಿರುವಾಗ ಮುಂದಿನ ಹಂತಗಳ ಬಗ್ಗೆ ಅವಳ ಸ್ಥಿತಿ ಹೇಗಿರಬಹುದೆಂದು ಊಹಿಸಬಹುದು. ಪಂಚಾಯತಿಗಳ ಮಟ್ಟದಲ್ಲಿಯಂತೂ ಅವಳ ಗಂಡ, ತಂದೆ, ಸಹೋದರರೆ ಅವಳ ರಾಜಕೀಯಾಧಿಕಾರವನ್ನು ತಮ್ಮ ಮುಂದಿನ ರಾಜಕೀಯ ಭವಿಷ್ಯಕ್ಕಾಗಿ, ಅಸ್ತಿತ್ವಕ್ಕಾಗಿ ಒಂದು ವೇದಿಕೆಯನ್ನಾಗಿಸಿಕೊಳ್ಳುತ್ತಿದ್ದಾರೆ. ಅವಳ ಅಧಿಕಾರವಧಿಯು ಮುಗಿದ ನಂತರ ಅವಳ ಕಾರ್ಯಸ್ಥಾನ ಮನೆಯೇ ಆಗುತ್ತದೆ. ಆದರೆ ಇವರದು ರಾಜಕೀಯದಲ್ಲಿ

ಬೆಳೆಯುತ್ತಲೆ ಹೋಗುತ್ತಾರೆ. ಈ ಕಾರಣಗಳಿಂದಲೆ ಅವಳ ಅಧಿಕಾರವೆಲ್ಲವೂ ಪುರುಷರ ರಾಜಕೀಯ ಅಸ್ತಿತ್ವಕ್ಕಾಗಿಯೇ ರೂಪಿತವಾದಂತಿವೆ. ತನಗೆ ರಾಜಕೀಯವಾಗಿ ಮುಂದೆ ಬರಲು ಅವಕಾಶ ಮಾಡಿಕೊಟ್ಟು ತನ್ನ ಎಲ್ಲಾ ಅಧಿಕಾರ ಅವನಿಗೆ ಒಪ್ಪಿಸಿದ್ದ ದಲಿತ ಮಹಿಳೆ ಪುರುಷಾಧಿಕಾರ ಕುರಿತಂತೆ ಚಕಾರವೆತ್ತದೆ ಇದ್ದ ಅವಧಿಯಲ್ಲಿಯೇ ಅಧಿಕಾರ ಚಲಾಯಿಸಿದೆ ಎಂಬ ನಂಬಿಕೆಯಿಂದಲೆ ಅದನ್ನು ಪುನಃ ಪುನಃ ಮೆಲಕು ಹಾಕುತ್ತಲೆ ನಡೆಯುತ್ತಿದ್ದಾಳೆ.

### ೪.೨. ಗ್ರಾಮೀಣಾಭಿವೃದ್ಧಿ ಮತ್ತು ದಲಿತ ಮಹಿಳೆ

ಗ್ರಾಮೀಣ ಅಭಿವೃದ್ಧಿ ಎಂಬುದು ಗ್ರಾಮೀಣ ವಲಯಗಳ ಸರ್ವಾಂಗೀಣ ಅಭಿವೃದ್ಧಿಗೆ ಸಂಬಂಧಿಸಿದ ಪರಿಕಲ್ಪನೆಯಾಗಿದೆ.[೫] ಇನ್ನೂ ಸ್ಥೂಲವಾಗಿ ಹೇಳಬೇಕೆಂದರೆ ಅನಭಿವೃದ್ಧಿಯಲ್ಲಿ ಕೊಳೆಯುತ್ತಿರುವ ಗ್ರಾಮೀಣ ಬಡಜನರ ಜೀವನ ಮಟ್ಟವನ್ನು ಸುಧಾರಿಸುವುದೆ ಆಗಿದೆ. ಅಭಿವೃದ್ಧಿ ಎಂಬ ಪದವು ಅತ್ಯಂತ ವಿಶಾಲಾರ್ಥವನ್ನು ಒಳಗೊಂಡಿದೆ. ಅದು ಪ್ರಸ್ತುತವಾಗಿ ಅಸ್ತಿತ್ವದಲ್ಲಿರುವ ವ್ಯವಸ್ಥೆಗಳಲ್ಲಿ ಪರಿಮಾಣಾತ್ಮಕವಾದ, ಗುಣಾತ್ಮಕವಾದ ಪರಿವರ್ತನೆ, ಬದಲಾವಣೆಯನ್ನು ಉಂಟುಮಾಡುವ ಪ್ರಕ್ರಿಯೆಯಾಗಿದೆ.[೬] ಇದು ಸಮಾಜದಲ್ಲಿನ ವ್ಯಕ್ತಿಗಳ ಜೀವನ ಮಟ್ಟವನ್ನು ಹಂತ ಹಂತವಾಗಿ ಸುಧಾರಿಸುವ ಮಹೋನ್ನತ ಗುರಿಯನ್ನು ಹೊಂದಿದೆ. ಅಭಿವೃದ್ಧಿಯೂ ಅಂತಿಮವಾಗಿ ವ್ಯಕ್ತಿಯ ಸಮಗ್ರ ಅಭಿವೃದ್ಧಿಯನ್ನೆ ಸೂಚಿಸುವುದು. ಆದ್ದರಿಂದ ಅಭಿವೃದ್ಧಿಯೂ ವ್ಯಕ್ತಿಗಳಿಗೆ ಯಾವ ರೀತಿಯಲ್ಲಿ ಒಳಿತು ಮಾಡಿತು ಎಂಬುದರ ಆಧಾರದ ಮೇಲೆಯೇ ಒರೆಹಚ್ಚಲಾಗುವುದು. ಗ್ರಾಮೀಣ ವಲಯಗಳಲ್ಲಿ ಗಣನೀಯ ಸಂಖ್ಯೆಯ ಜನರು ನತನತಮಾನಗಳಿಂದಲೂ ಗುಲಾಮಗಿರಿ, ಶೋಷಣೆಯ ಬದುಕನ್ನು ಅನುಭವಿಸಿಕೊಂಡು ಬಂದಿರುವರು. ಅತಿಯಾಗಿ ಕಾಡುವ ಬಡತನ ಜೊತೆಗೆ ಜಾತಿಯತೆಯಂತಹ ಕೂಪಗಳಡಿಯಲ್ಲಿಯೇ ಬದುಕಿನುದ್ದಕ್ಕೂ ಅದರ ಕರಾಳ ನೆರಳಿನಡಿಯಲ್ಲಿಯೇ ತಮ್ಮ ಅಸ್ತಿತ್ವವನ್ನೆ ಪಣವಾಗಿಟ್ಟು, ಅಭಿವೃದ್ಧಿ ಎಂಬ ಪರಿಭಾಷೆಯಿಂದ ದೂರವೆ ಉಳಿದಿದ್ದಾರೆ. ಬಡತನ, ಜಾತೀಯತೆ, ಆರ್ಥಿಕತೆ, ರಾಜಕೀಯ ಹಿನ್ನಡತೆಯ ಕಾರಣದಿಂದ ಅವರು ಸಾಮಾಜಿಕವಾಗಿ ಮೇಲೇರದ ಸ್ಥಿತಿಯೊಳಗೆ ಇದ್ದಾರೆ. ಅವರದು ನಿಂತ ನೀರಿನಂತೆ ಕೊಳೆ ನಾರುವ ಕಳಪೆ ಸ್ಥಿತಿ. ಅವರಿಗೆ ತಮ್ಮ ಬಗ್ಗೆ ತಮಗೆ ನಂಬಿಕೆ ಇಲ್ಲವಾಗಿದೆ. ತಮ್ಮ ದುಸ್ಥಿತಿಯ ಬಗ್ಗೆ ಖಾತರಿಯೂ ಇಲ್ಲ. ಸಾಮಾಜಿಕ ಕ್ಷೇತ್ರಗಳಾದ ಆರ್ಥಿಕ, ರಾಜಕೀಯ, ಶೈಕ್ಷಣಿಕದಂತಹ ಸಂಸ್ಥೆಗಳಲ್ಲಿ ಅವರು ಪರಿಣಾಮಕಾರಿಯಾಗಿ ಪಾಲ್ಗೊಳ್ಳಲು ಏನೋ ಹಿಂಜರಿಕೆಯನ್ನು ಅನುಭವಿಸುತ್ತಿದ್ದಾರೆ. ಏನೋ ಅಳುಕು, ಏನೋ ಅಂಜಿಕೆ ತಮ್ಮದು ಭಗವಂತನಿಂದಲೆ ವಿಧಿಸಲ್ಪಟ್ಟ ದುಸ್ಥಿತಿ ಎಂಬ ನಂಬಿಕೆ ಅವರಲ್ಲಿದೆ. ಅವರನ್ನು ಈ ಒಂದು ಕಳಪೆ ಸ್ಥಿತಿಯಿಂದ ಹೊರತರಬೇಕಾಗಿರುವುದು ಮೊದಲು ಆಗಬೇಕಾಗಿರುವ ಕೆಲಸ. ಅದೇ ಅಭಿವೃದ್ಧಿಯ ಪಥದಲ್ಲಿ ಹಾಕಲಿರುವ ಮೊದಲ ಹೆಜ್ಜೆ''[೭] (ಭೈರಪ್ಪ ಕೆ. ೨೦೦೨, ೧೮೨)

ಅಭಿವೃದ್ಧಿಯು ಪರಾವಲಂಬಿತನವನ್ನು ಕಡಿಮೆ ಮಾಡಿಕೊಳ್ಳುವುದು. ಸ್ವಾವಲಂಬನೆಯನ್ನು ಹೆಚ್ಚು ಮಾಡಿಕೊಳ್ಳುವುದು, ತಮ್ಮ ಬಲವನ್ನೆ ಹೆಚ್ಚಾಗಿ ನಂಬಿ ನಡೆಯುವುದು. ತಾವು ಮಾಡುವ ಪ್ರಯತ್ನದಲ್ಲಿ ಆತ್ಮವಿಶ್ವಾಸದಿಂದ ಮುನ್ನುಗ್ಗುವುದು. ಅಭಿವೃದ್ಧಿಗಾಗಿ ಸರ್ವಶಕ್ತಿಯನ್ನು ಸಂಚಯನಮಾಡಿಕೊಳ್ಳುವುದು. ಗೌರವವನ್ನು ಕೊಟ್ಟು, ಪಡೆದುಕೊಳ್ಳುವ ಮನೋಭಾವವನ್ನು ಬೆಳೆಸಿಕೊಳ್ಳುವುದು. ಸಾಮೂಹಿಕ ಪ್ರಯತ್ನ ಮಾಡುವುದು. ಇವೆಲ್ಲವೂ

ಗ್ರಾಮೀಣಾಭಿವೃದ್ಧಿಯು ಅರಿಯಲ್ಲಿ ಬರುತ್ತವೆ. ಅಂತೆಯೇ ಗ್ರಾಮೀಣ ಅಭಿವೃದ್ಧಿಯು ಗ್ರಾಮೀಣ ಜನರು ತಮ್ಮ ಎಲ್ಲಾ ದುಸ್ಥಿತಿಗಳನ್ನು ದೂರಮಾಡಿ ಸುಸ್ಥಿತಿಗೆ ಬರುವಂತೆ ತಯಾರುಗೊಳಿಸುವುದೆ ಗ್ರಾಮೀಣಾಭಿವೃದ್ಧಿಯಲ್ಲಿ ಅಡಗಿದೆ.

ಗ್ರಾಮೀಣಾಭಿವೃದ್ಧಿಯ ಪರಿಕಲ್ಪನೆ ಮುಖ್ಯವಾಗಿ ಗ್ರಾಮೀಣ ಸಮುದಾಯಗಳ ಸಮಗ್ರ ಅಭಿವೃದ್ಧಿಯನ್ನು ಸಾಧಿಸುವುದೆ ಆಗಿದೆ. ಅದರೆ ಅರ್ಥಿಕತೆಯ ವಿಭಿನ್ನ ಕ್ಷೇತ್ರಗಳಲ್ಲಿ ಆಗುತ್ತಿರುವ ಆರ್ಥಿಕ ಉತ್ಪಾದನೆ ಆದಾಯ ಮತ್ತು ಉದ್ಯೋಗಗಳ ವತಿಯಿಂದ ಗಣನೀಯ ಆರ್ಥಿಕಾಭಿವೃದ್ಧಿ ಆಗುತ್ತಿದ್ದರೂ ಸಹ ಗ್ರಾಮೀಣ ಬಡತನ, ಜಾತಿಯ ಸಂರಚನೆಗಳು, ಮೇಲು ಕೀಳು ಭಾವನೆಗಳು, ಬಿಟ್ಟಿ ಚಾಕರಿ, ಜೀತಪದ್ಧತಿಗಳು ಇಂದಿಗೂ ಜೀವಂತವಾಗಿರುವುದು ತುಂಬ ಬೇಸರ ಮೂಡಿಸುತ್ತದೆ. ಸಾಂಪ್ರದಾಯಿಕ ಕಲ್ಯಾಣ ಕಾರ್ಯಕ್ರಮಗಳು ಗ್ರಾಮೀಣ ಹಿಂದುಳಿದಿರುವಿಕೆಗೆ ಮತ್ತು ಪರಾವಲಂಬನೆಗಳನ್ನು ಶಾಶ್ವತಗೊಳಿಸುತ್ತಿರುವಂತೆ ಕಂಡುಬರುತ್ತಿರುವವು. ಎಲ್ಲಾ ಬಗೆಯ ಕಾರ್ಯಕ್ರಮಗಳು ಸಹ ಗ್ರಾಮೀಣ ಜನರಲ್ಲಿ ಮೇಲುವರ್ಗದ, ಮಧ್ಯಮ ವರ್ಗದ ಜನರನ್ನು ತಲುಪಿರುತ್ತವೆ. ವಿನಹಃ ಕೆಳವರ್ಗದ, ಅಂಚಿನ, ಮಹಿಳಾ ಸಮುದಾಯಗಳಿಗೆ ದೊರೆಯಲಾರದು. ಒಂದು ವೇಳೆ ತಲುಪಿದ್ದರೂ ಅದು ತಲುಪಬೇಕಾದ ಪ್ರಮಾಣದಲ್ಲಿ ತಲುಪಿಲ್ಲ. ಬಹುತೇಕ ಕಾರ್ಯಕ್ರಮಗಳು ಅತ್ಯಂತ ಕೆಳಸ್ಥರಗಳ ಜನರ ಕಲ್ಯಾಣಕ್ಕಾಗಿಯೇ ಪ್ರಾಥಮಿಕ ಗುರಿಯಾಗಿ ರೂಪಿಸಲ್ಪಟ್ಟು ಜಾರಿಗೆ ಬಂದಿದ್ದರೂ ಅವುಗಳ ಲಾಭ ನಿರೀಕ್ಷಿತ ಜನರಿಗೆ ತಲುಪದಿರುವುದು ಪರಿಸ್ಥಿತಿಯ ವಿಪರ್ಯಾಸವಾಗಿದೆ.''[6]

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಜಿ. ಪಾರ್ಥಸಾರಥಿಯವರ ಮಾತುಗಳು ತುಂಬ ಉಪಯುಕ್ತಕರವಾಗಿವೆ. ''ಗ್ರಾಮೀಣ ಅಭಿವೃದ್ಧಿಯಲ್ಲಿನ ಸಂದಿಗ್ದ ಅಂಶವೆ ಬಡವರು, ಹಿಂದುಳಿದವರು, ದಲಿತರು ತಮ ತಮಗೆ ದೊರೆತಿರುವ ಬೌತಿಕ ಮತ್ತು ಮಾನವ ಸಂಪನ್ಮೂಲಗಳನ್ನು ಉತ್ತಮ ರೀತಿಯಲ್ಲಿ ಸದುಪಯೋಗ ಪಡಿಸಿಕೊಳ್ಳಲು ಅವಕಾಶವಾಗಿರುವುದರ ಜೊತೆಗೆ ಅವರ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವುದು ಆಗಿದೆ. ಇದು ಇಲ್ಲವಾದರೆ ಗ್ರಾಮೀಣ ಸಂಪನ್ಮೂಲಗಳ ಬಳಕೆ ಕಾರ್ಯವು ಮಹತ್ವವನ್ನು ಹೊಂದಿರುವುದಿಲ್ಲ. ಗ್ರಾಮೀಣಾಭಿವೃದ್ಧಿಯ ಪ್ರಕ್ರಿಯೆಯನ್ನು ಸ್ವಯಂ ಪೋಷಣೆಗೊಳ್ಳುವಂತೆ ಮಾಡುವಲ್ಲಿ, ಬಂಡವಾಳವನ್ನು ಅಧಿಕಗೊಳಿಸುವಿಕೆಯಲ್ಲಿ ಮತ್ತು ದಲಿತ, ಬಡವ, ಹಿಂದುಳಿದವರ ಲಾಭಕ್ಕಾಗಿ ತಾಂತ್ರಿಕ ಜ್ಞಾನವನ್ನು ಸದ್ಬಳಕೆ ಮಾಡುವುದು ಮಾತ್ರವಲ್ಲದೆ ಜನರ ಪೂರಕ ಸಂಸ್ಥೆಗಳನ್ನು ನಿರ್ಮಿಸುವುದು ಹಾಗೂ ಅವುಗಳಲ್ಲಿ ಅವರು ಕ್ರಿಯಾಶೀಲತೆಯಿಂದ ಕಾರ್ಯನಿರ್ವಹಿಸುವುದರ ಮೂಲಕ ಸಕ್ರಿಯವಾಗಿ ಪಾಲ್ಗೊಳ್ಳುವುದು ಅತ್ಯಗತ್ಯವಾಗಿದೆ.'' ಗ್ರಾಮೀಣ ಅಭಿವೃದ್ಧಿಯ ಪರಿಕಲ್ಪನೆಯ ಬಗ್ಗೆ ಮೇಲಿನ ಚರ್ಚೆಯಲ್ಲಿ ಅಭಿವೃದ್ಧಿಯ ಕುರಿತಾದ ವಿಚಾರ ಸರಣಿಯಲ್ಲಿ ಅತ್ಯಂತ ವಿವರಣಾತ್ಮಕವಾದ ಅಂಶಗಳಿರುವುದನ್ನು ಕಾಣಬಹುದು. ನಿಜವಾಗಿಯೂ ಗ್ರಾಮಸ್ವರಾಜ್ಯದ ಪರಿಕಲ್ಪನೆಗೆ ಸ್ಥಳೀಯ ಜನರು ಏಕಮುಖಿಯಾಗಿ ಅಧಿಕಾರ ಪಡೆಯದೆ ಸಾರ್ವತ್ರಿಕವಾಗಿ ಎಲ್ಲರೂ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪಾಲುದಾರರಾಗಬೇಕಾಗಿದೆ. ವ್ಯಕ್ತಿಗಳು ಅವರು ಯಾವುದೇ ಸಮುದಾಯದವರಿರಲಿ ಅವರು ಆ ಸಮಾಜದ ಸದಸ್ಯರೆ ಆಗಿರುವುದರಿಂದ ಅವರ ಪಾಲ್ಗೊಳ್ಳುವಿಕೆ, ಪಾತ್ರ ಅತ್ಯಂತ ಪ್ರಮುಖವಾಗಿದೆ. ಯಾವುದೆ ಒಂದು ವರ್ಗ, ಜನಾಂಗ,

ಜಾತಿ, ಸಮುದಾಯವನ್ನೂ ನಿರ್ಲಕ್ಷ್ಯಿಸುವುದೆಂದರೆ ಅದು ಅಭಿವೃದ್ಧಿಯನ್ನು ನಿರ್ಲಕ್ಷ್ಯಿಸಿದಂತೆಯೇ ಸರಿ. ಆದ್ದರಿಂದಲೆ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಸಹ ಸಮಪಾಲುದಾರರಾಗಿ ಅವರವರ ಕಾರ್ಯವನ್ನು ಸ್ವತಂತ್ರವಾಗಿ ನಿರ್ವಹಿಸುವಂತಾದರೆ ಗ್ರಾಮೀಣ ಅಭಿವೃದ್ಧಿ, ಗ್ರಾಮೀಣ ಸ್ವರಾಜ್ಯದ ಕನಸು ನನಸಾಗಬಲ್ಲದು.

ವ್ಯಕ್ತಿಗಳು ಮತ್ತು ಸಮಾಜದ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಜೀವನದ ಸುಧಾರಣಾ ಪ್ರಕ್ರಿಯೆಯೇ ಅಭಿವೃದ್ಧಿ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಅದರ ಸದಸ್ಯರಾಗಿರುವುದರಿಂದ ಅವರಿಗೆ ಎಲ್ಲಾ ಬಗೆಯ ಮೂಲಭೂತ ಅಗತ್ಯಗಳ ಪೂರೈಕೆಯಾಗಿ, ಸಂಪತ್ತಿನ ಸಮಾನ ಹಂಚಿಕೆಯಾಗಿ ಜೀವನ ಮಟ್ಟ ಸುಧಾರಣೆಗೊಂಡು ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಎಲ್ಲಾ ಜನರಿಗೂ ಸಮಾನವಾದ ಅವಕಾಶಗಳಿದ್ದಾಗ ಮಾತ್ರ ಅಲ್ಲಿ ಸ್ತ್ರೀ-ಪುರುಷರು ಸಮಾನವಾಗಿ ನೀತಿ ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಸರಿಸಮನಾಗಿ ಕಾರ್ಯನಿರ್ವಹಿಸಬಲ್ಲರು. ಕೇವಲ ಅಭಿವೃದ್ಧಿಯ ಫಲಗಳನ್ನು ಪಡೆದವರಷ್ಟೇ ಅವರು ಸಬಲರಾಗಲಾರರು. ಅವರಿಬ್ಬರೂ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ವಿಚಾರಗಳಲ್ಲಿ ಬೇರೆ ಬೇರೆ ಸ್ಥಾನಗಳನ್ನು ಹೊಂದಿರುವುದರಿಂದ ಅವರ ಆಸಕ್ತಿಗಳು ಬೇಡಿಕೆಗಳು ಬೇರೆ ಬೇರೆಯಾಗಿರುತ್ತವೆ. ಈ ಕಾರಣದಿಂದಲೆ ಇವರಿಬ್ಬರ ನಡುವಿನ ಇಂತಹ ಕಂದಕವನ್ನೆ ಮಹಿಳಾ ಅಧ್ಯಯನಕಾರರು 'ಲಿಂಗ ವ್ಯವಸ್ಥೆ ಮತ್ತು ಅಭಿವೃದ್ಧಿಯಲ್ಲಿನ' ವಿಭಜನೆ ಎಂದು ಗುರುತಿಸುತ್ತಾರೆ.

ಸಮಾಜದಲ್ಲಿನ ಮಹಿಳೆಯ ಪರಾಧೀನತೆ, ದಾಸ್ಯ, ಅನಾನುಕೂಲತೆಗೆ ಸಂಬಂಧಿಸಿದಂತೆ ಅತಿಮುಖ್ಯ ಎಂದರೆ ರಾಜಕೀಯ, ಆರ್ಥಿಕ, ಸಮಾಜಿಕ ಸಂಪನ್ಮೂಲಗಳ ಮೇಲೆ ಪುರುಷರು ಹೊಂದಿರುವಂತಹ ನಿಯಂತ್ರಣ ಹಾಗೂ ಆ ನಿಯಂತ್ರಣದ ಮೂಲಕ ಅವರು ಪಡೆಯುತ್ತಿರುವಂತ ಅಧಿಕಾರ ಇದರಿಂದ ಮಹಿಳೆಯರು ಅನುಭವಿಸುವ ಅನಾನುಕೂಲತೆಗಳನ್ನು ತೊಡೆದು ಹಾಕಲು ಶಿಕ್ಷಣ, ತರಬೇತಿ, ಹಣಕಾಸಿನ ಸಹಾಯ ಮುಂತಾದವು ಅಂತಿಮ ಪರಿಹಾರವಾಗಲಾರವು. ಮಹಿಳೆಯರನ್ನು ಸಶಕ್ತಗೊಳಿಸುವ ನಿಟ್ಟಿನಲ್ಲಿ ಸಾಮಾಜಿಕ ಅಂಶಗಳನ್ನು ಬದಲಾವಣೆ ಮಾಡುವುದರ ಮೂಲಕ ಸಾಮಾಜಿಕ ಪರಿವರ್ತನೆಯನ್ನು ತರುವುದೆ ಲಿಂಗ ವ್ಯವಸ್ಥೆ ಮತ್ತು ಅಭಿವೃದ್ಧಿಯೊಳಗಿನ ಪ್ರಮುಖ ಕಾಳಜಿಯಾಗಿದೆ.

ಅಭಿವೃದ್ಧಿಯಲ್ಲಿ ಮಹಿಳೆಯರ ಸಹಭಾಗಿತ್ವ ಇಲ್ಲದಿರಲು ಕಾರಣ ಅಗೋಚರತೆ, ದೊರೆಯದೆ ಇರುವ ತರಬೇತಿ, ಹಣಕಾಸಿನ ಬೆಂಬಲ ಅಥವಾ ಆತ್ಮಗೌರವದ ಕೊರತೆಗಳಾಗಲಿ ಅಲ್ಲವೆ ಅಲ್ಲ. ಸಾಮಾಜಿಕ ರಚನೆಯ ವ್ಯವಸ್ಥೆ ಹಾಗೂ ಪ್ರಕ್ರಿಯೆಯಿಂದ ದೂರ ಉಳಿಯಲು ಬಹುಮುಖ್ಯ ಕಾರಣವಾಗಿವೆ. ಈ ಬಗೆಯ ಅನಾನುಕೂಲತೆಗಳಿಗೆ ಮುಖ್ಯಕಾರಣವೆನೆಂದರೆ ಸಮಾಜದಲ್ಲಿ ಭದ್ರವಾಗಿ ಬೀಡುಬಿಟ್ಟಿರುವ ಲಿಂಗ ಸಂಬಂಧಿ ತಾರತಮ್ಯಗಳು. ಪುರುಷನಿಷ್ಠ ಚಿಂತನೆಗಳು ಇವು ಪ್ರತಿಯೊಂದು ಸಮಾಜ ಮತ್ತು ಸಂಸ್ಕೃತಿಗಳಲ್ಲಿಯೂ ಇದರ ವಿವಿಧ ಚಹರೆಗಳು ಕಂಡುಬರುತ್ತದೆ. ಇಂತಹ ಅನೌಪಚಾರಿಕ ರಚನೆ, ಆಚರಣೆಗಳು ಮಹಿಳೆಗೆ ತನ್ನ ಬಗ್ಗೆ, ತನ್ನ ಸಾಮರ್ಥ್ಯದ ಬಗ್ಗೆ ಕೀಳರಿಮೆ ಮೂಡಿಸಲು ಪ್ರಮುಖ ಕಾರಣಗಳಾಗಿವೆ.

ಉದಾರವಾದಿ ಸ್ತ್ರೀವಾದದ ಪ್ರಮುಖ ಆಶಯವೆನೆಂದರೆ 'ಅಭಿವೃದ್ಧಿಯಲ್ಲಿ ಮಹಿಳೆ'ಯ ಚಿಂತನೆಯ ಮೇಲೆ ಬೆಳೆದುಬಂದಂತಹ ಒಂದು ಸೈದ್ಧಾಂತಿಕ ನಿಲುವು. ವಿಚಾರವಂತ ವ್ಯಕ್ತಿಯೂ ಸಾಮಾಜಿಕ, ಕೌಟುಂಬಿಕ ಬಂಧನಗಳಿಂದ ಮುಕ್ತಿಯನ್ನು ಪಡೆದು ತನ್ನ ವೈಯಕ್ತಿಕ ಆಸೆ, ಆಸಕ್ತಿ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವುದು ಅತಿಮುಖ್ಯ ಎಂಬುದು ಉದಾರವಾದಿ ಸ್ತ್ರೀವಾದದ ನಿಲುವು. ಸ್ತ್ರೀಯರನ್ನು ಸಾಮಾಜಿಕ ಕ್ಷೇತ್ರದಿಂದ ಹೊರಗಿಟ್ಟಿರುವುದನ್ನು ಹಾಗೂ ಲಿಂಗಾಧಾರಿತ ಶ್ರಮವಿಭಜನೆಯೂ ಅವರ ಅಸಮಾನಸ್ಥಾನ ಮತ್ತು ಪರಿಸ್ಥಿತಿಗೆ ಮುಖ್ಯ ಕಾರಣ ಎಂದು ಪ್ರತಿಪಾದಿಸುತ್ತದೆ. ಅಲ್ಲದೆ ಇವರು ಮಹಿಳೆಗೆ ನಿರ್ಧಾರ ಕೈಗೊಳ್ಳುವಿಕೆಯ ಅವಕಾಶ, ಉದ್ಯೋಗ ಅವಕಾಶಗಳು ಬೇಕೆಂದು ಒತ್ತಾಯಿಸುತ್ತದೆ. ಆರ್ಥಿಕ, ಸಾಮಾಜಿಕ, ರಾಜಕೀಯ ಸಂಸ್ಥೆಗಳಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳಬೇಕೆಂದರೆ ಮೊದಲು ಸಾಮಾಜಿಕ ಸಂಸ್ಥೆಗಳಲ್ಲಿ ಮತ್ತು ಕಾನೂನುಗಳಲ್ಲಿ ಸುಧಾರಣೆಯಾಗಿ, ಜನರ ಮನೋಭಾವ ಬದಲಾಗಬೇಕು. ಒಟ್ಟಿನಲ್ಲಿ ಪುರುಷರು ಮಾಡುವುದೆಲ್ಲವನ್ನು ಸಮರ್ಥವಾಗಿ ಮಹಿಳೆಯರು ನಿರ್ವಹಿಸಬಲ್ಲರು ಎಂಬುದು ಉದಾರವಾದಿ ಸ್ತ್ರೀವಾದದ ಪ್ರಮುಖ ನಿಲುವು."[೧೦]

ಆದರೆ ಭಾರತೀಯ ಗ್ರಾಮ ಸಮುದಾಯವು ಹಿಂದಿನಿಂದಲೂ ಸಾಂಪ್ರದಾಯಿಕ ಆಡಳಿತದಲ್ಲೆ ತನ್ನ ಸಮಸ್ತ ಗ್ರಾಮದ ಅಭಿವೃದ್ಧಿ ಸಾಧ್ಯ ಎಂಬ ಸನಾತನ ನೆಲೆಯಲ್ಲಿಯೇ ಇಂದಿಗೂ ಯೋಚಿಸುತ್ತಿದೆ. ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಶ್ನಾವಳಿ ಹಾಗೂ ಮೌಖಿಕವಾದ ವಿಚಾರಗಳನ್ನು ಸಂಕಲಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ಅಭಿವೃದ್ಧಿ ಎಂಬ ಪರಿಭಾಷೆ ಅರಿಯದೆ ನಾವು ಅಭಿವೃದ್ಧಿಯ ಬೆನ್ನತ್ತಿ ಹೋಗಲು ಸಾಧ್ಯವಿಲ್ಲ. ಆಡಳಿತ ವಿಕೇಂದ್ರಿಕರಣದ ತಳಹಂತದಂತಿರುವ ಪಂಚಾಯತಿಯಲ್ಲಿ ದಲಿತ ಮಹಿಳೆ ಇತರ ಚುನಾಯಿತ ಸದಸ್ಯರಂತೆ ಸಮಾನ ಅಧಿಕಾರ, ಅವಕಾಶಗಳನ್ನು ಪಡೆದಿದ್ದಾಗ್ಯೂ ಸಹ ಅವಳು ಅಭಿವೃದ್ಧಿಯೋಜನೆ ಅನುದಾನಗಳ ಬಗ್ಗೆ ಯಾವುದೆ ತಿಳುವಳಿಕೆಯನ್ನು ಹೊಂದಿಲ್ಲ. ಪಂಚಾಯತಿಯಲ್ಲಿ ಒಬ್ಬ ಮೂಕ ಪ್ರೇಕ್ಷಕಳಂತೆ ಕುಳಿತು ಬರುವುದೆ ಅವಳಿಗೆ ಸಿಕ್ಕಿರುವ ಅಧಿಕಾರದ ಹಕ್ಕಾಗಿದೆ. ಪಂಚಾಯಿತಿ ಅಧಿಕಾರ, ಯೋಜನೆಗಳು ವ್ಯಕ್ತಿಯ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಚುನಾಯಿತರಾಗಿರುವವರಿಗೆ ಇವುಗಳ ಅರಿವು ಇರದಿದ್ದರೂ ಅವರು ಹಂತ ಹಂತವಾಗಿ ತಿಳಿಯಬಲ್ಲರು. ಆದರೆ ದಲಿತ ಮಹಿಳೆಯು 'ಅಧಿಕಾರಕ್ಕೆ ಯಾಕಾದ್ರು ಬಂದ್ನೋ' ಅಂತ ರೋಧಿಸುತ್ತಿದ್ದಾಳೆ. ಅಂಜಿಕೆ, ಅಳುಕು ಭಯಗಳನ್ನು ಒತ್ತುಕೊಂಡೆ ಪಂಚಾಯತಿಗೆ ಬಂದು ಸಹಿ ಮಾಡಿ ಜಜಾವಾದೆ ಎಂದು ಮನೆಗೆ ಹಿಂದಿರುಗುತ್ತಿದ್ದಾಳೆ. ಆ ಮೂಲಕ ಅಭಿವೃದ್ಧಿಯಡಿಗೆ ಬೆನ್ನು ತೋರಿಸುತ್ತಿದ್ದಾಳೆ. ಅತ್ಯಧಿಕ ದಲಿತ ಮಹಿಳೆಯರು ಕ್ಷೇತ್ರಕಾರ್ಯದ ಸಮಯದಲ್ಲಿ ಈ ಬಗೆಯ ಅಳಲನ್ನೆ ತೋಡಿಕೊಂಡಿದ್ದಾರೆ. ಅದಕ್ಕಾಗಿಯೆ ಅವಳು ತನ್ನ ಗಂಡ, ಮಾವ, ತಂದೆಯರೊಂದಿಗೆ ಪಂಚಾಯತಿಗೆ ಬರುತ್ತಿದ್ದಾಳೆ. ಯಾರದೋ ಒತ್ತಾಯಕ್ಕೆ ಮಣಿದು ರಾಜಕೀಯಕ್ಕೆ ಬಂದಿರುವ ದಲಿತ ಮಹಿಳೆ ನಾಮಮಾತ್ರ ಕಾರ್ಯಾಂಗದಂತೆ ಕಾರ್ಯನಿರ್ವಹಿಸುತ್ತಿದ್ದು ವಾಸ್ತವ ನೈಜ ಅಧಿಕಾರವನ್ನು ಪುರುಷರೆ ಹೊಂದಿದ್ದಾರೆ.

ದಲಿತ ಮಹಿಳೆಯರು ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೆಚ್ಚಿಗೆ ಗಮನ ಕೇಂದ್ರೀಕರಿಸಿರುವುದು ಮಹಿಳಾ ಶೌಚಾಲಯ, ಸ್ವಸಹಾಯ ಗುಂಪುಗಳಿಗೆ ಸಹಾಯ, ನೀರು, ರಸ್ತೆಗಳ ಅವರ ಪ್ರಮುಖ ಆದ್ಯತೆಗಳಾಗಿವೆ. ಚುನಾವಣೆಗೆ

ಮುಂಚೆ ಯಾವುದೇ ಪೂರ್ವ ಯೋಚನೆ ಹೊಂದಿರದಿದ್ದ ಅವಳಿಗೆ ನಂತರ ಬಂದ ಆಯ್ಕೆ ಆದ್ಯತೆಗಳಿವು. ಇತರ ಚುನಾಯಿತ ಮಹಿಳಾ ಸದಸ್ಯರಿಗೆ ಹೋಲಿಸಿದರೆ ದಲಿತ ಮಹಿಳೆಯು ಅಭಿವೃದ್ಧಿ ಕಾರ್ಯಗಳಲ್ಲಿ ತುಂಬ ಹಿಂದುಳಿದಿದ್ದಾಳೆ ಚುನಾಯಿತರಾಗಿ ಬಂದೂವರೆ. ಎರಡು ವರ್ಷಗಳವರೆಗೂ ಅವಳಿಗೆ ಒಂದು ಯೋಜನೆಗಳು ಸಿಕ್ಕಿಲ್ಲದಿರುವುದು ಮೇಲಿನವರು ಅವಳ ಬಗ್ಗೆ ಹೊಂದಿರುವ ಮನೋಭಾವವನ್ನು ತಿಳಿಸುತ್ತದೆ. ಚತುರ ದಲಿತ, ಹಿಂದುಳಿದ ಜಾತಿಗಳು ಅಧಿಕಾರದಲ್ಲಿ ಪಾಲು ಪಡೆದು ಆಳುವ ಜಾತಿಗಳೊಡನೆ, ಅಧಿಕಾರ ಕೇಂದ್ರಿತ ಜಾತಿಗಾಗಿ ಪರಿವರ್ತನೆಗೊಳ್ಳುತ್ತವೆ. ಅಧಿಕಾರದ ಆಚೆ ಉಳಿದ ಹಿಂದುಳಿದ ದಲಿತ ಜಾತಿಗಳು ಅಧಿಕಾರ ಅಂಚಿನ ಜಾತಿಗಳಾಗುತ್ತವೆ. ಅಧಿಕಾರ ಕೇಂದ್ರಿತ ಜಾತಿಗಳ ಕೈಗಳಲ್ಲಿ ರಾಜಕೀಯ ಶಕ್ತಿಯ ಮಾಸ್ಟರಕೀ ಜಾರಿಯಿರುತ್ತವೆ. ಒಳಗಡೆ ತಮ್ಮವರಿಗೆ ಯಥೇಚ್ಛವಾಗಿ ಬಿಡಲಾಗುವುದು. ಅಭಿವೃದ್ಧಿಯ ಅರಮನೆಗೆ ನುಗ್ಗಿದವರು ಎಲ್ಲರ ಪಾಲನ್ನು ತಾವೇ ಬಾಚುವರು. ತದೇಕವಾಗಿ ಸಿಕ್ಕಿದ್ದನ್ನು ಬುಕ್ಕುವರು. ನೋಡವ ವ್ಯವದಾನ ಇರುವುದಿಲ್ಲ. ಕಾಂಡತಂದು ಸಿಪ್ಪೆಯನ್ನು ಅಂಚಿನ ಜಾತಿಗಳಿಗೆ ಉಳಿಸಲಾಗುವುದು. ಹೀಗೆ ಅಧಿಕಾರಕೇಂದ್ರಿತ, ಅಧಿಕಾರ ವಂಚಿತ ಜಾತಿಗಳಲ್ಲಿ ಅಭಿವೃದ್ಧಿ ಏಕಮುಖವಾಗಿ ಉಳ್ಳವರಪಾಲಾಗಿ ಅಂಚಿನವರನ್ನು ದೂರತಳ್ಳುತ್ತದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ದಲಿತ ಮಹಿಳೆಯಿಂದ ನಾವು ಯಾವ ಬಗೆಯ ಅಭಿವೃದ್ಧಿಯನ್ನು ನಿರೀಕ್ಷಿಸಲು ಸಾಧ್ಯ, 'ನಾಸ್ಯಾಕರ ರಾಜಕೀಗೆ ಬಂದ್ನೊಯಪ್ಪೊ ದಿನ ಬೆಳಕರದ್ರ ಊರ ಮಂದಿ ಉಗಿತಾರ' ಎಂಬ ಒಡಲಾಳದ ಮಾತುಗಳನ್ನು ದಲಿತ ಮಹಿಳೆಯರು ವ್ಯಕ್ತಪಡಿಸುತ್ತಾರೆ.

ಅಭಿವೃದ್ಧಿಯಲ್ಲಿ ಊರಿನ ಇತರ ಜಾತಿಯ ಸದಸ್ಯರುಗಳಿಗೆ ಸಿಕ್ಕಿರುವ ಸೌಲತ್ತುಗಳಿಗೆ ಹೋಲಿಸಿದರೆ ದಲಿತ ಮಹಿಳೆಯ ಪಾಲು ಅತ್ಯಂತ ನಗಣ್ಯ. ಜಾತಿಯೇ ಪ್ರಮುಖ ಅಸ್ತ್ರವಾಗಿರುವ ಗ್ರಾಮೀಣವಲಯಗಳಲ್ಲಿ ಅದನ್ನು ಬಳಸಿಕೊಂಡೆ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿರುವುದು ನಿರ್ವಿವಾದ. ತನ್ನ ಪಾಲಿನ ಅನುದಾನ, ಯೋಜನೆಗಳನ್ನು ಕೇಳುವ ಧೈರ್ಯ ದಲಿತ ಮಹಿಳೆಗೆ ಇಲ್ಲವಾಗಿದೆ. ಚುನಾವಣೆಯಲ್ಲಿ ಗೆಲ್ಲಿಸಿದವರು ತಿಂದು ಉಳಿದದ್ದನ್ನು ಇವರಿಗೆ ಎಸೆಯುವುದು ಸಾಮಾನ್ಯವಾಗಿದೆ. ತನ್ನ ಸಮುದಾಯಕ್ಕೆ ಯಾವುದೆ ಬಗೆಯಲ್ಲಿಯೂ ಅವಳಿಗೆ ಪೂರಕ ಕಾರ್ಯಗಳನ್ನು ಮಾಡಲು, ಸಮುದಾಯದ ಉನ್ನತಿಗಾಗಿ ಶ್ರಮಿಸಲು ಅವಳಿಂದಾಗುತ್ತಿಲ್ಲ. ಸರಕಾರ ರೂಪಿಸಿ ಜಾರಿಗೆ ತಂದಿರುವ ಟ್ರೈಸಂ, ಅಂಬೇಡ್ಕರ್ ಆವಾಸ್ ಯೋಜನೆ, ಇಂದಿರಾ ಆವಾಸ್ ಯೋಜನೆ, ಸಾಮುದಾಯಿಕ ಅಭಿವೃದ್ಧಿ ಯೋಜನೆ, ಕೂಲಿಗಾಗಿ ಕಾಳು ಮುಂತಾದ ಬೃಹತ್ ಯೋಜನೆಗಳ ಪ್ರಮುಖ ಗುರಿ ಗ್ರಾಮೀಣ ವಲಯದ ಅಭಿವೃದ್ಧಿಯೇ ಆಗಿದೆ. ಪಂಚಾಯಿತಿಯುದಿಯಲ್ಲಿ ಈ ಎಲ್ಲಾ ಯೋಜನೆಗಳು ಜಾರಿಯಾಗಬೇಕು. ಇಂತಹ ಮಹತ್ವಪೂರ್ಣವಾದ ಎಲ್ಲಾ ಯೋಜನೆಗಳು ಉಳ್ಳವರಿಗೆ ಸಿಗುತ್ತಿವೆ. ಇಲ್ಲಿಯೂ ಸಹ ದಲಿತ ಮಹಿಳೆ ಹಿಂದೆಯೇ ಉಳಿದಿದ್ದಾಳೆ. ಪಂಚಾಯಿತಿಯ ಯೋಜನೆ, ಅನುದಾನಗಳ ಬಗ್ಗೆ ಅವಳಿಗೆ ತಿಳುವಳಿಕೆಯೇ ಇಲ್ಲವಾಗಿದೆ. ಪಂಚಾಯಿತಿಯ ಅಧ್ಯಕ್ಷ, ಉಪಾಧ್ಯಕ್ಷರಂತಹ ದೊಡ್ಡ ಅಧಿಕಾರದಲ್ಲಿದ್ದರೂ ಸಹ ತನಗೆ ಇರುವ ಅಧಿಕಾರ ಪ್ರಭಾವ ಬಳಸಿ ತನ್ನ ಸಮುದಾಯ ಹಾಗೂ ಮಹಿಳಾ ಸಮುದಾಯದ ಒಳಿತಿಗಾಗಿ ಏನು ಮಾಡದಂತಹ ಜಡ ಸ್ಥಿತಿ ಅವಳಿಗಿದೆ. ಗ್ರಾಮೀಣ ಸಮುದಾಯಗಳಲ್ಲಿನ ಗ್ರಾಮ ಸಭೆಯಲ್ಲಿ ಅವಳಿಗೆ ಸಿಕ್ಕಿರುವ ಮಾನ್ಯತೆಯೂ ಸಹ ತುಂಬ ಕ್ಲಿಷ್ಟಕರವಾಗಿರುವುದು. ಗ್ರಾಮಸಭೆಗೆ ಒಂದು ಸಾರಿಯೂ ಹಾಜರಾಗದ ದಲಿತ ಮಹಿಳೆ ನಮ್ಮಲ್ಲಿದ್ದಾಳೆ.

ಇದು ಗ್ರಾಮ ಹಾಗೂ ತಾಲ್ಲೂಕು ಪಂಚಾಯತಿಯಲ್ಲಿನ ದಲಿತ ಮಹಿಳೆಯ ಸ್ಥಿತಿಯಾದರೆ, ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳಾ ಸ್ಥಿತಿ ಸ್ವಲ್ಪ ಉದಾರವಾಗಿದೆ ಎನ್ನಬಹುದು. ಆದರೆ ಇವಳು ಸಹ ಪಂಚಾಯತಿ ಬಗ್ಗೆ ಯಾವುದೇ ತಿಳುವಳಿಕೆಯನ್ನು ಪೂರ್ಣ ಪ್ರಮಾಣದಲ್ಲಿ ಅರಿತಿಲ್ಲ. ಹಾಗೆಯೇ ತನ್ನ ಅಧಿಕಾರದ ಇತಿ-ಮಿತಿ, ಅನುದಾನ ಯೋಜನೆಗಳ ಬಗ್ಗೆ ಅಲ್ಪ ಪ್ರಮಾಣದ ತಿಳುವಳಿಕೆ ಹೊಂದಿದ್ದಾಳೆ. ಸುಧಾರಿತ ರಾಜಕಾರಣವನ್ನು ದಲಿತ ಮಹಿಳೆ ಇಲ್ಲಿ ಅನುಭವಿಸುತ್ತಿದ್ದಾಳೆ. ಇಲ್ಲಿ ಜಾತೀಯತಿಯ ಕರಾಳತೆಯೂ ಅತಿ ಕಡಿಮೆ ಪ್ರಮಾಣದಲ್ಲಿ ಇದೆಯಾದರೂ ಜಾತಿಯ ಸಂರಚನೆಗಳು ಇಲ್ಲಿ ಇಲ್ಲ ಎಂದು ಹೇಳಲಾಗುವುದಿಲ್ಲ. ಇಲ್ಲಿಯೂ ಗ್ರಾಮೀಣ ವಲಯದೊಳಗಿನ ಯಜಮಾನ್ಯ ಶಾಹಿ ಜಾತಿ ಜಾತಿಗಳೆ ಪ್ರಮುಖವಾಗಿರುವುದರಿಂದ ಇಲ್ಲಿಯೂ ಜಾತಿಯ ಸಂರಚನೆಗಳು ಜೀವಂತವಾಗಿದೆ.

ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆಯೂ ತನ್ನ ಹೆಚ್ಚಿನ ಪ್ರಾಮುಖ್ಯತೆಯನ್ನು ಶೌಚಾಲಯ, ನೀರು, ರಸ್ತೆ, ಸ್ವಸಹಾಯ ಗುಂಪುಗಳಿಗೆ ನೀಡುತ್ತಿದ್ದಾಳೆ. ಗ್ರಾಮೀಣ ಸಮುದಾಯದ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿರುವ ಇವಳು ಅಲ್ಲಿಯ ಮೂಲಭೂತ ಸೌಕರ್ಯಗಳ ಜೊತೆಗೆ, ಮಹಿಳಾ ಪರವಾದಂತ ಕಾರ್ಯಗಳತ್ತವೂ ಹೆಚ್ಚಿನ ಆಸಕ್ತಿಯನ್ನು ಹೊಂದಿದವಳಾಗಿದ್ದಾಳೆ. ಕ್ಷೇತ್ರಕಾರ್ಯದುದ್ದಕ್ಕೂ ಗಮನಿಸಿರುವಂತೆ ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆ ಅಲ್ಪಸ್ವಲ್ಪವಾದರೂ ಅಭಿವೃದ್ಧಿಯ ಹರಿಕಾರಳಾಗಿದ್ದಾಳೆ. ಇದ್ದಾರೆ. ಇಲ್ಲಿಯೂ ಅವಳಿಗೆ ಪುರುಷರ ಪಾತ್ರಗಳಿಂದ ಹೊರತಾದ ರಾಜಕಾರಣ ಮಾಡಲು ಅವಳಿಗೆ ಸಾಧ್ಯವಾಗುತ್ತಿಲ್ಲ. ಅವಳ ರಾಜಕಾರಣದ ತುಂಬೆಲ್ಲ ಪಕ್ಷಗಳ ಪಾತ್ರವೆ ಎದ್ದು ಕಾಣುತ್ತಿದೆ. ಪಂಚಾಯತಿ ಅಧ್ಯಕ್ಷೆಯಾಗಿದ್ದ ಇಬ್ಬರು ದಲಿತ ಮಹಿಳೆಯರು ಈ ಪಾತ್ರಗಳಿಂದ ಹೊರಬಂದೆ ಅಧಿಕಾರಕ್ಕಾಗಿ ಕಚ್ಚಾಡುವಂತ ಸ್ಥಿತಿ ನಿರ್ಮಾಣವಾಗಿತ್ತು. ಇತರೆ ಸದಸ್ಯೆಯರಂತೂ ಮನೆಯಿಂದಲೆ ಅಧಿಕಾರ ಚಲಾಯಿಸುತ್ತಿದ್ದಾರೆ. ಅಧಿಕಾರದ ಹೆಸರಿನಲ್ಲಿ ಪತಿಯೇ ಅವಳ ಅಧಿಕಾರವನ್ನು ಅನುಭವಿಸುತ್ತಿದ್ದಾನೆ. ಪಂಚಾಯತಿಯ ಅಧಿಕಾರ, ಯೋಜನೆ, ಅನುದಾನಗಳ ಬಗ್ಗೆ ವಿಚಾರಿಸಿದರೆ 'ಎಲ್ಲಾ ನಂ ಮನೇರ ನೋಡ್ಕಂತಾರ ರೀ' ಎಂಬ ಮಾತೆ ಎಲ್ಲಾ ಸದಸ್ಯೆಯರು ಸುತ್ತಿಬಳಸಿ ಹೇಳುವರು. ಈ ಹಿಂದೆಯೇ ಚರ್ಚಿಸಿದಂತೆ ಅಭಿವೃದ್ಧಿಯಿಂದ ಹೊರಗಿಟ್ಟು ಯಾವ ವ್ಯಕ್ತಿಯನ್ನು ನಾವು ಅಳೆಯಬಾರದು. ಹಾಗೊಂದು ವೇಳೆ ನಾವು ಪರಿಭಾವಿಸುವುದಾದರೆ ಅದು ಎಂದಿಗೂ ಸಮಾಜಮುಖಿಯಾಗಿರಲಾರದು. ಆದರೆ ದಲಿತ ಮಹಿಳೆಯ ವಿಚಾರದಲ್ಲಿ ನಡೆಯುತ್ತಿರುವುದು ಇದೆ. ನಿಮ್ಮ ಸಮುದಾಯ ಹಾಗೂ ಮಹಿಳಾ ಪರವಾದಂತಹ ಯಾವುದಾದರೂ ಯೋಜನೆಗಳ ಬಗ್ಗೆ ತಿಳಿವಳಿಕೆ ಅಥವಾ ಅನುಷ್ಠಾನ ಮಾಡುವಿಕೆಯ ಬಗ್ಗೆ ವಿಚಾರಿಸಿದರೆ ಉತ್ತರ ಮಾತ್ರ ಶೂನ್ಯವಾಗಿದೆ. ಆ ಯೋಜನೆಯನ್ನು ಹೊರಗೆಡುವಿಕೆಯಲ್ಲಿಯೆ ಅವಳು ತುಂಬ ಗೊಂದಲದಲ್ಲಿದ್ದಾಳೆ. ತನಗಿರುವ ಆತಂಕ, ಭಯಗಳ ಕಾರಣದಿಂದ ಅವಳು ಇಲ್ಲಿಯೂ ಸಹ ಸ್ವತಂತ್ರವಾಗಿ ವರ್ತಿಸುವಿಕೆಯಲ್ಲಿ ಸ್ವಲ್ಪ ಹಿಂದುಳಿದಿದ್ದಾಳೆ. ಸ್ವಂತ ಆಸ್ತಿ, ಉದ್ಯೋಗ ಕುರಿತಂತೆ ಅವಳ ಸ್ಥಿತಿ ಇನ್ನು ಸಾಮಾನ್ಯಸ್ಥಿತಿಯಲ್ಲಿಯೇ ಇದೆ. ಅಲ್ಲದೆ ಜಿಲ್ಲಾ ಪಂಚಾಯತಿಯಂತಹ ಉನ್ನತ ಮಟ್ಟಗಳಲ್ಲಿ ರಾಷ್ಟ್ರೀಯ ಪಕ್ಷಗಳೆ ಪ್ರಮುಖವಾಗಿ ಕಂಡುಬರುವುದರಿಂದ ಇಲ್ಲಿಯೂ

ಈ ಪಕ್ಷಗಳಲ್ಲಿಯ ಇರುವ ಮೇಲ್ಜಾತಿಯ ನಾಯಕರುಗಳು ತಮ್ಮ ಹಿತಾಸಕ್ತಿಗೆ ಅನುಕೂಲವಾಗುವಂತೆ ಪಕ್ಷದ ಹೆಸರಿನಲ್ಲಿ ಅವಳನ್ನು ನಡೆಸಿಕೊಳ್ಳುತ್ತಿದೆ. ಹಿಂದೆ ಜಿಲ್ಲಾ ಪಂಚಾಯತಿಯ ಅಧ್ಯಕ್ಷೆಯಾಗಿದ್ದ ಶ್ರೀಮತಿ ಮಾಲತಿ ನಾಯಕರವರು ಅಭಿವೃದ್ಧಿ ಕಾರ್ಯಗಳ ಕುರಿತು ಅಪಾರವಾದ ಆಸಕ್ತಿಯನ್ನು ಇಟ್ಟುಕೊಂಡು ಆ ಮೂಲಕ ಹಲವಾರು ಯೋಜನೆಗಳನ್ನು ಸಾಕಾರಗೊಳಿಸುವಿಕೆಗೆ ಅತ್ಯಂತ ಆಸಕ್ತರಾಗಿದ್ದರೂ. ಭವಿಷ್ಯತ್ತಿನಲ್ಲಿ ಕೊಪ್ಪಳ ಜಿಲ್ಲೆಯನ್ನು ಒಂದು ಮಾದರಿ ಜಿಲ್ಲೆಯನ್ನಾಗಿ ಮಾಡಲು ಹಲವು ಕನಸು ಕಂಡಿದ್ದರು. ಆದರೆ ತಮ್ಮ ಅಣತಿಯಂತೆ ನಡೆಯಲಿಲ್ಲ ಎಂಬ ಒಂದೆ ಕಾರಣದಿಂದ ಪಕ್ಷದ ಹೆಸರಿನಲ್ಲಿ ಇವರ ವಿರುದ್ಧ ಮತ್ತೊಬ್ಬ ದಲಿತ ಮಹಿಳೆಯನ್ನು ಎತ್ತಿಕಟ್ಟಿ ಇವರನ್ನು ಪದಚ್ಯುತಿಗೊಳಿಸಲಾಯಿತು. ಮೊಟ್ಟ ಮೊದಲ ಬಾರಿಗೆ ಕೊಪ್ಪಳ ಜಿಲ್ಲೆಗೆ ಒಲಿದ ದಲಿತ ಮಹಿಳಾ ಅಧ್ಯಕ್ಷಣೆಯ ಸ್ಥಾನ ಈ ಮೂಲಕ ಚರಿತ್ರೆ ನಿರ್ಮಿಸಿತು. ಜಾತಿ, ಪಕ್ಷಗಳ ಹೆಸರಿನಲ್ಲಿ ವ್ಯವಸ್ಥಿತವಾಗಿ ತನ್ನ ಅಧಿಕಾರವನ್ನು ಕಸಿದು ಕೊಂಡಿದ್ದು ಸತ್ಯ ಎಂದು ಶ್ರೀಮತಿ ಮಾಲತಿಯವರು ಆಪಾದಿಸುತ್ತಾರೆ. ಮಹಿಳಾ ಉನ್ನತಿ, ಮಹಿಳಾ ಸಬಲೀಕರಣ, ಮಹಿಳಾ ಪ್ರಗತಿಯ ಬಗ್ಗೆ ಅಪಾರ ಕಾಳಜಿಯನ್ನು ದಲಿತ ಮಹಿಳೆ ಹೊಂದಿದ್ದಾಳೆ. ಕೇವಲ ತನ್ನ ಜಾತಿ ಅಥವಾ ಸಮುದಾಯಕ್ಕೆ ಮಾತ್ರವೆ ತನ್ನ ನಿಷ್ಠೆಯನ್ನು ತೋರಿಸದೆ ಸಮಸ್ತ ಶೋಷಿತ ಮಹಿಳಾ ಸಮುದಾಯದ ಒಳಿತಿಗಾಗಿ ತನ್ನ ಅಧಿಕಾರ ಬಳಸಿಕೊಂಡು ಅಲ್ಪ ಸ್ವಲ್ಪವಾದರೂ ಸಹಾಯ ಮಾಡುವ ಉದ್ದೇಶ ಅವಳಿಗಿದೆ. ಆದರೆ ವ್ಯವಸ್ಥೆಯೊಳಗಿನ ಲಿಂಗ ಸಂಬಂಧಿ ಆಚರಣಾ ವಿಧಿಗಳು ಅವಳ ಕನಸು ಕನಸಾಗಿಯೇ ಉಳಿಯುವಂತೆ ಮಾಡಿದವು.

ಹೀಗೆ ಒಂದಿಲ್ಲ ಒಂದು ಕಾರಣದಿಂದ ದಲಿತ ಮಹಿಳೆಯೂ ತನ್ನ ಗ್ರಾಮೀಣ ಸಮುದಾಯದ ಅಭಿವೃದ್ಧಿಗಾಗಿ ಹಾಕಿಕೊಂಡ ಯೋಜನೆಗಳು, ಕನಸುಗಳು ಇತರ ಉಳ್ಳವರ ಕುತಂತ್ರದಿಂದ ಅವಳ ಮನಸ್ಸಿನಲ್ಲೆ ಕೊಳೆಯುವಂತೆ ಮಾಡಿದೆ. ಅವಳ ಆಲೋಚನೆ, ವಿಚಾರ, ಸೃಜನಶೀಲತೆಗಳೆಲ್ಲವೂ ವ್ಯವಸ್ಥೆಯ ಕಾಲಡಿಯಲ್ಲಿ ಸಿಕ್ಕು ಒದ್ದಾಡುತ್ತಿವೆ. ಅವಳ ಅಧಿಕಾರ ಕೇವಲ ಹೇಳಿದ್ದಲ್ಲಿ ಸಹಿ ಹಾಕುವಿಕೆಯಲ್ಲಿಯೇ ಅಭಿವೃದ್ಧಿಯನ್ನು ಕಾಣುವಂತಾಗಿದೆ. ದಲಿತ ಮಹಿಳಾ ರಾಜಕಾರಣ ಎಂದರೆ ಅದೊಂದು ತಾತ್ಕಾಲಿಕ ಅಧಿಕಾರ ಅಥವಾ ಅವಕಾಶ. ಇಲ್ಲಿ ದಲಿತ ಮಹಿಳೆಗೆ ನೀಡಲ್ಪಟ್ಟಿರುವುದು ಸಮಾನತೆ ಹೆಸರಿನಲ್ಲಿನ ವಂಚನೆ, ಕ್ಷೇತ್ರಕಾರ್ಯದುದ್ದಕ್ಕೂ ಮಾಹಿತಿಗಳ ಆಧಾರದಲ್ಲಿ ದಲಿತ ಮಹಿಳಾ ರಾಜಕಾರಣವನ್ನು ಅವಲೋಕಿಸಲಾಗಿದೆ. ದಲಿತ ಮಹಿಳೆಯ ರಾಜಕೀಯ ಪಾತ್ರ ಕೇವಲ ಸಾಂಕೇತಿಕವಾಗಿಯೇ ಕಂಡುಬರುತ್ತಿದೆ. ಅವಳ ರಾಜಕಾರಣ ಸಮಾಜದ ಮುಖ್ಯವಾಹಿನಿಗೆ ಬರಲು ಅವಕಾಶವನ್ನು ನೀಡಿಲ್ಲ. ಸಮಾಜದ ಪ್ರಭುತ್ವಗಳು ಅವಳನ್ನು ನಿಯಂತ್ರಿಸುತ್ತಲೆ ತಮ್ಮ ಅಡಿಯಾಳಾಗಿ ತಮಗೆ ಹೇಗೆ ಬೇಕೋ ಹಾಗೆ ಧಾಳವಾಗಿ ಬಳಸಿಕೊಳ್ಳುತ್ತ ನಡೆಯುತ್ತಿವೆ. ಇವುಗಳ ಪ್ರಮುಖ ಉದ್ದೇಶವೆಂದರೆ ಸಂವಿಧಾನಾತ್ಮಕ ಕಾನೂನನ್ನು ತಿರಸ್ಕರಿಸಿ ಯಜಮಾನ್ಯ ಶಾಹಿಯನ್ನು ಇಲ್ಲಿ ಮುಂದುವರೆಸುವುದೆ ಆಗಿದೆ. ದಲಿತ ಮಹಿಳೆಗೆ ಸಿಕ್ಕಿರುವ ರಾಜಕೀಯ ಅಧಿಕಾರ ಗುಲಾಮಗಿರಿಯ ಬೇರೆ ಸ್ವರೂಪ ಪಡೆಯುತ್ತಿದೆ. ತನಗೆ ಸಿಕ್ಕಿರುವ ರಾಜಕೀಯಾಧಿಕಾರವನ್ನು ಯಾವ ರೀತಿ ಚಲಾಯಿಸಬೇಕು. ಹೇಗೆ ತನ್ನ ನೆಲ ಉಳಿಸಿಕೊಳ್ಳಬೇಕು. ರಾಜಕೀಯವಾಗಿ ಬೆಳೆಯಲು ಏನು ನಿರ್ಣಯ. ಅಭಿವೃದ್ಧಿ ಮಾಡಬೇಕು ಎಂಬೆಲ್ಲ ಅರಿವು ಇನ್ನೂ ಅವಳಿಗಿಲ್ಲ.

## ೪.೩. ದಲಿತ ಮಹಿಳಾ ರಾಜಕೀಯ ಅಸ್ತಿತ್ವ

ದಲಿತ ಮಹಿಳಾ ರಾಜಕಾರಣ ಎಂಬುದು ಸಂವಿಧಾನಬದ್ಧವಾಗಿ, ಶಾಸನೀಯ ಸ್ಥಾನಮಾನಗಳ ಮೂಲಕ ಸ್ಥಳೀಯ ಮಟ್ಟಗಳಲ್ಲಿ ಕಾರ್ಯನಿರ್ವಹಿಸುತ್ತಿದೆ. ಇದರಲ್ಲಿ ಯಾವುದೆ ಸಂಶಯವಿಲ್ಲ. ಮೂರು ಹಂತಗಳಲ್ಲಿಯ ದಲಿತ ಮಹಿಳಾ ರಾಜಕಾರಣ ಇನ್ನೂ ಪೂರ್ಣ ಪ್ರಮಾಣದಲ್ಲಿ ರೂಪುಗೊಂಡಿಲ್ಲ. ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಸಂವಿಧಾನಬದ್ಧವಾಗಿ ಬಳಸಿಕೊಳ್ಳುವ ಹಕ್ಕನ್ನು ಮಾತ್ರ ಅವಳಿಗೆ ದಯಪಾಲಿಸಿ ವ್ಯವಸ್ಥಿತವಾದ ವಂಚನೆ ಮಾಡಲಾಗಿದೆ. ಆದರೆ ಅದನ್ನು ಬಳಸಿಕೊಳ್ಳುವಿಕೆಯಲ್ಲಿ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಅವಳನ್ನು ಪಡೆಯುತ್ತಿವೆ. ಜಾತಿ ಲಿಂಗಗಳ ಮೇಲೆ ದ್ವಿ ವಿಧವಾದ ತಾರತಮ್ಯವನ್ನು ಅವಳು ತನ್ನ ಜೀವನದುದ್ದಕ್ಕೂ ಅನುಭವಿಸುತ್ತಿದ್ದಾಳೆ.

ಸಂವಿಧಾನದ ಆಶಯದಂತೆ ದಲಿತ ಮಹಿಳೆಗೆ ರಾಜಕೀಯಾಧಿಕಾರ ನೀಡಲಾಗಿದೆ. ಇಂತಹ ಅಧಿಕಾರದ ಹಿಂದಿರುವ ಆಶಯವೆಂದರೆ ಸಮಾನತೆ ಸಾಧಿಸುವುದು. ತನಗೆ ಸಿಕ್ಕ ಅಧಿಕಾರವನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಚಿಂತನೆಯಲ್ಲಿಯೇ ಅವಳು ತೊಡಗಿದ್ದಾಳೆ. ವಾಸ್ತವ ನೆಲೆಗಟ್ಟಿನಡಿಯಲ್ಲಿ ಹೇಳುವುದಾದರೆ ದಲಿತ ಮಹಿಳೆಗೆ ಸಿಕ್ಕಿರುವ ಅಧಿಕಾರ ಅದು ಅಧಿಕಾರವೆ ಅಲ್ಲ. ಅದೊಂದು ರೀತಿಯಲ್ಲಿ ಹಂಗಿನ ಪ್ರಜಾಪ್ರಭುತ್ವದ ಒಂದು ಅನುಕಂಪಾಧಾರಿತವಾದ ಭಿಕ್ಷೆ ಎಂದರೇ ತಪ್ಪಾಗಲಾರದು. ಏಕೆಂದರೆ ರಾಜಕೀಯಾಧಿಕಾರ ಎಂಬುದು ವ್ಯಕ್ತಿಯ ಸಮಗ್ರ ವ್ಯಕ್ತಿತ್ವವನ್ನು ರೂಪಿಸಿ ಅವರ ಸಾಮಾಜಿಕ ಸ್ಥಿತಿಯನ್ನು ಗೌರವಯುತಗೊಳಿಸುವ ಚಿಂತನೆ ಆಧರಿಸಿರುವಂತಹದ್ದು. ದಲಿತ ಮಹಿಳೆಯ ವಿಷಯದಲ್ಲಿ ಇದು ತುಂಬ ದ್ವಂದ್ವವಾದ ರೀತಿಯಲ್ಲಿ ನಿರೂಪಣೆಯಾಗುತ್ತಿದೆ. ದಲಿತ ಮಹಿಳಾ ರಾಜಕಾರಣದ ಅಸ್ತಿತ್ವ ಮೇಲ್ವರ್ಗಗಳ, ಬಂಡವಾಳಶಾಹಿ, ಜಮೀನ್ದಾರಿಶಾಹಿಗಳ ಹಿಡಿತದಲ್ಲಿಯೇ ರೂಪಿತವಾಗಿ ಅವಳ ಮೂಲಕ ಅನಾವರಣಗೊಳ್ಳುತ್ತಿದೆ. ಒಂದು ಗ್ರಾಮೀಣ ಸಮುದಾಯದೊಳಗಿನ ಪ್ರಮುಖ ಪ್ರಭುತ್ವ ಶಕ್ತಿಗಳು ಇವುಗಳಾಗಿರುವುದರಿಂದ ಇವುಗಳ ಮಾತೆ ಅಲ್ಲಿ ಅಂತಿಮ. ತಮಗೆ ಅವಶ್ಯವಿರುವಂತಹ ಕೆಲಸ ಕಾರ್ಯಗಳನ್ನು ಯಾವ ಬಗೆಯಲ್ಲಾದರೂ ತಮ್ಮ ಪ್ರಭಾವ ಬಳಸಿ ಇವು ಪಡೆಯುತ್ತಿವೆ. ಆ ಮೂಲಕ ಸಮಾಜವನ್ನು ನಿಯಂತ್ರಣದಲ್ಲಿರಿಸಿಕೊಂಡಿವೆ.

ದಲಿತ ಮಹಿಳೆಯ ಸಾಮಾಜೀಕರಣದಲ್ಲಿನ ಕೆಲವು ಅಂಶಗಳನ್ನು ಗಮನಿಸಿದರೆ ಅವಳು ಏಕೆ ಸಾಮಾಜದ ಮುಖ್ಯನೆಲೆಗೆ ಬರಲು ತಡವಾಗುತ್ತಿದ್ದಾಳೆಂಬ ಅಂಶಗಳು ಅರಿವಾಗಬಲ್ಲವು. ಪ್ರತಿಯೊಬ್ಬ ವ್ಯಕ್ತಿಗಳಿಗೆ ಪ್ರಾಪಂಚಿಕ ಅರಿವು ಪ್ರಸ್ತುತ ಸಂದರ್ಭದಲ್ಲಿ ಅತಿ ಮುಖ್ಯವಾಗಿದೆ. ಈ ಹಂತದಲ್ಲಿ ಅವರ ಮೇಲೆ ಯಾವ ರೀತಿಯ ಪ್ರಭಾವಗಳುಂಟಾಗುತ್ತವೆಯೋ ಅವುಗಳೆಲ್ಲವೂ ಅವರ ಜೀವಿತಾವಧಿಯವರೆಗೂ ನಿರಂತರವಾಗಿ ಮುಂದುವರೆಯುತ್ತಲೇ ಇರುತ್ತವೆ. ಯಾರೊಡನೆ ಹೇಗೆ ವರ್ತಿಸಬೇಕು ಎಂಬೆಲ್ಲ ವಿಚಾರಗಳು ಅವರಿಗೆ ಬಾಲ್ಯದಲ್ಲೆ ಮನದಟ್ಟಾಗಿರುತ್ತವೆ. ಸಂಘ ಜೀವನಕ್ಕೆ ಆಧಾರವಾದ ಮೂಲ ಪ್ರವೃತ್ತಿಯೂ ಮಾನವರಲ್ಲಿ ಇದೆಯಾದರೂ ಸಾಮಾಜಿಕ ನಡವಳಿಕೆ ರೂಪಿತವಾಗುವುದು ಬಹುತೇಕ ಸಂದರ್ಭಗಳು ಕುಟುಂಬದಲ್ಲಿಯೇ. ವ್ಯಕ್ತಿಯ ಹುಟ್ಟಿನಿಂದ ಸಾಯುವವರೆಗೂ ಅವರ ಜೊತೆಯಲ್ಲಿಯೇ ಇರುವ ಕುಟುಂಬದ ಕಾರ್ಯ ಕೇವಲ ಸಂತಾನೋತ್ಪತ್ತಿಯಾಗಲಿ, ಆರ್ಥಿಕ

ಭಾವನಾತ್ಮಕ ಭದ್ರತೆಯನ್ನು ಒದಗಿಸಲಿಕ್ಕೆ ಸೀಮಿತವಾಗಿಲ್ಲ. ಕುಟುಂಬ ಸಮಾಜದ ಆಧಾರಸ್ತಂಭದಂತಿದ್ದು, ಆಯಾ ಕಾಲದಲ್ಲಿ, ಆಯಾ ಸಮಾಜದ ಮೌಲ್ಯಗಳನ್ನು, ನಂಬಿಕೆಗಳನ್ನು , ಆಚರಣೆಗಳನ್ನು ಒಟ್ಟಿನಲ್ಲಿ ಆ ಸಮಾಜದ ಸಂಸ್ಕೃತಿಯನ್ನು ತನ್ನ ಸದಸ್ಯರಿಗೆ ಪರಿಚಯಿಸುವಂಥ ಒಂದು ಸಾಮಾಜಿಕ ಸಂಸ್ಥೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಗಂಡು ಹೆಣ್ಣುಗಳು ತಮ್ಮ ತಮ್ಮ ಪಾತ್ರಗಳ, ಜವಾಬ್ದಾರಿಗಳು ಹಾಗೂ ಭವಿಷ್ಯದ ಅವಕಾಶಗಳ ಕುರಿತಂತೆ ಅರಿವನ್ನು ರೂಢಿಸಿಕೊಳ್ಳುವರು" (ಆರ್ ಇಂದಿರಾ, ೪೭. ೨೦೦೨) ಹೀಗೆ ಹುಟ್ಟಿನಿಂದಲೆ ಆರಂಭವಾಗುವ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಸಾಮಾಜಿಕ ನಿಯಂತ್ರಕ ಪ್ರಭುತ್ವಗಳ ಬಗ್ಗೆ ಅರಿವನ್ನು ಪುರುಷರಂತೆ ಸ್ತ್ರೀಯರಿಗೂ ಮನಮುಟ್ಟುವಂತೆ ತಿಳಿಸಿ ಅವರನ್ನು ಮಾನಸಿಕವಾಗಿ ಅಂತಹ ಪ್ರಭುತ್ವಗಳ ವಿರುದ್ಧ ಮಾತನಾಡದಂತೆ ತಯಾರುಗೊಳಿಸಲಾಗುತ್ತಿವೆ. ಹೀಗಿರುವುದರಿಂದಲೆ ಅವರು ತಮ್ಮ ಸಾಮಾಜಿಕರಣದ ನೆಲೆಯಲ್ಲಿಯೇ ಸ್ತ್ರೀ ಪುರುಷರ ಪಾತ್ರಗಳಲ್ಲಿ ರಾಜಕಾರಣ ಕುರಿತ ಪಾತ್ರವೂ ಒಂದು. ಇಲ್ಲಿ ಸಾಮಾಜಿಕ ಕ್ಷೇತ್ರಗಳು ಕೇವಲ ಪುರುಷನಿಗೆ ಎಂದು ನಿರೂಪಿಸಿ ಮಹಿಳೆಯನ್ನು ಗೃಹಕೃತ್ಯಗಳಿಗೆ ಬಲಿಕೊಡುವರು. ರಾಜಕಾರಣವು ಸಹ ಪುರುಷ ಕೇಂದ್ರಿತವಾಗಿರುವುದರಿಂದ ಅಲ್ಲಿ ಮಹಿಳೆಯ ಸಹಭಾಗಿತ್ವ ನಿಷೇಧವೆ ಇದೆ. ಆದ್ದರಿಂದಲೆ ಈ ಮನೋಭಾವದೊಂದಿಗೆ ಬೆರೆತಿರುವ ಮಹಿಳೆ ರಾಜಕೀಯದಲ್ಲಿ ಮುಕ್ತವಾಗಿ ಬೆರೆಯುವಿಕೆಯಲ್ಲಿ ನಿರಾಸಕ್ತಿ, ಭಯದ ಕಾರಣದಿಂದ ಸ್ವತಂತ್ರವಾಗಿ ಪಾಲುದಾರಳಾಗಲೂ ಸಾಧ್ಯವಾಗುತ್ತಿಲ್ಲಾ. ಅಲ್ಲದೆ ಮೇಲ್ವರ್ಗಗಳ ಕುರಿತು ಅವಳ ಭಯವು ಸಹ ಇದೇ ರೀತಿ ಅಧಿಕಾರಕ್ಕೆ ಬರಲಾರದಂತೆ ತಡೆಯೊಡ್ಡಿದೆ. ಸಾಮಾಜದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿರುವ ಬಂಡವಾಳಶಾಹಿಗಳು, ಜಮೀನ್ದಾರರು, ಊಳಿಗಮಾನ್ಯಶಾಹಿಗಳು ದಲಿತರ ಬಗ್ಗೆ ಹೊಂದಿರುವ ಕೀಳರಿಮೆಯಂತಹ ಚಿಂತನೆಗಳಿಂದಾಗಿ ಇಂದಿಗೂ ಸಹ ತಳಸಮುದಾಯಗಳು ತಮ್ಮ ಅಧೀನದಲ್ಲಿಯೇ ಇರಬೇಕೆಂದು ಅಪೇಕ್ಷಿಸುತ್ತವೆ. ಆ ಕಾರಣದಿಂದಲೇ ಸಮಾನತೆಯನ್ನು ಯಾವಾಗಲೂ ವಿರೋಧಿಸುತ್ತವೆ. ಅಲ್ಲದೆ ತಮಗೆ ಸರಿಸಾಟಿಯಾಗಿ ನಿಲ್ಲದಂತೆ ಅವರಲ್ಲಿ ವಿವಿಧ ಬಗೆಯ ನಿಯಂತ್ರಣ. ಭಯ. ಆತಂಕಗಳನ್ನು ಸೃಷ್ಟಿಸುತ್ತವೆ. ಇದರಿಂದಾಗಿ ತಳಸಮುದಾಯಗಳು ಇವರಿಗೆ ಹೆದರಿಕೊಂಡೆ ಜೀವಿಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ರಾಜಕೀಯ ಸಂಸ್ಥೆಯ ಮೂಲಕವಾದರೂ ಮುಂದೆ ಬರಲು ಇಚ್ಛಿಸುವವರಿಗೆ ಹಲವಾರು ಆಸೆತೋರಿಸಿ ತಮ್ಮ ಅಡಿಯಾಳಾಗಿ ಮಾಡಿಕೊಳ್ಳುವರು. ಒಪ್ಪದಿದ್ದವರಿಗೆ ಬಹಿಷ್ಕಾರ. ಈ ಎಲ್ಲಾ ಕಾರಣಗಳ ಹಿನ್ನೆಲೆಯಲ್ಲಿ ದಲಿತ ಮಹಿಳಾ ರಾಜಕೀಯ ಸ್ಥಿತಿಯೂ ಅವರ ಕೃಪಾಕಟಾಕ್ಷದಡಿಯಲ್ಲಿಯೇ ರೂಪುಗೊಂಡು ಅವರು ಹೇಳಿದಂತೆ ಇವಳು ಸಹ ನಡೆಯಬೇಕಾಗಿರುವುದು. ಅಲ್ಲದೆ ಇವಳಿಗೆ ಅವರ ಎದುರುವಾದಿಸುವಂತ ಧೈರ್ಯವೂ ಇಲ್ಲ. ತನ್ನ ಸಮುದಾಯದ ಪುರುಷರಿಗೆ ಇಲ್ಲದ ಮೇಲೆ ಇವಳಿಗೆಲ್ಲಿಂದ ಬರುತ್ತದೆ.

ನಿರಂತರವಾಗಿ ದಲಿತರ ಮೇಲೆ ಮೇಲ್ವರ್ಗಗಳ ಹಿಡಿತ ಇರುವುದರಿಂದಲೆ ಅವರು ಸಮಾಜ, ರಾಜಕೀಯದ ಪರಿಧಿಯ ಹಿಂದೆಸರಿಯುತ್ತಿದ್ದಾರೆ. ದಲಿತ ಮಹಿಳೆಯಂತೂ ರಾಜಕೀಯಾಧಿಕಾರ ಹೊಂದಿದ ಅಸ್ಪೃಶ್ಯಳಾಗಿ ಹೊರಹೊಮ್ಮುತ್ತಿದ್ದಾಳೆ. ಹಿಂದಿನಿಂದಲೂ ಹಲವಾರು ಶೋಷಣೆ, ದಬ್ಬಾಳಿಕೆಗಳಿಗೆ ಬಲಿಯಾಗಿ ಅತಂತ್ರ ಸ್ಥಿತಿಯನ್ನು ಅನುಭವಿಸಿದ ದಲಿತ ಮಹಿಳೆ ಪಂಚಾಯತಿಯ ಸ್ಥಳೀಯ ಮಟ್ಟದಲ್ಲೋ ಒಂದು ಬಗೆಯಲ್ಲಿ ಅಧಿಕಾರ ಪಡೆದಿದ್ದಾಗ್ಯೂ

ಆದರಿಂದ ಅವಳ ಸ್ಥಿತಿಯಲ್ಲಿ ಸುಧಾರಣೆ ಏನು ಕಂಡುಬಂದಿಲ್ಲ. ಪಂಚಾಯತಿಯ ಹಂತದಿಂದಲೆ ಇಂದಿನ ಹಲವಾರು ಮಹಾನಾಯಕರುಗಳು ಬೆಳೆದಿರುವುದು. ಪಂಚಾಯತಿ ರಾಜಕೀಯ ವೇದಿಕೆಗೆ ಮೊದಲ ಮೆಟ್ಟಿಲಾಗಿರುವುದರಿಂದ ಇಲ್ಲಿಂದಲೆ ಅವರಿಗೆ ಸೂಕ್ತ ಅವಕಾಶ. ತರಬೇತಿ ಸಿಗಬೇಕು. ಆದರೆ ವಾಸ್ತವವಾಗಿ ಅದು ಸಿಗುತ್ತಿಲ್ಲ. ಎಲ್ಲಿ ಆಳಿಸಿಕೊಳ್ಳಬೇಕಾದವರು ತಮ್ಮ ಅಸ್ತಿತ್ವ, ಅಧಿಕಾರಕ್ಕೆ ಚ್ಯುತಿ ತರುತ್ತಾರೋ ಎಂಬ ಭಯದಿಂದ ಬಂಡವಾಳಶಾಹಿ, ಜಮೀನ್ದಾರಿ, ರಾಜಕೀಯ ಪಕ್ಷಗಳು ಬಿಡುತ್ತಿಲ್ಲ. ಪಂಚಾಯತಿಯ ಅಧಿಕಾರವಧಿಯ ನಂತರ ಅವಳು ರಾಜಕೀಯದಲ್ಲಿ ಮುಂದುವರೆಯದೆ ಮತ್ತೆ ಮನೆಕಡೆಗೆ ಮುಖ ಮಾಡುತ್ತಿದ್ದಾಳೆ. ಎಷ್ಟೋ ಜನ ದಲಿತ ಮಹಿಳೆಯರು ತಳಮಟ್ಟದಿಂದ ರಾಜಕೀಯದಲ್ಲಿ ಮುಂದುವರೆಯುತ್ತಿದ್ದಾರೆ ಎಂದು ಪ್ರಶ್ನಿಸಿದರೆ ಉತ್ತರ ತುಂಬ ನಿರಾಶದಾಯಕವಾಗಿ ಸಿಗುತ್ತದೆ. ಚುನಾವಣೆಯಂತಹ ಪ್ರಮುಖ ವಿಚಾರಗಳಲ್ಲಿಯೂ ದಲಿತ ಮಹಿಳೆಯ ನಿಲುವು ಎಂದೂ ಅವಳ ಮುಕ್ತ ಮನಸ್ಸಿನಿಂದ ಹೊರಬಂದಿಲ್ಲ. ಬೇರೆಯವರ ಇಚ್ಛಾನುಸಾರ ಅಥವಾ ಮೀಸಲಾತಿ ಸಿಕ್ಕಿದೆ ಎಂಬ ಕಾರಣದಿಂದಲೆ ಅವಳಿಗೆ ರಾಜಕೀಯಾಧಿಕಾರ ಸಿಗುತ್ತಿದೆ. ಮೀಸಲಾತಿಯನ್ನು ಹೊರತುಪಡಿಸಿ ರಾಜಕೀಯ ಸೂತ್ರಹಿಡಿಯಲು ಅವಳಿಗೆ ಸಾಧ್ಯವಿಲ್ಲ. ಚುನಾವಣೆಯಲ್ಲಿ ನಿಲ್ಲುವುದಕ್ಕಿಂತ ಮುಂಚೆ ಅವಳು ಹತ್ತು ಹಲವು ಬಗೆಯ ಯೋಜನೆಗಳ ಬಗ್ಗೆ ಚಿಂತಿಸಿರುತ್ತಾಳೆ. ಅವುಗಳನ್ನು ಹೇಗಾದರೂ ಮಾಡಿ ಕಾರ್ಯರೂಪಕ್ಕೆ ತರಬೇಕೆಂದು ಅಂದುಕೊಂಡಿರುತ್ತಾಳಾದರೂ ನಾನಾ ಕಾರಣಗಳಿಂದ ಅವುಗಳಿಗೆ ಅವಕಾಶವೆ ಸಿಗುವುದಿಲ್ಲ. ಚುನಾವಣೆಯಲ್ಲಿ ಗೆದ್ದ ನಂತರ ಪಂಚಾಯತಿಯಲ್ಲಿ ತಾನು ಅನುಭವಿಸಿದ ವಿವಿಧ ಬಗೆಯ ಮಾನಸಿಕ ಹಿಂಸೆಗಳಿಂದ ಚುನಾವಣೆಯಿಂದ ಏಕೆ ರಾಜಕೀಯದಿಂದಲೆ ದೂರವಿರಲು ಬಯಸುತ್ತಿದ್ದಾಳೆ.

ಯಾವುದೋ ಒಂದು ಗುರಿ, ಉದ್ದೇಶ ಸಾಧನೆಗಾಗಿ ರಾಜಕೀಯದ ಸುಪರ್ದಿಗೆ ಬಂದಿರುವ ದಲಿತ ಮಹಿಳೆಗೆ ತನ್ನ ಅಧಿಕಾರವನ್ನು ಯಾವ ರೀತಿಯಾಗಿ ಉಳಿಸಿಕೊಳ್ಳಬೇಕೆಂಬುದು ದೊಡ್ಡ ಚಿಂತೆಯಾಗಿದೆ. ಪ್ರಭುತ್ವಗಳ ಮೇಲೆ ಸವಾರಿ ಮಾಡಿ ಅವಳು ತನ್ನ ಮೇಲೆ ಹೊಂದಿರುವ ನಿಯಂತ್ರಣವನ್ನು ಕಡಿಮೆ ಮಾಡಿಕೊಂಡು ಆ ಮೂಲಕ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ದಲಿತ ಮಹಿಳೆಗೆ ಸಾಧ್ಯವೆ ? ದಲಿತ ಮಹಿಳೆಯ ಮೇಲೆ ಮೇಲ್ವರ್ಗಗಳು ಪುರುಷ ಪ್ರಧಾನತೆಯೂ ಹೊಂದಿರುವ ನಿಯಂತ್ರಣ ಕಡಿಮೆಯಾಗಬೇಕು. ದಲಿತ ಮಹಿಳೆಗೆ ರಾಜಕೀಯ ಎಚ್ಚರ ನೀಡಬೇಕು. ಈ ಎಚ್ಚರವನ್ನು ಪಡೆಯುವಿಕೆಯಲ್ಲಿ ಅವಳಿಗೆ ಕುಟುಂಬ, ಸಮಾಜ, ಧರ್ಮಗಳು ಸಹ ಉದಾರವಾದಿಯಾಗಿ ವರ್ತಿಸಬೇಕು. ತಾನು ಮಾಡುವಂತ ಕಾರ್ಯಗಳ ಬಗ್ಗೆ ಯಾರ ಹಸ್ತಕ್ಷೇಪ ಇರದಂತೆ ಸ್ವನಿರ್ಧಾರ, ಸ್ವತಿಳಿವಳಿಕೆ, ಅರಿವನ್ನು ಅವಳು ಪಡೆಯಲೇಬೇಕು.

ಇಂತಹ ಎಲ್ಲಾ ಪ್ರಭುತ್ವಗಳನ್ನು ನಿಯಂತ್ರಿಸುವಿಕೆಯಲ್ಲಿ ದಲಿತ ಮಹಿಳೆ ಏನಾದರೂ ತಾರತಮ್ಯ ತೋರಿದಲ್ಲಿ ನಿಜವಾದ ದಲಿತ ಮಹಿಳಾ ರಾಜಕಾರಣ ಸಾಕಾರವಾಗಬಲ್ಲದು. ಸಮಾಜವನ್ನೆ ತಮ್ಮ ಹಿಡಿತದಲ್ಲಿಟ್ಟುಕೊಂಡು ತಮಗೆ ಹೇಗೆ ಬೇಕೋ ಹಾಗೆ ನಿಯಂತ್ರಿಸುತ್ತಿರುವ ಪ್ರಭುತ್ವಗಳಿಗೆ ಪೆಟ್ಟು ಕೊಟ್ಟು ತನ್ನ ತನದಿಂದ ಮೆರೆದಾಗ ಮಾತ್ರ ದಲಿತ ಮಹಿಳೆ ರಾಜಕೀಯ ಸಮೀಕರಣಕ್ಕೆ ಸ್ವಲ್ಪ ನ್ಯಾಯ ಒದಗಿಸಬಲ್ಲಳು. ದಲಿತ ಮಹಿಳೆಯೂ ಈ ಸಮಾಜದ ಒಬ್ಬ ಸದಸ್ಯೆಯಾಗಿರುವುದರಿಂದ ಅವಳಿಗೂ ಸಹ ಸಮಾಜದ ಉನ್ನತಿ, ಪ್ರಗತಿ, ಅಭಿವೃದ್ಧಿಯಲ್ಲಿ

ಸರಿಸಮನಾಗಿ ಪಾಲ್ಗೊಳ್ಳುವಿಕೆಗೆ ಅವಕಾಶ, ಅನುವು ಮಾಡಿಕೊಡಬೇಕು. ಅಧಿಕಾರಶಾಹಿ ಹಾಗೂ ಪ್ರಭುತ್ವಗಳು ಅವಳ ಮೇಲೆ ಹೊಂದಿರುವಂತ ನಿಯಂತ್ರಣ ಕಡಿಮೆ ಮಾಡಲು ಸರಕಾರ, ಸರಕಾರೇತರ ಸಂಸ್ಥೆಗಳು ವಿಶೇಷ ತರಬೇತಿ, ಜಾಗೃತಿ ಶಿಬಿರಗಳನ್ನು ನಡೆಸುವುದು ಅಗತ್ಯವಾಗಿದೆ. ಸಂವಿಧಾನ ಬದ್ಧವಾಗಿ ದಲಿತ ಮಹಿಳೆ ರಾಜಕೀಯಾಧಿಕಾರವನ್ನೇನೋ ಪಡೆದಿದ್ದಾಳೆ. ಆದರೆ ಅದನ್ನು ಚಲಾಯಿಸುವಿಕೆಯಲ್ಲಿ ತೊಂದರೆಗಳನ್ನು, ಸಮಸ್ಯೆ ಸವಾಲುಗಳ ಸರಮಾಲೆಯನ್ನೇ ಅವಳು ಎದುರಿಸುತ್ತಿದ್ದಾಳೆ. ಇದಕ್ಕೆ ಪ್ರಮುಖವಾಗಿ ಜಾತಿಯ ಕಾರಣಗಳು ಆಗಿವೆಯಾದರೂ ಅದರ ಜೊತೆಗೆ ಬಂಡವಾಳಶಾಹಿ, ಜಮೀನ್ದಾರಿ, ಊಳಿಗಮಾನ್ಯಶಾಹಿಗಳು ಸಹ ದೊಡ್ಡ ಪೆಡಂಭೂತವಾಗಿವೆ. ನಿರ್ಭಯವಾಗಿ ತನ್ನ ಅಧಿಕಾರ ಚಲಾಯಿಸುವಂತಾದರೆ ಸಂವಿಧಾನಕ್ಕೆ ಮನ್ನಣೆ ನೀಡಿದಂತಾಗುತ್ತದೆ. ದಲಿತ ಮಹಿಳೆಯೂ ಸಮಾಜದ ಅಭಿವೃದ್ಧಿಯ ಒಂದು ಘಟಕವಾಗಿರುವುದರಿಂದ ಅವಳನ್ನು ಹೊರತುಪಡಿಸಿ ರಾಜಕೀಕರಣ ನಡೆಯಲಾರದು. ಹೀಗಾದಾಗ ಮಾತ್ರ ನಿಜವಾದ ದಲಿತ ಮಹಿಳಾ ರಾಜಕಾರಣ ಸಾಧ್ಯ ಇಲ್ಲವಾದರೆ ಸಾಂಪ್ರದಾಯಕ ನೆಲೆಗಳೆ ಮತ್ತೆ ಚಿಗುರಿ ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತವೆ.

**೪.೪. ಪರ್ಯಾಯ ಸಾಧ್ಯತೆಗಳು**

ಮಾನವ ಸಂಪತ್ತಿನ ಅರ್ಧದಷ್ಟಿರುವ ಮಹಿಳಾ ಸಮುದಾಯವನ್ನು ನಿರಾಕರಿಸಿಯೆ ಈವರೆಗಿನ ಅಧ್ಯಯನಗಳು, ರಾಜಕಾರಣ ಪುರುಷಾಧಿಪತ್ಯದಲ್ಲಿ ಸ್ಥಾಪನೆಗೊಂಡಿದೆ ಎಂಬುದು ಸ್ತ್ರೀವಾದಿಗಳ ಪ್ರಮುಖ ಆರೋಪ. ಸಮಾಜದಲ್ಲಿ ರೂಪಿತವಾಗಿರುವ ಈ ಬಗೆಯ ಪುರುಷನಿಷ್ಠವಾದ ಚಿಂತನೆಗಳಿಂದಲೆ ಸಮಾನತೆಯ ತತ್ವ ಸಫಲವಾಗಲು ಸಾಧ್ಯವಾಗುತ್ತಿಲ್ಲ. ಮಹಿಳಾ ರಾಜಕಾರಣವು ಸಹ ಇದರಿಂದ ಸುಭದ್ರ ಸಮಾಜದ ಉತ್ತಮ ತಳಹದಿಗೆ ಸಹಕಾರಿಯೂ ಆಗಲಾರದು. ಇಂತಹ ಸಾಂಪ್ರದಾಯಿಕ ಮನಸ್ಸುಗಳನ್ನು ಅರಿತುಕೊಂಡಿದ್ದ ಶ್ರೀ ಬಾಬಾ ಸಾಹೇಬ್ ಅಂಬೇಡ್ಕರರು ಮಹಿಳಾ ಉನ್ನತಿ, ಮಹಿಳಾ ಪ್ರಗತಿ, ಹಾಗೂ ಮಹಿಳಾ ಸಹಭಾಗಿತ್ವಗಳ ಸಲುವಾಗಿ ಹಪಾಹಪಿಸಿದ್ದರು. ಆ ಕಾರಣದಿಂದಲೆ ಶ್ರೀಯುತರು ಮಹಿಳಾ ಮೀಸಲಾತಿಯು ಅವಶ್ಯಕತೆಯನ್ನು ಬಲವಾಗಿ ಸಮರ್ಥಿಸಿಕೊಂಡಿದ್ದರು. ಅಲ್ಲದೆ ಸಮಾಜದಲ್ಲಿ ಪುರುಷರಿಗೆ ದೊರೆಯುತ್ತಿರುವ ಎಲ್ಲಾ ಬಗೆಯ ಅಧಿಕಾರಗಳು ಮಹಿಳೆಗೆ ದೊರೆಯಬೇಕೆಂದು ಆಶಿಸಿದ್ದರು. ಯಾವುದೇ ಸಮಾಜವಿರಲಿ ಅಲ್ಲಿ ಮಹಿಳೆಯರನ್ನು ಎರಡನೆಯ ದರ್ಜೆಯಲ್ಲಿ ತೂಗಿ ನೋಡುವುದು, ಆ ಮೂಲಕ ಅವರಿಗೆ ಇರುವ ಹಕ್ಕುಗಳನ್ನು ನಿರಾಕರಿಸುವುದು ಯಾವುದೇ ಸಮಾಜಕ್ಕೂ ಶೋಭೆ ತರುವಂತಹದ್ದಲ್ಲ. ಇಡೀ ದೇಶದ ಯಾವುದೇ ಪ್ರಮುಖ ಸಂದರ್ಭದಲ್ಲಿ ಮಹಿಳೆಯರ ಅಸ್ತಿತ್ವವನ್ನು ಅಲ್ಲಗಳೆಯುವುದು ಪ್ರಜಾತಾಂತ್ರಿಕ ವ್ಯವಸ್ಥೆಗೆ ಅಪಮಾನವಮಾಡಿದಂತೆಯೇ ಸರಿ. ನಮ್ಮ ಪ್ರಜಾಪ್ರಭುತ್ವವು ಕೆಲವು ಸಮಯಗಳಲ್ಲಿ ಕಲ್ಪಿತ ನಾಟಕಮಾಡುತ್ತಿರುತ್ತವೆ. ಇದು ಪ್ರಜಾಪ್ರಭುತ್ವದ ತಪ್ಪಿಲ್ಲ. ಅದು ನಮ್ಮ ವ್ಯವಸ್ಥೆಯೊಳಗಿನ ದೋಷ. ಮಹಿಳೆಯನ್ನು ಹೊರತು ಪಡಿಸದೆ ಯಾವುದೇ ಯೋಜನೆ ಸಂಸ್ಥೆ, ಅಭಿವೃದ್ಧಿ ಕಾರ್ಯಕ್ರಮಗಳು ಎಂದಿಗೂ ಸಮಾಜ ಮುಖಿಯಾಗಿ ಜನಪರವಾಗಿರಲಾರವು. ಸ್ತ್ರೀಮೌಲ್ಯ ಸಮಾಜವನ್ನು ತಾಯ್ತನದ ತಕ್ಕಡಿಯಲ್ಲಿ ತೂಗುವಂತಹವು. ಸ್ತ್ರೀ ಪ್ರಜ್ಞೆ ಎಂಬುದು ಅಂತಃಕರಣದ ಜೀವ ವಿಸ್ತರಣೆಯದು. ಈ ಬಗೆಯ ಮೌಲ್ಯಾಧಾರಿತವಾದ ಸ್ತ್ರೀಮೌಲ್ಯಗಳು ಅಪಮೌಲ್ಯಗೊಂಡಿವೆ. ಆ ಕಾರಣದಿಂದಲೆ ಅವುಗಳನ್ನು ಪುನರ್ ವ್ಯಾಖ್ಯಾನಿಸಿ ಸಮಾಜಕ್ಕೆ ವಾಸ್ತವವನ್ನು ತೋರಿಸಲು ಪರ್ಯಾಯ ರಾಜಕಾರಣದ ಅವಶ್ಯಕತೆ ಇದೆ.

ಸಮಾಜದ ಉಳಿವಿಗಾಗಿ, ಉನ್ನತಿಗಾಗಿ ರೂಪಿಸಲ್ಪಟ್ಟ ರಾಜಕಾರಣವು ಅಂತಿಮವಾಗಿ ಸಮಾಜ ಮುಖಿಯಾಗಿಯೂ ಜನಪರವಾಗಿಯೂ ಇರಬೇಕು. ಆದರೆ ವಾಸ್ತವವಾಗಿ ಹಾಗಿಲ್ಲ ಇದನ್ನು ನಾವು ಭಾರತೀಯ ಇತಿಹಾಸ ಪರಂಪರೆಯುದ್ದಕ್ಕೂ ಕಾಣಬಹುದಾಗಿದೆ.ರಾಜಕಾರಣ ಎಂಬುದು ಇಂದು ಕೇವಲ ವೈಯಕ್ತಿಕ ಮಟ್ಟದ ಪ್ರತಿಷ್ಠೆಯ, ಜಾತಿನೆಲೆಯ ಹಿತಾಸಕ್ತಿಯನ್ನೆ ಪ್ರಮುಖವಾಗಿ ಪ್ರತಿಪಾದಿಸುತ್ತಿವೆ. ರಾಜಕಾರಣಕ್ಕೆ ಸಮಾಜದ ಹಿತಾಸಕ್ತಿಯನ್ನೆ ಪ್ರಮುಖವಾಗಿ ಪ್ರತಿಪಾದಿಸುತ್ತಿರುತ್ತದೆ. ರಾಜಕಾರಣಕ್ಕೆ ಸಮಾಜದ ಅಸ್ತಿತ್ವದ ಬಗ್ಗೆ ಹಿತ ಚಿಂತನೆ, ಸ್ವಾಸ್ಥ್ಯದ ಬಗ್ಗೆ ಯಾವುದೇ ಬಗೆಯ ಕಾಳಜಿಯೂ ಇಲ್ಲದಿರುವುದನ್ನು ನಾವು ಸ್ವಾತಂತ್ರ್ಯನಂತರದ ರಾಜಕಾರಣದ ಚಳುವಳಿಗಳನ್ನು ಒಮ್ಮೆ ಅವಲೋಕಿಸಿದರೆ ಮನದಟ್ಟಾಗುವುದು. ನೆಪಮಾತ್ರಕ್ಕೆ ಎಂಬಂತೆ ಅಲ್ಲೊಬ್ಬ ಇಲ್ಲೊಬ್ಬ ದಲಿತ ಸಮುದಾಯದ ವ್ಯಕ್ತಿಯನ್ನು ಹೈಲೈಟ್ ಮಾಡುವುದನ್ನು ಬಿಟ್ಟರೆ ಉಳಿದಂತೆ ತಳಸಮುದಾಯಗಳಿಗೆ ನೀಡುವ ನಿಜವಾದ ಅಸ್ತಿತ್ವ ಈವರೆಗೂ ಸಿಕ್ಕಿಲ್ಲ. ''ನಮ್ಮ ರಾಜಕಾರಣವು ರಾಜಕಾರಣಕ್ಕಾಗಿ ರಾಜಕಾರಣವಾಗಿವೆ. ಅದು ನಿಂತನೀರಾಗಿವೆಯೇ ಹೊರತು ಹರಿಯುವ ನೀರಾಗಿಲ್ಲ''[13] ಎಂಬ ಮಲ್ಲೇಪುರಂ ಜಿ ವೆಂಕಟೇಶರ ಮಾತುಗಳು ತುಂಬ ಔಚಿತ್ಯಪೂರ್ಣವಾಗಿ ಕಾಣಿಸುತ್ತದೆ. ಏಕೆಂದರೆ ಪ್ರಸ್ತುತ ಭಾರತದ ರಾಜಕಾರಣದ ಅವ್ಯವಸ್ಥೆಯನ್ನು ನೋಡಿದರೆ ಯಾವೊಬ್ಬ ಪ್ರಜ್ಞಾವಂತರು ಸಹ ಇದರ ಬಗ್ಗೆ ಚಿಂತಿಸದಿರಲಾರರು. ಸ್ವಾತಂತ್ರ್ಯ ಬಂದು ಅರವತ್ತು ದಶಕಗಳ ನಂತರವೂ ಸಾಂಪ್ರದಾಯಿಕ ಸ್ಥಾಪಿತ ಪ್ರಭುತ್ವಗಳೆ ದೇಶವನ್ನು ತಮ್ಮ ಕಪಿಮುಷ್ಟಿಯಲ್ಲಿಡಿದುಕೊಂಡು ಮುನ್ನೆಡೆಸುತ್ತಿವೆ. ಇವುಗಳಿಗೆ ದೇಶ, ಸಮಾಜ, ಅಲಕ್ಷಿತ ಸಮುದಾಯ, ಮಹಿಳೆಯರ ಬಗ್ಗೆ ಒಂದಿಷ್ಟು ಕಾಳಜಿ ಇಲ್ಲವಾಗಿದೆ. ಜನಬೆಂಬಲ, ಧನಬೆಂಬಲಗಳ ಅಮಲಿನಿಂದ ಸಮಷ್ಠಿ ಅಧಿಕಾರವನ್ನೇ ತಮ್ಮ ಕೈವಶಮಾಡಿಕೊಂಡು ತಮ್ಮ ಹಿತಾಸಕ್ತಿಯನ್ನೆ ಕಾಪಾಡುವ ನೆಲೆಯಲ್ಲಿ ಅಧಿಕಾರ ನಿರ್ವಹಿಸುತ್ತಿವೆ. ಆದ್ದರಿಂದ ಅಧಿಕಾರ ವಿಕೇಂದ್ರಿಕರಣವಾಗ ಬೇಕಾದರೆ ಸಾಮಾನ್ಯರಿಗೆ, ದಲಿತರಿಗೆ ಮಹಿಳೆಯರಿಗೆ ನಿಲುಕುವಂತಾಗಲು ಪರ್ಯಾಯ ಸಾಧ್ಯತೆಯನ್ನು ಎದುರು ನೋಡಬೇಕಾಗದ ಅಗತ್ಯವಿದೆ. ಪರ್ಯಾಯ ಸಾಧ್ಯತೆಗಳ ಬಗ್ಗೆ ಚಿಂತಿಸುವಾಗ ಹೊಸ ಬೆಳವಣಿಗೆಯ ಆಶಾಕಿರಣಗಳು ಅಲಕ್ಷಿತ, ನಿರ್ಲಕ್ಷಿತ ಸಮುದಾಯಗಳು ತೆರೆದ ಕಣ್ಣುಗಳಿಂದ ನಿರೀಕ್ಷಿಸುತ್ತಲೆ ಇರುತ್ತವೆ. ಮುಂದುವರೆದ, ಮೇಲ್ವರ್ಗಗಳ ಪ್ರಭುತ್ವಗಳಿಗೆ ಇಲ್ಲಿಯವರೆಗೂ ಎಲ್ಲಾ ಬಗೆಯ ಅಧಿಕಾರ, ಅವಕಾಶ, ಆಡಳಿತಗಳು ಸಾಕಷ್ಟು ಪ್ರಮಾಣದಲ್ಲಿ ಸಿಕ್ಕಿವೆ. ಇತರ ತಳಸಮುದಾಯಗಳಿಗೆ ಮಾತ್ರ ಇದುವರೆಗೂ ಸಿಕ್ಕಿಲ್ಲ ಎಂದರ್ಥವಲ್ಲ ಸಿಕ್ಕರೂ ಅದೊಂದು ರೀತಿಯಲ್ಲಿ ಅನುಕಂಪದ ನೆಲೆಯೊಳಗೆ ನೀಡಲಾಗಿದೆ. ಹೀಗೆ ತನಗೆ ಸಿಕ್ಕ ಅಧಿಕಾರ, ಅವಕಾಶಗಳೆಲ್ಲವೂ ಪ್ರಭುತ್ವಗಳ ಅಡಿಯಾಳಾಗಿ ಅವರ ಗುಲಾಮರಾಗಿಯೇ ಕಾರ್ಯನಿರ್ವಹಿಸುವುದು ಅಲಕ್ಷಿತರಿಗೆ ಸಿಕ್ಕ ಫಲವಾಗಿದೆ.

ಪರ್ಯಾಯ ಸಾಧ್ಯತೆಗಳನ್ನು ನಾವು ಮೇಲ್ ಹಂತದಿಂದ ಪರಿಭಾವಿಸದೆ ಅದನ್ನು ತಳಹಂತದಿಂಲೆ ಅಂದರೆ ತಳಸಮುದಾಯಗಳ ಅರಿವಿನ ನೆಲೆಯಲಿ ಪರಿಭಾವಿಸುವ ಅಗತ್ಯತೆಯನ್ನೇ ನಾವು ಪರ್ಯಾಯದಲ್ಲಿ ಕಾಣಬಹುದಾಗಿದೆ. ಈ ವರೆಗಿನ ರಾಜಕಾರಣ ಆಳುವ, ಪ್ರಭುತ್ವಗಳಡಿಯಲ್ಲಿಯೇ ಸಾಗಿ ಬಂದಿರುವುದರಿಂದ ಅಲಕ್ಷಿತರು ರಾಜಕಾರಣದಲ್ಲಿ ಸಮುದಾಯವಾರರಾಗಿ ತಮ್ಮ ಇರುವಿಕೆಯನ್ನು ತೋರಿಸುವ ಮೂಲಕ ರಾಜಕೀಯ ಸಬಲೀಕರಣ ಸಾಧಿಸಬೇಕಾಗಿದೆ. ಪ್ರಭುತ್ವ ನಡೆಸುವ ರಾಜಕಾರಣವು ತಾನಿರುವುದೇ ದಲಿತರ, ಮಹಿಳೆಯರ ಹಿಂದುಳಿದವರ

ಪರವಾಗಿ ಎಂಬುದು ಸಮರ್ಥಿಸಿಕೊಳ್ಳುತ್ತಲೇ ಅವರನ್ನು ಸದಾ ತುಳಿಯುತ್ತಲೆ ನಡೆಯುತ್ತಿರುತ್ತಿದೆ. ಆದ್ದರಿಂದಲೆ ಪರ್ಯಾಯ ಎಂಬುದು ತಳವರ್ಗಗಳ ಅಡಿಯಲ್ಲಿಯೇ ರಾಜಕೀಯಾಧಿಕಾರ ಕೇಂದ್ರಿಕೃತವಾಗಬೇಕಾಗಿದೆ. ಹಾಗಾದಾಗ ಮಾತ್ರ ಪರ್ಯಾಯ ಸಾಧ್ಯತೆ ಸಾಕಾರವಾಗಬಲ್ಲದು.

ಪರ್ಯಾಯ ಸಾಧ್ಯತೆ ಎಂದರೆ ಈಗಿರುವ ಸ್ಥಾಪಿತ ಪರಿಸ್ಥಿತಿಯಲ್ಲಿನ ಬದಲಾವಣೆ ತರುವ ಪ್ರಯತ್ನವಾಗಿದೆ. ಈ ಬಗೆಯ ಪ್ರಯತ್ನದಲ್ಲಿ ನೈಸರ್ಗಿಕವಾಗಿ ಅಲಕ್ಷಿತರಿಗೆ ಸಿಕ್ಕಿರುವ ಹಕ್ಕುಗಳನ್ನು ರಕ್ಷಿಸುವಂತಹ ಧ್ಯೆಯೋದ್ದೇಶಗಳು ಅಡಗಿರುತ್ತವೆ. ಅಂದರೆ ತಳಸಮುದಾಯಗಳ ಹಿತಸಾಧನೆಗೆ ಅವರಿಗೆ ಕೊಡಮಾಡಲ್ಪಟ್ಟಿರುವ ಹಕ್ಕುಗಳನ್ನು ಸೂಕ್ತ ಬದಲಾವಣೆಗಳೊಂದಿಗೆ ಸಮಾಜಮುಖಿಯಾಗಿ ಕಾರ್ಯನಿರ್ವಹಿಸುವಂತೆ ಮಾಡುವ ಚಿಂತನೆ ಇಲ್ಲಿ ಅಡಗಿದೆ. ಸ್ಥಾಪಿತ ಪ್ರಭುತ್ವಗಳು ಸಮಾಜದಲ್ಲಿನ ಎಲ್ಲಾ ಬಗೆಯ ಅಧಿಕಾರ, ಅವಕಾಶಗಳನ್ನು ತಾವೆ ಪಡೆದುಕೊಂಡು ಇತರರನ್ನು ಕಡೆಗಣಿಸಿವೆ. ಅಲ್ಲದೆ ಸಂವಿಧಾನ ಬದ್ಧವಾಗಿ, ಶಾಸನಾತ್ಮಕವಾಗಿ ದಲಿತ ಸಮುದಾಯಗಳಿಗೆ ಹಲವಾರು ಅಧಿಕಾರ ಅವಕಾಶಗಳು ಸಿಕ್ಕಿದ್ದರೂ ಅವುಗಳು ಕಾಗದದ ಮೇಲಷ್ಟೆ ಉಳಿದು ಅವರು ಮೇಲ್ವರ್ಗಗಳ ಅಧೀನದಲ್ಲಿ ಅವರ ಅಡಿಯಾಳಾಗಿ ತಮಗೆ ಸಿಕ್ಕಿರುವ ಅಧಿಕಾರವನ್ನು ಯಥಾವತ್ತಾಗಿ ಚಲಾಯಿಸದೆ ನಡೆಯುತ್ತಿದ್ದಾರೆ. ಇದರ ಹಿಂದೆ ಪಾರಂಪರಿಕವಾದ ಭಯವೂ ಇದೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಬದಲಾವಣೆಯೂ ಜಗದ ನಿಯಮವಾಗಿರುವುದರಿಂದ ತಳಸಮುದಾಯಗಳಿಗೆ ಸಿಕ್ಕಿರುವ ಹಕ್ಕುಗಳನ್ನು ರಕ್ಷಿಸುವ ಸಲುವಾಗಿ ಹಲವು ಮಾರ್ಗಗಳನ್ನು ಕಂಡುಕೊಳ್ಳುವ ಪರಿಕಲ್ಪನೆಯ ಪರ್ಯಾಯ ಸಾಧ್ಯತೆಯಾಗಿದೆ.

ಹೀಗೆ ಸಮಾಜದ ಅಂಚಿನಲ್ಲಿರುವ ದಲಿತ ಮಹಿಳಾ ಸಮುದಾಯದ ಅಭಿವೃದ್ಧಿ ಅವರ ಹಿಡಿತದಲ್ಲಿಯೆ ಕಾರ್ಯನಿರ್ವಹಿಸುವಂತಾಗಿ ಇಲ್ಲಿ ಅಲಕ್ಷಿತಳಾದ ಅವಳ ಪಾತ್ರವೆ ಪ್ರಮುಖವಾಗಬೇಕು. ಇಲ್ಲಿ ನಾವು ಯಾರನ್ನು ಸಮಾಜದ ಆಡಳಿತದಲ್ಲಿ ಸ್ವಾತಂತ್ರವಾಗಿ ಪಾಲ್ಗೊಳ್ಳುವಿಕೆ ಹಾಗೂ ನಿರ್ಣಯ ಕೈಗೊಳ್ಳುವಿಕೆಯೇ ಪರ್ಯಾಯ ಸಾಧ್ಯತೆಯಾಗಿದೆ. ರಾಜಕಾರಣ ಎಂದರೆ ಅದು ಕೇವಲ ಪ್ರತಿಷ್ಠಿತರ ಅಂಗಸಂಸ್ಥೆಯಾಗಿಯೇ ಕಾಣಿಸುತ್ತದೆ. ರಾಜಕಾರಣದಲ್ಲಿ ಪ್ರತಿಷ್ಠಿತರ ಹಿತಾಸಕ್ತಿ, ದೃಷ್ಟಿಕೋನಗಳೆ ಕಾರ್ಯನಿರ್ವಹಿಸುವುದರಿಂದ ಸ್ವಪ್ರತಿಷ್ಠೆಯನ್ನು ಬಿಟ್ಟು ದಲಿತರ, ನಿರ್ಲಕ್ಷಿತರ, ಮಹಿಳೆಯರ ಬಗ್ಗೆ ಉದಾರವಾದಿಗಳಾಗಿ ನಡೆದುಕೊಳ್ಳುತ್ತಿಲ್ಲ. ನಿರಂತರವಾಗಿ ಹಿಂದಿನ ಸಾಮಂತಶಾಹಿ ನೆಲೆಯಲ್ಲಿಯೇ ಅವರ ಆಚರಣೆ ನಡಾವಳಿಗಳು ಮುಂದುವರೆಯುತ್ತಿದೆ. ಹೀಗೆ ಪಟ್ಟಭದ್ರ ಹಿತಾಸಕ್ತಿಗಳು, ಪ್ರಭುತ್ವಗಳ ಪಾಲಾಗಿರುವ ರಾಜಕಾರಣದಲ್ಲಿ ಅಲಕ್ಷಿತ ಮಹಿಳೆಯ ಸಹಭಾಗಿತ್ವ ಹಾಗೂ ನಿರ್ಣಯ ತೆಗೆದುಕೊಳ್ಳುವಿಕೆಗಾಗಿ ಪರ್ಯಾಯ ಸಾಧ್ಯತೆಯನ್ನು ಎದುರು ನೋಡಲಾಗುತ್ತದೆ. ಪರ್ಯಾಯ ಸಾಧ್ಯತೆಯ ಅಂತಿಮ ಕಾಳಜಿಯೇ ಸಾಮಾಜಿಕ ನ್ಯಾಯದ ಪರಿಕಲ್ಪನೆಯಾಗಿದೆ. ಅದನ್ನು ಸಾಕಾರಗೊಳಿಸುವುದೆ ಆಗಿರುತ್ತದೆ. ಸಾಮಾಜಿಕ ನ್ಯಾಯ ಎಂಬ ಪ್ರಶ್ನೆಗೆ ಉತ್ತರ ಸುಲಭವೂ ಹೌದು. ಹಾಗೆಯೇ ಕಠಿಣವೂ ಹೌದು. ಅಲಸರದೈರವರ ಅಭಿಪ್ರಾಯದಲ್ಲಿ ಸಾಮಾಜಿಕ ನ್ಯಾಯ ಎಂಬುದು ಒಳಿತು, ನಿಷ್ಪಕ್ಷಪಾತ ಎಂಬ ಪಟ್ಟಿಕೆ ಸಮನಾಗಿದೆ. ಹಾಗಾದರೆ ಬೇರೆಯವರಿಗೆ ನ್ಯಾಯವನ್ನು ಸಲ್ಲಿಸುವುದು ಒಳಿತು ಮಾಡುವುದು. ಅವರವರಿಗೆ ತಕ್ಕಂತಹ ಸ್ಥಾನಮಾನವನ್ನು ನೀಡುವುದು. 'ಅರ್ಹತೆ' ಎಂಬುದು ನ್ಯಾಯದ ಪರಿಕಲ್ಪನೆಯ ಒಂದಂಶ. ಆದರೆ ಈ 'ಅರ್ಹತೆ' ತತ್ವ ಎಂಬುದು ಪರಂಪರೆಯಿಂದ

ಪರಂಪರೆಗೆ ಭಿನ್ನವಾಗುತ್ತದೆ." (ಉದ್ಧೃತ ಚಿನಸ್ವಾಮಿ ಸೋಸಲೆ, ೨೬೮, ೨೦೦೫) ಸಾಮಾಜಿಕ ನ್ಯಾಯದ ಪ್ರಮುಖ ಉದ್ದೇಶವೆ ಅಂಚಿನ, ನಿರ್ಲಕ್ಷಿತರನ್ನು ಪದತಲದಿಂದ ಮೇಲ್‌ಸ್ತರಕ್ಕೆ ತಂದು ಅವರ ಸ್ಥಿತಿಯನ್ನು ಉತ್ತಮಗೊಳಿಸುವುದಾಗಿದೆ.

ಯಾವುದೇ ಒಂದು ಕಾಲ ಮತ್ತು ದೇಶದ ವಾಸ್ತವಕ್ಕೆ ಸಂಬಂಧಿಸಿರುವ ಕೇವಲವಾದ ಸ್ವಾತಂತ್ರ್ಯ ಮಾರುಕಟ್ಟೆಯಲ್ಲಿ ಸಿಕ್ಕದು. ಸ್ವಾತಂತ್ರ್ಯ ಎಂಬುದು ಏನನ್ನಾದರೂ ಸೂಚಿಸಲಿ ಬಿಡಲಿ, ಹಲವರಲ್ಲಿ ಬೇಕಾದದ್ದನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರವನ್ನಂತೂ ನಿಶ್ಚಿತವಾಗಿಯೂ ಸೂಚಿಸುತ್ತದೆ. ಆಯ್ಕೆ ಎಂದರೆ ನಿಜವಾದ ಆಯ್ಕೆ, ನಾಮಮಾತ್ರವಾದದ್ದಲ್ಲ. ಅಂದರೆ ವಾಸ್ತವವಾಗಿಯೂ ಹಲವಾರು ವಸ್ತುಗಳು ಎದುರಿನಲ್ಲಿದ್ದು ಅವುಗಳಲ್ಲಿ ತನಗೆ ಆಯ್ಕೆ ಮಾಡಿಕೊಳ್ಳಬಹುದಾದ ನಿಜವಾದ ಅಧಿಕಾರ ಕಾಗದದಲ್ಲಷ್ಟೆ ಸಮೂದಿತವಾಗಿರುವ ಅಮೂರ್ತ ಅಧಿಕಾರದಲ್ಲಿ ಸ್ವಾತಂತ್ರ್ಯದ ಅರ್ಥ ಸಂಕ್ಷೇಪವಾಗಿ ನಿಶ್ಚಿತ ಸಂದರ್ಭದಲ್ಲಿ ನಿಶ್ಚಿತ ಕ್ಷಣದಲ್ಲಿ ನಿಶ್ಚಿತವಾದ ಯಾವುದೋ ಒಂದನ್ನು ಮಾಡಲು ಅಥವಾ ಮಾಡದೆ ಇರಲು ನಮಗೆ ಅಧಿಕಾರವಿರುವುದು. ಹಾಗಿಲ್ಲದಿದ್ದಲ್ಲಿ ಸ್ವಾತಂತ್ರ್ಯವೆಂಬುದಕ್ಕೆ ಅರ್ಥವೇ ಇಲ್ಲ. ಚಿಂತನೆ, ಸಂಕಲ್ಪ, ಕ್ರಿಯೆ ಇವುಗಳಿದ್ದಲ್ಲಿ ಮನುಷ್ಯ ಪೂರ್ಣ ಮನುಷ್ಯನಾಗುತ್ತಾನೆ ಎಂದೆನಿಸುತ್ತದೆ. ಹಾಗೆಂದು ಕವಿಗಳು ಲೇಖಿಸುವ ಚಿತ್ರರೇಖೆಗಳು ಮೋಹವನ್ನೀಸುತ್ತವೆ. ಅದೇನೆ ಇರಲಿ, ಕಾವ್ಯ ಬಿಟ್ಟು ದಿನನಿತ್ಯದ ಬದುಕಿನ ಗದ್ಯದಲ್ಲಿ ಸ್ವಾತಂತ್ರ್ಯ ಎನ್ನುವುದು ಬದುಕಿನ ಒಂದು ಅಂಗ ವಾಸ್ತವವಾದದ್ದು ಮತ್ತು ಕ್ರಿಯಾರೂಪವುಳ್ಳದ್ದು, ಪ್ರತಿಯೊಬ್ಬ ವ್ಯಕ್ತಿಗೂ ಕೆಲವು ನಿಶ್ಚಿತ ಅಗತ್ಯಗಳಿವೆ. ಒಬ್ಬ ವ್ಯಕ್ತಿಯ ಸ್ವಾತಂತ್ರ್ಯ ಎಂಬುದು ನಿಸರ್ಗದ ಮಿತಿಯಲ್ಲಿ ಮತ್ತು ತನ್ನ ಹಾಗೆ ಬದುಕುವ ಇತರ ಸಹವಾಸಿಗಳಿಗೂ ಇಂತಹ ಫಲಾನುಭವ ಸಿಗಬೇಕಾಗುವ ಮಿತಿಯಲ್ಲಿ ತನ್ನ ಭೌತಿಕ ಮತ್ತು ಭೌತಿಕೇತರ ಅಗತ್ಯಗಳನ್ನು ಪೂರೈಸಿಕೊಳ್ಳಲಿಕ್ಕೆ ಸಿಗುವ ಅಧಿಕಾರ ಎಂದು ಡಾ.ಬಿ.ಆರ್.ಅಂಬೇಡ್ಕರ್‌ರು ವಿಶ್ಲೇಷಿಸುತ್ತಾರೆ." ಸಾಮಾಜಿಕ ನ್ಯಾಯವನ್ನು ಬಿಟ್ಟು ಸಾಮಾಜಿಕ ಉನ್ನತಿ ಸಾಧ್ಯವೆ ಇಲ್ಲ. ಹಾಗೊಂದು ವೇಳೆ ಇದ್ದರೆ ಅದು ಕೇವಲ ಉಳ್ಳವರ, ಪ್ರತಿಷ್ಠಿತರ ಪ್ರಗತಿಯೆ ಹೊರತು ಮತ್ತೇನು ಅಲ್ಲ." ಆದ್ದರಿಂದಲೆ ಸಾಮಾಜಿಕ ನ್ಯಾಯದ ಸಾಕಾರದ ಸಲುವಾಗಿ ಪರ್ಯಾಯ ಸಾಧ್ಯತೆಯ ಅವಶ್ಯಕತೆ ಹೆಚ್ಚಾಗಿದೆ.

ದಲಿತ ಮಹಿಳಾ ರಾಜಕೀಯ ತಾತ್ವಿಕತೆಯಲ್ಲಿ ಪರ್ಯಾಯ ಸಾಧ್ಯತೆಗಳ ಅಗತ್ಯ, ಅನಿವಾರ್ಯತೆ ತುಂಬ ಅವಶ್ಯಕವಿದೆ. ಸಂವಿಧಾನಿಕ, ಕಾನೂನಾತ್ಮಕ ಅಧಿಕಾರ ಬೆಂಬಲ ಹಕ್ಕುಗಳಿದ್ದರೂ ಜಮೀನ್ದಾರಿಶಾಹಿ, ಊಳಿಗಮಾನ್ಯಶಾಹಿ, ಬಂಡವಾಳಶಾಹಿಯಂತಹ ಸಾಮಾಜಿಕ ನಿಯಂತ್ರಕ ಶಕ್ತಿಗಳ ನಡುವೆ ದಲಿತ ಮಹಿಳೆಗೆ ಸಿಕ್ಕಿರುವ ರಾಜಕೀಯ ಪ್ರತಿನಿಧೀಕರಣದಲ್ಲಿ ಮತ್ತು ಹಲವು ಬಗೆಯ ಗೊಂದಲಗಳು, ಇಕ್ಕಟ್ಟುಗಳು, ಸಮಸ್ಯೆಗಳು ಇವೆ. (ಇದನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.) ಆದರಿಂದಲೆ ದಲಿತ ಮಹಿಳಾ ರಾಜಕೀಯ ಅಸ್ತಿತ್ವ, ಅನನ್ಯತೆ, ಸೃಜನಶೀಲತೆಗಳನ್ನು ಉಳಿಸಲು ಪರ್ಯಾಯ ಸಾಧ್ಯತೆಗಳು ಅಗತ್ಯತೆ ಇದೆ. ಪರ್ಯಾಯವನ್ನು ಸಾಧಿಸಲು ಕೇವಲ ಸರಕಾರದಿಂದ ಮಾತ್ರ ಸಾಧ್ಯವಿಲ್ಲ. ಆದ್ದರಿಂದ ಸಾಮಾಜಿಕ ಮನಸ್ಥಿತಿ ಬದಲಾಗುವ ಅವಶ್ಯಕತೆಯೂ ಇದೆ. ರಾಜಕೀಯ ಎಂಬುದು ಒಂದು ಮಹಾಸಾಗರ ಅದರಲ್ಲಿ ಈಜಲು ದಲಿತ ಮಹಿಳೆಗೆ ಸಾಧ್ಯವಾಗುತ್ತಿಲ್ಲ. ಪರ್ಯಾಯ ಸಾಧ್ಯತೆಗಳು ಅವಶ್ಯಕತೆಗಾಗಿ.

* ಪರ್ಯಾಯ ಸಾಧ್ಯತೆಗಳಲ್ಲಿ ಮೊದಲಿಗೆ ದಲಿತ ಮಹಿಳೆಯರು ಒಗ್ಗೂಡಿ ತಮ್ಮ ಅಸ್ತಿತ್ವ, ಅನನ್ಯತೆ, ಉಳಿಸಿಕೊಳ್ಳಲು [illegible] ಸಂವಿಧಾನಾತ್ಮಕ ಶಕ್ತಿಯಾಗಿ ಒಂದುಗೂಡುವುದು. ಆ ಮೂಲಕ ಅವಳು ರಾಜಕೀಯ ಎಚ್ಚರವನ್ನು ಪಡೆದು ಒತ್ತಡದ ಗುಂಪಾಗಿ ಮಾರ್ಪಾಡಾಗುವುದು ಅಗತ್ಯವಾಗಿದೆ.
* ಜನಸಂಖ್ಯೆಯ ಸರಿಸುಮಾರು ಅರ್ಧದಷ್ಟಿರುವ ಮಹಿಳಾ ಸಮುದಾಯಕ್ಕೆ ಈ ಬಗೆಯ ರಾಜಕೀಯ ಎಚ್ಚರದ ಅಗತ್ಯತೆ ಇದೆ. ಅದಕ್ಕಾಗಿ ಅವಳಿಗೆ ಒಂದು ಅರಿವಿನ ಯೋಜನೆಯನ್ನು ರೂಪಿಸಿ ಆ ಮೂಲಕ ಅವಳಿಗೆ ತಿಳುವಳಿಕೆಯನ್ನು ನೀಡುವುದು. ಈಗಾಗಲೆ ಇರುವಂತ ಮಹಿಳಾ ಸಬಲೀಕರಣ, ಮಹಿಳಾ ಅಭಿವೃದ್ಧಿ, ಮಹಿಳಾ ಸ್ತ್ರೀ ಶಕ್ತಿ ಸಂವಿಧಾನಗಳು, ಸರಕಾರೇತರ ಸಂಸ್ಥೆಗಳು, ಸರಕಾರಿ ಕಾರ್ಯಕ್ರಮಗಳು ಕೆಲವು ಸರಕಾರಿ ಚಿಂತನೆಗಳು ಕೇವಲ ನೀಲಿನಕ್ಷೆಯ ಮಾದರಿಯಲ್ಲಿದ್ದು ಅವು ಕಾಗದದಡಿಯಲ್ಲಿಯೇ ಮಹಿಳಾ ಅಭಿವೃದ್ಧಿಯನ್ನು ಕಾಣುತ್ತಿವೆ. ಇದು ವಾಸ್ತವವಲ್ಲ. ವಿಕೇಂದ್ರಿಕರಣದಂತೆಯೇ ಮಹಿಳಾ ರಾಜಕೀಯ ವಿಕೇಂದ್ರಿಕರಣ ತಳಮಟ್ಟದಿಂದಲೆ ಜಾಗೃತಿಯನ್ನು ಪಡೆಯಬೇಕಾಗಿದೆ.
* ಸರಕಾರಿ ಯೋಜನೆಗಳು ಸಾಕಾರಕ್ಕೆ ಉತ್ತಮ ಫಲಿತಾಂಶಕ್ಕಾಗಿ ಅಭಿವೃದ್ಧಿಯ ಹರಿಕಾರಳಾಗಿ ಮಹಿಳೆಯನ್ನು ಒಳಗೊಂಡು ಅವಳ ಸಲಹೆ ಸೂಚನೆಗಳ ಮೇರೆಗೆ ಅಭಿವೃದ್ಧಿಯನ್ನು ನೋಡಬೇಕು. ಅಭಿವೃದ್ಧಿಯ ಕಾರ್ಯಗಳಿಗೆ ಸಂಬಂದಿಸಿದಂತೆ ಮತ್ತು ಚುನಾವಣೆಗೆ ನಿಲ್ಲುವಿಕೆಯಲ್ಲಿ ಅವಳ ಸ್ವಂತ ನಿರ್ಣವನ್ನೇ ಮಾನದಂಡವನ್ನಾಗಿಸಿಕೊಳ್ಳಬೇಕು. ಸಮಾಜದಲ್ಲಿನ ಸ್ಥಾಪಿತ ಶಕ್ತಿಗಳನ್ನು ದೂರವಿಟ್ಟು ಅವಳ ಜೊತೆ ವ್ಯವಹರಿಸುವ ಸನಾತನ ಮಾದರಿಯನ್ನು ಅಳಿಸಿಹಾಕಬೇಕು.
* ಸಾಮಾಜಿಕ ನ್ಯಾಯ ಸಫಲಕಾರಿಯಾಗಲು ಸ್ವಂತ ನಿರ್ಧಾರ, ಇಚ್ಛೆ, ಅಭಿಲಾಷೆಗಳಿಗೆ ಮನ್ನಣೆಸಿಕ್ಕು ಸ್ವನಿರ್ಧಾರಕ್ಕೆ ಬರಬೇಕು. ತನ್ನ ಮೇಲೆ ಪ್ರಭುತ್ವಗಳ ಹಿಡಿತ ತಪ್ಪಬೇಕು. ಸಮುದಾಯಗಳ ಏಳಿಗೆಗಾಗಿ, ಸಮುದಾಯದ ಆಗುತೆಯ ನೆಲೆಯಿಂದ ಅವಳು ವ್ಯವಹರಿಸುವಂತಾಗಬೇಕು. ಹಾಗಾದಲ್ಲಿ ಮಾತ್ರ ಸಾಮಾಜಿಕ ನ್ಯಾಯದಿಂದ ವಂಚಿತವಾದವರಿಗೆ ಅದು ದಕ್ಕಬಲ್ಲದು.
* ನಿಜವಾದ ದಲಿತ ಮಹಿಳಾ ರಾಜಕಾರಣ ಸಾಕಾರಿಯಾಗಬೇಕಾದರೆ ಸಮಾಜ ನಿಯಂತ್ರಿತ ಶಕ್ತಿಗಳು ಇವಳಿಂದ ಏನನ್ನು ಕಸಿದುಕೊಂಡಿದೆಯೊ ಅವುಗಳನ್ನೆಲ್ಲ ಮರಳಿ ಪಡೆಯುವಂತಾಗಬೇಕು. ಅಲ್ಲದೆ ಪ್ರಭುತ್ವ ಹೊಂದಿರುವ ಎಲ್ಲಾ ಬಗೆಯ ಅಧಿಕಾರ, ಸೌಲತ್ತು, ಸ್ಥಾನಮಾನ, ಗೌರವ ಇವಳಿಗೂ ಸಿಗುವಂತಾಗಬೇಕು.
* ಲಿಂಗ ಮತ್ತು ಜಾತಿಯ ಹಿನ್ನೆಲೆಯಿಂದಲೆ ಇವಳಿಗೆ ರಾಜಕಾರಣದಲ್ಲಿ ಹಿನ್ನಡೆ ಉಂಟಾಗಿದೆ. ಅವಳ ರಾಜಕೀಯ ಮುನ್ನಡೆಗೆ ಅಡ್ಡಿಯಾಗಿರುವ ಕೈ ಯಾವುದೋ ಮೊದಲು ಅದನ್ನು ನಿವಾರಿಸಬೇಕು. ಹಾಗೆಯೇ ಅವಳ ಹಕ್ಕನ್ನು ರಕ್ಷಿಸಲು ವಿಶೇಷವಾದ ಕಾನೂನಿನ ಅಂಶಗಳ ಜೊತೆಗೆ ಸಮಾನತೆಯ ನೆಲೆಯಲ್ಲಿ ಸಮಾಜದಲ್ಲಿಯೂ ಅವಳ ಬಗ್ಗೆ ಗೌರವ, ಭ್ರಾತೃತ್ವದ ಕಾಳಜಿ ಬಂದಾಗ ಪಿತೃಪ್ರಧಾನ ಮೌಲ್ಯಾಚರಣೆಗಳ ಜೊತೆಗೆ ಸಾಮಾಜಿಕ ಸಂಬಂಧಗಳು, ವಿರೋಧಗಳು ನಿವಾರಣೆಯಾಗಬಲ್ಲವು. ಇದಕ್ಕಾಗಿ ಮೊದಲು ಸಾಮಾಜಿಕ ಬದಲಾವಣೆಯ ಅಗತ್ಯತೆ ಇದೆ.

* ಮೇಲ್ವರ್ಗಗಳಿಗೆ ಸಿಕ್ಕಿರುವ ರಾಜಕೀಯ ಅಸ್ತಿತ್ವಗಳು ದಲಿತ ಮಹಿಳೆಗೂ ಸಿಕ್ಕರೂ ಅವು ತೋರಿಕೆಯಲ್ಲಿವೆ. ಆದರೆ ಆಚರಣೆಯ ಅಧಿಕಾರದ ಮಟ್ಟದಲ್ಲಿ, ಅನುಭವಿಸುವಿಕೆಯಲ್ಲಿ ದಲಿತ ಮಹಿಳೆ ಇನ್ನು ಸಿಕ್ಕಿಲ್ಲ ಇದು ಮೊದಲು ಬದಲಾಗಬೇಕು.
* ಕೆಲವು ಸಾಮಾಜಿಕ ನೆಲೆಯೊಳಗೆ ಅಧಿಕಾರ ಸಿಕ್ಕರೆ ಸಾಕಾಗುವುದಿಲ್ಲ. ಹಿಂದಿನಿಂದಲೂ ನಿರಂತರವಾಗಿ ಅವಳ ಮೇಲೆ ಧಾಳಿ ಮಾಡುತ್ತಲೆ ಬಂದಿರುವ ಪಿತೃಪ್ರಧಾನ ಮೌಲ್ಯಾಚರಣೆಗಳು ಬದಲಾಗಬೇಕು. ಅವಳ ಅಧಿಕಾರ ಚಲಾವಣೆಯಲ್ಲಿ ಪಿತೃಪ್ರಧಾನ ಮೌಲ್ಯಗಳ ಹಿಡಿತ ಹಾಳಾಗಿರುವುದರಿಂದ ಇದು ಸಹ ನಿವಾರಣೆಯಾಗಬೇಕು.
* ಒಂದು ವೇಳೆ ದಲಿತ ಮಹಿಳೆಗೆ ಸಿಕ್ಕಿರುವ ಈ ಬಗೆಯ ರಾಜಕೀಯಾಧಿಕಾರದಲ್ಲಿನ ತಾರತಮ್ಯ ಇತರ ಹಿಂದುಳಿದ (ಮುಸ್ಲಿಂ. ಕ್ರೈಸ್ತ, ಸಿಖ್,) ಸಮುದಾಯಗಳಿಗೆ ಆಗಿದ್ದರೆ ಪರಿಸ್ಥಿತಿ ಹೀಗೆ ಮುಂದುವರೆಯುತ್ತಿತ್ತೆ, ಇಲ್ಲಿ ಓಟಿನ ರಾಜಕೀಕರಣವು ಅದನ್ನು ಬೇಗನೆ ನಿವಾರಿಸುತ್ತಿತ್ತು, ದಲಿತರ ಜನಸಂಖ್ಯೆ ಏನು ಕಡಿಮೆ ಇಲ್ಲ. ಆದರೂ ರಾಜಕೀಯ ಪಕ್ಷಗಳಲ್ಲಿನ ಇಚ್ಛಾಶಕ್ತಿಯ ಕೊರತೆಯಿಂದ ಇದು ಕಾರ್ಯರೂಪಕ್ಕೆ ಬಂದಿಲ್ಲ ಆದ್ದರಿಂದ ರಾಜಕೀಯ ಪಕ್ಷಗಳು, ಸರಕಾರೇತರ ಸಂಸ್ಥೆಗಳು ಈ ದಿಶೆಯಲ್ಲಿ ಪ್ರಯತ್ನಿಸುವ ಅನಿವಾರ್ಯತೆ ಇದೆ.
* ದಲಿತ ಮಹಿಳಾ ಚುನಾವಣೆಯಲ್ಲಿ ವಿಶೇಷವಾದ ಮಾರ್ಪಾಡಾಗಬೇಕು. ಅವಳ ತೀರ್ಮಾನವೆ ಅಂತಿಮವಾಗಿ ಮೇಲ್ವರ್ಗಗಳ ಹಿಡಿತ ತಪ್ಪಿಸಬೇಕು.

**ಟಿಪ್ಪಣಿಗಳು**

೧. ಪ್ರಸಾದ್. ಆರ್.ಎನ್., ೨೦೦೭, ಪುಟ: ೫೮
೨. ಅದೇ, ಪುಟ: ೫೯
೩. ಚಂದ್ರಶೇಖರ್.ಟಿ.ಆರ್, ೨೦೦೬, ಪುಟ: ೩೯
೪. ಚಂದ್ರಶೇಖರ್.ಟಿ.ಆರ್, ೨೦೦೬, ಪುಟ: ೪೧
೫. ಅದೇ, ೧೩೯, ಪುಟ:
೬. ಮಹೇಶ್.ಸಿ.ಕೆ, ೨೦೦೨. ಪುಟ:
೭. ಭೈರಪ್ಪ.ಕೆ, ೨೦೦೨, ಪುಟ: ೧೨೯
೮. ಅದೇ, ೨೦೦೨, ಪುಟ: ೧೮೨
೯. ಭೈರಪ್ಪ.ಕೆ, ೨೦೦೪, ಪುಟ: ೧೭
೧೦. ಹೇಮಲತ.ಹೆಚ್.ಎಂ, ೨೦೦೪, ಪುಟ: ೮೮
೧೧. ಮಹೇಶ್.ಸಿ.ಕೆ, ೨೦೦೨, ಪುಟ: ೪೦
೧೨. ಇಂದಿರಾ ಆರ್, ೨೦೦೨, ಪುಟ: ೪೭
೧೩. ಮಲ್ಲೇಪುರಂ ಜಿ.ವೆಂಕಟೇಶ, ೨೦೦೫ ಪುಟ: ೬೦

## ಅಧ್ಯಾಯ-ಐದು

## ಸಮಾರೋಪ

೧. ಅಧ್ಯಾಯಗಳ ಸಮೀಕ್ಷೆ

೨. ಅಧ್ಯಯನದ ಫಲಿತಗಳು

೩. ಅಧ್ಯಯನದ ಮುಂದಿನ ಸಾಧ್ಯತೆಗಳು

೪. ಅಧ್ಯಯನದ ಮಿತಿಗಳು

## ಅಧ್ಯಾಯ-ಐದು

## ಸಮಾರೋಪ

ದಲಿತ ಮಹಿಳೆ ಎಂಬ ಅಮೂರ್ತ ವ್ಯಕ್ತಿಯ ರಾಜಕೀಯ ಬದುಕಿನ ಕುರಿತಾದ ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಗ್ರಹಿಕೆ, ದೃಷ್ಟಿಕೋನದ ಸ್ಥಿತಿಗತಿಯನ್ನು ಅರಿಯುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದು, ರಾಜಕೀಯ ಎಂಬ ಪವರ್ ಸ್ಟ್ರಕ್ಚರ್‌ಗಳಲ್ಲಿ ದಲಿತ ಮಹಿಳೆಗೆ ಸಿಕ್ಕಿರುವ ಸ್ಥಾನಮಾನ ಅದರಿಂದ ಅವಳಿಗೆ ಆಗಿರುವ ಅನುಕೂಲ ಹಾಗೂ ಅನಾನುಕೂಲಗಳನ್ನು ಕುರಿತಂತೆ ವಿಶ್ಲೇಷಣೆಯನ್ನು ಅಧ್ಯಯನದುದ್ದಕ್ಕೂ ಸಾದರಪಡಿಲಾಗಿದೆ. ಪಂಚಾಯಿತಿಯಲ್ಲಿ ದಲಿತ ಮಹಿಳಾ ಪ್ರತಿನಿಧೀಕರಣದ ಸ್ವರೂಪವು ಮುಖ್ಯವಾಗಿ ಸ್ತ್ರೀವಾದಿ ಚಿಂತನೆ ಮತ್ತು ದೃಷ್ಟಿಕೋನಗಳನ್ನು ಆಧರಿಸಿರುವಂತಹದ್ದಾಗಿದೆ. ಸಾಮಾಜಿಕ ಜೀವನದಲ್ಲಿಯೇ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವ ದಲಿತ ಮಹಿಳೆಗೆ ನೀಡಲಾಗಿರುವ ಮೀಸಲಾತಿಯನ್ನು ಮೇಲ್ವರ್ಗಗಳು ತಮ್ಮ ಉಳಿವಿಗಾಗಿ, ರಾಜಕೀಯ ಮುನ್ನಡೆಗಾಗಿ, ಸ್ವಹಿತಾಸಕ್ತಿ ಕಾಪಾಡುವ ಸಲುವಾಗಿ ಬಳಸಿಕೊಳ್ಳುತ್ತಿವೆ. ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವ ದಲಿತ ಮಹಿಳೆಗೆ ಒಲವಿಲ್ಲದಿದ್ದರೂ ಬಲವಂತದಿಂದ ರಾಜಕೀಯಕ್ಕೆ ಎಳೆದು ತರುತ್ತಿದ್ದಾರೆ. ಅವಳ ರಾಜಕೀಯ ಪ್ರವೇಶವು ಸಹ ಅಂಜಿಕೆ, ಭಯ, ಆತಂಕಗಳಿಂದಲೇ ಕೂಡಿರುತ್ತದೆ.

ದಲಿತ ಮಹಿಳಾ ಪ್ರತಿನಿಧೀಕರಣ Power structure ಗಳಲ್ಲಿ ಅವಳು ಸ್ಥಾನವನ್ನು ಮಾತ್ರವೆ ಅಲಂಕರಿಸಿದ್ದರೂ ವಾಸ್ತವವಾಗಿ ಅದನ್ನು ಚಲಾಯಿಸುವಿಕೆಯಲ್ಲಿ ಗೊಂದಲದಲ್ಲಿದ್ದಾಳೆ. ತನಗೆ ಸಿಕ್ಕಿರುವ ಅಧಿಕಾರವನ್ನೆಲ್ಲ ಅವಳು ಸ್ಥಾಪಿತ ಪ್ರಭುತ್ವಗಳಿಗೆ ಕೊಟ್ಟು ಅಧಿಕಾರ ಹೀನತೆಯನ್ನು ಅನುಭವಿಸುತ್ತಿದ್ದಾಳೆ. ಇದರಿಂದಾಗಿ ಪಂಚಾಯಿತಿಯಲ್ಲಿನ ಅವಳ ಪ್ರತಿನಿಧೀಕರಣದ ಸ್ವರೂಪವು ಕೇವಲ ತೋರಿಕೆಯ ಸಾಂಕೇತಿಕ ಹಾಗೂ ಅಲಂಕಾರಿಕನೆಲೆಯಲ್ಲಿ ಅನಾವರಣವಾಗುತ್ತಿದೆ. ಸಮಾಜದಲ್ಲಿ ದಲಿತ ಮಹಿಳಾ ಸ್ಥಿತಿಯನ್ನು ಅರಿಯಲು ಆ ಕ್ಷೇತ್ರದಲ್ಲಿನ ಒಟ್ಟು ದಲಿತ ಮಹಿಳಾ ಸ್ಥಿತಿಯನ್ನು ಅರಿಯುವುದು ಹಾಗು ಜನ ದಲಿತ ಮಹಿಳೆಯರ ಸ್ಥಿತಿ ಅರಿಯುವುದು ಗುಣಾತ್ಮಕ ವಿಧಾನದಲ್ಲಿ ಅವಳ ಪಾತ್ರ ಅರಿಯುವಿಕೆಯಲ್ಲಿ ಅದು ಮಹತ್ವವಾದ ಅಂಶವಾಗಿದೆ. ಸಮಾಜದ ಪ್ರತಿಯೊಂದು ರಂಗಗಳಲ್ಲಿ ಮಹಿ

ಆವರಿಸಿ ಕೊಂಡಿರುವ ಕೆಲವು ಸಾಮಾನ್ಯಕರಿಸಿದ ಸಂಗತಿಗಳು, ಚಿಂತನೆಗಳು ವಾಸ್ತವವಾಗಿ ಇಂದಿಗೂ ನಮ್ಮನ್ನು ಆಳುತ್ತಿವೆ ಎಂದರೆ ತಪ್ಪಾಗಲಾರದು. ಹೀಗಿರುವುದರಿಂದಲೇ ದಲಿತ ಮಹಿಳಾ ರಾಜಕೀಯ ಸ್ಥಿತಿ-ಗತಿಗಳು ಅತಂತ್ರವಾಗಿ ರೂಪುಗೊಂಡಿದೆ.

ಸ್ವಾತಂತ್ರ್ಯನಂತರ ಭಾರತದಲ್ಲಿ ಕಂಡುಬಂದ ಉದಾರೀಕರಣ, ನಗರೀಕರಣ ಹಾಗೂ ಜಾಗತೀಕರಣದಂತಹ ಚಿಂತನೆಗಳಿಂದ ಇಡೀ ಭಾರತೀಯರ ಸಾಮಾಜಿಕ ಬದುಕಿನಲ್ಲಿ ಹಲವಾರು ಬದಲಾವಣೆಗಳಾಗಿವೆ. ಆದರೆ ದಲಿತರ ಸ್ಥಿತಿಯಲ್ಲಿ ಮಾತ್ರ ಯಥಾಸ್ಥಿತಿಯ ಸಾಂಪ್ರದಾಯಿಕ ಚಿಂತನೆಗಳೇ ಮುಂದುವರೆದಿವೆ. ದಲಿತ ಮಹಿಳೆಯ ಸ್ಥಿತಿಯನ್ನು ಸುಧಾರಿಸಿ ಅವಳಿಗೆ ಸಾಮಾಜಿಕ ಚಹರೆ ನೀಡುವ ಮಹತ್ತರವಾದ ಮೀಸಲಾತಿಯು ಆಳುವ ವರ್ಗಗಳಡಿಯಲ್ಲಿ ಸಿಕ್ಕು ನಲುಗಿಹೋಗಿದೆ. ದಲಿತ ಮಹಿಳಾ ರಾಜಕೀಯ ಪ್ರತಿನಿಧೀಕರಣದ ಚಿಂತನೆ ಅವಳನ್ನು ಸಬಲಳನ್ನಾಗಿಸುವ ಬದಲಿಗೆ ಇನ್ನಷ್ಟು ಶೋಷಣೆಗೆ ಒಳಮಾಡುತ್ತಿದೆ. ರಾಜಕೀಯ ಎಂಬುದು ಬಂಡವಾಳಶಾಹಿ, ಜಮೀನ್ದಾರಿಶಾಹಿ, ಊಳಿಗಮಾನ್ಯಶಾಹಿಗಳಂತಹ ಪ್ರಭುತ್ವಗಳ ಹಿಡಿತದಲ್ಲಿರುವುದರಿಂದ ದಲಿತ ಮಹಿಳೆಗೆ ಅಲ್ಲಿ ಅಸ್ತಿತ್ವ ಇಲ್ಲದಂತಾಗಿದೆ. ಸಾಮಾಜಿಕ ನೆಲೆಯಲ್ಲಿ ಅತ್ಯಂತ ದುರ್ಬಲಳಾದ ಇವಳಿಗೆ ಯಾವುದೇ ಕಾರ್ಯನಿರ್ವಹಿಸಲು ಸಾಧ್ಯವಾಗದೆ ಇಂತಹ ಪ್ರಭುತ್ವಗಳಿಗೆ ತಲೆಬಾಗಿ ನಡೆಯುವಂತಾಗಿದೆ.

**೧. ಅಧ್ಯಾಯಗಳ ಸಮೀಕ್ಷೆ**

ಪ್ರಸ್ತುತ ಅಧ್ಯಯನವು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ದಲಿತ ಮಹಿಳಾ ರಾಜಕೀಯ ಸ್ಥಿತಿಯನ್ನು ಅರಿಯುವ ಹಿನ್ನೆಲೆಯಲ್ಲಿ ಸಮರ್ಪಕವಾದ ಗ್ರಹಿಕೆಗಳನ್ನು ಒಳಗೊಂಡಿದೆ. ದಲಿತ ಮಹಿಳೆಯ ಅನುಭವದ ನೆಲೆಯಲ್ಲಿ ಈ ಅಧ್ಯಯನ ವಿಸ್ತರಣೆಗೊಂಡಿದೆ. ಸಾಮಾಜಿಕ ಶ್ರೇಣಿಗಳಿಂದ ಕೂಡಿರುವ ಭಾರತೀಯ ಸಾಂಪ್ರದಾಯಿಕ ಜೀವನದಲ್ಲಿ ಶೋಷಿತ ಸಮುದಾಯದ ಮಹಿಳೆಯನ್ನು ಕುರಿತಂತೆ ಅಧ್ಯಯನಗಳು ಇನ್ನಷ್ಟು ಹೆಚ್ಚಾಗಿನಡೆಯಬೇಕಿದೆ. ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಕ್ಲಿಷ್ಟಕರವಾದ ಶೋಷಣೆಯನ್ನು ದಲಿತ ಮಹಿಳೆ ಅನುಭವಿಸುತ್ತಿದ್ದಾಳೆ. ದಲಿತ ಮಹಿಳೆಯ ಕುರಿತಂತೆ ಅವಳ ತೊಳಲಾಟ, ಬದುಕಿನ ವಾಸ್ತವ ಚಿತ್ರಣವನ್ನು ಸಮರ್ಪಕವಾಗಿ ಪ್ರತಿಬಿಂಬಿಸುವ ಕಾರ್ಯ ಪ್ರಸ್ತುತ ಅಧ್ಯಯನದಲ್ಲಿ ಅಭಿವ್ಯಕ್ತಿಸಲಾಗಿದೆ. ಒಟ್ಟಾರೆಯಾಗಿ ಇಲ್ಲಿ ಐದು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ, ಅಧ್ಯಯನದ ಚೌಕಟ್ಟು ಹಾಗೂ ಈ ಕ್ಷೇತ್ರದಲ್ಲಿ ಈವರೆಗೆ ನಡೆದ ಅಧ್ಯಯನಗಳ ಕುರಿತಾದ ವಿವರಣೆಯನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ಮೂಲ ಪರಿಕಲ್ಪನೆಗಳನ್ನು ಸ್ತ್ರೀವಾದಿ ಚಿಂತನೆ ಹಾಗೂ ಮಹಿಳಾ ಅಧ್ಯಯನದ ದೃಷ್ಟಿಕೋನಗಳ ಅಡಿಯಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಪ್ರಜಾಪ್ರಭುತ್ವದ ಅರ್ಥವಿವರಣೆಯೊಂದಿಗೆ ಅದರ ಮಹತ್ವ ಮತ್ತು ದುರುಪಯೋಗಗಳನ್ನು ಕುರಿತಾದ ಮಾಹಿತಿ ಇದೆ. ಪಂಚಾಯತ್‌ರಾಜ್ ಸಂಸ್ಥೆಯ ಐತಿಹಾಸಿಕ ವಿವರಣೆಯೊಂದಿಗೆ ಅದರ ನಿರಂತರ ಬದಲಾವಣೆಯ ವಿವಿಧ ಮಜಲುಗಳನ್ನು ಸವಿಸ್ತಾರವಾಗಿ ಚರ್ಚಿಸಲಾಗಿದೆ. ದಲಿತ ಮಹಿಳೆಯ ಕುರಿತಾದ ಸಾಮಾಜಿಕ ಗ್ರಹಿಕೆಗಳು ಹಾಗೂ ಅವಳ ಮೇಲಿನ ದಮನ, ದಬ್ಬಾಳಿಕೆ, ಪಕ್ಷಪಾತನೀತಿಗಳ ಹಿಡಿತವನ್ನು ಸ್ಥೂಲವಾಗಿ ವಿವರಿಸಲಾಗಿದೆ. ಒಂದು

ಅಮೂರ್ತ ನೆಲೆಯಲ್ಲಿ ದಲಿತ ಮಹಿಳಾ ಸ್ಥಿತಿಗತಿಯನ್ನು ಯೋಜಿತವಾಗಿ ಪರಾಮರ್ಶನಾ ಮಾಡಲಾಗಿದೆ. ಅಂಬೇಡ್ಕರರ ಆಶಯದಲ್ಲಿ ಚಿಗುರೊಡೆದ ಮೀಸಲಾತಿಯ ಕಲ್ಪನೆಯನ್ನು ವಿಸ್ತರಿಸಿ, ಅದನ್ನು ಮಹಿಳಾ ಮೀಸಲಾತಿಯೊಂದಿಗೆ ಸಂವಾದಿಯಾಗಿ ನೋಡಲಾಗಿದೆ. ಅಲ್ಲದೆ ಮಹಿಳಾ ಮೀಸಲಾತಿಯ ಕುರಿತಾದ ಹತ್ತು ಹಲವು ಬಗೆಯ ಮಾಹಿತಿಗಳನ್ನು ಕಲೆಹಾಕಲಾಗಿದೆ. ಈ ಎಲ್ಲಾ ಚಿಂತನೆಗಳ ಹಿನ್ನೆಲೆಯಲ್ಲಿ ವರ್ತಮಾನದ ರಾಜಕೀಯವನ್ನು ಕುರಿತು ಚರ್ಚಿಸುವುದರೊಂದಿಗೆ ಪರ್ಯಾಯ ರಾಜಕಾರಣದ ಅವಶ್ಯಕತೆಯನ್ನು ನೀಡಲಾಗಿದೆ. ಇಂದು ಸಾಮಾಜಿಕ ಜೀವನದಲ್ಲಿ ದಲಿತರು ಮುಖ್ಯವಾಗಿ ಎದುರಿಸುತ್ತಿರುವ ಸಮಸ್ಯೆಗಳನ್ನು ಸಾಮಾನ್ಯಿಕರಿಸಿದ ಸಂಗತಿಗಳೊಂದಿಗೆ ಇದನ್ನು ತುಲನೆ ಮಾಡಿ ಪರ್ಯಾಯ ವ್ಯವಸ್ಥೆಯ ಬಗ್ಗೆ ವಿವರಿಸಲಾಗಿದೆ. ದಲಿತರಿಗೆ ಸಾಮಾಜಿಕ, ಆರ್ಥಿಕ ರಾಜಕೀಯ ಬೆಂಬಲಗಳ ಕೊರತೆ ಇರುವುದರಿಂದ ಇಂತಹ ವೈಪರಿತ್ಯಗಳಿಗೆ ನಿರಂತರವಾಗಿ ಅವರು ಬಲಿಯಾಗುತ್ತಿದ್ದಾರೆ. ಆ ಕಾರಣದಿಂದ ಪರ್ಯಾಯ ರಾಜಕೀಯ ಅವಶ್ಯಕತೆಯನ್ನು ವಿಮರ್ಶಾತ್ಮಕವಾಗಿ ಚರ್ಚೆ ಮಾಡಲಾಗಿದೆ. ತಳ ಮಟ್ಟದಲ್ಲಿನ ಅಧಿಕಾರ ವಿಕೇಂದ್ರಿಕರಣ, ರಾಜಕೀಯ ವಿಕೇಂದ್ರಿಕರಣದ ಚಿಂತನೆಯನ್ನು ಆಧರಿಸುವಂತೆ ಪಂಚಾಯತ್‌ರಾಜ್ ಸಂಸ್ಥೆಯನ್ನು ಕುರಿತು ಸ್ತ್ರೀವಾದಿ ದೃಷ್ಠಿಕೋನವನ್ನು ಅಗತ್ಯಕ್ಕೆ ತಕ್ಕಂತೆ ಬಳಸಿಕೊಂಡು ಪರಾಮರ್ಶಿಸಿ ನಿರ್ವಚಿಸಲಾಗಿದೆ. ಒಂದು ರಾಜಕೀಯ ಸಂಸ್ಥೆಯನ್ನು ಕುರಿತಂತೆ ಇರುವ ಸ್ಥಾಪಿತ ಗ್ರಹಿಕೆಗಳ ಕುರಿತಾದ ಅಂತರಾಳದಲ್ಲಿನ ಅಂಶಗಳನ್ನು ಅರಿಯಲು ಇಂತಹ ಸ್ತ್ರೀವಾದಿ ನಿರ್ವಚನದ ಅಗತ್ಯತೆ ಮಹಿಳಾ ಅಧ್ಯಯನದಲ್ಲಿ ಅತ್ಯಂತ ಅಗತ್ಯವಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸಂಶೋಧನೆಗೆ ಆಯ್ದುಕೊಂಡಿರುವ ದಲಿತ ಮಹಿಳೆ ಪಾತ್ರ ಕುರಿತದ್ದಾಗಿದೆ. ದಲಿತ ಮಹಿಳೆಯ ರಾಜಕೀಯ ಕುರಿತಾದ ತಲಸ್ಪರ್ಶಿ ಅಧ್ಯಯನ ಇದಾಗಿದೆ. ದಲಿತ ಮಹಿಳಾ ರಾಜಕೀಯ ಸ್ಥಿತಿಯನ್ನು ಅರಿಯಲು ವಿವರಣಾತ್ಮಕ ಸಂಶೋಧನಾ ವಿಧಾನದಿಂದ ಕಂಡುಕೊಂಡ ಅಂಶಗಳನ್ನು ವಿವಿಧ ನಮೂನೆಯ ಕೋಷ್ಠಕಗಳನ್ನು ಹಾಕಿ ಆಮೂಲಕ ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ವಿವರಣೆ ನೀಡಲಾಗಿದೆ. ರಾಜಕೀಯ ಕುರಿತಾಗಿ ದಲಿತ ಮಹಿಳೆ ಹೊಂದಿರುವ ಪ್ರತಿನಿಧೀಕರಣದ ಸ್ವರೂಪವನ್ನು ಮಹಿಳಾ ಅಧ್ಯಯನದ ದೃಷ್ಠಿಕೋನದಲ್ಲಿ ಚಿಂತನೆಗೆ ಒಳಪಡಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಲ್ಲಿ ಕಂಡುಬರುವ ಎಲ್ಲಾ ಚಿಂತನೆಗಳು ಮಹಿಳಾ ಅಧ್ಯಯನದ ನೆಲೆಯೊಳಗೆ ರೂಪುತಾಳಿದಂತಹವುಗಳಾಗಿವೆ. ಮೀಸಲಾತಿಯ ಅಡಿಯಲ್ಲಿ ದಲಿತ ಮಹಿಳೆ ಪಡೆದಿರುವ ರಾಜಕೀಯ ಸ್ವಾತಂತ್ರ್ಯವನ್ನು ಯಾವ ರೀತಿ ನಿರ್ವಹಿಸುತ್ತಿದ್ದಾಳೆ ಎಂದು ಅಧ್ಯಯನದ ಉದ್ದಕ್ಕೂ ಚರ್ಚಿಸಲಾಗಿದೆ. ರಾಜಕೀಯ ಪ್ರವೇಶಾವಕಾಶವನ್ನು ಅವಳು ತನ್ನ ಸ್ವಂತ ನಿರ್ಧಾರದಿಂದ ಬರುತ್ತಿರುವಳೊ ಅಥವಾ ಸ್ಥಾಪಿತ ಪ್ರಭುತ್ವಗಳ ಒತ್ತಾಯಗಳ ಮೇರೆ ಬರುತ್ತಿದ್ದಾಳೊ ಎನ್ನುವುದನ್ನು ಅರಿಯಲು ಪ್ರಯತ್ನಿಸಲಾಗಿದೆ. ದಲಿತ ಮಹಿಳಾ ರಾಜಕೀಯ ಪ್ರತಿನಿಧೀಕರಣ ಎನ್ನುವಾಗ ಅವಳ ಭಾಗವಹಿಸುವಿಕೆಯು ಸ್ವರೂಪ ಸಕ್ರಿಯವಾಗಿದೆಯೋ ಅಥವಾ ನಿಷ್ಕ್ರಿಯವಾಗಿದೆಯೋ ಎಂಬುದನ್ನು ಈ ಅಧ್ಯಯನದಲ್ಲಿ ಹೇಳಲಾಗಿದೆ. ಪ್ರತಿಯೊಂದು ದಾಖಲಾತಿಗಳನ್ನು ಸಂಪೂರ್ಣವಾಗಿ ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯಾಧಾರಿತವಾಗಿಯೇ ರಚಿಸಲಾಗಿದೆ. ಪಂಚಾಯಿತಿಯ ವಿವಿಧ ಹಂತಗಳಾದ ಗ್ರಾಮ, ತಾಲ್ಲೂಕ ಹಾಗೂ ಜಿಲ್ಲಾ ಪಂಚಾಯತ್‌ಗಳಲ್ಲಿಯ ದಲಿತ ಮಹಿಳಾ ಪ್ರತಿನಿಧೀಕರಣವನ್ನು

ಯಥಾವತ್ತಾಗಿ ಅನಾವರಣಗೊಳಿಸಲಾಗಿದೆ. ಅಲ್ಲದೆ ಪಂಚಾಯಿತಿಯಿಂದ ಪಂಚಾಯಿತಿಗೆ ಯಾವ ರೀತಿಯಾಗಿ ಅವಳ ಪಾತ್ರ ಬದಲಾಗುತ್ತಿದೆ ಎಂಬುವನ್ನು ಹೇಳಲಾಗಿದೆ. ಸಂಶೋಧನೆಯಲ್ಲಿ ಇಂತಹ ಫಲಿತಗಳು ಅವಶ್ಯಕ. ಏಕೆಂದರೆ ಓದುಗರಿಗೆ ಸಮರ್ಪಕವಾಗಿ ಅರಿಯಲು ಸಹಾಯಕವಾಗುವುದು. ಒಟ್ಟಾರೆಯಾಗಿ ಈ ಅಧ್ಯಾಯವು ದಲಿತ ಮಹಿಳಾ ರಾಜಕೀಯ ಸ್ಥಿತಿಗತಿಯನ್ನು, ಪ್ರಬಂಧದ ಆಶಯವನ್ನು ಪ್ರತಿಬಿಂಬಿಸುತ್ತದೆ.

ಅಧ್ಯಾಯ ನಾಲ್ಕರಲ್ಲಿ ದಲಿತ ಮಹಿಳಾ ರಾಜಕೀಯ ಕುರಿತಾಗಿರುವಂತಹ ಇಕ್ಕಟ್ಟು-ಬಿಕ್ಕಟ್ಟುಗಳ ಸವಾಲುಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ದಲಿತ ಮಹಿಳಾ ರಾಜಕಾರಣದ ಪಾತ್ರದ ಸ್ವರೂಪವನ್ನು ಅರಿಯುವುದರೊಂದಿಗೆ ದಲಿತ ಮಹಿಳಾ ರಾಜಕೀಯ ಅವಶ್ಯಕತೆಯನ್ನು ಹೇಳಲಾಗಿದೆ. ಅಭಿವೃದ್ಧಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ಹೊರಗಿಟ್ಟು ಕಾಣಲು ಸಾಧ್ಯವಿಲ್ಲ. ಎಂಬುವನ್ನು ಇಲ್ಲಿ ತೋರಿಸಲು ಪ್ರಯತ್ನಿಸಲಾಗಿದೆ. ದಲಿತ ಮಹಿಳೆಯು ಗ್ರಾಮೀಣ ಅಭಿವೃದ್ಧಿಯ ಕುರಿತಾಗಿ ಹೊಂದಿರುವ ಕಾಳಜಿ ಹಾಗೂ ಪಾಲ್ಗೊಳ್ಳುವಿಕೆಯನ್ನು ವಿಮರ್ಶಾತ್ಮಕವಾದ ನೆಲೆಯಲ್ಲಿ ನೋಡಲಾಗಿದೆ. ಗ್ರಾಮೀಣಾಭಿವೃದ್ಧಿಯನ್ನು ಕುರಿತಂತೆ ದಲಿತ ಮಹಿಳೆ ತಾಳಿರುವ ಕಾಳಜಿ, ಆಸಕ್ತಿ ಅವಶ್ಯವಿರುವಂತೆ ಚಿತ್ರಿಸಲಾಗಿದೆ. ಅಧಿಕಾರ ಹೊಂದಿದ್ದರು ಗ್ರಾಮೀಣಾಭಿವೃದಿಯಿಂದ ದೂರವಾಗುತ್ತಿರುವ ಕಾರಣಗಳನ್ನು ಸಹ ಹೆಕ್ಕಿತೆಗೆಯಲಾಗಿದೆ. ದಲಿತ ಮಹಿಳೆಗೆ ಒದಗಿರುವಂತ ಅಧಿಕಾರ ಹೀನತೆಯ ಕುರಿತಾಗಿ ಅವಳ ನೆಲೆಯಿಂದಲೇ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡು ನಿರ್ವಚಿಸಲಾಗಿದೆ. ಅಲ್ಲದೆ ದಲಿತ ಮಹಿಳೆಯ ವರ್ತಮಾನದ ರಾಜಕೀಯ ಕುರಿತಾದ ಅಂಶಗಳನ್ನು ಇಲ್ಲಿ ಹೇಳಲಾಗಿದೆ. ತನಗೆ ಸಿಕ್ಕಿರುವ ಅಧಿಕಾರವನ್ನು ಉಳ್ಳವರ ಅಧೀನಕ್ಕೆ ಒಪ್ಪಿಸಿ ರಾಜಕೀಯ ಹಾಗೂ ಸಾರ್ವಜನಿಕ ಜೀವನದಿಂದ ಮುಕ್ತಿಯನ್ನು ಬಯಸುತ್ತಿರುವ ದಲಿತ ಮಹಿಳೆಗೆ ರಾಜಕೀಯ ಮುಂದುವರೆಕೆಗಾಗಿ ಪರ್ಯಾಯ ಸಾಧ್ಯತೆಗಳನ್ನು ರಚಿಸಿ ಅಗತ್ಯಕ್ಕೆ ತಕ್ಕಂತೆ ರೂಪಿಸಿ ಜಾರಿಗೊಳಿಸಲು ಹೇಳಲಾಗಿದೆ. ಜಾತಿ ಹಾಗೂ ಲಿಂಗಗಳ ಕಾರಣದಿಂದಾಗಿ ಅಧಿಕಾರ ಧೃವೀಕರಣದಲ್ಲಿ ಭಾಗಿಯಾಗದೇ ಇರುವ ಅವಳ ಸ್ಥಿತಿಯನ್ನು ಉತ್ತಮಪಡಿಸಲೆಂದೇ ಪರ್ಯಾಯ ಸಾಧ್ಯತೆಯನ್ನು ಒತ್ತಿಹೇಳಲಾಗಿದೆ.

ಅಂತಿಮವಾಗಿ ಐದನೆಯ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಎಲ್ಲಾ ಅಧ್ಯಾಯಗಳಲ್ಲಿನ ಅಂಶಗಳ ಗ್ರಹಿಕೆಗಳನ್ನು ಇಡಿಯಾಗಿ ಹಿಡಿದಿಡಲು ಹಾಗೂ ಸಂಶೋಧನೆಯಲ್ಲಿ ಕಂಡುಕೊಂಡ ಮಹತ್ವಪೂರ್ಣ ಅಂಶಗಳನ್ನು ಒಳಗೊಂಡ ಫಲಿತಗಳನ್ನು ಹೇಳಲಾಗಿದೆ. ಸಮಾರೋಪ ಭಾಗದಲ್ಲಿ ಎಲ್ಲಾ ಅಧ್ಯಾಯಗಳಲ್ಲಿನ ಸ್ಥೂಲ ಚಿತ್ರಣವನ್ನು ಅನಾವರಣಗೊಳಿಸಲಾಗಿದೆ.

### ೨. ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನದ ವಿಶ್ಲೇಷಣೆಯಲ್ಲಿ ಕಂಡುಕೊಂಡ ಸಾರರೂಪಿ ಫಲಿತಗಳನ್ನು ನೀಡಲು ಈ ಶೀರ್ಷಿಕೆಯಲ್ಲಿ ಅವಕಾಶ ಕಲ್ಪಿಸಿಕೊಳ್ಳಲಾಗಿದೆ. ಮಹಾಪ್ರಬಂಧದ ಶೀರ್ಷಿಕೆಯು ಸ್ಪಷ್ಟಪಡಿಸುವ ಪಂಚಾಯತ್ ರಾಜ್ ಸಂಸ್ಥೆಯಲ್ಲಿ ದಲಿತ ಮಹಿಳಾ ರಾಜಕೀಯ ಪ್ರತಿನಿಧೀಕರಣದ ಸ್ವರೂಪವು ಕೇವಲ ಸಾಂಕೇತಿಕವಾಗಿ ಹಾಗೂ ಅಲಂಕಾರಿಕವಾಗಿ ಕಂಡು ಬರುತ್ತಿದೆ. ಪಂಚಾಯತ್ ಸಂಸ್ಥೆಯ ಮೂಲಕ ಮಹಿಳಾ ರಾಜಕೀಯ ಸಬಲೀಕರಣವಾಗುವ ಬದಲು ಅಧಿಕಾರ

ಹೀನತೆಯನ್ನು ಜಾತಿ ಹಾಗೂ ಲಿಂಗದ ಕಾರಣದಿಂದಲೇ ಅನುಭವಿಸುವಂತಾಗಿದೆ. ಇಂತಹ ಸಂಗತಿಗಳನ್ನು ಖಚಿವಾಗಿ ಈ ಕೆಳಗಿನಂತೆ ಪಟ್ಟಿಮಾಡಲಾಗಿದೆ.

೧. ಪಂಚಾಯತ್‌ರಾಜ್ ಸಂಸ್ಥೆಗಳು ಸೈದ್ಧಾಂತಿಕವಾಗಿ, ಶಾಸನಾತ್ಮಕವಾಗಿ ಹಾಗೂ ಆಡಳಿತಾತ್ಮಕವಾಗಿ ಪ್ರಾತಿನಿಧಿಕವಾಗಿದ್ದರೂ ಸಹ ಅವುಗಳ ಆಚರಣೆಯ ಮಟ್ಟದಲ್ಲಿ ಇಂದಿಗೂ ಸಮಾಜದಲ್ಲಿನ ಸ್ಥಾಪಿತ ಪ್ರಭುತ್ವಗಳೆ ತಮ್ಮ ಆಳ್ವಿಕೆ ನೆಡೆಸುತ್ತಿವೆ. ದಲಿತ ಮಹಿಳೆಯನ್ನು ತಮ್ಮ ಸ್ವಹಿತಾಸಕ್ತಿಗಾಗಿ ಚುನಾವಣೆಗೆ ನಿಲ್ಲಿಸಿ, ಗೆಲ್ಲಿಸಿ ಆ ಮೂಲಕ ಅವಳಿಂದ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿವೆ, ಹಾಗೆಯೇ ದಲಿತ ಮಹಿಳೆಯನ್ನು ಅಧಿಕಾರದಿಂದ ದೂರ ತಳ್ಳುತ್ತಿವೆ.

೨. ದಲಿತ ಮಹಿಳೆಯನ್ನು ರಾಜಕೀಯ ವ್ಯವಸ್ಥೆಯಲ್ಲಿ ಚುನಾವಣೆಯಿಂದ ಹಿಡಿದು ಅವಳ ಆಡಳಿತ ನಿರ್ವಹಣೆಯವರೆಗೂ ಪ್ರಬಲವರ್ಗಗಳೇ ನಿಯಂತ್ರಿಸುತ್ತಿವೆ.

೩. ದಲಿತ ಮಹಿಳೆ ತಾನು ಸಮಾಜವಲ್ಲಿ ಹೊಂದಿರುವ ಕೆಳದರ್ಜೆಯ ಸ್ಥಾನಮಾನದಲ್ಲಿ ಮೇಲ್ವವರ್ಗಗಳನ್ನು ಎದುರುಹಾಕಿಕೊಂಡು ಸ್ವಂತನಿರ್ಧಾರ, ಸ್ವಹಿತ ಕಾಪಾಡಿಕೊಳ್ಳುವಲ್ಲಿ ಹೆದರುತ್ತಿದ್ದಾಳೆ. ಅವಳ ಸಮುದಾಯದ ಪುರುಷನು ಸಹ ಈ ವಿಷಯದಲ್ಲಿ ನಿರ್ಲಿಪ್ತನಾಗಿದ್ದಾನೆ.

೪. ಗ್ರಾಮ ಪಂಚಾಯಿತಿ ಹಾಗೂ ತಾಲ್ಲೂಕ ಪಂಚಾಯಿತಿಯಲ್ಲಿ ದಲಿತ ಮಹಿಳೆಯರು ಸಭೆಗಳಲ್ಲಿ ಮುಕ್ತವಾಗಿ ಭಾಗವಹಿಸಲು, ಮಾತನಾಡಲು ಇಂದಿಗೂ ಹಿಂದೇಟು ಹಾಕುತ್ತಿದ್ದಾರೆ. ಅಲ್ಲದೆ ದಲಿತಳು ಎನ್ನುವ ಕಾರಣಕ್ಕಾಗಿಯೇ ಮಹಿಳೆಯರಿಗೆ ಯೋಜನೆಗಳನ್ನು ಹಾಗೂ ಅನುದಾನಗಳನ್ನು ನೀಡುತ್ತಿಲ್ಲ. ಜಿಲ್ಲಾ ಪಂಚಾಯಿತಿಯಲ್ಲಿ ಪಕ್ಷಗಳ ಹೆಸರಿನಡಿಯಲ್ಲಿ ಮಹಿಳೆಯರನ್ನು ನಿಯಂತ್ರಿಸುತ್ತಿರುವ ಅಂಶವು ಗೋಚರವಾಗುತ್ತದೆ.

೫. ಸಂವಿಧಾನಬದ್ಧವಾಗಿ ಮಹಿಳೆಯರಿಗೆ ಸಿಕ್ಕಿರುವ ಮೀಸಲಾತಿಯಿಂದ ಯಾವ ಪ್ರಯೋಜನವೂ ವ್ಯವಸ್ಥಿತವಾಗಿ ದೊರಕುತ್ತಿಲ್ಲ. ಅದೇನಿದ್ದರೂ ಮೇಲ್ವರ್ಗಗಳಿಗೆ ಪರೋಕ್ಷವಾಗಿ ನೀಡಲಾಗುವ ಮತ್ತೊಂದು ಅವಕಾಶ ಎಂಬಂತೆ ತೋರುತ್ತದೆ.

೬. ಮೇಲ್ವರ್ಗದ ಮಹಿಳೆಗೆ ಅವಳ ಗಂಡ ಮಾತ್ರ ನಿಯಂತ್ರಕನಾಗಿದ್ದರೆ ದಲಿತ ಮಹಿಳೆಗೆ ಅವಳ ಗಂಡನೊಡನೆ ಮೇಲ್ಜಾತಿಯ ಪುರುಷನು ಸಹ ನಿಯಂತ್ರಣ ಹೊಂದಿರುತ್ತಾನೆ.

೭. ಅಧಿಕಾರ ಪಡೆದ ನಂತರವೂ ಅವಳ ಸ್ಥಿತಿಗತಿಯಲ್ಲಿ ಯಾವುದೇ ಬದಲಾವಣೆಗಳು ಕಂಡುಬಂದಿಲ್ಲ. ಇಂದಿಗೂ ಗ್ರಾಮ ಹಾಗೂ ತಾಲ್ಲೂಕ ಪಂಚಾಯಿತಿಯಲ್ಲಿನ ಚುನಾಯಿತ ದಲಿತ ಮಹಿಳೆ ಕೃಷಿ ಹಾಗೂ ವ್ಯಾಪಾರಗಳನ್ನೇ ತನ್ನ ಜೀವನೋಪಾಯಕ್ಕಾಗಿ ಅವಲಂಬಿಸಿಕೊಂಡಿದ್ದಾಳೆ. ಪಂಚಾಯಿತಿಯ ಅಧ್ಯಕ್ಷೆಯ ಸ್ಥಾನ ಅಲಂಕರಿಸಿದ್ದರೂ ಸಹ ಅವಳು ಸಾರ್ವಜನಿಕ ಸ್ಥಳಗಳಿಗೆ ಮುಕ್ತವಾಗಿ ಸಂಚರಿಸುವ ಅವಕಾಶವನ್ನೇ ಪಡೆದಿಲ್ಲ.

೮. ಪಂಚಾಯಿತಿಯಲ್ಲಿ ಅಧಿಕಾರ ಹೀನತೆಯನ್ನು ಅನುಭವಿಸುತ್ತಿರುವ ಜಾತಿಗಳಲ್ಲಿ ಹೊಲೆಯರು, ಮಾದಿಗರು ಹಾಗೂ ಬೇಡ ಜಾತಿಗಳದ್ದೇ ಅಧಿಕ ಪ್ರಮಾಣವಿದೆ.

೯. ದಲಿತ ಮಹಿಳೆ ತನ್ನ ಕುಟುಂಬ ಹಾಗೂ ಸಮುದಾಯಗಳ ಒಳಿತಿಗಿಂತಲೂ ಮೇಲ್ವರ್ಗಗಳ ಸಲುವಾಗಿ ರಾಜಕೀಯ ಪ್ರವೇಶವನ್ನು ಮಾಡುತ್ತಿರುವ ಹಾಗೆ ಅವಳ ಅಧಿಕಾರ ಚಲಾವಣೆ ನಡೆಯುತ್ತಿರುವುದು ಕಂಡುಬರುತ್ತದೆ.

೧೦. ಗ್ರಾಮ ಹಾಗೂ ತಾಲೂಕ ಪಂಚಾಯಿತಿಗೆ ಸಂಬಂಧಿಸಿದಂತೆ ದಲಿತ ಮಹಿಳೆಗೆ ತನಗಿರುವ ಅಧಿಕಾರ ಹಾಗೂ ಕಾರ್ಯವೈಖರಿಗಳ ಕುರಿತಾಗಿ ಯಾವುದೇ ಮಾಹಿತಿಗಳನ್ನು ಅಧಿಕೃತವಾಗಿ ನೀಡಲಾಗುತ್ತಿಲ್ಲ.

೧೧. ಗ್ರಾಮ ಪಂಚಾಯಿತಿಯ ದಲಿತ ಮಹಿಳೆ ಅಧಿಕಾರ ಪಡೆದಿದ್ದಾಗ್ಯೂ ಸಹ ಅಸ್ಪೃಶ್ಯತೆ, ಜಾತೀಯತೆ ಎಂಬ ಪೆಡಂಭೂತ ಇಂದಿಗೂ ಅವಳನ್ನು ಬೆಂಬಿಡದೆ ಕಾಡುತ್ತಿದೆ. ತಾಲ್ಲೂಕ ಪಂಚಾಯಿತಿಯಲ್ಲಿ ಸ್ವಲ್ಪ ಪ್ರಮಾಣದಲ್ಲಿ ಇದರ ಛಾಯೆ ಗೋಚರಿಸುತ್ತದೆ. ಜಿಲ್ಲಾ ಪಂಚಾಯಿತಿಯಲ್ಲಿ ಇದರ ಪ್ರಭಾವವಿಲ್ಲದಿದ್ದರೂ ಸಹ ಜಾತಿನಿಷ್ಠೆ ಚಿಂತನೆಗಳು ಮಾತ್ರ ಕಾರ್ಯನಿರ್ವಹಿಸುತ್ತಿವೆ.

೧೨. ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿ ಅತ್ಯಂತ ಪ್ರಭಾವಶಾಲಿಯಾಗಿದ್ದರೂ ಸಹ ಅದು ದಲಿತ ಮಹಿಳೆಯ ವಿಷಯದಲ್ಲಿ ಗಮನಹರಿಸುತ್ತಿಲ್ಲ.

೧೩. ಒಟ್ಟಾರೆಯಾಗಿ ದಲಿತ ಮಹಿಳಾ ರಾಜಕೀಯ ಅಸ್ತಿತ್ವ ಎನ್ನುವುದು ಒಂದು ಕಡೆ ಕೊಟ್ಟು ಇನ್ನೊಂದು ಕಡೆಯಲ್ಲಿ ಕಸಿದುಕೊಳ್ಳುವ ತಂತ್ರದ್ದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಚುನಾಯಿತ ದಲಿತ ಮಹಿಳೆಯರ ಅನುಭವಜನ್ಯ ಮಾಹಿತಿಗಳನ್ನು ವಿಶ್ಲೇಷಣೆಗೊಳಪಡಿಸಿ ಮೇಲಿನ ಫಲಿತಗಳನ್ನು ಅಧ್ಯಯನದುದ್ದಕ್ಕೂ ಕಂಡುಕೊಳ್ಳಲಾಗಿದೆ. ದಲಿತಳಾಗಿರುವ ಕಾರಣದಿಂದಲೆ ದಲಿತ ಮಹಿಳೆ ಅನುಭವಿಸುವ ಯಾತನೆ, ಶೋಷಣೆ, ಅಧಿಕಾರಹೀನತೆಯನ್ನು ಯಥಾವತ್ತಾಗಿ ದಾಖಲಿಸಲಾಗಿದೆ. ಮೀಸಲಾತಿಯನ್ನು ನೀಡಿದ ಸರಕಾರ ಅವರ ಸಾಕಾರಕ್ಕಾಗಿ ಶಾಸನಾತ್ಮಕ, ಕಾನೂನಾತ್ಮಕ ಬೆಂಬಲಗಳನ್ನು ನೀಡಿತಾದರೂ ಅದರ ಪಾಲನೆಯಲ್ಲಿ ಸೋತಿತು. ಸಾಂಪ್ರದಾಯಿಕವಾಗಿ ಸಮಾಜವನ್ನೇ ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವ ಊಳಿಗಮಾನ್ಯ ವ್ಯವಸ್ಥೆ, ಬಂಡವಾಳಶಾಹಿ ವ್ಯವಸ್ಥೆ, ಜಮೀನ್ದಾರಿ ವ್ಯವಸ್ಥೆಗಳಂತಹ ಸಾಂಪ್ರದಾಯಿಕ ಪ್ರಭುತ್ವಗಳೆ ವಾಸ್ತವವಾಗಿ ಸಮಾಜವನ್ನು ಸರಕಾರವನ್ನು ನಿಯಂತ್ರಿಸುತ್ತಿವೆ. ಇಂತಹ ಸ್ಥಾಪಿತ ಪ್ರಭುತ್ವಗಳಡಿಯಲ್ಲಿ ಸಿಕ್ಕು ದಲಿತ ಮಹಿಳಾ ರಾಜಕೀಯ ಅಸ್ತಿತ್ವ ತೋರಿಕೆ ಎಂಬಂತೆ ಕೇವಲ ಸಾಂಕೇತಿಕವಾಗಿ, ಅಲಂಕಾರಿಕವಾಗಿ ಗೋಚರಿಸುತ್ತಿದೆ. ತನಗೆ ಒಪ್ಪಿಗಿ ಇಲ್ಲದಿದ್ದರೂ ಮೇಲ್ವರ್ಗಗಳ ಬಗ್ಗೆ ತನಗಿರುವ ಭಯದಿಂದಲೆ ಒಲ್ಲದ ಮನಸ್ಸಿನಿಂದ ರಾಜಕೀಯ ಪ್ರವೇಶ ಮಾಡುತ್ತಿದ್ದಾಳೆ. ಹೀಗೆ ರಾಜಕೀಯಾಧಿಕಾರ ಸಿಕ್ಕರೂ ಸಹ ಅವಳಿಗೆ ಸಾಂಪ್ರದಾಯಿಕವಾಗಿ ಬೆನ್ನತ್ತಿ ಬಂದಿರುವ ಜಾತಿ ಹಾಗೂ ಲಿಂಗದ ನೆಲೆಯಿಂದಲೆ ಅಧಿಕಾರ ಹೀನತೆ ಅನುಭವಿಸುತ್ತಿದ್ದಾಳೆ. ಮೇಲ್ವರ್ಗದ ಶಕ್ತಿಗಳು ಮೀಸಲಾತಿಯನ್ನು ಒಂದು ಸಾಧನ ಮಾಡಿಕೊಂಡು ದಲಿತ ಮಹಿಳೆಯನ್ನು ಅಸ್ತ್ರವಾಗಿಸಿಕೊಂಡು ತಮ್ಮ ರಾಜಕೀಯ ಮುಂದುವರಿಕೆಗೆ ಹಾಗೂ ಅಸ್ತಿತ್ವಕ್ಕೆ ಬಳಸಿಕೊಳ್ಳುತ್ತಿದ್ದಾರೆ. ದಲಿತ ಮಹಿಳೆಯನ್ನು ಚುನಾವಣೆಯಿಂದಿಡಿದು ಅವಳ ರಾಜಕೀಯಾಧಿಕಾರವನ್ನು ಚಲಾಯಿಸುವಿಕೆಯವರೆಗೂ ಮೇಲ್ವರ್ಗಗಳೆ ನಿಯಂತ್ರಿಸುತ್ತಿವೆ. ದಲಿತ ಮಹಿಳೆಯೂ ಸಹ ತಾನು ಹೊಂದಿರುವ ಕೆಳಹಂತದ ಸ್ಥಾನಮಾನದಲ್ಲಿ,

ಇರುವುದರಿಂದಲೆ ಇಂತಹ ಶಕ್ತಿಗಳ ಎದುರು ನಿಲ್ಲುವಲ್ಲಿ ಹಿಂಜರಿಯುತ್ತಿದ್ದಾಳೆ. ಗ್ರಾಮ, ತಾಲೂಕು ಪಂಚಾಯತಿಯಲ್ಲಿ ಇಂದಿಗೂ ದಲಿತ ಮಹಿಳೆಯಲ್ಲಿ ಮುಕ್ತವಾಗಿ ಮಾತಾಡಲು ಹಿಂಜರಿಕೆ, ಭಯಗಳನ್ನೆ ಅನುಭವಿಸುತ್ತಿದ್ದಾರೆ. ಅಲ್ಲದೆ ದಲಿತಳು ಎಂಬ ಕಾರಣಕ್ಕಾಗಿಯೇ ಅವಳಿಗೆ ಯಾವುದೆ ಯೋಜನೆ, ಅನುದಾನಗಳನ್ನು ನೀಡುವಿಕೆಯಲ್ಲಿಯೂ ತಾರತಮ್ಯ ಧೋರಣೆಯನ್ನು ಮಾಡಲಾಗುತ್ತಿದೆ. ಸಂವಿಧಾನ ಬದ್ಧವಾಗಿ ಸಮಾನತೆ ತತ್ವ ಸಾಕಾರಕ್ಕಾಗಿ ಮೀಸಲಾಗಿದ್ದರೂ ಅದು ಮೇಲ್ವರ್ಗಗಳಿಗೆ ವಿಶೇಷ ಸವಲತ್ತಾಗಿ ಮಾರ್ಪಾಡಾಗಿದೆ. ಮೇಲ್ವರ್ಗದ ಮಹಿಳೆಯ ರಾಜಕೀಯ ಅಧಿಕಾರ ಅವಳ ಗಂಡ ಮಾತ್ರ ನಿಯಂತ್ರಿಸುತ್ತಿದ್ದರೆ ದಲಿತ ಮಹಿಳೆಯ ವಿಷಯದಲ್ಲಿ ಅವಳ ಗಂಡನೊಂದಿಗೆ ಮೇಲ್ವರ್ಗದ ಪುರುಷನೂ ಸಹ ನಿಯಂತ್ರಿಸುತ್ತಿದ್ದಾನೆ.

೩. ಅಧ್ಯಯನದ ಮುಂದಿನ ಸಾಧ್ಯತೆಗಳು

* ಅಧ್ಯಯನದ ಸಮಯದಲ್ಲಿ ನನ್ನ ಕಲ್ಪನೆಗೆ ಬಾರದಿರುವ ಎಷ್ಟೋ ಅಂಶಗಳು ಇರಬಹುದು. ಆದರೆ ಅವುಗಳನ್ನು ತಿರಸ್ಕರಿಸಿದ್ದೇನೆ. ಅಥವಾ ಮಾಡಲಾಗಿಲ್ಲ ಎಂದಲ್ಲ. ಕಾರಣ ಎಂದರೆ ನನಗಿದ್ದ ಸೀಮಿತ ಕಾಲಾವಧಿಯಲ್ಲಿ ಕೆಲವನ್ನು ಮಾತ್ರವೆ ನಾನು ಗಮನಹರಿಸಲು ಸಾಧ್ಯವಾಗಿದೆ. ಹಿಂದೆಯೇ ಹೇಳಿದಂತೆ ಮುಂದಿನ ದಿನಮಾನಗಳಲ್ಲಿ ಅವಕಾಶ ಸಿಕ್ಕರೆ ಇದನ್ನು ಇನ್ನಷ್ಟು ವಿಸ್ತರಿಸುತ್ತೇನೆ.
* ದಲಿತ ಮಹಿಳೆಯ ಅಸ್ತಿತ್ವವನ್ನು ನಾನು ರಾಜ್ಯಶಾಸ್ತ್ರೀಯ, ಸಮಾಜಶಾಸ್ತ್ರೀಯ ನೆಲೆಗಟ್ಟಿನ ಆಯಾಮಗಳಲ್ಲಿ ಮಾತ್ರವೇ ದಾಖಲು ಮಾಡಲು ಸಾಧ್ಯವಾಗಿದೆ ದಲಿತ ಮಹಿಳೆಯನ್ನು ಕುರಿತಂತೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಮನಶಾಸ್ತ್ರೀಯ, ಧಾರ್ಮಿಕ, ಜಾತಿಯಂತಹ ಅಂಶಗಳನ್ನು ಇಟ್ಟುಕೊಂಡು ಚರ್ಚಿಸಬಹುದಾಗಿದೆ.
* ದಲಿತ ಮಹಿಳಾ ಪ್ರತಿನಿಧೀಕರಣ ಸ್ವರೂಪವನ್ನು ತಿಳಿಯುವ, ಮುಂದೆ ಸಾಮಾಜಿಕ ಮೌಲ್ಯಚಾರಣೆ, ಪ್ರಭುತ್ವದ ಧ್ವನಿಗಳ ಅಂತರದ ಸಂಬಂಧವನ್ನು ಅರಿತು ಆ ನಂತರ ಪ್ರಭುತ್ವಕ್ಕಿರುವ ಲಾಭ ನಷ್ಟಗಳ ಲೆಕ್ಕಾಚಾರವನ್ನು ಅಧ್ಯಯನ ಮಾಡಬಹುದಾಗಿದೆ.
* ರಾಜಕೀಯ ಸಹಭಾಗಿತ್ವದಲ್ಲಿ ದಲಿತ ಮಹಿಳೆಯ ಸ್ಥಿತಿ ಯಾಂತ್ರಿಕತೆಯ ಹಾಗೆ ಗಾಣದ ಎತ್ತಿನಂತೆ ನಡೆಯುತ್ತಿದೆ. ನಿಜವಾಗಿಯೂ ಅವಳ ಧ್ವನಿ ಉಡುಗಿ ಹೋಗಿದೆ. ಇದರ ಹಿನ್ನೆಲೆಯಲ್ಲಿಯೂ ಅವಳ ರಾಜಕೀಯ ಸಹಭಾಗಿತ್ವದ ಅಂತರ್ ಸಂಬಂಧಗಳನ್ನು ಕುರಿತು ಅಧ್ಯಯನ ಮಾಡಬಹುದಾಗಿದೆ.
* ಪ್ರಸ್ತುತ ಅಧ್ಯಯನದ ವ್ಯಾಪ್ತಿಯೂ ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಸೇರಿರುವ ಹಿಂದುಳಿದ ಕೊಪ್ಪಳ ಜಿಲ್ಲೆಗೆ ಸೀಮಿತಗೊಂಡಿದೆ. ಇಲ್ಲಿಯ ದಲಿತ ಮಹಿಳಾ ಸ್ಥಿತಿಗತಿಗೂ ಉತ್ತರ, ದಕ್ಷಿಣ, ಮಧ್ಯ ಕರ್ನಾಟಕದಲ್ಲಿನ ದಲಿತ ಮಹಿಳಾ ಸ್ಥಿತಿಗತಿ ಉತ್ತಮವಾಗಿರಬಹುದು ಅಥವಾ ಕೀಳಾಗಿಯೂ ಇರಬಹುದು ಇದನ್ನು ಇಟ್ಟುಕೊಂಡು ತೌಲನಿಕ ಅಧ್ಯಯನವನ್ನು ಸಹ ಮಾಡಬಹುದಾಗಿದೆ.

೪. ಅಧ್ಯಯನದ ಮಿತಿಗಳು

* ಅರಿವು, ಜ್ಞಾನ ಎನ್ನುವುದು ಬಹಳ ವಿಸ್ತಾರವಾದ ಸಾಗರವಾಗಿರುವುದರಿಂದ ಅದರಲ್ಲಿ ಯಾವುದೆ ಒಂದು ಸೀಮೆ ಅಥವಾ ಮಿತಿ ಎಂಬುದಿರುವುದಿಲ್ಲ. ಪ್ರತಿಯೊಂದು ವಿಷಯವನ್ನು ಈ ಕಾರಣದಿಂದಲೆ ನಾವು

ಪರಿಪೂರ್ಣ ಎಂದು ಭಾವಿಸುವಂತಿಲ್ಲ. ಏಕೆಂದರೆ ಸಂಶೋಧನೆಯಲ್ಲಿ ಪ್ರತಿಯೊಂದು ವಿಚಾರ, ತಿಳುವಳಿಕೆ, ಕಾರ್ಯ ಎಲ್ಲವೂ ಕೂಡ ಒಂದೇ ರೀತಿ ಸ್ಥಿರವಾಗಿರದೆ ಪರಿವರ್ತನೆಯಾಗುತ್ತಲೆ ಇರುತ್ತವೆ. ಈ ನೆಲೆಯೊಳಗೆ ಪ್ರಸ್ತುತ ಅಧ್ಯಯನವು ಸಹ ಪರಿಪೂರ್ಣವಾಗಿಲ್ಲ ಆದ್ದರಿಂದ ಅಧ್ಯಯನದಲ್ಲಿ ಕೆಲವು ಮಿತಿಗಳನ್ನು ಆ ಕಾರಣದಿಂದಲೆ ಸೇರಿಸಿಕೊಂಡಿದ್ದೇನೆ.

* ಪ್ರಸ್ತುತ ದಲಿತ ಮಹಿಳಾ ರಾಜಕಾರಣವನ್ನು ಕುರಿತಂತೆ ಅಧ್ಯಯನದಲ್ಲಿ ಎರಡು ಮೂರು ಅಂಶಗಳಿಗೆ ಮಾತ್ರ ಗಮನ ಹರಿಸಲು ಸಾಧ್ಯವಾಗಿದೆ. ನನಗೆ ನೀಡಲಾಗಿದ್ದ ಕಾಲಾವಧಿಯಲ್ಲಿ ಇದನ್ನು ಮಾಡಲು ಮಾತ್ರವೆ ಸಾಧ್ಯವಾಗಿದೆ. ಮುಂದಿನ ದಿನಮಾನಗಳಲ್ಲಿ ಅವಕಾಶ ಸಿಕ್ಕರೆ ಇದಕ್ಕಿಂತ ಭಿನ್ನವಾಗಿ ಅಥವಾ ಇದೇ ವಿಷಯಕ್ಕೆ ಪೂರಕವಾದ ಇತರ ಅಂಶಗಳೊಂದಿಗೆ ದಲಿತ ಮಹಿಳಾ ರಾಜಕಾರಣವನ್ನು ವಿಸ್ತರಿಸುತ್ತೇನೆ.
* ದಲಿತ ಮಹಿಳಾ ರಾಜಕಾರಣಕ್ಕೆ ಮುಖ್ಯವಾಗಿ ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಜಮೀನ್ದಾರಿಶಾಹಿಗಳಂತಹ ಸ್ಥಾಪಿತ ವ್ಯವಸ್ಥೆಗಳಡಿಯಲ್ಲಿ ದಲಿತ ಮಹಿಳಾ ರಾಜಕೀಯ ಅಸ್ತಿತ್ವವನ್ನು ಕುರಿತು ಚರ್ಚಿಸಲಾಗಿದೆ. ದಲಿತ ಮಹಿಳಾ ರಾಜಕೀಯ ಅಸ್ತಿತ್ವ, ಸಮಸ್ಯೆ, ಸವಾಲುಗಳನ್ನು ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಣಾತ್ಮಕವಾಗಿ ಬಿಂಬಿಸಲಾಗಿದೆ. ಏಕೆ ದಲಿತ ಮಹಿಳೆಗೆ ರಾಜಕೀಯ, ಸಹಭಾಗಿತ್ವದಲ್ಲಿ ಸಮಪಾಲು ಸಿಗುತ್ತಿಲ್ಲ ಎಂಬುವನ್ನು ರಾಜ್ಯಶಾಸ್ತ್ರೀಯ, ಸಮಾಜಶಾಸ್ತ್ರೀಯ ನೆಲೆಗಟ್ಟಿನಡಿಯಲ್ಲಿ ಚರ್ಚಿಸಲಾಗಿದೆ. ಇದೇ ವಿಷಯವನ್ನು ಮುಂದುವರೆಸಲು ಇಚ್ಚೆ ಇರುವವರು ದಲಿತ ಮಹಿಳಾ ಆರ್ಥಿಕ, ಮನೋವೈಜ್ಞಾನಿಕ, ಸಾಂಸ್ಕೃತಿಕ. ಧಾರ್ಮಿಕ. ಜಾತಿಯಂತಹ ಅಂಶಗಳನ್ನು ಇಟ್ಟುಕೊಂಡು ಚರ್ಚಿಸಬಹುದು.
* ಪ್ರಸ್ತುತ ಅಧ್ಯಯನಕ್ಕಾಗಿ ಗ್ರಾಮ ಪಂಚಾಯತಿಯಲ್ಲಿನ ೧೨೦ಜನ ದಲಿತ ಮಹಿಳೆಯರನ್ನು ತಾಲೂಕು ಪಂಚಾಯತಿಯಲ್ಲಿನ ೧೧ ದಲಿತ ಮಹಿಳೆಯರನ್ನು ಹಾಗೂ ಜಿಲ್ಲಾ ಪಂಚಾಯತಿಯಲ್ಲಿನ ೪ ಜನ ಮಹಿಳೆಯರನ್ನು ಮಾತ್ರವೇ ಆರಿಸಿಕೊಳ್ಳಲಾಗಿದೆ. ಇವರು ನೀಡಿದ ಮಾಹಿತಿಯಾಧಾರದ ಮೇಲೆ ಪ್ರಸ್ತುತ ಸಂಕಥನವನ್ನು ಕಟ್ಟಲಾಗಿದೆ. ಮೇಲಿನ ಅಂಕಿ-ಅಂಶಗಳು ಕೇವಲ ಗುಣಾತ್ಮಕ ಅಥವಾ ಸಂಖ್ಯಾತ್ಮಕ ಮಾಹಿತಿಗಾಗಿ ಮಾತ್ರವೆ ಆರಿಸಿಕೊಂಡಿರುವಂತಹದ್ದಾಗಿದೆ. ಆದರೆ ಇವೇ ಅಂತಿಮವಲ್ಲ. ವಿವರಣಾತ್ಮಕ ಸಂಶೋಧನೆಯ ಆಧಾರವೆ ಮುಖ್ಯವಾಗಿ ಇಂತಹ ಪ್ರಬಂಧಕ್ಕೆ ಕಾರಣವಾಗಿರುವುದರಿಂದ ಅದರ ಮಾಹಿತಿಗಳೆ ಇಲ್ಲಿ ಹೇರಳವಾಗಿ ದಾಖಲಾಗಿದೆ.
* ದಲಿತ ಮಹಿಳಾ ರಾಜಕಾರಣ ಎನ್ನುವಾಗ ಅಲ್ಲಿ ನಿರ್ದಿಷ್ಟವಾಗಿ ಯಾವುದೆ ಒಂದು ಸಮುದಾಯ, ಜಾತಿಯನ್ನು ಕೇಂದ್ರೀಕರಿಸಿಕೊಂಡಿಲ್ಲವಾದರೂ ಹೆಚ್ಚಿನ ಗಮನವನ್ನು ಅಂಚಿನ ಜಾತಿಗಳಿಗೆ ನೀಡಲಾಗಿದೆ.
* ರಾಜಕಾರಣದ ಅಧಿಕಾರ ಕೇಂದ್ರಗಳಲ್ಲಿ ದಲಿತ ಮಹಿಳೆಗೆ ತಡೆಯಾಗಿರುವ ವಿಚಾರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಗ್ರಾಮ, ತಾಲೂಕು ಪಂಚಾಯತಿಗಳಲ್ಲಿನ ದಲಿತ ಮಹಿಳೆಯರಿಗೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಏಕೆಂದರೆ ಇವೆರಡು ಗ್ರಾಮೀಣ ವಲಯಕ್ಕೆ ಅತ್ಯಂತ ಸಮೀಪದ ಕೇಂದ್ರಗಳಾಗಿರುವುದರಿಂದ ಇಲ್ಲಿಯ ಜಾತಿ ವ್ಯವಸ್ಥೆಯನ್ನು ಅರಿಯುವುದರ ಜೊತೆಗೆ ಅವರ

ಒಡಿತ, ಪ್ರಭುತ್ವವನ್ನು ಯಥಾವತ್ತಾಗಿ ದಾಖಲಿಸಲಾಗಿದೆ. ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆಗೆ ಅಸ್ಪೃಶ್ಯತೆಯ ಸುಳಿವು ಇರುವುದಿಲ್ಲವಾದ್ದರಿಂದ ಅಲ್ಲಿ ಅವಳಿಗೆ ವಿಮುಕ್ತಿ ಸಿಕ್ಕಿದೆ ಎಂದು ಭಾವಿಸಲಾಗದು. ಈ ಒಂದು ಕಾರಣದಿಂದಲೆ ಅವಳನ್ನು ತಿರಸ್ಕಾರದಿಂದ ನೋಡಿಲ್ಲ. ಅವಳ ಸ್ಥಿತಿಯನ್ನು ಇತರ ತಳ ಹಂತದ ದಲಿತ ಮಹಿಳೆಯರೊಂದಿಗೆ ಸಮ ತೂಕದಲ್ಲಿ ನೋಡಲಾಗಿದೆ.

■■■

## ಮಾಹಿತಿದಾರರ ವಿವರ

### (ಗ್ರಾಮ ಪಂಚಾಯತಿಗೆ ಚುನಾಯಿತರಾದವರು)

| ಕ್ರ.ಸಂ | ಹೆಸರು | ವಯಸ್ಸು | ಪ್ರತಿನಿಧಿಸುತ್ತಿರುವ | ಗ್ರಾಮ | ತಾಲೂಕ | ಜಾತಿ |
|---|---|---|---|---|---|---|
| ೦೧ | ಮೀನಾಕ್ಷಮ್ಮ.ಎಂ | ೩೨ | ಹೊಸಳ್ಳಿ | ಹೊಸಳ್ಳಿ | ಕೊಪ್ಪಳ | ಭಜಂತ್ರಿ |
| ೦೨ | ಫಕೀರವ್ವ | ೪೩ | ಹಿಟ್ನಾಳ | ಹಿಟ್ನಾಳ | ಕೊಪ್ಪಳ | ಚಲವಾದಿ |
| ೦೩ | ರೇಣುಕಮ್ಮ ಶಂಕ್ರಪ್ಪ | ೪೦ | ಗುಳದಳ್ಳಿ | ಗುಳದಳ್ಳಿ | ಕೊಪ್ಪಳ | ಕೊರಚ |
| ೦೪ | ಅಮರಮ್ಮ ಹನುಮಪ್ಪ | ೩೦ | ಗುಳದಳ್ಳಿ | ಗುಳದಳ್ಳಿ | ಕೊಪ್ಪಳ | ನಾಯಕ |
| ೦೫ | ಪಾರ್ವತವ್ವ ಹೊಸಮನಿ | ೫೩ | ಓಜನಹಳ್ಳಿ | ಓಜನಹಳ್ಳಿ | ಕೊಪ್ಪಳ | ಮಾದರ |
| ೦೬ | ನೀಲವ್ವ ಸಂಗಮೇಶ್ | ೪೭ | ಓಜನಹಳ್ಳಿ | ಓಜನಹಳ್ಳಿ | ಕೊಪ್ಪಳ | ನಾಯಕ |
| ೦೭ | ದುರುಗವ್ವ ಹನುಮವ್ವ | ೫೦ | ಮತ್ತೂರ | ಮತ್ತೂರ | ಕೊಪ್ಪಳ | ಮಾದರ |
| ೦೮ | ಶಾಂತವ್ವ ಹುಸೇನವ್ವ | ೨೯ | ಮಾದನೂರು | ಮಾದನೂರು | ಕೊಪ್ಪಳ | ಮಾದರ |
| ೦೯ | ಹುಲಿಗೆವ್ವ ಶಿದ್ಲಪ್ಪ | ೪೦ | ಮಾದನೂರು | ಮಾದಿನೂರು | ಕೊಪ್ಪಳ | ಚಲವಾದಿ |
| ೧೦ | ಈರವ್ವ ಹರಿಜನ | ೫೦ | ಕಿನ್ನಾಳ | ಕಿನ್ನಾಳ | ಕೊಪ್ಪಳ | ಮಾದರ |
| ೧೧ | ದೇವಮ್ಮ ಹರಿಜನ | ೪೯ | ಮಂಗಳಾಪೂರ | ಕೋಳೂರು | ಕೊಪ್ಪಳ | ಮಾದರ |
| ೧೨ | ಕನಕವ್ವ ಬೇವಿನಕಟ್ಟಿ | ೩೬ | ಕವಲೂರು | ಕವಲೂರು | ಕೊಪ್ಪಳ | ಚಲವಾದಿ |
| ೧೩ | ಚಂದ್ರವ್ವ ರಾಮವ್ವ | ೩೯ | ಕವಲೂರು | ಕವಲೂರು | ಕೊಪ್ಪಳ | ಮಾದರ |
| ೧೪ | ದ್ಯಾಮವ್ವ ಯಮನವ್ವ | ೪೧ | ಇಂದರಗಿ | ಇಂದರಗಿ | ಕೊಪ್ಪಳ | ಭೋವಿ |
| ೧೫ | ಯಲ್ಲವ್ವ ಕಸ್ತೂರವ್ವ | ೩೭ | ಹಾಸಗಲ್ಲ | ಹಾಸಗಲ್ಲ | ಕೊಪ್ಪಳ | ಮಾದರ |
| ೧೬ | ಹನುಮವ್ವ ನಿಂಗವ್ವ | ೪೩ | ಹಾಸಗಲ್ಲ | ಹಾಸಗಲ್ಲ | ಕೊಪ್ಪಳ | ನಾಯಕ |
| ೧೭ | ಸುಬ್ಬಮ್ಮ ವಡ್ಡರ | ೨೪ | ಹಲಗೇರಿ | ಹಲಗೇರಿ | ಕೊಪ್ಪಳ | ವಡ್ಡರ |
| ೧೮ | ಲಕ್ಷ್ಮವ್ವ ವಾಲ್ಮೀಕಿ | ೩೬ | ಹಲಗೇರಿ | ಹಲಗೇರಿ | ಕೊಪ್ಪಳ | ವಾಲ್ಮೀಕಿ |
| ೧೯ | ಪಾರ್ವತಿ ಬನ್ನಿಕೊಪ್ಪ | ೨೬ | ಹಿರೇಸಿಂದೋಗಿ | ಹಿರೇಸಿಂದೋಗಿ | ಕೊಪ್ಪಳ | ವಾಲ್ಮೀಕಿ |

| | | | | | | |
|---|---|---|---|---|---|---|
| ೨೦ | ಹುಲಿಗಮ್ಮ ಕೊರವರ | ೫೧ | ಹಿರೇಸಿಂದೋಗಿ | ಹಿರೇಸಿಂದೋಗಿ | ಕೊಪ್ಪಳ | ಕೊರಚ |
| ೨೧ | ಪ್ರೇಮವ್ವ ಕೊರವರ | ೩೦ | ಹಿರೇಬಗನಾಳ | ಹಿರೇಬಗನಾಳ | ಕೊಪ್ಪಳ | ಕೊರಚ |
| ೨೨ | ಲಲಿತಮ್ಮ ಕುಬೇರಪ್ಪ | ೩೬ | ಗೊಂಡಬಾಳ | ಗೊಂಡಬಾಳ | ಕೊಪ್ಪಳ | ದಾಸರ |
| ೨೩ | ಗಾಳೆವ್ವ ದೇವರಮನಿ | ೫೭ | ಭಾಗ್ಯನಗರ | ಭಾಗ್ಯನಗರ | ಕೊಪ್ಪಳ | ಮಾದರ |
| ೨೪ | ದೇವಕ್ಕ ಹರಿಜನ | ೪೯ | ಭಾಗ್ಯನಗರ | ಭಾಗ್ಯನಗರ | ಕೊಪ್ಪಳ | ಮಾದರ |
| ೨೫ | ಹುಲಿಗೆಮ್ಮ ನಾಯಕ | ೨೭ | ಭಾಗ್ಯನಗರ | ಭಾಗ್ಯನಗರ | ಕೊಪ್ಪಳ | ನಾಯಕ |
| ೨೬ | ಗಾಳೆವ್ವ ದುರಗಪ್ಪ | ೪೭ | ಬಹದ್ದೂರಬಂಡಿ | ಬಹದ್ದೂರಬಂಡಿ | ಕೊಪ್ಪಳ | ಮಾದರ |
| ೨೭ | ಕೆಂಚವ್ವ ಹರಿಜನ | ೪೦ | ಬಿಸರಳ್ಳಿ | ಬಿಸರಳ್ಳಿ | ಕೊಪ್ಪಳ | ಮಾದರ |
| ೨೮ | ಲಕ್ಷ್ಮವ್ವ ಹೊಸಮನಿ | ೪೨ | ಬಿಸರಳ್ಳಿ | ಬಿಸರಳ್ಳಿ | ಕೊಪ್ಪಳ | ನಾಯಕ |
| ೨೯ | ಈರಮ್ಮ ಹೊಸಮನಿ | ೫೫ | ಕ್ಯಾದಗುಪ್ಪ | ಕುಷ್ಟಗಿ | ಹರಿಜನ | |
| ೩೦ | ಯಮನವ್ವ ರಾಮವ್ವ | ೫೬ | ಮುಧೋಳ | ಮುಧೋಳ | ಯಲಬುರ್ಗ | ಹರಿಜನ |
| ೩೧ | ಶಾಂತಮ್ಮ | ೩೯ | ಮುಧೋಳ | ಮುಧೋಳ | ಯಲಬುರ್ಗ | ನಾಯಕ |
| ೩೨ | ಭೀಮವ್ವ ಹಡಗಲಿ | ೪೧ | ತೊಂಡಿಹಾಳ | ಕರಮುಡಿ | ಯಲಬುರ್ಗ | ಚಲವಾದಿ |
| ೩೩ | ಮಹಾದೇವಿ | ೨೯ | ತೊಂಡಿಹಾಳ | ಕರಮಂಡಿ | ಯಲಬುರ್ಗ | ಮಾದರ |
| ೩೪ | ಶರಣವ್ವ ನಿಂಗಪ್ಪ | ೩೫ | ಬಳೋಡಗಿ | ಬಳೋಟಗಿ | ಯಲಬುರ್ಗ | ಮಾದರ |
| ೩೫ | ಮರಿಯವ್ವ ಮರಿಯಪ್ಪ | ೩೯ | ಹೊಸಳ್ಳಿ | ಬಳೋಟಗಿ | ಯಲಬುರ್ಗ | ಮಾದರ |
| ೩೬ | ರೇಣವ್ವ ಮಂಡಲಗೇರಿ | ೪೧ | ಹಣೆದಾಳ | ಬಳೋಟಗಿ | ಯಲಬುರ್ಗ | ವಾಲ್ಮೀಕಿ |
| ೩೭ | ಶಾಂತವ್ವ ನಾಯಕ | ೩೬ | ಗದೇಗೇರಿ | ಗದೇಗೇರಿ | ಯಲಬುರ್ಗ | ವಾಲ್ಮೀಕಿ |
| ೩೮ | ನಾಗವ್ವ ಮ್ಯಾಗೇರಿ | ೨೬ | ವಜ್ರಬಂಡಿ | ಗದೇಗೇರಿ | ಯಲಬುರ್ಗ | ಮಾದರ |
| ೩೯ | ಮರಿಯವ್ವ ಪವಾಡೆಪ್ಪ | ೪೩ | ಹುಲೆಗುಡ್ಡ | ಗದೇಗೇರೆ | ಯಲಬುರ್ಗ | ನಾಯಕ |
| ೪೦ | ಸೀತಾ ತುಕರಾಮ | ೨೯ | ಚಿಕ್ಕಬನ್ನಿಗೋಳ | ಗದೇಗೇರೆ | ಯಲಬುರ್ಗ | ಲಂಬಾಣಿ |
| ೪೧ | ಲಕ್ಷ್ಮವ್ವ ಹಿರೇಗುಂಡಪ್ಪ | ೪೧ | ಸಾಲಜಾವಿ | ಗದೆಗೆರೆ | ಯಲಬುರ್ಗ | ನಾಯಕ |
| ೪೨ | ಹುಲಿಗೆವ್ವ ಮನ್ನಾಪೂರ | ೩೮ | ಹಿರೇಅರಳಿಹಳ್ಳಿ | ಹಿರೇಅರಳಿಹಳ್ಳಿ | ಯಲಬುರ್ಗ | ನಾಯಕ |

| | | | | | | |
|---|---|---|---|---|---|---|
| ೪೩ | ಪ್ರೇಮವ್ವ ವಡ್ಡರ | ೨೯ | ಮಾಟಲದಿನ್ನಿ | ಮಾಟಲದಿನ್ನಿ | ಯಲಬುರ್ಗ | ಭೋವಿ |
| ೪೪ | ರೇಣುಕವ್ವ ತಳವಾರ | ೪೧ | ಬುಡಗುಂಟಿ | ಮಾಡಲದಿನ್ನಿ | ಯಲಬುರ್ಗ | ನಾಯಕ |
| ೪೫ | ಚನ್ನಪ್ಪ ದುರಂಗಪ್ಪ | ೫೨ | ಉಚ್ಚಲಗುಂಡ | ನಿಲೋಗಲ್ | ಯಲಬುರ್ಗ | ಮಾದರ |
| ೪೬ | ಪಾರ್ವತಿ | ೩೩ | ಯಾಪಲದಿನ್ನಿ | ನಿಲೋಗಲ್ | ಯಲಬುರ್ಗ | ನಾಯಕ |
| ೪೭ | ಹನುಮವ್ವ ಬಂಡಿ | ೪೨ | ತಾಳಿಕೇರಿ | ತಾಳಿಕೇರಿ | ಯಲಬುರ್ಗ | ನಾಯಕ |
| ೪೮ | ದೇವಮ್ಮ ಭಜಂತ್ರಿ | ೫೧ | ಬೋದೂರು | ತಾಳಿಕೇರಿ | ಯಲಬುರ್ಗ | ಕೊರಚ |
| ೪೯ | ಚಂದ್ರವ್ವ ಕರುಪಿನ | ೪೦ | ಚೌಡಾಪೂರ | ತಾಳಿಕೇರಿ | ಯಲಬುರ್ಗ | ಹರಿಜನ |
| ೫೦ | ದುರಗವ್ವ ಹನುಮಂತಪ್ಪ | ೫೪ | ಬೇವೂರು | ಬೇವೂರು | ಯಲಬುರ್ಗ | ಹರಿಜನ |
| ೫೧ | ಗಂಗಮ್ಮ ಬಾಳಪ್ಪ | ೨೯ | ಕುದುರಿಮೋತಿ | ಕುದುರಿಮೋತಿ | ಯಲಬುರ್ಗ | ಹರಿಜನ |
| ೫೨ | ಶಿವವ್ವ ಹನುಮಂತಪ್ಪ | ೩೦ | ತದ್ರಹಳ್ಳಿ | ಕುದುರಿಮೋತಿ | ಯಲಬುರ್ಗ | ಹರಿಜನ |
| ೫೩ | ಶಾವವ್ವ ಸಣ್ಣ ಈರಪ್ಪ | ೩೨ | ಮಂಗಳೂರು | ಮಂಗಳೂರು | ಯಲಬುರ್ಗ | ಚಲವಾದಿ |
| ೫೪ | ಬಾಲವ್ವ ಸಣ್ಣ ಫಕೀರಪ್ಪ | ೩೯ | ವಣಗೇರಿ | ವಣಗೇರಿ | ಯಲಬುರ್ಗ | ಮಾದರ |
| ೫೫ | ದೇವವ್ವ ಚನ್ನದಾಸರ | ೪೧ | ತರಲಕಟ್ಟಿ | ಮುರಡಿ | ಯಲಬುರ್ಗ | ದಾಸರ |
| ೫೬ | ಬಾಲಮ್ಮ ತಳವಾರ | ೩೮ | ಬೆಣಕಲ್ಲ | ಬೆಣಕಲ್ಲ | ಯಲಬುರ್ಗ | ನಾಯಕ |
| ೫೭ | ಮಲವ್ವ ಗಟ್ಟಿನಮನಿ | ೪೪ | ಮಸಬಹಂಚಿನಾಳ | ಬೆಣಕಲ್ಲ | ಯಲಬುರ್ಗ | ಮಾದರ |
| ೫೮ | ಲಕ್ಷ್ಮವ್ವ ವೀರಪ್ಪ | ೩೭ | ವೀರಾಪೂರ | ಬಾನಾಪೂರ | ಯಲಬುರ್ಗ | ಮಾದರ |

| ಕ್ರ.ಸಂ | ಹೆಸರು | ವಯಸ್ಸು | ಕ್ಷೇತ್ರ | ತಾಲೂಕು | ಜಾತಿ |
|---|---|---|---|---|---|
| ೫೯ | ಸಿಂಗಮ್ಮ ಸಿಂಗಪ್ಪ | ೪೧ | ಚಿಕ್ಕಮಾದಿನಾಳ | ಗಂಗಾವತಿ | ಹರಿಜನ |
| ೬೦ | ದೇವಮ್ಮ ಬಸಪ್ಪ | ೪೭ | ಚಿಕ್ಕಮಾದಿನಾಳ | ಗಂಗಾವತಿ | ಬೇಡ |
| ೬೧ | ಶಾರದಮ್ಮ ಯಂಕ್ಕಪ್ಪ | ೩೯ | ಚಿಕ್ಕಮಾದಿನಾಳ | ಗಂಗಾವತಿ | ಬೇಡ |
| ೬೨ | ಹನಮವ್ವ ಶಂಕ್ರಪ್ಪ | ೩೬ | ಸೂಳೇಕಲ್ | ಗಂಗಾವತಿ | ನಾಯಕ |
| ೬೩ | ನಾಗಮ್ಮ ನಾಗಪ್ಪ | ೩೧ | ಸೂಳೇಕಲ್ | ಗಂಗಾವತಿ | ಮಾದರ |
| ೬೪ | ಹೊನ್ನಮ್ಮ ಕನಕರಾಯ | ೪೦ | ಕನಕಗಿರಿ | ಗಂಗಾವತಿ | ನಾಯಕ |
| ೬೫ | ಹುಲಿಗೆಮ್ಮ | ೩೭ | ಕನಕಗಿರಿ | ಗಂಗಾವತಿ | ಚಲವಾದಿ |
| ೬೬ | ರೇಣುಕಮ್ಮ ಹೊನ್ನಮ್ಮ | ೩೬ | ಕನಕಗಿರಿ | ಗಂಗಾವತಿ | ಚಲವಾದಿ |
| ೬೭ | ಬಸಮ್ಮ ಹಿರೇರಾಮಣ್ಣ | ೩೯ | ನವಲಿ | ಗಂಗಾವತಿ | ಮಾದರ |
| ೬೮ | ಶಂಕ್ರಮ್ಮ ಲಚಮಪ್ಪ | ೪೨ | ನವಲಿ | ಗಂಗಾವತಿ | ಮಾದರ |
| ೬೯ | ವಿಶಾಲಾಕ್ಷಿ | ೩೦ | ನವಲಿ | ಗಂಗಾವತಿ | ನಾಯಕ |
| ೭೦ | ಹೊಳೆಯಮ್ಮ ನಾಯಕ | ೩೩ | ಗೌರಿಪುರ | ಗಂಗಾವತಿ | ನಾಯಕ |
| ೭೧ | ನೀಲಮ್ಮ ರಾಮಮ್ಮ | ೫೦ | ಗೌರಿಪುರ | ಗಂಗಾವತಿ | ಹರಿಜನ |
| ೭೨ | ಲಕ್ಷಮ್ಮ ಶ್ಯಾಮಣ್ಣ | ೩೮ | ಗೌರಿಪುರ | ಗಂಗಾವತಿ | ಹರಿಜನ |
| ೭೩ | ನೀಲಮ್ಮ ರಾಮಣ್ಣ | ೪೦ | ಗೌರಿಪುರ | ಗಂಗಾವತಿ | ಭೋವಿ |
| ೭೪ | ದುರಗಮ್ಮ | ೫೧ | ಗೌರಿಪುರ | ಗಂಗಾವತಿ | ನಾಯಕ |
| ೭೫ | ಮಾರಮ್ಮ | ೪೦ | ಹುಲಿಹೈದರ | ಗಂಗಾವತಿ | ಹರಿಜನ |
| ೭೬ | ವೆಂಕಟಮ್ಮ | ೩೬ | ಹುಲಿಹೈದರ | ಗಂಗಾವತಿ | ನಾಯಕ |
| ೭೭ | ಹುಲಿಗಮ್ಮ | ೪೬ | ಕರಡೋಣ | ಗಂಗಾವತಿ | ನಾಯಕ |
| ೭೮ | ಮಲ್ಲಮ್ಮ | ೪೦ | ಕರಡೋಣ | ಗಂಗಾವತಿ | ಚಲವಾದಿ |
| ೭೯ | ದುರಗಮ್ಮ | ೫೨ | ಕರಡೋಣ | ಗಂಗಾವತಿ | ಮಾದರ |
| ೮೦ | ಶಿವಮ್ಮ ಮಾರೆಪ್ಪ | ೪೭ | ಬೇವಿನಾಳ | ಗಂಗಾವತಿ | ಮಾದರ |

| | | | | | |
|---|---|---|---|---|---|
| ೮೦ | ದ್ಯಾವಮ್ಮ ನಿಂಗಪ್ಪ | ೩೯ | ಬೇವಿನಾಳ | ಗಂಗಾವತಿ | ಮಾದರ |
| ೮೧ | ಲಕ್ಷ್ಮವ್ವ ಹನುಮಂತಪ್ಪ | ೪೩ | ಮುಸಲಾಪೂರ | ಗಂಗಾವತಿ | ಮಾದರ |
| ೮೨ | ರೇಣುಕಮ್ಮ | ೪೯ | ಮುಸಲಾಪೂರ | ಗಂಗಾವತಿ | ಚಲವಾದಿ |
| ೮೩ | ನಾಗಮ್ಮ | ೫೦ | ಸಿದ್ದಾಪೂರ | ಗಂಗಾವತಿ | ನಾಯಕ |
| ೮೪ | ರೇಣುಕಾ ಯಮನೂರಪ್ಪ | ೪೧ | ಸಂಗಾಪೂರ | ಗಂಗಾವತಿ | ಹರಿಜನ |
| ೮೫ | ಶಿವಪುತ್ರಮ್ಮ | ೩೯ | ಮಲ್ಲಾಪೂರ | ಗಂಗಾವತಿ | ಹರಿಜನ |
| ೮೬ | ಹುಲಿಗಮ್ಮ ಹನುಮಂತಪ್ಪ | ೪೬ | ಮಲ್ಲಾಪೂರ | ಗಂಗಾವತಿ | ನಾಯಕ |
| ೮೭ | ತಿಪ್ಪಮ್ಮ | ೫೦ | ಮಲ್ಲಾಪೂರ | ಗಂಗಾವತಿ | ವಡ್ಡರು |
| ೮೮ | ನಾಗರತ್ನ ಪಂಪಾಪತಿ | ೨೦ | ಮರಳಿ | ಗಂಗಾವತಿ | ಮಾದರ |
| ೮೯ | ಹನುಮಮ್ಮ | ೫೨ | ಅಗೋಲಿ | ಗಂಗಾವತಿ | ಮಾದರ |
| ೯೦ | ಹನುಮವ್ವ ಆಚಾರಪ್ಪ | ೫೮ | ಚಿಕ್ಕಬೆಣಕಲ್ | ಗಂಗಾವತಿ | ಮಾದರ |
| ೯೧ | ದ್ಯಾವಮ್ಮ ಗಾಳೆಪ್ಪ | ೪೭ | ಕೇಸರಡ್ಡಿ | ಗಂಗಾವತಿ | ಕೊರಚ |
| ೯೨ | ಮುದುಕಮ್ಮ ಗಾಳೆಪ್ಪ | ೫೬ | ಹೇರೂರು | ಗಂಗಾವತಿ | ಹರಿಜನ |
| ೯೩ | ಮರಿಯಮ್ಮ | ೫೧ | ಹೇರೂರು | ಗಂಗಾವತಿ | ಭೋವಿ |
| ೯೪ | ದುರಗಮ್ಮ ಅಡಿವೆಪ್ಪ | ೪೩ | ಹಣವಾಳ | ಗಂಗಾವತಿ | ಚಲವಾದಿ |
| ೯೫ | ಗಾಳೆವ್ವ ಹರಿಜನ | ೩೯ | ನಿಲೋಗಲ್ | ಕುಷ್ಟಗಿ | ಹರಿಜನ |
| ೯೬ | ಹನುಮವ್ವ | ೫೧ | ನಿಲೋಗಲ್ | ಕುಷ್ಟಗಿ | ನಾಯಕ |
| ೯೭ | ತಿಪ್ಪವ್ವ | ೪೧ | ನಿಲೋಗಲ್ | ಕುಷ್ಟಗಿ | ಹರಿಜನ |
| ೯೮ | ಮಲ್ಲವ್ವ ಮಲ್ಲಪ್ಪ | ೫೦ | ತುಗ್ಗಲದೋಣಿ | ಕುಷ್ಟಗಿ | ನಾಯಕ |
| ೯೯ | ಮರಿಯವ್ವ ಹರಿಜನ | ೫೨ | ತುಗ್ಗಲದೋಣಿ | ಕುಷ್ಟಗಿ | ಹರಿಜನ |
| ೧೦೦ | ಕೆಂಚಮ್ಮ ಧರ್ಮಪ್ಪ | ೫೬ | ಹನುಮನಾಳ | ಕುಷ್ಟಗಿ | ಹರಿಜನ |
| ೧೦೧ | ಶಾಂತವ್ವ ಕರಣೇರಿ | ೪೦ | ಹನುಮನಾಳ | ಕುಷ್ಟಗಿ | ನಾಯಕ |
| ೧೦೨ | ಲಕ್ಷ್ಮವ್ವ ಅಳವಾಡಿ | ೩೬ | ಹನುಮನಾಳ | ಕುಷ್ಟಗಿ | ನಾಯಕ |

| | | | | | |
|---|---|---|---|---|---|
| ೧೦೪ | ಭೀಮವ್ವ ವಡ್ಡರ | ೫೦ | ಹನುಮನಾಳ | ಕುಷ್ಟಗಿ | ವಡ್ಡರ |
| ೧೦೫ | ಕಮಲವ್ವ ಬಳಿಗಿ | ೪೧ | ಮಾಲಗಿತ್ತಿ | ಕುಷ್ಟಗಿ | ಚಲವಾದಿ |
| ೧೦೬ | ರೇಣವ್ವ ಕುರಡ್ತಿ | ೩೫ | ಜಾರ್ಗಿಗೂಡದೂರು | ಕುಷ್ಟಗಿ | ನಾಯಕ |
| ೧೦೭ | ದುರಗವ್ವ ಮಾದರ | ೫೧ | ಜಾರ್ಗಿಗೂಡದೂರು | ಕುಷ್ಟಗಿ | ಮಾದರ |
| ೧೦೮ | ಲೀಲವ್ವ ಲಾಚಪ್ಪ | ೪೦ | ಯರಗೇರ | ಕುಷ್ಟಗಿ | ಲಂಬಾಣಿ |
| ೧೦೯ | ಗಿರಿಜವ್ವ ತಳವಾರ | ೩೯ | ಯರಗೇರ | ಕುಷ್ಟಗಿ | ನಾಯಕ |
| ೧೧೦ | ನೀಲಮ್ಮ ಗುಳೇದಗುಪ್ಪ | ೪೧ | ಹನಮಸಾಗರ | ಕುಷ್ಟಗಿ | ವಡ್ಡರ |
| ೧೧೧ | ಲಲಿತವ್ವ ಹುಲ್ಲೂರು | ೫೦ | ಹನಮಸಾಗರ | ಕುಷ್ಟಗಿ | ಮಾದರ |
| ೧೧೨ | ಶಾಂತವ್ವ ಭಜಂತ್ರಿ | ೪೩ | ಕಪ್ಪರಗಿ | ಕುಷ್ಟಗಿ | ಕೊರಚ |
| ೧೧೩ | ಶಾಟವ್ವ ಕನಸಾವಿ | ೫೧ | ಹೂಲಗೇರ | ಕುಷ್ಟಗಿ | ಭೋವಿ |
| ೧೧೪ | ಲಕ್ಷ್ಮವ್ವ ಹಿರೇಮನಿ | ೩೯ | ಬೆನಕನಾಳ | ಕುಷ್ಟಗಿ | ಹರಿಜನ |
| ೧೧೫ | ಮಹಾದೇವಿ | ೩೦ | ಬೆನಕನಾಳ | ಕುಷ್ಟಗಿ | ನಾಯಕ |
| ೧೧೬ | ಹಿದ್ದವ್ವ ಹರಿಜನ | ೪೧ | ಹಿರೆಗೊಣ್ಣಗರ | ಕುಷ್ಟಗಿ | ಚಲವಾದಿ |
| ೧೧೭ | ಹನುಮವ್ವ ವಾಲಿಕಾರ | ೪೨ | ಹಿರೆಬನ್ನಿಗೋಳ | ಕುಷ್ಟಗಿ | ನಾಯಕ |
| ೧೧೮ | ಹನುಮವ್ವ | ೫೭ | ಬಿಜಕಲ್ | ಕುಷ್ಟಗಿ | ನಾಯಕ |
| ೧೧೯ | ಲಚಮ್ಮ ರಾಠೋಡ | ೩೫ | ಬಿಜಕಲ್ | ಕುಷ್ಟಗಿ | ಲಂಬಾಣಿ |
| ೧೨೦ | ಲಕ್ಷ್ಮಮ್ಮ ರಾಮಪ್ಪ | ೪೯ | ಹೋಡಿಹಾಳ | ಕುಷ್ಟಗಿ | ನಾಯಕ |
| ೧೨೧ | ಲಕ್ಷ್ಮಮ್ಮ ರಾಠೋಡ | ೩೦ | ಕ್ಯಾದಗುಪ್ಪ | ಕುಷ್ಟಗಿ | ಲಂಬಾಣಿ |
| ೧೨೨ | ಈರಮ್ಮ ಹೊಸಮನಿ | ೫೫ | ಕ್ಯಾದಗುಪ್ಪ | ಕುಷ್ಟಗಿ | ಹರಿಜನ |

## ತಾಲೂಕು ಪಂಚಾಯತಿಯಲ್ಲಿನ ದಲಿತ ಮಹಿಳೆಯರ ವಿವರ

| ಕ್ರ.ಸಂ | ಹೆಸರು | ವಯಸ್ಸು | ಪ್ರತಿನಿಧಿಸುತ್ತಿರುವ ಕ್ಷೇತ್ರ | ತಾಲೂಕು | ಜಿಲ್ಲೆ | ಜಾತಿ |
|---|---|---|---|---|---|---|
| ೦೧ | ಮಾಳಿಯವ್ವ ಶರಣಪ್ಪಗೌಡ | ೩೦ | ಜರಕುಂಟಿ | ಯಲಬುರ್ಗಾ | ಕೊಪ್ಪಳ | ನಾಯಕ |
| ೦೨ | ಶಾಂತವ್ವ ನಾಯಕ | ೪೫ | ಮುರುಡಿತಾಂಡ | ಯಲಬುರ್ಗಾ | ಕೊಪ್ಪಳ | ಲಂಬಾಣಿ |
| ೦೩ | ಸಾವಿತ್ರಮ್ಮ ನಾಗಪ್ಪ | ೪೬ | ಆಕಳಕುಂಪಿ | ಗಂಗಾವತಿ | ಕೊಪ್ಪಳ | ನಾಯಕ |
| ೦೪ | ಶಕ್ರಿಬಾಯಿ | ೩೯ | ಆನೆಗುಂದಿ | ಗಂಗಾವತಿ | ಕೊಪ್ಪಳ | ಲಂಬಾಣಿ |
| ೦೫ | ಶಾಂತಮ್ಮ ಭೀಮಪ್ಪ | ೩೬ | ವೆಂಕಟಗಿರಿ | ಗಂಗಾವತಿ | ಕೊಪ್ಪಳ | ನಾಯಕ |
| ೦೬ | ಲಕ್ಷ್ಮಿ ವೆಂಕಟೇಶ | ೩೦ | ಮರ್ಲಾನಹಳ್ಳಿ | ಗಂಗಾವತಿ | ಕೊಪ್ಪಳ | ಚಲವಾದಿ |
| ೦೭ | ರೇಣುಕಾ ತಳವಾರ | ೩೪ | ಬೆಟಗೇರಿ | ಕೊಪ್ಪಳ | ಕೊಪ್ಪಳ | ನಾಯಕ |
| ೦೮ | ಗಂಗವ್ವ ಹಲಗೇರಿ | ೫೩ | ಗಿಣಿಗೇರ | ಕೊಪ್ಪಳ | ಕೊಪ್ಪಳ | ಮಾದರ |
| ೦೯ | ಪ್ರೇಮ ಹರೀಶ | ೩೧ | ಕ್ಯಾದಿಗುಪ್ಪ | ಕುಷ್ಟಗಿ | ಕೊಪ್ಪಳ | ನಾಯಕ |

## ಜಿಲ್ಲಾ ಪಂಚಾಯತಿಯಲ್ಲಿನ ದಲಿತ ಮಹಿಳೆಯರ ವಿವರ

| ಕ್ರ.ಸಂ | ಹೆಸರು | ವಯಸ್ಸು | ಪ್ರತಿನಿಧಿಸುತ್ತಿರುವ ಕ್ಷೇತ್ರ | ತಾಲೂಕು | ಜಿಲ್ಲೆ | ಜಾತಿ |
|---|---|---|---|---|---|---|
| ೦೧ | ಮಾಲತಿ ನಾಯಕ | ೩೩ | ಹನುಮನಾಳ | ಕುಷ್ಟಗಿ | ಕೊಪ್ಪಳ | ನಾಯಕ |
| ೦೨ | ಪಾರ್ವತಿ ಪರಶುರಾಮುಲು | ೩೪ | ಬಂಡಿಹರ್ಲಾಪೂರ | ಕೊಪ್ಪಳ | ಕೊಪ್ಪಳ | ಭೋವಿ |
| ೦೩ | ಸುಜಾತ ನಾಯಕ | ೩೦ | ಹುಲಿಹೈದರ | ಗಂಗಾವತಿ | ಕೊಪ್ಪಳ | ನಾಯಕ |
| ೦೪ | ವಿಜಯಲಕ್ಷ್ಮಿ ಭಜಂತ್ರಿ | ೩೩ | ಚಿಕ್ಕಮ್ಯಾಗೇರಿ | ಯಲಬುರ್ಗಾ | ಕೊಪ್ಪಳ | ಭಜಂತ್ರಿ |

# ೨. ಪ್ರಶ್ನಾವಳಿ ಮಾದರಿ

## ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮಹಿಳಾ ಅಧ್ಯಯನ ವಿಭಾಗ

## ಕ್ಷೇತ್ರ ಸಮೀಕ್ಷೆಯ ವಿವರ

**ಸಾಮಾನ್ಯ ಮಾಹಿತಿ**

೧. ಹೆಸರು:

೨. ತಂದೆ / ಗಂಡನ ಹೆಸರು:

೩. ಊರು:

೪. ಪ್ರತಿನಿಧಿಸುತ್ತಿರುವ ಕ್ಷೇತ್ರ:

ಗ್ರಾಮ: ತಾಲ್ಲೂಕ: ಜಿಲ್ಲೆ: ಕೊಪ್ಪಳ

೫. ಜಾತಿ: ಉಪಜಾತಿ:

೬. ಶಿಕ್ಷಣ : ಅಕ್ಷರಸ್ಥರು / ಅನಕ್ಷರಸ್ಥರು

ಅ. ಪ್ರಾಥಮಿಕ

ಬ. ಮಾಧ್ಯಮಿಕ

ಕ. ಪ್ರೌಢ

ಡ. ಇತರೆ

ಅ. ಓದಲು ಬರುತ್ತದೆಯೇ

ಬ. ಬರೆಯಲು

ಕ. ಸಹಿಮಾಡಲು

ಡ. ಇತರೆ

೭. ಉದ್ಯೋಗ: ಅ. ಕೃಷಿಕಾರ್ಮಿಕರು

ಬ. ಕೂಲಿ

ಕ. ವ್ಯಾಪಾರ

ಡ. ಇತರೆ

೮. ವೈವಾಹಿಕ ಸ್ಥಾನಮಾನ: ವಿವಾಹಿತರು/ಅವಿವಾಹಿತರು ಇತರೆ

೯. ಯಾವ ವಯಸ್ಸಿನಲ್ಲಿ ಮದುವೆಯಾಯಿತು:
- ೧೮-೨೧
- ೨೨-೨೫
- ೨೫-೨೭

೧೦. ಗಂಡನ ಶಿಕ್ಷಣ ಮಟ್ಟ:
- ಅ. ಪ್ರಾಥಮಿಕ
- ಬ. ಮಾಧ್ಯಮಿಕ
- ಕ. ಪ್ರೌಢ
- ಡ. ಇತರೆ

೧೧. ತಿಂಗಳ ಆದಾಯ:

**ಸಮಾಜೋ ಆರ್ಥಿಕ ವಿವರಗಳು:**

೧೨ ಕುಟುಂಬದ ಸ್ವರೂಪ

| ಕ್ರ.ಸಂ | ಕುಟುಂಬದ ಸದಸ್ಯರ ಹೆಸರು | ವಯಸ್ಸು | ಉದ್ಯೋಗಿ | ಶಿಕ್ಷಣ | ವೈವಾಹಿಕ ಸ್ಥಾನಮಾನ |
|---|---|---|---|---|---|
| | | | | | |

೧೩. ವಸತಿ: ಸ್ವಂತದ್ದು/ಬಾಡಿಗೆ
- ಅ. ಗುಡಿಸಲು
- ಬ. ಮಣ್ಣಿನ ಮನೆ
- ಕ. ಆರ್.ಸಿ.ಸಿ
- ಡ. ಇತರೆ

೧೪. ಅಡುಗೆ ವ್ಯವಸ್ಥೆ:
- ಅ. ಸೌದೆ
- ಬ. ಸ್ಟೌವ್
- ಕ. ಗ್ಯಾಸ್
- ಡ. ಇತರೆ

೧೫. ಮನೆಯಲ್ಲಿ ಶೌಚಾಲಯ ಇದೆಯೇ: ಇದೆ/ಇಲ್ಲ

೧೬. ಮನೆಯಲ್ಲಿ ನಲ್ಲಿ ಇದೆಯೇ: ಇದೆ/ಇಲ್ಲ

೧೭. ನೀರು ಸಂಗ್ರಹದ ಮೂಲ: ಅ. ಪಬ್ಲಿಕ್ ಟ್ಯಾಪ್

ಬ. ಕೊಳವೆ ಬಾವಿ

ಕ. ನೀರಿನ ಟ್ಯಾಂಕ್

ಡ. ಇತರೆ

೧೮. ನಿಮ್ಮ ಕೇರಿಯಲ್ಲಿ ನೀರಿನ ಸ್ವರೂಪ ಹೇಗಿದೆ.

೧೯. ಮನೆಯಿಂದ ನೀರು ತರಲು ಇರುವ ದೂರ:

೨೦. ನೀರಿನ ಭವಣೆ ಇದ್ದಾಗ ಊರಿನ ಬೀದಿಗಳಲ್ಲಿ ನೀರು ಸಿಗುತ್ತದೆಯೇ: ಹೌದು / ಇಲ್ಲ

೨೧. ಮನೆಯಲ್ಲಿ ವಿದ್ಯುತ್ ಸೌಲಭ್ಯ ಇದೆಯೇ: ಇದೆ / ಇಲ್ಲ

೨೨. ನಿಮಗೆ ದಿನಪತ್ರಿಕೆ ಓದುವ ಹವ್ಯಾಸ ಇದೆಯೇ: ಹೌದು / ಇಲ್ಲ

೨೩. ಕುಟುಂಬದ ಜಮೀನು ಇದೆಯೇ: ಇದೆ / ಇಲ್ಲ

೨೪. ನಿಮ್ಮ ಹೆಸರಿನಲ್ಲಿ ಜಮೀನು ಇದೆಯೇ ಇದ್ದರೆ ಅದರ ಸ್ವರೂಪ ಹೇಗಿದೆ.

ಅ. ಪಿತ್ರಾರ್ಜಿತ

ಆ. ಸ್ವಯಾರ್ಜಿತ

ಇ. ಸರಕಾರ ನೀಡಿದ್ದು

ಡ. ಇತರೆ

೨೫. ಜಮೀನಿನ ಸ್ವರೂಪ: ಅ. ಹೊರಭೂಮಿ

ಆ. ನೀರಾವರಿ

ಇ. ಒಣಭೂಮಿ

ಡ. ಇತರೆ

೨೬. ಊರಿನಲ್ಲಿ ನಡೆಯುವ ಜಾತ್ರೆ ಮಹೋತ್ಸವಗಳ ಸ್ವರೂಪ ಹೇಗಿದೆ. ಯಾವ ಸಮುದಾಯದವರ ಜಾತ್ರೆ ಅದು ಅಲ್ಲಿ ಪಾಲ್ಗೊಳ್ಳುವಂತಹ ಪ್ರಮುಖ ಸಮುದಾಯಗಳು ಯಾವವು? ನೀವು ಅದರಲ್ಲಿ ಭಾಗವಹಿಸುವ ಸ್ವರೂ ಹೇಗಿದೆ.

೨೭. ಊರಿನಲ್ಲಿರುವ ದೇವಸ್ಥಾನ, ಹೋಟೆಲ್, ಬೋರ್‌ವೆಲ್, ಭಾವಿ, ಶಾಲೆಗಳಲ್ಲಿ ಜಾತಿಯತೆಯನ್ನು ಆಚರಣೆಯನ್ನು ಎಂದಾದರೂ ಕಂಡಿದ್ದಿರಾ? ಹೌದು/ಇಲ್ಲ

## ರಾಜಕೀಯ ಸಂಬಂಧಿ ಪ್ರಶ್ನಾವಳಿ

೧. ರಾಜಕೀಯ ಆಯ್ಕೆಯೇ ಸ್ವರೂಪ.

೨ ಮೊದಲು ನೀವು ರಾಜಕೀಯಕ್ಕೆ ಬಂದಾಗ ಕುಟುಂಬ, ಸಮುದಾಯಗಳು ಪ್ರತಿಕ್ರಿಯೆ ಏನು?

೩. ರಾಜಕೀಯ ಕುರಿತಂತೆ ಕುಟುಂಬದ ಮನೋಭಾವನೆ ನಿಮಗೆ ಪೂರಕವಾಗಿದೆಯೇ? ಹೌದು / ಇಲ್ಲ

೪. ರಾಜಕೀಯಕ್ಕೆ ಬರುವ ಮುಂಚೆ ನೀವು ಮುಖ್ಯವಾಗಿ ಯಾವ ರೀತಿಯ ಅಭಿವೃದ್ಧಿಪರ ಕೆಲಸಗಳ ಬಗ್ಗೆ ಕಾಳಜಿಯನ್ನು ಆಶೆಯನ್ನು ಇಟ್ಟುಕೊಂಡಿದ್ದಿರಿ ಅವು ಇಂದು ಸಾಕಾರಗೊಳಿಸಲು ಸಾಧ್ಯವಾಗಿದೆಯಾ?

ಹೌದು / ಇಲ್ಲ

೫. ರಾಜಕೀಯ ನಿಮಗೆ ಹೊಸದೆ? ಹಾದು / ಇಲ್ಲ

೬. ನಿಮಗೆ ಯಾವುದಾದರೂ ಪಕ್ಷದ ಸದಸ್ಯತ್ವ ಇದೆಯಾ? ಇದೆ / ಇಲ್ಲ

೭. ಚುನಾವಣೆಯ ಸಮಯದಲ್ಲಿ ನಡೆದ ಖರ್ಚುವೆಚ್ಚಗಳ ಸ್ವರೂಪ ಮತ್ತು ನಿಭಾವನೆ ಹೇಗಿತ್ತು?

೮. ಹಾಗಾದರೆ ಆರ್ಥಿಕ ಸಹಾಯ ಮಾಡಿದವರ ಪ್ರಭಾವ ಮತ್ತು ಸ್ವರೂಪ ಹೇಗಿತ್ತು?

೯. ಚುನಾವಣೆಯಲ್ಲಿ ನಿಮ್ಮ ಪ್ರತಿಸ್ಪರ್ಧಿ ಯಾರಿದ್ದರು

ಅ. ಕುಟುಂಬದವರು

ಬ. ಸ್ವ ಸಮುದಾಯದವರು

ಕ. ಇತರೆ

೧೦. ಚುನಾವಣೆಯಲ್ಲಿ ನೀವು ಪ್ರತಿಸ್ಪರ್ಧಿಗಿಂತ ಎಷ್ಟು ಮತಗಳ ಅಂತರದಿಂದ ಜಯಗಳಿಸಿದಿರಿ.

೧೧. ಚುನಾವಣೆಯ ಸಮಯದಲ್ಲಿ ಮತಯಾಚನೆಯ ಸಂದರ್ಭದಲ್ಲಿ ಊರಿನ ಇತರರ ಮನೆಮನೆಗೆ ಹೋಗಿ ಮತಯಾಚನೆ ಮಾಡುವಾಗ ನಿಮಗೆ ಯಾವುದಾದರೂ ಮುಜುಗರ, ಅಂಜಿಕೆ ಅಥವಾ ನಾಚಿಕೆ ಇತ್ತೆ. ಹೌದು / ಇಲ್ಲ

೧೨. ಸಾಮಾನ್ಯವಾಗಿ ನಿಮ್ಮ ಮನೆಯಲ್ಲಿ ಬೆಂಬಲಿಸುವ ಪಕ್ಷ ಯಾವುದಾದರೂ ಇದೆಯಾ? ಇದೆ / ಇಲ್ಲ

೧೩. ಚುನಾವಣೆಯಲ್ಲಿ ಗೆದ್ದನಂತರ ನಿಮ್ಮ ಅನುಭವ ಹೇಗಿತ್ತು?

೧೪. ಪಂಚಾಯತಿಯ ಅಧಿಕಾರಗಳು ಮತ್ತು ಕಾರ್ಯಗಳ ಬಗ್ಗೆ ನಿಮಗೆ ಗೊತ್ತಿದ್ದರೆ ಅದರ ವಿವರಣೆಗಳು.

೧೫. ಪಂಚಾಯತಿಯ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಎಷ್ಟು ದಿನಗಳಿಗೊಮ್ಮೆ ನೀವು ಸಭೆಗಳಿಗೆ ಹಾಜರಾಗುವಿರಿ?

೧೬. ಗ್ರಾಮ ಸಭೆಗಳ ಬಗ್ಗೆ ನಿಮಗೆ ಗೊತ್ತಿದೆಯಾ? ಹೌದು/ಇಲ್ಲ (ಗೊತ್ತಿಲ್ಲವಾದರೆ ನಿಮಗೆ ಯಾರು ಸಹಾಯ ಮಾಡುವರು)

೧೭. ಗ್ರಾಮ ಸಭೆಗಳಿಗೆ ಹಾಜರಾಗುವಿರಾ? ಹೌದು / ಇಲ್ಲ

ಅ. ಗಂಡ

ಬ. ತಂದೆ

ಕ. ಇತರೆ

೧೮. ಪಂಚಾಯತಿಯ ಕಾರ್ಯಕಲಾಪಗಳಿಗೆ ಎಷ್ಟು ದಿನಗಳಿಗೊಮ್ಮೆ ಹಾಜರಾಗುವಿರಿ

ಅ. ಹದಿನೈದು ದಿನಗಳಿಗೊಮ್ಮೆ

ಬ. ತಿಂಗಳಿಗೊಮ್ಮೆ

ಕ. ಎರಡು ತಿಂಗಳಿಗೊಮ್ಮೆ

ಡ. ಇತರೆ

೧೯. ಪಂಚಾಯತಿಯ ಅಧಿಕಾರ ಚಲಾವಣೆಯ ಸಂದರ್ಭದಲ್ಲಿ ನಿಮಗೆ ಯಾವುದಾದರು ಕೀಳರಿಮೆ ಕಾಡುವುದೇ? ಹೌದು / ಇಲ್ಲ

ಅ. ಅನಕ್ಷರತೆ

ಬ. ಜಾತೀಯತೆ

ಕ. ಊರಿನ ಹಿರಿಯರೊಂದಿಗಿನ ಬೆರೆಯುವಿಕೆ

ಡ. ಇತರೆ

೨೦. ನಿಮಗೆ ಒದಗಿರುವಂತಹ ಅಧಿಕಾರವನ್ನು ನೀವು ಸ್ವತಂತ್ರವಾಗಿ, ನಿರ್ಭಯವಾಗಿ ಚಲಾಯಿಸುತ್ತೀರಾ? ಹೌದು / ಇಲ್ಲ

೨೧. ಇಲ್ಲವಾದರೆ ನಿಮ್ಮ ಬದಲಿಗೆ ಅಧಿಕಾರವನ್ನು ಚಲಾಯಿಸುವವರು ಯಾರು

ಅ. ಗಂಡ

ಬ. ತಂದೆ

ಕ. ಇತರೆ

೨೨. ನಿಮಗೆ ಸ್ಥಳೀಯ ನಾಯಕರುಗಳ ಪರಿಚಯವಿದೆಯೇ? ಇದೆ / ಇಲ್ಲ

ಅ. ಎಮ್.ಪಿ

ಬ. ಎಮ್.ಎಲ್.ಎ

ಕ. ಜಿ.ಪಂ ಅಧ್ಯಕ್ಷರು

ಡ. ಇತರೆ

೨೩. ನೀವು ದಲಿತರು ಎನ್ನುವ ಕಾರಣದಿಂದ ನಿಮ್ಮ ಅಧಿಕಾರಕ್ಕೆ ತೊಂದರೆಯಾಗುತ್ತಿದೆ ಎಂಬುದನ್ನು ನೀವ ಒಪ್ಪುವಿರಾ?

೨೪. ಪಂಚಾಯತಿಯ ಸದಸ್ಯರಾಗಿರುವ ನಿಮಗೆ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾದ ಅವಕಾಶವಿದೆಯೇ? ಇದೆ / ಇಲ್ಲ

ಅ. ದೇವಸ್ಥಾನ

ಬ. ಹೊಟೆಲ್

ಕ. ಊರಿನ ಸಮಾರಂಭಗಳು

ಡ. ಇತರೆ

೨೫. ಪಂಚಾಯತಿಯಲ್ಲಿ ನಿಮ್ಮ ಮಾತಿಗೆ ಮೌಲ್ಯವಿದೆಯಾ? ಇದೆ / ಇಲ್ಲ

೨೬. ಇತರೆ ಮಹಿಳಾ ಸದಸ್ಯರಿಗೂ ನಿಮಗೂ ಸಮಾನವಾದ ವಾತಾವರಣ ಪಂಚಾಯತಿಯಲ್ಲಿ ಇದೆಯಾ? ಇದೆ / ಇಲ್ಲ

೨೭. ಪಂಚಾಯತಿಯ ಸಭೆಗಳಲ್ಲಿ ನಿಮ್ಮ ಬೇಡಿಕೆಗಳಿಗೆ ಸಮರ್ಪಕವಾದ ಉತ್ತರ ಸಿಗುವುದೇ? ಹೌದು / ಇಲ್ಲ

ಅ. ಎಲ್ಲರೂ ಒಪ್ಪುವರು

ಬ. ತಿರಸ್ಕಾರ ಮಾಡುವರು

ಕ. ಮಾತನಾಡಲು ಅವಕಾಶವಿಲ್ಲ.

ಡ. ಇತರೆ

೨೮. ಪಂಚಾಯತಿಯಲ್ಲಿ ಇತರೆ ದಲಿತ ಮಹಿಳೆಯರು ನಿಮ್ಮೊಂದಿಗೆ ಪೂರಕವಾಗಿ ಸಹಕರಿಸುತ್ತಾರೆಯೇ?
ಹೌದು / ಇಲ್ಲ

೨೯. ಇತರೆ ದಲಿತ ಮಹಿಳೆಯರನ್ನು ಹಾಗೂ ನಿಮ್ಮನ್ನು ಪಂಚಾಯತಿಯಲ್ಲಿ ಏಕರೀತಿಯಾಗಿ ಕಾಣಲಾಗುತ್ತದೆಯೇ?
ಹೌದು / ಇಲ್ಲ

೩೦. ಜಾತಿಯ ಕಾರಣದಿಂದ ನಿಮ್ಮನ್ನು ಪಂಚಾಯಿತಿಯ ಕಾರ್ಯಕಲಾಪಗಳಲ್ಲಿ ತುಚ್ಚವಾಗಿ ಕಂಡಿದ್ದು ಇದೆಯೇ?
ಇದೆ / ಇಲ್ಲ

ಅ. ಕೆಲವು ಸಾರಿ

ಬ. ನಿರಂತರವಾಗಿ ಕಾಣಲಾಗಿದೆ

ಕ. ಹಾಗೇನಿಲ್ಲ

ಡ. ಇತರೆ

೩೧. ಜಾತಿಯ ಕಾರಣದಿಂದಲೇ ನಿಮ್ಮ ಅಧಿಕಾರವನ್ನು ಮೊಟಕುಗೊಳಿಸಲಾಗಿದೆ ಎಂಬುದನ್ನು ಒಪ್ಪುವಿರಾ?
ಹೌದು / ಇಲ್ಲ

೩೨. ಪಂಚಾಯಿತಿಗೆ ಬರುವ ಅನುದಾನಗಳು, ಯೋಜನೆಗಳ ಬಗ್ಗೆ ನಿಮಗೆ ಪೂರ್ವ ಮಾಹಿತಿ ಇರುತ್ತದೆಯೇ?
ಹೌದು / ಇಲ್ಲ

೩೩. ಸರಕಾರಿ ನೌಕರರಾಗಿರುವ ಕಾರ್ಯದರ್ಶಿಗಳು ನಿಮಗೆ ಅಧಿಕಾರ ಚಲಾವಣೆಯಲ್ಲಿ ಸಹಕರಿಸುವರೆ?
ಹೌದು / ಇಲ್ಲ

೩೪. ಪಂಚಾಯತಿಯ ಕಾರ್ಯಕಲಾಪಗಳು ಇಲ್ಲದ ಸಮಯದಲ್ಲಿ ನೀವು ಯಾವುದಾದರೂ ಕಾರ್ಯಗಳಲ್ಲಿ ತೊಡಗಿಕೊಳ್ಳುವಿರಾ? ಹೌದು / ಇಲ್ಲ

ಅ. ಮನೆಗೆಲಸ

ಬ. ಕೂಲಿ

ಕ. ಕೃಷಿ

ಡ. ಇತರೆ

೩೫. ಗ್ರಾಮ ಸಭೆಗಳ ಬಗ್ಗೆ ನಿಮಗೆ ಅರಿವಿದೆಯೇ? ಇದೆ / ಇಲ್ಲ

೩೬. ಗ್ರಾಮ ಸಭೆಗಳಿಗೆ ಎಷ್ಟು ದಿನಗಳಿಗೊಮ್ಮೆ ಹಾಜರಾಗುವಿರಿ?

ಅ. ತಿಂಗಳು

ಬ. ೨ ತಿಂಗಳಿಗೊಮ್ಮೆ

ಕ. ಯಾವಾಗಲಾದರೊಮ್ಮೆ

೩೭. ಗ್ರಾಮ ಸಭೆಯನ್ನು ಕುರಿತಂತೆ ನಿಮಗೆ ಮಾಹಿತಿಯನ್ನು ನೀಡುವವರು ಯಾರು?

ಅ. ಕುಟುಂಬದವರು

ಬ. ಗಂಡ

ಕ. ಕಾರ್ಯದರ್ಶಿ

ಡ. ಇತರೆ

೩೮. ಗ್ರಾಮ ಸಭೆಯಲ್ಲಿ ನೀವು ಮುಖ್ಯವಾಗಿ ಚರ್ಚಿಸುವಂತಹ ವಿಷಯಗಳು ಯಾವವು?

೩೯. ಗ್ರಾಮ ಸಭೆಯಲ್ಲಿ ನೀವು ಅಭಿವೃದ್ಧಿ ಯೋಜನೆಗಳ ಬಗ್ಗೆ ಚರ್ಚಿಸುವುದಕ್ಕೆ, ಮುಕ್ತವಾಗಿ ಮಾತನಾಡಲು ಅವಕಾಶವಿದೆಯೇ ಅಥವಾ ಯಾವುದಾದರೂ ಅಂಜಿಕೆ ಅಳುಕು ಇರುತ್ತದೆಯೇ? ಹೌದು / ಇಲ್ಲ

೪೦. ಮಹಿಳಾ ಪರವಾದಂತಹ ಯಾವ ವಿಷಯದ ಬಗ್ಗೆ ನೀವು ಹೆಚ್ಚಿನ ಆಸಕ್ತಿಯನ್ನು ವಹಿಸುತ್ತೀರಿ?

೪೧. ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚಿಸುವಾಗ ಅಥವಾ ಒತ್ತಾಯದ ಸಂದರ್ಭದಲ್ಲಿ ಯಾವುದಾದರೂ ಪೂರ್ವಾಗ್ರಹ ಅಥವಾ ಒತ್ತಡಗಳು ಇರುತ್ತವೆಯೇ? ಹೌದು / ಇಲ್ಲ

೪೨. ನೀವು ಮೀಸಲಾತಿಯ ಅಡಿಯಲ್ಲಿ ಚುನಾಯಿತರಾಗಿದ್ದಿರಾ? ಹೌದು / ಇಲ್ಲ

೪೩. ಮೀಸಲಾತಿ ಕುರಿತಂತೆ ನಿಮ್ಮ ಅನಿಸಿಕೆ !

೪೪. ಮೀಸಲಾತಿಯಲ್ಲಿ ಮತ್ತೇನಾದರೂ ಸೇರಿಸುವ ಬಯಕೆಯನ್ನು ಹೊಂದಿದ್ದೀರಾ? ಹೌದು / ಇಲ್ಲ

೪೫. ಚುನಾವಣೆಯಲ್ಲಿ ಆರಿಸಿಬಂದಾಗ ನೀವು ಅಂದುಕೊಂಡಿದ್ದಂತಹ ಅಭಿವೃದ್ಧಿ ಕಾರ್ಯಗಳು ಸಕಾರಗೊಂಡಿವೆಯಾ? ಹೌದು/ಇಲ್ಲ. ಇಲ್ಲವಾಗಿದ್ದಲ್ಲಿ ಅದಕ್ಕೆ ಅಡ್ಡಿಯಾಗಿರುವ ಕಾರಣಗಳನ್ನು ಗುರುತಿಸಿದ್ದೀರಾ?

೪೬. ಇದಕ್ಕೆ ನಿಮ್ಮ ವಿರೋಧ ಇದೆಯೇ? ಹೌದು / ಇಲ್ಲ

■■■

# ಅಧ್ಯಕ್ಷರಿಗೆ

ಪ್ರತಿನಿಧಿಸುತ್ತಿರುವ ಕ್ಷೇತ್ರ: ಗ್ರಾಮ: ತಾ: ಜಿ ಕೊಪ್ಪಳ:

೧. ಪಂಚಾಯತಿಯಲ್ಲಿಯ ಉನ್ನತ ಹುದ್ದೆಯಲ್ಲಿರುವ ನಿಮಗೆ ಸದಸ್ಯರಿದ್ದಾಗಿನ ಮತ್ತು ಈಗಿನ ಅನುಭವ ಯಾವ ರೀತಿಯಾಗಿದೆ:

ಅ. ಅಧಿಕಾರ ಹೆಚ್ಚಿದೆ.

ಬ. ನಿಭಾಯಿಸಲು ಕಷ್ಟವಾಗಿದೆ.

ಕ. ಮುಜುಗರವಾಗುತ್ತಿದೆ.

ಡ. ಇತರೆ

೨. ಆಯವ್ಯಯ. ತೆರಿಗೆ. ಕಂದಾಯ. ಆರೋಗ್ಯ. ಕೂಲಿಗಾಗಿ ಕಾಳು ಎಂಬಂತ ಪ್ರಮುಖ ಕಾರ್ಯಗಳಲ್ಲಿ ಸ್ವತಂತ್ರವಾದ ನಿರ್ಣಯಕ್ಕೆ ಅವಕಾಶವಿದೆಯೇ? ಹೌದು / ಇಲ್ಲ

೩. ನೀವು ದಲಿತ ಸಮುದಾಯದವರಾಗಿರುವುದರಿಂದ ಇತರೆ ಮೇಲ್ವರ್ಗಗಳ ಮಹಿಳಾ ಪುರುಷ ಸದಸ್ಯರು ಆಡಳಿತ ನಿರ್ವಹಣೆಯಲ್ಲಿ ಸಹಕರಿಸುತ್ತಾರೆಯೇ? ಹೌದು / ಇಲ್ಲ

೪. ಪಂಚಾಯಿತಿಯ ವಿಷಯಗಳಲ್ಲಿ ನೀವು ನಿರ್ಭಯವಾಗಿ ಚರ್ಚಿಸುವುದು ಮಂಡಿಸುವುದು ಸಾಧ್ಯವಿದೆಯೇ? ಹೌದು / ಇಲ್ಲ

೫. ಪಂಚಾಯಿತಿಯ ಕಾರ್ಯದರ್ಶಿಗಳು ನಿಮ್ಮ ಅಧಿಕಾರ ಚಲಾವಣೆಯಲ್ಲಿ ನಿಮಗೆ ಸಹಾಯಮಾಡುತ್ತಾರೆಯೇ? ಹೌದು / ಇಲ್ಲ

೬. ಅಧಿಕಾರ ಕೇಂದ್ರ ಈ ಮಟ್ಟದಲ್ಲಿಯೂ ನಿಮಗೆ ಜಾತೀಯತೆಯಿಂದ ದೂರವಿಟ್ಟ ಪ್ರಸಂಗಗಳು ಇವೆಯಾ? ಹೌದು / ಇಲ್ಲ.

೭. ಮುಖ್ಯವಾಗಿ ನೀವು ನಿಮ್ಮ ಅಧಿಕಾರಾವಧಿಯಲ್ಲಿ ಯಾವ ಯಾವ ವಿಷಯಗಳ ಬಗ್ಗೆ ಹೆಚ್ಚಿನ ಮಹತ್ವ ನೀಡಿದ್ದಿರಿ.

೮. ಮಹಿಳಾ ಪರವಾದಂತಹ ಯಾವುದಾದರೂ ಕಾರ್ಯಮಾಡಿದ್ದಿರಾ? ಹೌದು / ಇಲ್ಲ

೯. ಅಧಿಕಾರ ಚಲಾವಣೆಯಲ್ಲಿ ಯಾವುದಾದರೂ ಒತ್ತಡ ಇದೆಯೇ? ಇದೆ / ಇಲ್ಲ

೧೦. ಉನ್ನತ ಮಟ್ಟದ ಅಧಿಕಾರ ದೊರಕಿದ್ದರೂ ನಿಮಗೆ ಸಾರ್ವಜನಿಕ ಸ್ಥಳಗಳಲ್ಲಿ ಮುಕ್ತವಾದ ಅವಕಾಸ ಇದೆಯೇ? ಇದೆ / ಇಲ್ಲ

೧೧. ಊರಿನ ಪ್ರಮುಖ ಕಾರ್ಯಕ್ರಮಗಳಲ್ಲಿ ಮುಂದಾಳತ್ವವಹಿಸುವಿರಾ? ಹೌದು / ಇಲ್ಲ

■■■

## ೩. ಗ್ರಂಥಋಣ


೧. ಅನಸೂಯ ಕಾಂಬಳೆ 'ವಿಚಾರ ಸಾಹಿತ್ಯ ಹೆಣ್ಣು' ವೈಚಾರಿಕ ಸಾಹಿತ್ಯ ಪ್ರಕಾಶನ ರಾಯಬಾಗ, ೧೯೯೯

೨. ಅಶೋಕ ಟಿ.ಪಿ 'ಅರೆಶತಮಾನದ ಅಲೆಬರಹಗಳು' ಅಕ್ಷರ ಪ್ರಕಾಶನ ಹೆಗ್ಗೋಡು ೨೦೦೪,

೩. ಅಂದನೂರು ಶೋಭಾ 'ಮಹಿಳೆಯ ಮುನ್ನಡೆ' ಮಾನಸಿ ಪ್ರಕಾಶನ ಬೆಂಗಳೂರು, ೧೯೮೮

೪. ಅಗ್ರಹಾರ ಕೃಷ್ಣಮೂರ್ತಿ 'ಸಂಸ್ಕೃತಿ ಕಥನ' ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೨

೫. ಅನಂತರಾಮುರಾವ್ 'ಸುವರ್ಣಕರ್ನಾಟಕ ದರ್ಶನ' ವಿದ್ಯಾಪಬ್ಲಿಕೇಶನ್ ಕದ್ರಿ ಮಂಗಳೂರು, ೨೦೦೬

೬. ಅಂಜನಪ್ಪ ಕೆ 'ಡಾ. ಅಂಬೇಡ್ಕರ್ ಮತ್ತು ಅಸ್ಪೃಶ್ಯತೆ' ಡಾ.ಬಿ.ಆರ್. ಅಂಬೇಡ್ಕರ್ ಅಧ್ಯಯನ ಕೇಂದ್ರ ಕುವೆಂಪು ವಿ.ವಿ. ಶಿವಮೊಗ್ಗ ೨೦೦೭

೭. ಅಂಜನಪ್ಪ ಬಿ.ಹೆಚ್ 'ದಲಿತ ಮಹಿಳಾ ಸ್ವಸಹಾಯ ಗುಂಪುಗಳು' ಡಾ.ಬಿ.ಆರ್. ಅಂಬೇಡ್ಕರ್ ಅಧ್ಯಯನ ಕುವೆಂಪು ವಿ.ವಿ. ಶಿವಮೊಗ್ಗ ೨೦೦೭

೮. ಆರಾಧ್ಯ. ಜಿ.ಎಂ.ಎಂ 'ಪರಿಶಿಷ್ಟ ಜನಾಂಗದ ಏಳಿಗೆ ಸಂವಿಧಾನದ ಕೊಡುಗೆ' ಅಪ್ಪು ಪ್ರಕಾಶನ ಬೆಂಗಳೂರು, ೧೯೮೫

೯. ಇಂದಿರಾಕೃಷ್ಣಪ್ಪ 'ಅಂಬೇಡ್ಕರ್ ಮತ್ತು ಮಹಿಳೆ' ಡಾ.ಬಿ.ಆರ್. ಅಂಬೇಡ್ಕರ್ ಅಧ್ಯಯನ ಕೇಂದ್ರ ಕುವೆಂಪು ವಿ.ವಿ. ಶಿವಮೊಗ್ಗ, ೨೦೦೭

೧೦. ಇಂದಿರಾ ಆರ್. 'ಮಹಿಳೆ ಸಮಾಜ ಮತ್ತು ಸಂಸ್ಕೃತಿ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೨

೧೧. ಉಷಾ ಎಂ 'ಮಹಿಳೆ ಮತ್ತು ಜಾತಿ' ಪ್ರಸಾರಾಂಗ ಕನ್ನಡ, ವಿ.ವಿ. ಹಂಪಿ ೨೦೦೫

೧೨. ಉಷಾ ಎಂ. 'ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಚಾರಗಳು' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೪

೧೩. ಕವಿತಾ ರೈ.ಬಿ.ಆರ್. 'ಮಹಿಳಾ ಅಸ್ತಿತ್ವದ ಸಂಕಥನ' ಸಿ.ವಿ.ಜಿ. ಬೆಂಗಳೂರು ೨೦೦೫

೧೪. ಕಮಲಾ ಹಂಪನಾ (ಅನು) 'ಡಾ.ಬಿ.ಆರ್. ಅಂಬೇಡ್ಕರ್ ಮತ್ತು ಜಾತಿ ಮೀಮಾಂಸೆ' ಸಿ.ವಿ.ಜಿ. ಪಬ್ಲಿಕೇಶನ್ ಬೆಂಗಳೂರು ೨೦೦೬

೧೫. ಕಾಟ್ರಳ್ಳಿ ಮಹಾಬಲೇಶ್ವರ 'ಕೇಂದ್ರೀಕರಣ ಒಂದು ಪ್ರಯೋಗ' ಅಪೂರ್ವ ಪ್ರಕಾಶನ ಹರಪನಹಳ್ಳಿ, ೨೦೦೦

೧೬. ಕೃಷ್ಣಪ್ಪ ಬಿ. 'ಪ್ರೊ.ಬಿ. ಕೃಷ್ಣಪ್ಪ ಚಳುವಳಿ ಮತ್ತು ಬರಹಗಳು' ಬಿ.ಕೃಷ್ಣಪ್ಪ ಟ್ರಸ್ಟ್ ಬೆಂಗಳೂರು ೨೦೦೩

೧೭. ಕೋತಾಯಿ ಕೃಷ್ಣ 'ಗ್ರಾಮೀಣಾಭಿವೃದ್ಧಿಯ ಕೆಲವು ಚಿಂತನೆಗಳು' ಪ್ರಾಸಾರಾಂಗ ಮಂಗಳೂರು, ವಿ.ವಿ. ೧೯೯೮

೧೮. ಕಮಲ ಎಂ.ಆರ್ 'ಕಪ್ಪು ಹಕ್ಕಿಯ ಬೆಳಕಿನ ಹಾಡು' ಕಥನ ಪ್ರಕಾಶನ ಬೆಂಗಳೂರು, ೨೦೦೪

೧೯. ಕಂಬಾರ ಚಂದ್ರಶೇಖರ 'ದೇಶೀಯ ಚಿಂತನೆ' ಅಂಕಿತ ಪುಸ್ತಕಾಲಯ ಬೆಂಗಳೂರು ೨೦೦೪

೨೦. ಕೋಟಗಾನಹಳ್ಳಿ ರಾಮಯ್ಯ (ಸಂ) 'ತಲಪರಿಗೆ' ಕರ್ನಾಟಕ ರಾಜ್ಯ ಪ.ಜಾ.ಪ.ವ. ಅಭಿವೃದ್ಧಿ ನಿಗಮ ಬೆಂಗಳೂರು ೨೦೦೫

೨೧. ಕಬ್ಬೂರ ಕೆ.ಎಸ್ 'ಭಾರತದಲ್ಲಿ ಪ್ರಜಾಪ್ರಭುತ್ವ' ಪ್ರಸಾರಾಂಗ ಗುಲಬರ್ಗ, ವಿ.ವಿ. ಗುಲಬರ್ಗ ೧೯೯೨

೨೨. ಗಾಡ್ವಿನ್ ಸಿರಿ 'ದಲಿತ ಕ್ರೈಸ್ತರು' ಕ್ರಿಶ್ಚಿಯನ್ ಇನ್ ಸ್ಟಿಟ್ಯೂಟ್ ಫಾರ್ ಸ್ಟಡಿ ಆಫ್ ರಿಜಿನಲ್ ಅಂಡ್ ಸೊಸಾಯಿಟಿ ಬೆಂಗಳೂರು ೧೯೯೭

೨೩. ಗಾಯಿತ್ರಿ ನಾವಡ 'ವಿರಚನೆ' ಎನ್.ಎಲ್.ಎ.ಎಂ.ಎಚ್. ಪಬ್ಲಿಕೇಶನ್ ಕೋಟೇಶ್ವರ ೧೯೯೭

೨೪. ಗಾಯಿತ್ರಿ ನಾವಡ 'ಮಹಿಳಾ ಸಂಕಥನ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೩

೨೫. ಗೊಳಸಂಗಿ ಅರ್ಜುನ 'ದಲಿತರ ಬದುಕು ಮತ್ತು ಸಂಸ್ಕೃತಿ'

೨೬. ಗೋಪಾಲ್‌ರಾವ್ ಎಂ.ವೈ. 'ಭಾರತೀಯ ನಾರಿ ಅಂದು ಇಂದು' ಭೈರವ ಪ್ರಕಾಶನ ಚಿಕ್ಕಮಗಳೂರು ೨೦೦೦

೨೭. ಚಾಂಡಾಲ 'ಕರ್ನಾಟಕ ಚಳುವಳಿಗಳು ಮತ್ತು ಅಂಬೇಡ್ಕರ್' ಚೈತ್ರ ಪ್ರಕಾಶನ ಚಿಕ್ಕತಿರುಪತಿ ಕೋಲಾರ ೧೯೯೨

೨೮. ಚಿಂಗಾಮ್ಗೆ ಎಂ.ಎ. 'ಭಾರತೀಯ ಸಮಾಜದ ಸಮಾಜಶಾಸ್ತ್ರ' ಅರ್ಚನಾ ಬುಕ್‌ಹೌಸ್ ಬೆಂಗಳೂರು ೧೯೯೯

೨೯. ಚನ್ನಕ್ಕ ಎಲಿಗಾರ 'ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ' ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ ೧೯೯೦

೩೦. ಚಂದ್ರಶೇಖರ ಬಿ.ಆರ್. 'ಕರ್ನಾಟಕ ಅಭಿವೃದ್ಧಿ ಮತ್ತು ಸಾಮಾಜಿಕ ನೀತಿಗಳು' ಸಿ.ವಿ.ಜಿ. ಬೆಂಗಳೂರು ೨೦೦೩

೩೧. ಚಂದ್ರಶೇಖರ.ಟಿ.ಆರ್. 'ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ' ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ. ೧೯೯೯

೩೨. ಚಂದ್ರಶೇಖರ.ಟಿ.ಆರ್. (ಸಂ) 'ದಲಿತ ಅಧ್ಯಯನ' ಪ್ರಸಾರಾಂಗ ಕನ್ನಡ, ವಿ.ವಿ. ಹಂಪಿ ೨೦೦೫

೩೩. ಚಂದ್ರಶೇಖರ.ಟಿ.ಆರ್. 'ಅಭಿವೃದ್ಧಿ ಅಧ್ಯಯನ' (ಸಂಪುಟ ೨. ಸಂಚಿಕೆ ೧) ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೨

೩೪. ಚಂದ್ರಶೇಖರ.ಟಿ.ಆರ್. 'ಅಭಿವೃದ್ಧಿ ಅಧ್ಯಯನ' (ಸಂಪುಟ೧ ಸಂಚಿಕೆ೧) ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೧

೩೫. ಚಂದ್ರಶೇಖರ.ಟಿ.ಆರ್. 'ಗ್ರಾಮೀಣಾಭಿವೃದ್ಧಿ ಮತ್ತು ವಿಕೇಂದ್ರಿಕರಣ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೧

೩೬. ಚಂದ್ರಶೇಖರ.ಟಿ.ಆರ್. 'ವಿಕೇಂದ್ರಿಕರಣ ತತ್ವ ಮತ್ತು ಆಚರಣೆ' ಪ್ರಸಾರಾಂಗ, ಕ.ವಿ. ಹಂಪಿ ೨೦೦೦

೩೭. ಚಂದ್ರಶೇಖರ ಎಸ್. 'ಆಧುನಿಕ ಕರ್ನಾಟಕ ಆಂದೋಲನಗಳು' ನಮ್ಮ ಪ್ರಕಾಶನ ಬಿಳಿಗೆರೆ ೨೦೦೨

೩೮. ಜವರಯ್ಯ ಮ.ನ 'ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ' ಸಿದ್ಧಾರ್ಥ ಗ್ರಂಥಮಾಲೆ ಮೈಸೂರು ೧೯೯೫

೩೯. ಜವರಯ್ಯ ಮ.ನ 'ಗಾಂಧೀಜಿ ಮತ್ತು ಅಂಬೇಡ್ಕರ್: ಧ್ಯೇಯ ಧೋರಣೆ' ನವಕರ್ನಾಟಕ ಪ್ರಕಾಶನ ಬೆಂಗಳೂರು ೧೯೯೮

೪೦. ಜವರಯ್ಯ ಮ.ನ 'ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಂಬೇಡ್ಕರ್' ಸಿದ್ಧಾರ್ಥ ಗ್ರಂಥಮಾಲೆ ಮೈಸೂರು ೨೦೦೨

೪೧. ಜೋಗನ್ ಶಂಕರ್ 'ಗ್ರಾಮ ಸಮಾಜ' ಜೀವ ಪ್ರಕಾಶನ ಮೈಸೂರು ೧೯೯೫

೪೨. ಡೊಮಿನಿಕ್ ಡಿ. 'ಜಾಗತೀಕರಣದ ಐಡಿಯಾಲಜಿ ಮತ್ತು ಮಾನವ ಹಕ್ಕುಗಳು' ಸಖಿ ಪ್ರಕಾಶನ ಹೊಸಪೇಟೆ ೨೦೦೭

೪೩. ದೇ.ಜ.ಗೌ 'ಆಧುನಿಕ ಭಾರತದ ರಾಜಕೀಯ ವಿಚಾರಧಾರೆ' ಶೃಂಗಾರ ಪ್ರಕಾಶನ ಚಿಕ್ಕನಾಯಕನಹಳ್ಳಿ ೨೦೦೩

೪೪. ದಿಬ್ಬದ ಶಾಂತಿನಾಥ 'ವೈಚಾರಿಕ ಲೇಖನಗಳು' ಪ್ರಸಾರಾಂಗ ಗುಲಬರ್ಗಾ ವಿ.ವಿ. ಕಲಬುರ್ಗಿ. ೨೦೦೫

೪೫. ನಾರಾಯಣ ಭಟ್ಟ ಎ.ಆರ್. 'ಅಸ್ಪೃಶ್ಯತಾ ನಿರ್ಮೂಲನಾ' ಗೀತಾ ಕುಟೀರ ಬೆಂಗಳೂರು ೨೦೦೩

೪೬. ನಾಗರಾಜು ಬಿ 'ವಿಕೇಂದ್ರೀಕರಣ ಪಂಚಾಯತ್‌ರಾಜ್ ನಡೆದು ಬಂದ ದಾರಿ: ಒಂದು ಅವಲೋಕನ' ಕರ್ನಾಟಕ ವಿಕಾಸ ಬೆಂಗಳೂರು ೨೦೦೦

೪೭. ನಾಗಣ್ಣ ಸಿ 'ದಕ್ಷಿಣ ಭಾರತದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೦

೪೮. ನರಗುಂದ ಎಸ್.ಬಿ. 'ಭಾರತದ ರಾಷ್ಟ್ರೀಯ ಚಿಂತನ' ವಿದ್ಯಾನಿಧಿ ಪ್ರಕಾಶನ ಗದಗ ೧೯೯೪

೪೯. ನಾಗವಾರ ಕಾಳೇಗೌಡ 'ಕರ್ನಾಟಕ ಗಿರಿಜನ ಸಂಸ್ಕೃತಿ' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು. ೨೦೦೦

೫೦. ನಂಜುಂಡಸ್ವಾಮಿ ಎಂ 'ರಾಜಕೀಯ ಸಿದ್ಧಾಂತ ಮತ್ತು ದಾರ್ಶನಿಕರು' ಶಕುಂತಲಾ ಪ್ರಕಾಶನ ತಿಪಟೂರು ೨೦೦೦

೫೧. ನಂಜುಂಡಸ್ವಾಮಿ ಎಚ್.ಎಸ್. 'ಅಸ್ಪೃಶ್ಯತೆಯ ಉಗಮ ಮತ್ತು ಬೆಳವಣಿಗೆ' ಬೃಂದಾವನ ಪ್ರಕಾಶನ ಮೈಸೂರು, ೧೯೯೯

೫೨. ನಾಗೇಶ್ ಎಚ್.ವಿ 'ಗ್ರಾಮೀಣ ನ್ಯಾಯ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೧೯೯೪

೫೩. ನಾರಾಯಣ ಸ್ವಾಮಿ.ಕೆ 'ನನ್ನ ಕನಸಿನ ಸ್ವರಾಜ್ಯ' ಗಾಂಧಿಶಾಂತಿ ಪ್ರತಿಷ್ಠಾನ, ಬೆಂಗಳೂರು

೫೪. ನಂಜಮ್ಮಣ್ಣಿ.ಎಂ 'ಭಾರತೀಯ ಸಾಮಾಜಿಕ ಸಂಸ್ಥೆಗಳು' ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ೨೦೦೩

೫೫. ನಿರುಪಮ ಎಂ 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ' ಆರತಿ ಪಬ್ಲಿಕೇಶನ್ ಬೆಂಗಳೂರು ೧೯೯೬

೫೬. ನೇಮಿಚಂದ್ರ 'ಮಹಿಳಾ ಅಧ್ಯಯನ' ಅಂಕಿತ ಪ್ರಕಾಶನ ಬೆಂಗಳೂರು ೨೦೦೧

೫೭. ಪಾರ್ವತಮ್ಮ ಸಿ 'ಮೀಸಲಾತಿ ಒಂದು ಗಗನಕುಸುಮ' ಶಿಕ್ಷಣ ಮುಖೇನ ಪ್ರಗತಿ ಹುಣಸೂರು ೨೦೦೧

೫೮. ಪಾಟೀಲ ವಸಂತ 'ಪಂಚಾಯಿತಿ ಆಡಳಿತ ಸಾಧಕ ಬಾಧಕಗಳು' ಕರ್ನಾಟಕ ವಿ.ವಿ. ಧಾರವಾಡ ೧೯೮೮

೫೯. ಪಾಟೀಲ್ ಎಸ್.ಎ 'ಗಾಂಧೀಜಿ ಮತ್ತು ಅಸ್ಪೃಶ್ಯತೆ ವಿಮೋಚನೆ' ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ ೧೯೯೩

೬೦. ಪಾಟೀಲ್ ಎಚ್.ಎಸ್. (ಸಂ) 'ತಿರುಳ್ಗನ್ನಡ' ಅಖಿಲ ಭಾರತ ೬೨ನೇಯ ಕನ್ನಡ ಸಾಹಿತ್ಯ ಸಮ್ಮೇಳನ, ಕನ್ನಡ ಸಾಹಿತ್ಯ ಪರಿಷತ್ತು ಕೊಪ್ಪಳ, ಬೆಂಗಳೂರು ೧೯೯೯

೬೧. ಪೂರಿಗಾಲಿ ಮರಗಿಡ್ಡಿಮೂರ್ತಿ 'ಶೂದ್ರದಾರ್ಶನಿಕರು' ಲಿಖಿತ ಪ್ರಕಾಶನ ಮೈಸೂರು ೨೦೦೨

೬೨. ಪ್ರಭಾಕರ್ ಎ.ಎಸ್ (ಸಂ) 'ಆದಿವಾಸಿ ಅಖ್ಯಾನ' ಸಿದ್ಧಾರ್ಥ ಪ್ರಕಾಶನ ಹೊಸಪೇಟೆ ೨೦೦೮

೬೩. ಪ್ರೀತಿ ಶುಭಚಂದ್ರ 'ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೨

೬೪. [illegible] 'ಕರ್ನಾಟಕ ಪಂಚಾಯತ್‌ರಾಜ್ ಕಾಯಿದೆ ೧೯೯೩' ಕರ್ನಾಟಕ ಸರಕಾರ ಬೆಂಗಳೂರು ೧೯೯೩.

೬೫. ಬಳಿಗಾರ ಪಿ.ಪಿ. 'ಕಾರ್ಯವರ್ತಿಯ ಕಾಮನೆಗಳು' ಐಬಿಎಚ್ ಪಬ್ಲಿಕೇಶನ್ ಬೆಂಗಳೂರು ೨೦೦೬

೬೬. ಬರಗೂರ ರಾಮಚಂದ್ರಪ್ಪ 'ಸಾಹಿತ್ಯ ಮತ್ತು ರಾಜಕಾರಣ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೮೧

೬೭. ಬರಗೂರು ರಾಮಚಂದ್ರಪ್ಪ 'ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ' ಅಂಕಿತ ಪ್ರಕಾಶನ ಬೆಂಗಳೂರು ೨೦೦೫

೬೮. ಬರಗೂರ ರಾಮಚಂದ್ರಪ್ಪ 'ಜನತಾ ಪ್ರಜಾಪ್ರಭುತ್ವ' ಶತಭಿಷ ಕಟವೀರನಹಳ್ಳಿ ೧೯೭೭.

೬೯. ಬದಿಗೇರ್ ಜಿ.ಎಲ್. 'ಭಾರತದ ಗ್ರಾಮೀಣಾಭಿವೃದ್ಧಿ' ಸಂಗಮೇಶ್ವರ ಪ್ರಕಾಶನ ಸಂಕೇಶ್ವರ ೧೯೯೮.

೭೦. ಭೈರಪ್ಪ ಕೆ. 'ಭಾರತದಲ್ಲಿ ಗ್ರಾಮೀಣಾಭಿವೃದ್ಧಿ' ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಕಲಬುರ್ಗಿ ೧೯೯೭

೭೦. ಭೈರಪ್ಪ ಕೆ. 'ಸಮಗ್ರ ಗ್ರಾಮೀಣ ಸಮಾಜ' ಸಪ್ನಾ ಬುಕ್ ಹೌಸ್ ಬೆಂಗಳೂರು ೨೦೦೨

೭೧. ಭೈರಪ್ಪ ಕೆ. 'ಪಾಶ್ಚಿಮಾತ್ಯ ಮತ್ತು ಭಾರತೀಯ ರಾಜಕೀಯ ಚಿಂತಕರು' ಸಪ್ನಾ ಬುಕ್ ಹೌಸ್ ಬೆಂಗಳೂರು ೨೦೦೧

೭೨. ಭಾರತಿ ತೋರಗಲ್ಲ 'ಸಸಾರ ಸಂಸಾರ' ಅಮೋಘ ವಾಙ್ಮಯ ಬೆಳಗಾವಿ, ೨೦೦೧

೭೩. ಭಾರತಿ ಹಾದಿಗೆ ಬಿ.ಎಂ. 'ಭಾರತೀಯ ಸಮಾಜದ ರಚನೆ ಮತ್ತು ಬದಲಾವಣೆ' ಚೇತನ ಬುಕ್ ಹೌಸ್ ಮೈಸೂರು ೨೦೦೫

೭೪. ಬಿಳಿಮಲೆ ಪುರುಷೋತ್ತಮ 'ಬಂಡಾಯ ದಲಿತ ಸಾಹಿತ್ಯ' ಕ.ಸಾ.ಅ ಬೆಂಗಳೂರು ೧೯೯೦

೭೫. ಬಿಳಿಮಲೆ ಪುರುಷೋತ್ತಮ 'ದಲಿತ ಜಗತ್ತು' ಹೊಸದಿಕ್ಕು ಪ್ರಕಾಶನ ಬೆಂಗಳೂರು ೧೯೮೫

೭೬. ಬಿಳಿಮಲೆ ಪುರುಷೋತ್ತಮ 'ಶಿಷ್ಟ ಮತ್ತು ಪರಿಶಿಷ್ಟ'

೭೭. ಭೋಮಿಗೌಡ 'ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು' ಚೇತನ ಬುಕ್ ಹೌಸ್ ಮೈಸೂರು ೨೦೦೪

೭೮. ಬೆಟ್ಟದೂರ ಅಲ್ಲಮ ಪ್ರಭು 'ಕೊಪ್ಪಳ ಜಿಲ್ಲಾ ದರ್ಶನ' ಪ್ರಸಾರಾಂಗ ಗುಲಬರ್ಗ ವಿ.ವಿ ೨೦೦೪

೭೯. ಭಂಡಾರಿ ಆರ್.ವಿ 'ವರ್ಣದಿಂದ ವರ್ಗದ ಕಡೆಗೆ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೫

೮೦. ಭಾರತ ಜೀವಿ 'ದೇವದಾಸಿ ಪ್ರಸಂಗ ದೀಪ್ತಿ' ನ್ಯಾಚುರಲ್ ಪ್ರಿಂಟರ್ಸ್ ಧಾರವಾಡ ೨೦೦೬

೮೧. ಮಹೇಶ ಹೆಚ್ (ಸಂ) 'ಲಿಂಗ ಸೂಕ್ಷ್ಮತೆ ಮತ್ತು ನ್ಯಾಯ' ಐ.ಸಿ.ಆರ್.ಐ ಬೆಂಗಳೂರು ೧೯೯೯

೮೨. ಮಹೇಶ 'ಮೀಸಲಾತಿ ಮತ್ತು ಭವಿಷ್ಯದ ಪಥಗಳು', ವಿಮೋಚನೆ ಪ್ರಕಾಶನ ಚಿತ್ರದುರ್ಗ.

೮೩. ಮೂಲೆ ದಯಾನಂದ ([illegible]) 'ಚರಿತ್ರೆ ವಿಶ್ವಕೋಶ', ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೧

೮೪. ಮಾಲಗತ್ತಿ ಅರವಿಂದ 'ಡಾ. ಅಂಬೇಡ್ಕರ್ ವಿಚಾರಧಾರೆ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ೧೯೯೧

೮೫. ಮಾಲಗತ್ತಿ ಅರವಿಂದ 'ಸಾಂಸ್ಕೃತಿಕ ದಂಗೆ'. ರಾಜ ಪ್ರಕಾಶನ ಮೈಸೂರು ೨೦೦೪

೮೬. ಮರುಳ ಸಿದ್ದಯ್ಯ ಹೆಚ್.ಎಂ. 'ಸಮುದಾಯ ಸಂಘಟನೆ', ಐ.ಬಿ.ಹೆಚ್. ಪಬ್ಲಿಕೇಶನ್ ಬೆಂಗಳೂರು ೨೦೦೩

೮೭. ಮಣಿಪಾಲ ಆರ್.ಕೆ. 'ಲೋಕ ಗ್ರಹಿಕೆ ಮತ್ತು ಅಭಿವ್ಯಕ್ತಿ', ಸಂಕ್ರಮಣ ಪ್ರಕಾಶನ ಧಾರವಾಡ ೧೯೯೫

೮೮. ಮಲ್ಲೇಪುರಂ ಜಿ ವೆಂಕಟೇಶ್ 'ಅರಿವಿನ ಕಥನ', ಸಿವಿಜಿ ಬೆಂಗಳೂರು ೨೦೦೪

೮೯. ಮಹೇಶ್ ಸಿ.ಕೆ. 'ಅಂಬೇಡ್ಕರ್ ಮತ್ತು ಮೀಸಲಾತಿ ವರ್ಗೀಕರಣ', ಮಾತಂಗ ಪ್ರಕಾಶನ ಬೆಂಗಳೂರು ೨೦೦೦

೯೦. ಮಂಗ್ಳೂರು ವಿಜಯ (ಸಂ) 'ಸಂಘರ್ಷ', ಸಂಬುದ್ಧ ಪ್ರಕಾಶನ ಬೆಂಗಳೂರು ೨೦೦೨

೯೧. ಮಂಗ್ಳೂರ ವಿಜಯ 'ಸಬಲೀಕರಣ ದಲಿತರ ಮುಂದಿನ ಸವಾಲುಗಳು', ಸಂಬುದ್ಧ ಪ್ರಕಾಶನ ಬೆಂಗಳೂರು ೨೦೦೬

೯೨. ಮೂರ್ತಿ ಎನ್. 'ಹೋರಾಟದ ಮಹಾಪ್ರಬಂಧ' ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಂಗಳೂರು ೨೦೦೬

೯೩. ಮೂರ್ತಿ ಎನ್, 'ಜಾತಿ ಮತ್ತು ಮೀಸಲಾತಿ', ಕ.ದ.ಸಂ.ಸ. ಬೆಂಗಳೂರು ೨೦೦೫

೯೪. ಮಂಗಳಾ ಪ್ರಿಯದರ್ಶಿನಿ, 'ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ' ಮಹಿಳಾ ಅಧ್ಯಯನ ಕೇಂದ್ರ ಕ.ವಿ. ಹಂಪಿ ೨೦೦೭

೯೫. ಮೊಗಳ್ಳಿ ಗಣೇಶ, 'ದಲಿತರು ಮತ್ತು ಜಾಗತೀಕರಣ', ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೧೯೯೯

೯೬. ಮೊಗಳ್ಳಿ ಗಣೇಶ, 'ದಲಿತ ಕಥನ' ಪ್ರಸಾರಾಂಗ ಕ.ವಿ.ವಿ. ಹಂಪಿ ೨೦೦೬

೯೭. ಮೊಗಳ್ಳಿ ಗಣೇಶ, 'ನಡುಗಾಲದ ಕನ್ನಡನಾಡು' ಪ್ರಸಾರಾಂಗ ಕ.ವಿ.ವಿ. ಹಂಪಿ ೨೦೦೮

೯೮. ಮೊಗಳ್ಳಿ ಗಣೇಶ. 'ಸೋಲ್ಲು' ಸಿ.ವಿ.ಜಿ. ಬೆಂಗಳೂರು ೧೯೯೮

೯೯. ಮೋಹನ ಕೃಷ್ಣ ರೈ.ಕೆ, 'ಪ್ರಭುತ್ವ ಮತ್ತು ಜನತೆ', ಪ್ರಸಾರಾಂಗ ಕ.ವಿ. ಹಂಪಿ ೨೦೦೪

೧೦೦. ಮೊಯಿಲಿ ವೀರಪ್ಪ ಎಂ, 'ಕಿರುದಾರಿ-ರಹದಾರಿ', ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೭

೧೦೧. ಮೊಯಿಲಿ ವೀರಪ್ಪ ಎಂ, 'ರಾಷ್ಟ್ರೀಯ ಚಿಂತನ', ಸಪ್ನಾ ಬುಕ್ ಹೌಸ್ ಬೆಂಗಳೂರು ೨೦೦೪

೧೦೨. ಮುದುಬಿ ಬಾಬುರಾವ್. 'ಮಹಿಳಾ ಸಬಲೀಕರಣ ಮತ್ತು ಅಂಬೇಡ್ಕರ್ ದೃಷ್ಟಿಕೋನ' ಲಕ್ಷ್ಮಿ ಪ್ರಕಾಶನ ಬೆಂಗಳೂರು ೨೦೦೫

೧೦೩. ರಹಮತ್ ತರೀಕೆರೆ, '[illegible] ಪ್ರಜ್ಞೆ ಮತ್ತು ವಿವೇಚನೆ' ಬೆಳ್ಳಿಚುಕ್ಕಿ ಟ್ರಸ್ಟ್ ಬೆಂಗಳೂರು ೧೯೮೭

೧೦೪. ರತ್ನಮ್ಮ ಹೆಚ್.ಎಸ್. 'ಮಹಿಳಾ ಮೀಸಲಾತಿ' ಈಶ್ವರಿ ಪ್ರಕಾಶನ ಮೈಸೂರು ೨೦೦೫

೧೦೫. ರಾಮಯ್ಯ ಕೆ, ‘ಸಿಂದ್ ಮಾದಿಗರ್ ಸಂಸ್ಕೃತಿ’ ಸ.ಕ.ಸಾ.ಅ. ಬೆಂಗಳೂರು ೧೯೯೩

೧೦೬. ರಾಮಪ್ರಸಾದ್ ಜಿ.ಎಸ್. `ಗಾಂಧೀಜಿ ಅಸ್ಪೃಶ್ಯರ ವಿಮೋಚನೆ' ಎಸ್.ಜಿ.ಎಸ್. ಪಬ್ಲಿಶರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್ ಬೆಂಗಳೂರು ೧೯೯೩

೧೦೭. ರಾಜೇಗೌಡ ಹ.ಕ. (ಸಂ) `ಗ್ರಾಮ ಚೇತನ' ಹೆಚ್.ಡಿ. ಚೌಡಯ್ಯ ಅಭಿನಂದನ ಸಮಿತಿ ಮಂಡ್ಯ ೨೦೦೩

೧೦೮. ರೋಮಿಲಾಥಾಪರ್, `ಚಾರಿತ್ರಿಕ ವ್ಯಾಖ್ಯಾನಗಳು ಮತ್ತು ಭಾರತೀಯ ಧರ್ಮದ ಧರ್ಮನಿರಪೇಕ್ಷಿಕರಣ', ವಿಸ್ತಾರ್ ಬೆಂಗಳೂರು ೨೦೦೩

೧೦೯. ಲಕ್ಕಪ್ಪಗೌಡ ಹೆಚ್.ಜೆ (ಸಂ) `ಕರ್ನಾಟಕದ ಬುಡಕಟ್ಟುಗಳು' ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಬೆಂಗಳೂರು ೨೦೦೦

೧೧೦. ಲೀಲಾದೇವಿ ಆರ್ ಪ್ರಸಾದ್, `೨೦ನೇ ಶತಮಾನದಲ್ಲಿ ಕರ್ನಾಟಕ ರಾಜಕೀಯ ಮತ್ತು ಮಹಿಳೆ’ ಆರತಿ ಪಬ್ಲಿಕೇಶನ್ಸ್ ಬೆಂಗಳೂರು ೨೦೦೩

೧೧೧. ಲೋಹಿತಾಶ್ವ ಹೆಚ್.ಸಿ `ಪಂಚಾಯತ್‌ರಾಜ್ ವ್ಯವಸ್ಥೆ' ವಿದ್ಯಾನಿಧಿ ಪ್ರಕಾಶನ ಬೆಂಗಳೂರು ೧೯೯೮

೧೧೨. ವಂದನಾ ಶಿವ (ಕನ್ನಡಕ್ಕೆ ಮಾಧವ ಐತಾಳ) `ಬತ್ತದ ಚೆಲುಮೆ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೫

೧೧೩. ವನದುರ್ಗ ರಂಗರಾಜ (ಸಂ) `ಕುವೆಂಪು ಸಾಹಿತ್ಯದಲ್ಲಿ ದಲಿತ ಸಂವೇದನೆ' ಡಾ.ಅಂಬೇಡ್ಕರ್ ಅಧ್ಯಯನ ಕೇಂದ್ರ ಕುಂ.ವಿ.ವಿ. ಶಿವಮೊಗ್ಗ ೨೦೦೭

೧೧೪. ವಿಜಯಾದುಬೆ, ‘ನಾರಿ ದಾರಿ ದಿಗಂತ’ ರಚನಾ ಪ್ರಕಾಶನ ಮೈಸೂರು ೧೯೯೭

೧೧೫. ವನದುರ್ಗ ರಂಗರಾಜ (ಸಂ) ‘ದಲಿತ ಸಂವೆದನೆ’ ಸಿ.ವಿ.ಜಿ. ಬೆಂಗಳೂರು ೨೦೦೪

೧೧೬. ವಿಜಯಶ್ರೀ ಸಬರದ `ಮಹಿಳಾ ಶೋಷಣೆ ಸವಾಲುಗಳು' ಪ್ರಸಾರಾಂಗ ಗುಲಬರ್ಗ ವಿ.ವಿ. ೨೦೦೫

೧೧೭. ವೀರಭದ್ರಪ್ಪ ಬಿ.ಎಂ. `ವೇದಗಳಲ್ಲಿ ಜನಸಾಮಾನ್ಯರು' ನವ ಕರ್ನಾಟಕ ಪ್ರಕಾಶನ ಬೆಂಗಳೂರು ೨೦೦೩

೧೧೮. ವಿರಕ್ತಮಠ ಶಿವಾನಂದ ಎಸ್ (ಸಂ) `ಮಹಿಳಾ ಅಧ್ಯಯನ' ಸಂಪುಟ ೬ ಸಂಚಿಕೆ ೧೨ ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೪

೧೧೯. ವೆಂಕಟರಂಗಯ್ಯ ಎಂ. `ಭಾರತದಲ್ಲಿ ಪ್ರಜಾಸತ್ತಾತ್ಮಕ ರಾಜಕಾರಣದ ಕೆಲವು ಲಕ್ಷಣಗಳು' ಪ್ರಸಾರಾಂಗ ಮೈಸೂರು ವಿ.ವಿ. ೧೯೭೧

೧೨೦. ವೆಂಕಟೇಶಕುಮಾರ್ 'ಸ್ವಾತಂತ್ರ್ಯಕ್ಕಾಗಿ ಮಹಿಳೆಯರ ಹೋರಾಟ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು ೨೦೦೦

೧೨೧. ವೆಂಕಟರಾಮಪ್ಪ ಕೆ `ರಿಪಬ್ಲಿಕ್' ಶಾರದಾ ಮಂದಿರ ಮೈಸೂರು ೧೯೬೧

೧೨೨. ಶಿವರಾಮಯ್ಯ ‘ದನಿ ಇಲ್ಲದವರ ದನಿ’ ಶಕ್ತಿ ಪ್ರಿಂಟರ್ಸ್ ಬೆಂಗಳೂರು ೨೦೦೩

೧೨೩. ಶಿವಚಿತ್ತಪ್ಪ ಕೆ. 'ಮಹಿಳಾ ಸಬಲೀಕರಣದ ವಿಭಿನ್ನ ನೆಲೆಗಳು' ಲಕ್ಷ್ಮಿ ಪ್ರಿಂಟರ್ಸ್ ಮೈಸೂರು ೨೦೦೬

೧೨೪. ಶಿರಗಾನಹಳ್ಳಿ ಶಾಂತನಾಯಕ 'ಮನು ಹಿಟ್ಲರ್ ಅಂಬೇಡ್ಕರ್: ಒಂದು ಚಿಂತನೆ' ತಾರಾ ಪ್ರಿಂಟರ್ಸ್ ಮೈಸೂರು ೨೦೦೪

೧೨೫. ಶಾರತದ ಬಿ.ಎಸ್ (ವಿಜಯ ಮಂಗ್ಳೂರ ಸಂ) 'ಸಬಲೀಕರಣ ದಲಿತ ಮುಂದಿನ ಸವಾಲುಗಳು' ಸಂಬುದ್ಧ ಪ್ರಕಾಶನ ಬೆಂಗಳೂರು ೨೦೦೬

೧೨೬. ಶಂಕರ್‌ರಾವ್ ಚ.ನ 'ಭಾರತದ ಸಂವಿಧಾನ ಸರಕಾರ ಮತ್ತು ರಾಜಕೀಯ' ವಿಜಯ ಪಬ್ಲಿಕೇಶನ್ಸ್ ಗದಗ ೧೯೯೨

೧೨೭. ಶೇಷಾದ್ರಿ ಕೆ.ಎಸ್ 'ಸಂವಿಧಾನ ಕಾನೂನು ಮತ್ತು ಮಹಿಳೆ' ಜಾಗೃತ ಭಾರತ ಧಾರವಾಡ ೧೯೮೫

೧೨೮. ಶೇಷನವನರತ್ನ 'ನಾಲ್ಕು ವೇದಗಳು' ಸಮಾಜ ಪುಸ್ತಕಾಲಯ ಧಾರವಾಡ ೨೦೦೩

೧೨೯. ಶೈಲಜ ಹಿರೇಮಠ 'ಸ್ತ್ರೀ ಕಥನ' ಭುವನ ಪ್ರಕಾಶನ ಹೊಸಪೇಟೆ ೨೦೦೩

೧೩೦. ಶೈಲಜ ಹಿರೇಮಠ 'ಪಾತರದವರು' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೧೯೯೯

೧೩೧. ಶೈಲಜ ಹಿರೇಮಠ 'ಮಹಿಳಾ ಅಧ್ಯಯನ' ಸಂಪುಟ ೮. ಸಂಚಿಕೆ ೨. ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೬

೧೩೨. ಶೈಲಜ ಹಿರೇಮಠ 'ಮಹಿಳಾ ಅಧ್ಯಯನ' ಸಂಪುಟ೮. ಸಂಚಿಕೆ೧, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೬

೧೩೩. ಶ್ರೀಧರ ಎ 'ಅಭಿವೃದ್ಧಿ ಅಧ್ಯಯನ' ಸಂಪುಟ೫ ಸಂಚಿಕೆ೧, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೬

೧೩೪. ಶ್ರೀಧರ ಎ 'ಅಭಿವೃದ್ಧಿ ಅಧ್ಯಯನ' ಸಂಪುಟ೪ ಸಂಚಿಕೆ೨, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೧೩೫. ಶ್ರೀಮತಿ ಹೆಚ್.ಎಸ್ 'ಹೆಣ್ಣು ಹೆಂಗಸು' ಬಾಲ್ಯದ ಕೆರೆ ಪ್ರಕಾಶನ ೨೦೦೪

೧೩೬. ಶ್ರೀಮತಿ ಹೆಚ್.ಎಸ್ 'ಗೌರಿದುಃಖ' ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಶರ್ಸ್ ಬೆಂಗಳೂರು

೧೩೭. ಶ್ರೀಮತಿ ಹೆಚ್.ಎಸ್ (ಸಂ) 'ಮಹಿಳಾ ಅಧ್ಯಯನ' ಸಂಪುಟ೧. ಸಂಚಿಕೆ೨, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ

೧೩೮. ಶ್ರೀಮತಿ ಹೆಚ್.ಎಸ್ 'ಸಿಮನ್ ದಬೋವಾ ದ ಸೆಕೆಂಡ್ ಸೆಕ್ಸ್' ಅಧ್ಯಯನ ಮಂಡಲ, ಬೆಂಗಳೂರು ೨೦೦೨

೧೩೯. ಶ್ರೀಮತಿ ಹೆಚ್.ಎಸ್ (ಅನು ಮೂಲ: ಜೆರಾಲ್ಡಿನ್ ಫೋರ್ಬ್ಸ್) 'ಆಧುನಿಕ ಭಾರತದಲ್ಲಿ ಮಹಿಳೆ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೧

೧೪೦. ಶ್ರೀಮತಿ ಹೆಚ್.ಎಸ್ 'ಸ್ತ್ರೀವಾದ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ೨೦೦೩

